ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

ಸ್ಕಾಂದಪುರಾಣಾಂತರ್ಗತ

ಶಿವಪುರಾಣಮಾಹಾತ್ಮ್ಯಸಹಿತಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೧

ವಿದ್ಯೇಶ್ವರಸಂಹಿತಾ





ಅನುವಾದಕ:

ಹಾಸನದ ಪಂಡಿತ ವೆಂಕಟರಾವ್

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ




ಸ್ಕಾಂದಪುರಾಣಾಂತರ್ಗತ

ಶಿವಪುರಾಣಮಾಹಾತ್ಮ್ಯಸಹಿತಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೧

ವಿದ್ಯೇಶ್ವರಸಂಹಿತಾ



ಅನುವಾದಕ :

ಹಾಸನದ ಪಂಡಿತ್ ವೆಂಕಟರಾವ್.



ಮೈಸೂರು.

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ವಡೆಯರ್ ಬಹದ್ದೂರ್,**

**ಜಿ. ಸಿ. ಎಸ್. ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮೂಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ಪಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲುಲಿತವಪುಃ ಸಂಪದೇ ಪಾರ್ವತೀಶಃ ॥



ಬೇಂಗಳೂರು ಪ್ರೆಸ್

# ಪ್ರಸ್ತಾವನೆ.




ಪುರಾಣಗಳಲ್ಲಿ ಪ್ರತಿಪಾದಿತವಾದ ವಿಷಯುಗಳನ್ನು, ಕಥಾಭಾಗ, ಕರ್ಮ ಅಥವಾ ಉಪಾಸನಾಭಾಗ, ತತ್ತ್ವನಿರೂಪಣಭಾಗ ಎಂದು ಮೂರು ವಿಧವಾಗಿ ವಿಭಾಗಿಸಬಹುದು. ಈ ಶಿವಪುರಾಣದಲ್ಲಿಯೂ ಈ ಮೂರು ಭಾಗಗಳೂ ನಿರೂಪಿಸಲ್ಪಟ್ಟಿರುವವು. ದ ವ್ಯಾಸಮಹರ್ಷಿಪ್ರಣೀತವಾದ ಈ ಮಹಾಗ್ರಂಥವು ಏಳು ಸಂಹಿತೆಗಳಾಗಿ ವಿಭಾಗಿಸಲ್ಪಟ್ಟು ಇಪ್ಪತ್ತುನಾಲ್ಕು ಸಹಸ್ರ ಗ್ರಂಥ ಪರಿಮಾಣವುಳ್ಳದ್ದಾಗಿರುವುದು. ಮೊದಲನೆಯದಾದ ವಿದ್ಯೇಶ್ವರ ಸಂಹಿತೆಯಲ್ಲಿ ಶಿವಾರಾಧನಕ್ರಮವೂ, ಎರಡನೆಯ ರುದ್ರಸಂಹಿತೆಯಲ್ಲಿ ಶಿವಕಥಾ ನಿರೂಪಣವೂ, ಮೂರನೆಯ ಶತರುದ್ರಸಂಹಿತೆಯಲ್ಲಿ ಲೋಕೋಪಕಾರಕ್ಕಾಗಿ ಪರಮೇಶ್ವರನು ಕೈಗೊಂಡ ನೂರು ಅವತಾರಗಳ ವರ್ಣನೆಯೂ, ನಾಲ್ಕನೆಯ ಕೋಟಿ ರುದ್ರಸಂಹಿತೆಯಲ್ಲಿ ಪ್ರಪಂಚದಲ್ಲಿರುವ ಶೈವಸಂಬಂಧವಾದ ತೀರ್ಥಕ್ಷೇತ್ರ ಮಾಹಾತ್ಮ್ಯವರ್ಣನವೂ, ಐದನೆಯ ಉಮಾಸಂಹಿತೆಯಲ್ಲಿ ಪುಣ್ಯಪಾಪಗಳ ಫಲರೂಪವಾದ ಸ್ವರ್ಗನರಕಾದಿಗಳ ವಿವರಣೆಯೂ, ಆರನೆಯ ಮತ್ತು ಏಳನೆಯ ಕೈಲಾಸ ಮತ್ತು ವಾಯವೀಯ ಸಂಹಿತೆಗಳಲ್ಲಿ ಪ್ರಣವಸ್ವರೂಪ, ತತ್ತ್ವಮಸ್ಯಾದಿಮಹಾವಾಕ್ಯ ನಿರೂಪಣ ಮೊದಲಾದ ಅನೇಕ ಉಪನಿಷದ್ವಾಕ್ಯಗಳೂ ವಿವರಿಸಲ್ಪಟ್ಟಿವೆ. ಸತ್ಕರ್ಮಾನುಷ್ಠಾನವನ್ನೂ, ವೇದಾಂತವಿಚಾರವನ್ನೂ ತಿಳಿದುಕೊಳ್ಳಲಪೇಕ್ಷೆಯುಳ್ಳವರಿಗೆ ಇದಕ್ಕಿಂತ ಉತ್ತಮವಾದ ಗ್ರಂಥ ಬೇರೊಂದಿಲ್ಲ. ಶ್ರೀಮಚ್ಛಂಕರಭಗವತ್ಪಾದರು ತಮ್ಮ ಸೂತ್ರಭಾಷ್ಯದಲ್ಲಿ ಈ ಪುರಾಣದ ಅನೇಕ ಶ್ಲೋಕಗಳನ್ನು ಪ್ರಮಾಣವನ್ನಾಗಿ ಉದಹರಿಸಿರುತ್ತಾರೆ. ಇನ್ನೂ ಅನೇಕ ಗ್ರಂಥಕರ್ತೃಗಳಿಗೆ ಈ ಪುರಾಣವು ಪ್ರಮಾಣವಾಗಿದೆ. ಇದರಿಂದ ಈ ಪುರಾಣದಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷಯುಗಳು ಎಷ್ಟು ಮಹತ್ತ್ವಪೂರಿತವಾದವುಗಳೆಂದು ವಿವರಿಸುವುದನಾವಶ್ಯಕವು.

ಪುರಾಣಗಳಲ್ಲಿ ವಿವರಿಸಿರುವ ಅನೇಕ ವಿಷಯುಗಳು ವೇದಗಳಲ್ಲಿ ಸಂಗ್ರಹರೂಪವಾಗಿ ನಿರೂಪಿಸಲ್ಪಟ್ಟಿರುವವು. ಉದಾಹರಣೆಗಾಗಿ ತ್ರಿಪುರದಹನ ವಿಷಯವು ಕೃಷ್ಣ ಯಜುರ್ವೇದದ ಆರನೆಯ ಕಾಂಡದ ಎರಡನೆಯ ಅಧ್ಯಾಯದಲ್ಲಿ ಪ್ರತಿಪಾದಿತವಾಗಿರುವುದು. ಇಂತಹ ಸಂದರ್ಭಗಳಲ್ಲಿ ಆಯಾ ಭಾಗಗಳಿರುವ ವೇದವಚನಗಳನ್ನು ಅಲ್ಲಲ್ಲಿ ಸೂಚಿಸಿರುತ್ತೆ. ಅವುಗಳನ್ನು ವೇದಗಳಲ್ಲಿ ನೋಡಿ ತಿಳಿದುಕೊಳ್ಳಬಹುದು.

ಈ ಗ್ರಂಥಲೇಖನದಲ್ಲಿ ಮೂಲಪ್ರತಿಗಾಗಿ ಬೊಂಬಾಯಿನ ವೆಂಕಟೇಶ್ವರ ಪ್ರೆಸ್ಸಿನಲ್ಲಿ ಪ್ರಿಂಟಾದ ಪ್ರತಿ, ಮಧುರೆಯಲ್ಲಿ ಪ್ರಿಂಟಾದ ಹಿಂದೀ ಅನುವಾದಯುತವಾದ

ಗ್ರಂಥ = ಶ್ಲೋಕ

ಒಂದು ಪ್ರತಿ, ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿದ್ದ ಹಸ್ತಲಿಖಿತ ಪ್ರತಿ ಇವುಗಳನ್ನು ಉಪಯೋಗಿಸಿರುತ್ತೆ. ಈ ಮೂರು ಪ್ರತಿಗಳಲ್ಲಿಯೂ ಮುದ್ರಣಸ್ಖಾಲಿತ್ಯಾದಿ ಅನೇಕ ತಪ್ಪುಗಳಿದ್ದರೂ ಅವುಗಳನ್ನು ಸಾಧ್ಯವಾದಮಟ್ಟಿಗೂ ಚೆನ್ನಾಗಿ ಪರಿಶೋಧಿಸಿ ಮುದ್ರಿಸಿರುತ್ತೆ.

ಈ ಮಹಾಪುರಾಣವು ಉತ್ತರದೇಶದಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದರೂ, ದಕ್ಷಿಣದೇಶದಲ್ಲಿ, ಅದರಲ್ಲೂ ಕರ್ನಾಟಕದೇಶದಲ್ಲಿ, ಯಾವ ದೇಶಭಾಷೆಯಲ್ಲಿಯೂ ಇದುವರೆಗೆ ಈ ಉದ್ಗ್ರಂಥವು ಪ್ರಕಟವಾಗಿರುವುದಿಲ್ಲ. ಇಂತಹ ಕೊರತೆಯನ್ನು ಹೋಗಲಾಡಿಸಿ ಈ ಮಹಾಗ್ರಂಥದ ಉಪಯೋಗವು ಜನಸಾಮಾನ್ಯಕ್ಕೆ ಆಗಲೆಂದೂ, ತನ್ಮೂಲಕ ಸಕಲರೂ ಪರಮೇಶ್ವರನ ಅನುಗ್ರಹಕ್ಕೆ ಪಾತ್ರರಾಗಿ ಐಹಿಕಾಮುಷ್ಮಿಕಸುಖಗಳನ್ನು ಪಡೆಯಲೆಂದೂ ಉದ್ದೇಶಿಸಿ, ಈ ಗ್ರಂಥಪ್ರಕಟನೆಗೆ ಅವಕಾಶವನ್ನಿತ್ತಿರುವ ನಮ್ಮನ್ನಾಳುವ ಮಹಾಪ್ರಭುಗಳವರ ಅಪ್ಪಣೆ ಮೇರಿಗೆ ಈ ಗ್ರಂಥವನ್ನು ಯಥಾಮತಿ ಬರೆದಿರುತ್ತೇನೆ. ಪ್ರಾಜ್ಞರು ಹಂಸಕ್ಷೀರನ್ಯಾಯದಂತೆ ಇದರ ಗುಣಾವಗುಣಗಳನ್ನು ಪರಿಶೀಲಿಸಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ.

ಪ್ರಜಾಹಿತಸಾಧನೆಯನ್ನೇ ತಮ್ಮ ಧ್ಯೇಯವಾಗಿಟ್ಟುಕೊಂಡು ಇಂತಹ ಅನೇಕ ಗ್ರಂಥಗಳ ಪ್ರಚಾರಕ್ಕೆ ಪ್ರೋತ್ಸಾಹಮಾಡುತ್ತಿರುವ ನಮ್ಮನ್ನಾಳುವ ಮಹಾಪ್ರಭುಗಳೂ, ಪ್ರಜಾಪಾಲನತತ್ಪರರೂ, ಸದಾಚಾರನಿಷ್ಠರೂ, ದೈವಭಕ್ತಿಯುತರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಯವರಿಗೂ** ಅವರ ಬಂಧುವರ್ಗಕ್ಕೂ, ಪ್ರಜಾವರ್ಗಕ್ಕೂ ಸಚ್ಚಿದಾನಂದಸ್ವರೂಪನಾದ ಪರಮೇಶ್ವರನು ಸಕಲ ಸನ್ಮಂಗಳಗಳನ್ನು ಅನುಗ್ರಹಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಮೈಸೂರು
ವೈಶಾಖ ಶು॥ ತ್ರಯೋದಶಿ
24-5-45.

**ಹಾಸನದ ಪಂಡಿತ್ ವೆಂಕಟರಾವ್,**
ಅನುವಾದಕ.



# ವಿಷಯಾನುಕ್ರಮಣಿಕೆ.

---

## ಶ್ರೀಶಿವಪುರಾಣಮಾಹಾತ್ಮ್ಯಂ

ಐದನೆಯ ಅಧ್ಯಾಯ—



---

## ಶ್ರೀಶಿವಪುರಾಣದ ವಿದ್ಯೇಶ್ವರಸಂಹಿತಾ

---

ಪುಟಸಂಖ್ಯೆ



ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್ ಪ್ರೊಪ್ರೈಟರ್ ವೈ. ಆರ್. ರಂಗರಾವ್
ರವರಿಂದ ಮುದ್ರಿಸಲ್ಪಟ್ಟಿತು ಮೈಸೂರು.

॥ ಶ್ರೀಃ ॥

ಸ್ಕಾಂದಪುರಾಣಾಂತರ್ಗತಂ

# ॥ ಶಿವ ಪುರಾಣ ಮಾಹಾತ್ಮ್ಯಂ ॥

## ಪ್ರಥಮೋಽಧ್ಯಾಯಃ

॥ ಶ್ರೀ ಶೌನಕ ಉವಾಚ ॥

ಹೇ ಹೇ ಸೂತ ಮಹಾಪ್ರಾಜ್ಞ ಸರ್ವಸಿದ್ಧಾಂತವಿತ್ಪ್ರಭೋ ।
ಆಖ್ಯಾಹಿ ಮೇ ಕಥಾಸಾರಂ ಪುರಾಣಾನಾಂ ವಿಶೇಷತಃ ॥ ೧ ॥

ಸುಪುಣ್ಯಶ್ಚಾಥ ಸದ್ಭಕ್ತಿರ್ವಿವೇಕೋ ವರ್ಧತೇ ಕಥಂ ।
ಸ್ವವಿಕಾರನಿರಾಸಶ್ಚ ಸಜ್ಜನೈಃ ಕ್ರಿಯತೇ ಕಥಂ ॥ ೨ ॥

---

## ಮೊದಲನೆಯ ಅಧ್ಯಾಯವು.

೧. ಶೌನಕಮುನಿಯು ಸೂತಪೌರಾಣಿಕನನ್ನು ಪ್ರಶ್ನೆಮಾಡುತ್ತಾನೆ :— ಎಲೈ ಸೂತನೇ, ನೀನು ಮಹಾಪ್ರಾಜ್ಞನು. ಸಮಸ್ತ ತತ್ತ್ವಾರ್ಥಗಳನ್ನೂ ತಿಳಿದಿರುವವನು. ಆದುದರಿಂದ ಈಗ ನನಗೆ ಪುರಾಣಗಳ ಸಾರವನ್ನು ಚೆನ್ನಾಗಿ ತಿಳಿಯುವಂತೆ ವಿವರಿಸು.

೨. ಒಳ್ಳೆಯ ಪುಣ್ಯವೂ, ಸದ್ಭಕ್ತಿಯೂ, ವಿವೇಕವೂ ಹೇಗೆ ಅಭಿವೃದ್ಧಿಯಾಗುವವು? ಮತ್ತು ಮನಸ್ಸಿನ ಕಲ್ಮಷವನ್ನು ನಾಶಪಡಿಸಲು ಸತ್ಪುರುಷರು ಯಾವ ರೀತಿ ಪ್ರಯತ್ನಪಡಬೇಕು ?

ಜೀವಾಶ್ಚಾಸುರತಾಂ ಪ್ರಾಪ್ತಾಃ ಪ್ರಾಯೋ ಘೋರೇ ಕಲಾವಿಹ ।
ತಸ್ಯ ಸಂಶೋಧನೇ ಕಿಂ ಹಿ ವಿದ್ಯತೇ ಪರಮಾಯನಂ ॥ ೩ ॥

ಯದಸ್ತಿ ವಸ್ತು ಪರಮಂ ಶ್ರೇಯಸಾಂ ಶ್ರೇಯ ಉತ್ತಮಂ ।
ಪಾವನಂ ಪಾವನಾನಾಂ ಚ ಸಾಧನಂ ತದ್ವದಾಧುನಾ ॥ ೪ ॥

ಯೇನ ತತ್ಸಾಧನೇನಾಶು ಶುಧ್ಯತ್ಯಾತ್ಮಾ ವಿಶೇಷತಃ ।
ಶಿವಪ್ರಾಪ್ತಿರ್ಭವೇತ್ತಾತ ಸದಾ ನಿರ್ಮಲಚೇತಸಃ ॥ ೫ ॥

॥ ಸೂತ ಉವಾಚ ॥

ಧನ್ಯಸ್ತ್ವಂ ಮುನಿಶಾರ್ದೂಲ ಶ್ರವಣಪ್ರೀತಿಲಾಲಸಃ ।
ಅತೋ ವಿಚಾರ್ಯ ಸುಧಿಯಾ ವಚ್ಮಿ ಶಾಸ್ತ್ರಂ ಮಹೋತ್ತಮಂ ॥ ೬ ॥

ಸರ್ವಸಿದ್ಧಾಂತನಿಷ್ಪನ್ನಂ ಭಕ್ತ್ಯಾದಿಕವಿವರ್ಧನಂ ।
ಶಿವತೋಷಕರಂ ದಿವ್ಯಂ ಶೃಣು ವತ್ಸ ರಸಾಯನಂ ॥ ೭ ॥

---

೩. ಈ ಘೋರವಾದ ಕಲಿಯುಗದಲ್ಲಿ ಸಾಮಾನ್ಯವಾಗಿ ಜನರೆಲ್ಲರೂ ದುಷ್ಟ ಸ್ವಭಾವವುಳ್ಳವರಾಗಿರುವರು. ಅವರ ಆ ಸ್ವಭಾವವು ಹೋಗಿ ವಿವೇಕಜ್ಞಾನವೂ ಸದ್ಗತಿಯೂ ಉಂಟಾಗಲು ಮಾರ್ಗವೇನಾದರೂ ಇದೆಯೇ ?

೪-೫. ಪ್ರಪಂಚದಲ್ಲಿ ಮನುಷ್ಯರು ನಿರ್ಮಲಚಿತ್ತರಾಗಿ ಆತ್ಮಶುದ್ಧಿಯನ್ನು ಹೊಂದಿ, ಶಿವತತ್ತ್ವಾರ್ಥವನ್ನು ತಿಳಿದು ಶಿವಪ್ರಾಪ್ತಿಯನ್ನು ಪಡೆಯುವ ಸಾಧನವೇನಾದರೂ ಇದೆಯೇ? ಹಾಗಿದ್ದಲ್ಲಿ ಅಂತಹ ಉತ್ತಮೋತ್ತಮವೂ, ಶ್ರೆಯಸ್ಸುಗಳಿಗೆಲ್ಲಾ ಶ್ರೇಯಸ್ಸೆನಿಸಿರುವುದೂ, ಪವಿತ್ರವಾದ ವಸ್ತುಗಳಲ್ಲಿಯೂ ಅತಿ ಪವಿತ್ರವಾದುದೂ ಆದ ಆ ಸಾಧನೆಯನ್ನು ಈಗ ನನಗೆ ದಯವಿಟ್ಟು ಹೇಳು ಎಂದು ಪ್ರಾರ್ಥಿಸಿದನು.

೬-೮. ಸೂತನು ಹೇಳುತ್ತಾನೆ:—ಎಲೈ ಶೌನಕನೇ, ಕೇಳು. ಶಿವಪ್ರಾಪ್ತಿ ಸಾಧನೋಪಾಯವನ್ನು ಕೇಳಬೇಕೆಂಬ ಬುದ್ಧಿಯು ನಿನಗೆ ಹುಟ್ಟಿರುವುದರಿಂದ ನೀನೇ ಧನ್ಯನು. ಈ ವಿಚಾರದಲ್ಲಿ ಶ್ರೇಷ್ಠವಾದ ಶಿವಪುರಾಣವೆಂಬ ಒಂದು ಮಹಾಪುರಾಣವನ್ನು ಸಾಕ್ಷಾತ್ಪರಮೇಶ್ವರನೇ ಲೋಕಹಿತಕ್ಕಾಗಿ ಹೇಳಿರುವನು. ಆ ಪುರಾಣವು ಸಮಸ್ತ ಸಿದ್ಧಾಂತಗಳ ಸಾರವನ್ನೊಳಗೊಂಡಿರುವುದು. ಕೇಳುವವರಿಗೆ ಪರಮೇಶ್ವರನಲ್ಲಿ ಭಕ್ತಿಯನ್ನುಂಟುಮಾಡುವುದು. ಈ ಪುರಾಣಶ್ರವಣವು ಶಿವನಿಗೆ ಬಹು ಸಂತೋಷ

ಕಾಲವ್ಯಾಲಮಹಾತ್ರಾಸವಿಧ್ವಂಸಕರಮುತ್ತಮಂ ।
ಶೈವಂ ಪುರಾಣಂ ಪರಮಂ ಶಿವೇನೋಕ್ತಂ ಪುರಾ ಮುನೇ ॥ ೮ ॥

ಸನತ್ಕುಮಾರಸ್ಯ ಮುನೇರುಪದೇಶಾತ್ಪರಾದರಾತ್ ।
ವ್ಯಾಸೇನೋಕ್ತಂ ತು ಸಂಕ್ಷೇಪಾತ್ಕಲಿಜಾನಾಂ ಹಿತಾಯ ಚ ॥ ೯ ॥

ಏತಸ್ಮಾದಪರಂ ಕಿಂಚಿತ್ಪುರಾಣಾಚ್ಛೈವತೋ ಮುನೇ ।
ನ ವಿದ್ಯತೇ ಮನಃಶುದ್ಧ್ಯೈ ಕಲಿಜಾನಾಂ ವಿಶೇಷತಃ ॥ ೧೦ ॥

ಜನ್ಮಾಂತರೇ ಭವೇತ್ಪುಣ್ಯಂ ಮಹತ್ತಸ್ಯ ಸುಧೀಮತಃ ।
ತಸ್ಯ ಪ್ರೀತಿರ್ಭವೇತ್ತತ್ರ ಮಹಾಭಾಗ್ಯವತೋ ಮುನೇ ॥ ೧೧ ॥

ಏತಚ್ಛಿವಪುರಾಣಂ ಹಿ ಪರಮಂ ಶಾಸ್ತ್ರಮುತ್ತಮಂ ।
ಶಿವರೂಪಂ ಕ್ಷಿತೌ ಜ್ಞೇಯಂ ಸೇವನೀಯಂ ಚ ಸರ್ವಥಾ ॥ ೧೨ ॥

---

ವನ್ನುಂಟುಮಾಡುವುದು. ಮನುಜರಿಗೆ ಕಾಲರೂಪವಾದ ಮೃತ್ಯುವೆಂಬ ಸರ್ಪದ ಭಯವನ್ನು ಪರಿಹಾರಮಾಡುವುದು. ಕೇಳುವುದಕ್ಕೆ ಬಹು ಹಿತಕರವಾಗಿರುವುದು. ಶಿವನಿಗೆ ಪ್ರೀತಿಕರವಾದ ಇಂತಹ ಉತ್ತಮಶಾಸ್ತ್ರವನ್ನು ನನ್ನ ಬುದ್ಧಿಯಿರುವವರೆಗೆ ಚೆನ್ನಾಗಿ ವಿಮರ್ಶಿಸಿ ನಿನಗೆ ಹೇಳುವೆನು. ಸಾವಧಾನ ಮನಸ್ಸಿನಿಂದ ಕೇಳು.

೯. ಸನತ್ಕುಮಾರಮುನಿಯು ಇದನ್ನು ವ್ಯಾಸನಿಗೆ ಉಪದೇಶಮಾಡಿದನು. ವ್ಯಾಸನೂ ಸಹ ಕಲಿಯುಗದ ಜನರ ಹಿತಕ್ಕಾಗಿ ಆ ಪುರಾಣವನ್ನು ಸಂಕ್ಷೇಪವಾಗಿ ಹೇಳಿರುವನು.

೧೦. ಈ ಶಿವಪುರಾಣಕ್ಕಿಂತ ಉತ್ತಮವಾದ ಪುರಾಣವು ಮತ್ತೊಂದಿಲ್ಲ ಆದರಲ್ಲೂ ಕಲಿಯುಗದಲ್ಲಿ ಜನರಿಗೆ ಮನಶ್ಶುದ್ಧಿಯನ್ನುಂಟುಮಾಡಿ ಅವರಿಗೆ ಸದ್ಗತಿಯನ್ನು ಉಂಟುಮಾಡಲು ಈ ಶಿವಪುರಾಣಶ್ರವಣವೇ ಮುಖ್ಯಸಾಧನೆಯಾಗಿರುವುದು.

೧೧. ಈ ಪುರಾಣಶ್ರವಣದಿಂದ ಶಿವಪ್ರೀತಿಯಾಗಿ, ಕೇಳುವವನಿಗೆ ಈ ಜನ್ಮದಲ್ಲಿಯೂ, ಮುಂದಿನ ಜನ್ಮಗಳಲ್ಲಿಯೂ ಮಹಾಪುಣ್ಯವೂ, ಅತುಲೈಶ್ವರ್ಯವೂ ಲಭಿಸುವುದು.

೧೨. ಉತ್ತಮಶಾಸ್ತ್ರವಾದ ಈ ಶಿವಪುರಾಣವು ಭೂಮಿಯಲ್ಲಿ ಸಾಕ್ಷಾಚ್ಛಿವಸ್ವರೂಪವೇ ಆಗಿರುವುದೆಂದು ತಿಳಿಯಬೇಕು. ಆದುದರಿಂದ ಎಷ್ಟು ಕಷ್ಟಪಟ್ಟಾದರೂ ಈ ಪುರಾಣವನ್ನು ಶ್ರವಣಮಾಡಿ ಶಿವನನ್ನು ಅರ್ಚಿಸಲೇ ಬೇಕು.

ಪಠನಾಚ್ಛ್ರವಣಾದಸ್ಯ ಭಕ್ತಿಮಾನ್ನರಸತ್ತಮಃ ।
ಸದ್ಯಃ ಶಿವಪದಪ್ರಾಪ್ತಿಂ ಲಭತೇ ಸರ್ವಸಾಧನಾತ್ ॥ ೧೩ ॥

ತಸ್ಮಾತ್ಸರ್ವಪ್ರಯತ್ನೇನ ಕಾಂಕ್ಷಿತಂ ಪಠನಂ ನೃಭಿಃ ।
ತಥಾಸ್ಯ ಶ್ರವಣಂ ಪ್ರೇಮ್ಣಾ ಸರ್ವಕಾಮಫಲಪ್ರದಂ ॥ ೧೪ ॥

ಪುರಾಣಶ್ರವಣಾಚ್ಛಂಭೋರ್ನಿಷ್ಪಾಪೋ ಜಾಯತೇ ನರಃ ।
ಭುಕ್ತ್ವಾ ಭೋಗಾನ್ ಸುವಿಪುಲಾಂಛಿವಲೋಕಮವಾಪ್ನುಯಾತ್ ॥ ೧೫ ॥

ರಾಜಸೂಯೇನ ಯತ್ಪುಣ್ಯಮಗ್ನಿಷ್ಟೋಮಶತೇನ ಚ ।
ತತ್ಪುಣ್ಯಂ ಲಭತೇ ಶಂಭೋಃ ಕಥಾಶ್ರವಣಮಾತ್ರತಃ ॥ ೧೬ ॥

ಯೇ ಶೃಣ್ವಂತಿ ಮುನೇ ಶೈವಂ ಪುರಾಣಂ ಶಾಸ್ತ್ರಮುತ್ತಮಂ ।
ತೇ ಮನುಷ್ಯಾ ನ ಮಂತವ್ಯಾ ರುದ್ರಾ ಏವ ನ ಸಂಶಯಃ ॥ ೧೭ ॥

---

೧೩-೧೪. ಮನುಷ್ಯನಾದವನು ಭಕ್ತಿಪುರಸ್ಸರವಾಗಿ ಈ ಶಿವಪುರಾಣವನ್ನು ಪಠಿಸುವುದು, ಶ್ರವಣಮಾಡುವುದು ಮೊದಲಾದ ಸಾಧನೋಪಾಯಗಳಿಂದ ಶಿವ ಸಾಯುಜ್ಯವನ್ನು ಬಹು ಬೇಗನೆ ಪಡೆಯುವನು. ಆದುದರಿಂದ ಮನುಷ್ಯರು ಪ್ರಯತ್ನ ಪೂರ್ವಕವಾಗಿ ಈ ಪುರಾಣದ ಪಠನಶ್ರವಣಾದಿಗಳನ್ನು ಭಕ್ತಿಯಿಂದ ಮಾಡಿದರೆ ಸಮಸ್ತಾಭೀಷ್ಟವೂ ಸಿದ್ಧಿಸುವುದು.

೧೫. ಈ ಪುರಾಣವನ್ನು ಭಕ್ತಿಯಿಂದ ಶ್ರವಣಮಾಡಿದ ಮನುಷ್ಯನ ಪಾಪ ಗಳೆಲ್ಲವೂ ನಾಶವಾಗುವುವಲ್ಲದೆ ಅವನು ಈ ಲೋಕದಲ್ಲಿ ನಾನಾವಿಧವಾದ ಅನೇಕ ಸುಖಗಳನ್ನು ಅನುಭವಿಸಿ ಕೊನೆಗೆ ಶಿವಲೋಕವನ್ನು ಹೊಂದುವನು.

೧೬. ರಾಜಸೂಯಯಾಗ, ಮತ್ತು ನೂರು ಅಗ್ನಿಷ್ಟೋಮ ಯಜ್ಞಗಳನ್ನು ಮಾಡಿದರೆ ಯಾವ ಪುಣ್ಯವು ಲಭಿಸುವುದೋ ಅಂತಹ ಪುಣ್ಯವು ಶಂಭುವಿನ ಕಥಾ ಶ್ರವಣಮಾತ್ರದಿಂದಲೇ ಪ್ರಾಪ್ತವಾಗುವುದು.

೧೭. ಈ ಉತ್ತಮಶಾಸ್ತ್ರವಾದ ಶೈವಪುರಾಣವನ್ನು ಶ್ರವಣಮಾಡುವ ಮನು ಜರು ಸಾಕ್ಷಾತ್ ರುದ್ರಸ್ವರೂಪರೇ ಆಗಿರುವರೆಂದು ತಿಳಿಯಬೇಕು. ಈ ವಿಚಾರದಲ್ಲಿ ಸಂಶಯವೇನಿಲ್ಲ.

ಶೃಣ್ವತಾಂ ತತ್ಪುರಾಣಂ ಹಿ ತಥಾ ಕೀರ್ತಯತಾಂ ಚ ತತ್ ।
ಪಾದಾಂಬುಜರಜಾಂಸ್ಯೇವ ತೀರ್ಥಾನಿ ಮುನಯೋ ವಿದುಃ ॥ ೧೮ ॥

ಗಂತುಂ ನಿಃಶ್ರೇಯಸಂ ಸ್ಥಾನಂ ಯೇಽಭಿವಾಂಛಂತಿ ದೇಹಿನಃ ।
ಶೈವಂ ಪುರಾಣಮಮಲಂ ಭಕ್ತ್ಯಾ ಶೃಣ್ವಂತು ತೇ ಸದಾ ॥ ೧೯ ॥

ಸದಾ ಶ್ರೋತುಂ ಯದ್ಯಶಕ್ತೋ ಭವೇತ್ಸ ಮುನಿಸತ್ತಮ ।
ಯದಿ ಪ್ರತಿದಿನಂ ಶೃಣುಯಾದ್ವಾ ಮುಹೂರ್ತಕಂ ॥ ೨೦ ॥

ನಿಯತಾತ್ಮಾ ಪ್ರತಿದಿನಂ ಶ್ರೋತುಮಶಕ್ತೋ ಮಾನವೋ ಭವೇತ್ ।
ಪುಣ್ಯಮಾಸಾದಿಷು ಮುನೇ ಶೃಣುಯಾಚ್ಛಿವಪುರಾಣಕಂ ॥ ೨೧ ॥

ಮುಹೂರ್ತಂ ವಾ ತದರ್ಧಂ ವಾ ತದರ್ಧಂ ವಾ ಕ್ಷಣಂ ಚ ವಾ ।
ಯೇ ಶೃಣ್ವಂತಿ ಪುರಾಣಂ ತನ್ನ ತೇಷಾಂ ದುರ್ಗತಿರ್ಭವೇತ್ ॥ ೨೨ ॥

---

೧೮. ಈ ಪುರಾಣವನ್ನು ಶ್ರವಣ ಮತ್ತು ಪಠನಮಾಡುವವರ ಪಾದಧೂಳಿಯು ಸರ್ವತೀರ್ಥಸ್ವರೂಪವೆಂದು ಮುನಿಗಳು ಹೇಳುವರು.

೧೯. ಪರಮಪದವಾದ ಮೋಕ್ಷವನ್ನು ಬಯಸುವವರು ಈ ಪವಿತ್ರವಾದ ಶಿವ ಪುರಾಣವನ್ನು ಭಕ್ತಿಯಿಂದ ಯಾವಾಗಲೂ ಶ್ರವಣಮಾಡಬೇಕು. ಮೋಕ್ಷಪ್ರಾಪ್ತಿಗೆ ಇದಕ್ಕಿಂತಲೂ ಉತ್ತಮವಾದ ಸಾಧನ ಬೇರೊಂದಿಲ್ಲ.

೨೦. ಈ ಪುರಾಣವನ್ನು ಯಾವಾಗಲೂ ಶ್ರವಣಮಾಡಲು ವ್ಯವಧಾನವಿಲ್ಲ ದಿದ್ದರೆ ಅಂತಹ ಮನುಜನು ಶುಚಿರ್ಭೂತನಾಗಿ ಪ್ರತಿದಿನವೂ ಒಂದು ಮುಹೂರ್ತ ಕಾಲದವರಿಗಾದರೂ ಶ್ರವಣಮಾಡಬೇಕು.

೨೧. ಪ್ರತಿದಿನವೂ ಕೇಳುವುದಕ್ಕೆ ಸಾಧ್ಯವಿಲ್ಲದಿದ್ದಲ್ಲಿ ಶುಭದಿನ, ವಿಶೇಷಕಾಲ ಗಳು, ಪುಣ್ಯಮಾಸಗಳು ಇವುಗಳಲ್ಲಿಯಾದರೂ ಶ್ರವಣಮಾಡಬೇಕು.

೨೨. ಈ ಪುರಾಣವನ್ನು ಒಂದು ಮುಹೂರ್ತ, ಅಥವಾ ಅರ್ಧಮುಹೂರ್ತ, ಇಲ್ಲದಿದ್ದರೆ ಅದರಲ್ಲಿ ಅರ್ಧ, ಅದೂ ಇಲ್ಲದಿದ್ದರೆ ಒಂದು ಕ್ಷಣಕಾಲದ ಮಟ್ಟಿಗಾದರೂ ಶ್ರವಣಮಾಡಿದಲ್ಲಿ ಅವರಿಗೆ ದುರ್ಗತಿಯು ಎಂದಿಗೂ ಉಂಟಾಗುವುದಿಲ್ಲ.

ತತ್ಪುರಾಣಂ ಚ ಶೃಣ್ವಾನಃ ಪುರುಷೋ ಯೋ ಮುನೀಶ್ವರ ।
ಸ ನಿಸ್ತರತಿ ಸಂಸಾರಂ ದಗ್ಧ್ವಾ ಕರ್ಮಮಹಾಟವೀಂ ॥ ೨೩ ॥

ತತ್ಪುಣ್ಯಂ ಸರ್ವದಾನೇಷು ಸರ್ವಯಜ್ಞೇಷು ವಾ ಮುನೇ ।
ಶಂಭೋಃ ಪುರಾಣಶ್ರವಣಾತ್ತತ್ಫಲಂ ನಿಶ್ಚಲಂ ಭವೇತ್ ॥ ೨೪ ॥

ವಿಶೇಷತಃ ಕಲೌ ಶೈವಪುರಾಣಶ್ರವಣಾದೃತೇ ।
ಪರೋ ಧರ್ಮೋ ನ ಪುಂಸಾಂ ಹಿ ಮುಕ್ತಿಸಾಧನಕೃನ್ಮುನೇ ॥ ೨೫ ॥

ಪುರಾಣಶ್ರವಣಂ ಶಂಭೋರ್ನಾಮಸಂಕೀರ್ತನಂ ತಥಾ ।
ಕಲ್ಪದ್ರುಮಫಲಂ ಸಮ್ಯಙ್ಮನುಷ್ಯಾಣಾಂ ನ ಸಂಶಯಃ ॥ ೨೬ ॥

ಕಲೌ ದುರ್ಮೇಧಸಾಂ ಪುಂಸಾಂ ಧರ್ಮಾಚಾರೋಜ್ಝಿತಾತ್ಮನಾಂ ।
ಹಿತಸ್ಯ ವಿದಧೇ ಶಂಭುಃ ಪುರಾಣಾಖ್ಯಂ ಸುಧಾರಸಂ ॥ ೨೭ ॥

---

೨೩. ಈ ಪುರಾಣವನ್ನು ಕೇಳುವ ಮನುಷ್ಯನು ಕರ್ಮಬಂಧವೆಂಬ ಘೋರಾರಣ್ಯವನ್ನು ದಹಿಸಿ, ಸಂಸಾರಸಾಗರವನ್ನು ದಾಟಿ ಮುಕ್ತಿಯನ್ನೈದುವನು.

೨೪. ಸರ್ವದಾನಗಳನ್ನೂ, ಸರ್ವಯಜ್ಞಗಳನ್ನೂ ಮಾಡಿದರೆ ಯಾವ ಪುಣ್ಯವು ಲಭಿಸುವುದೋ ಅಂತಹ ಪುಣ್ಯವು ಈ ಶಿವಪುರಾಣ ಶ್ರವಣ ಮಾತ್ರದಿಂದ ನಿಶ್ಚಯವಾಗಿಯೂ ಲಭಿಸುವುದು.

೨೫. ಕಲಿಯುಗದಲ್ಲಂತೂ ಶಿವಪುರಾಣ ಶ್ರವಣವನ್ನು ಬಿಟ್ಟರೆ ಮುಕ್ತಿಸಾಧನವಾದ ಬೇರೊಂದು ಧರ್ಮವೇ ಇರುವುದಿಲ್ಲ.

೨೬. ಈ ಶಿವಪುರಾಣ ಶ್ರವಣವೂ, ಶಿವನಾಮೋಚ್ಚಾರಣೆಯೂ ಮನುಷ್ಯರಿಗೆ ಕಲ್ಪವೃಕ್ಷದಂತೆ ಸಕಲಾಭೀಷ್ಟಗಳನ್ನೂ ಕೊಡುವವು, ಸಂಶಯವಿಲ್ಲ.

೨೭. ಈ ಕಲಿಯುಗದಲ್ಲಿ ಮನುಷ್ಯರು ಮಂದಮತಿಗಳು, ಧರ್ಮಾಚಾರ ರಹಿತರು. ಇಂತವರು ಸದ್ಗತಿಯನ್ನು ಹೊಂದಲೆಂದು ಸಾಕ್ಷಾತ್ಪರಶಿವನೇ ಅಮೃತ ಸ್ವರೂಪವಾದ ಈ ಪುರಾಣವನ್ನು ರಚಿಸಿರುವನು.

ಏಕೋऽಜರಾಮರಃ ಸ್ಯಾದ್ವೈ ಪಿಬನ್ನೇವಾಮೃತಂ ಪುಮಾನ್ ।
ಶಂಭೋಃ ಕಥಾಮೃತಂ ಕುರ್ಯಾತ್ಕುಲಮೇವಾಜರಾಮರಂ ॥ ೨೮ ॥

ಸದಾ ಸೇವ್ಯಾ ಸದಾ ಸೇವ್ಯಾ ಸದಾ ಸೇವ್ಯಾ ವಿಶೇಷತಃ ।
ಏತಚ್ಛಿವಪುರಾಣಸ್ಯ ಕಥಾ ಪರಮಪಾವನೀ ॥ ೨೯ ॥

ಏತಚ್ಛಿವಪುರಾಣಸ್ಯ ಕಥಾಶ್ರವಣಮಾತ್ರತಃ ।
ಕಿಂ ಬ್ರವೀಮಿ ಫಲಂ ತಸ್ಯ ಶಿವಶ್ಚಿತ್ತಂ ಸಮಾಶ್ರಯೇತ್ ॥ ೩೦ ॥

ಚತುರ್ವಿಂಶತಿಸಾಹಸ್ರೋ ಗ್ರಂಥೋऽಯಂ ಸಪ್ತಸಂಹಿತಃ ।
ಭಕ್ತಿತ್ರಿಕಸುಸಂಪೂರ್ಣಃ ಶೃಣುಯಾತ್ತಂ ಪರಾದರಾತ್ ॥ ೩೧ ॥

---

೨೮. ಅಮೃತವನ್ನು ಪಾನಮಾಡಿದ ಮನುಷ್ಯನು ತಾನೊಬ್ಬನು ಮಾತ್ರ ಜರಾಮರಣ ರಹಿತನಾಗುವನು. ಆದರೆ ಶಂಭುವಿನ ಕಥಾಮೃತವೆಂಬ ಪುರಾಣವನ್ನು ಶ್ರವಣಮಾಡಿದ ಮನುಷ್ಯನು ತನ್ನ ಕುಲದವರನ್ನೆಲ್ಲಾ ಜರಾಮರಣರಹಿತರನ್ನಾಗಿ ಮಾಡಿ ಅವರಿಗೆ ಸದ್ಗತಿಯುಂಟಾಗುವಂತೆ ಮಾಡುವನು.

೨೯. ಈ ಶಿವಪುರಾಣದಲ್ಲಿ ಹೇಳಿರುವ ಕಥೆಗಳು, ಉಪಾಖ್ಯಾನಗಳು, ಇತಿಹಾಸಗಳು ಇವೆಲ್ಲವೂ ಪರಮಪವಿತ್ರವಾದವುಗಳು. ಆದುದರಿಂದ ಇವುಗಳ ಶ್ರವಣ ರೂಪವಾದ ಸೇವೆಯನ್ನು ಯಾವಾಗಲೂ ಮಾಡಬೇಕು. ಸರ್ವ ಕಾಲಗಳಲ್ಲಿಯೂ ಮಾಡುತ್ತಿರಬೇಕು.

೩೦. ಈ ಶಿವಪುರಾಣವನ್ನು ಶ್ರವಣಮಾಡುವವನ ಪುಣ್ಯವನ್ನೇನೆಂದು ಹೇಳಲಿ ? ಸಾಕ್ಷಾಚ್ಛಿವನೇ ಅವನ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವನು.

೩೧. ಈ ಪುರಾಣದಲ್ಲಿ ಏಳು ಸಂಹಿತೆಗಳಿರುವವು. ಒಟ್ಟು ಗ್ರಂಥವು ಇಪ್ಪತ್ತು ನಾಲ್ಕು ಸಾವಿರ ಶ್ಲೋಕಗಳನ್ನೊಳಗೊಂಡಿರುವುದು. ಇವನ್ನು ಭಕ್ತಿಜ್ಞಾನವೈರಾಗ್ಯ ಗಳಿಂದ ಕೂಡಿ ಸಾವಧಾನ ಮನಸ್ಸಿನಿಂದ ಶ್ರವಣಮಾಡಬೇಕು.

ವಿದ್ಯೇಶ್ವರಸಂಹಿತಾದ್ಯಾ ದ್ವಿತೀಯಾ ರುದ್ರಸಂಹಿತಾ ।
ತೃತೀಯಾ ಶತರುದ್ರಾಖ್ಯಾ ಕೋಟಿರುದ್ರಾ ಚತುರ್ಥಿಕಾ ॥ ೩೨ ॥

ಪಂಚಮ್ಯುಮಾಸಂಹಿತೋಕ್ತಾ ಷಷ್ಠೀ ಕೈಲಾಸಸಂಹಿತಾ ।
ಸಪ್ತಮೀ ವಾಯವೀಯಾಖ್ಯಾ ಸಪ್ತೈವಂ ಸಂಹಿತಾ ಇಹ ॥ ೩೩ ॥

ಸಸಪ್ತಸಂಹಿತಂ ದಿವ್ಯಂ ಪುರಾಣಂ ಶಿವಸಂಜ್ಞಕಂ ।
ವರೀವರ್ತಿ ಬ್ರಹ್ಮತುಲ್ಯಂ ಸರ್ವೋಪರಿಗತಿಪ್ರದಂ ॥ ೩೪ ॥

ಏತಚ್ಛಿವಪುರಾಣಂ ಹಿ ಸಪ್ತಸಂಹಿತಮಾದರಾತ್ ।
ಪರಿಪೂರ್ಣಂ ಪಠೇದ್ಯಸ್ತು ಸ ಜೀವನ್ಮುಕ್ತ ಉಚ್ಯತೇ ॥ ೩೫ ॥

ಪುಮಾನಜ್ಞಾನತಸ್ತಾವದ್ಭ್ರಮತೇಽಸ್ಮಿನ್ಭವೇ ಮುನೇ ।
ಯಾವತ್ಕರ್ಣಗತಂ ನಾಸ್ತಿ ಪುರಾಣಂ ಶೈವಮುತ್ತಮಂ ॥ ೩೬ ॥

---

೩೨-೩೩. ಈ ಪುರಾಣದಲ್ಲಿ ಇರುವ ಸಂಹಿತೆಗಳಲ್ಲಿ ವಿದ್ಯೇಶ್ವರಸಂಹಿತೆಯೆಂಬುವುದು ಮೊದಲನೆಯದು ; ಎರಡನೆಯದು ರುದ್ರಸಂಹಿತಾ, ಮೂರನೆಯದು ಶತರುದ್ರಸಂಹಿತಾ, ನಾಲ್ಕನೆಯದು ಕೋಟಿರುದ್ರಸಂಹಿತಾ, ಐದನೆಯದು ಉಮಾಸಂಹಿತಾ, ಆರನೆಯದು ಕೈಲಾಸಸಂಹಿತಾ, ಏಳನೆಯದು ವಾಯವೀಯಸಂಹಿತಾ. ಹೀಗೆ ಏಳು ಸಂಹಿತೆಗಳಿರುವವು.

೩೪-೩೫. ಈ ಏಳು ಸಂಹಿತೆಗಳಿಂದ ಕೂಡಿರುವ ಈ ಶಿವಪುರಾಣವು ಪರಬ್ರಹ್ಮ ಸ್ವರೂಪವಾಗಿರುವುದು, ಉತ್ತಮವಾದ ಗತಿಯನ್ನು ಕೊಡುವುದು. ಆದುದರಿಂದ ಈ ಏಳು ಸಂಹಿತೆಗಳಿಂದ ಕೂಡಿರುವ ಈ ಪುರಾಣವನ್ನು ಸಂಪೂರ್ಣವಾಗಿ ಯಾವ ಮನುಜನು ಭಕ್ತಿಯಿಂದ ಪಠನಮಾಡುವನೋ ಅವನು ಜೀವನ್ಮುಕ್ತನೆಂದು ಹೇಳಲ್ಪಡುವನು.

೩೬. ಉತ್ತಮವಾದ ಈ ಶೈವಪುರಾಣವು ಮನುಷ್ಯನ ಕಿವಿಗೆ ಬೀಳದಿರುವವರೆಗೆ ಅಜ್ಞಾನದಿಂದ ಈ ಸಂಸಾರದಲ್ಲಿ ತೊಳಲುತ್ತಿರುತ್ತಾನೆ. ಇದರ ಶ್ರವಣವಾದ ಕೂಡಲೇ ಅವನಿಗೆ ಜ್ಞಾನೋದಯವಾಗುವುದು.

ಕಿಂ ಶ್ರುತೈರ್ಬಹುಭಿಃ ಶಾಸ್ತ್ರೈಃ ಪುರಾಣೈಶ್ಚ ಭ್ರಮಾವಹೈಃ ।
ಶೈವಂ ಪುರಾಣಮೇಕಂ ಹಿ ಮುಕ್ತಿದಾನೇನ ಗರ್ಜತಿ ॥ ೩೭ ॥

ಏತಚ್ಛಿವಪುರಾಣಸ್ಯ ಕಥಾ ಭವತಿ ಯದ್ಗೃಹೇ ।
ತೀರ್ಥಭೂತಂ ಹಿ ತದ್ಗೇಹಂ ವಸತಾಂ ಪಾಪನಾಶನಂ ॥ ೩೮ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಕಲಾಂ ಶಿವಪುರಾಣಸ್ಯ ನಾರ್ಹಂತಿ ಖಲು ಷೋಡಶೀಂ ॥ ೩೯ ॥

ತಾವತ್ಸ ಪ್ರೋಚ್ಯತೇ ಪಾಪೀ ಪಾಪಕೃನ್ಮುನಿಸತ್ತಮ ।
ಯಾವಚ್ಛಿವಪುರಾಣಂ ಹಿ ನ ಶೃಣೋತಿ ಸುಭಕ್ತಿತಃ ॥ ೪೦ ॥

ಗಂಗಾದ್ಯಾಃ ಪುಣ್ಯನದ್ಯಶ್ಚ ಸಪ್ತಪುರ್ಯೋ ಗಯಾ ತಥಾ ।
ಏತಚ್ಛಿವಪುರಾಣಸ್ಯ ಸಮತಾಂ ಯಾಂತಿ ನ ಕ್ವಚಿತ್ ॥ ೪೧ ॥

---

೩೭. ಈ ಲೋಕದಲ್ಲಿ ಅನೇಕ ಶಾಸ್ತ್ರಗಳೂ, ಭ್ರಮೆಯನ್ನುಂಟುಮಾಡುವ ಇತರ ಪುರಾಣಗಳೂ ಬೇಕಾದಷ್ಟಿರುವವು. ಅವುಗಳನ್ನು ಓದುವುದರಿಂದ ಆಗುವ ಪ್ರಯೋಜನವೇನು ? ಈ ಶಿವಪುರಾಣವಾದರೋ, ಇದನ್ನು ಶ್ರವಣಮಾಡುವವರಿಗೆ ಮುಕ್ತಿಯನ್ನೇ ಕೊಡುವೆನೆಂದು ಘೋಷಿಸುತ್ತಿರುವುದು.

೩೮. ಈ ಶಿವಪುರಾಣದ ಕಥಾನುವಾದವು ಯಾವ ಮನೆಯಲ್ಲಿ ನಡೆಯುತ್ತಿರುವುದೋ ಆ ಮನೆಯು ಪರಮಪವಿತ್ರವಾದ ತೀರ್ಥಸ್ವರೂಪವೇ ಹೊರತು ಬೇರೆಯಲ್ಲ. ಅಲ್ಲಿ ವಾಸಮಾಡುವವರ ಪಾಪಗಳೆಲ್ಲವೂ ನಾಶವನ್ನೈದುವವು.

೩೯. ಸಾವಿರ ಅಶ್ವಮೇಧಗಳು, ನೂರು ವಾಜಪೇಯಯಾಗಗಳು ಇವನ್ನು ಮಾಡಿದರೆ ಬರುವ ಫಲವು ಶಿವಪುರಾಣಶ್ರವಣದಿಂದುಂಟಾಗುವ ಫಲದ ಹದಿನಾರರಲ್ಲಿ ಒಂದು ಭಾಗಕ್ಕೂ ಸಾಟಿಯಾಗಲಾರದು.

೪೦. ಶಿವಪುರಾಣವನ್ನು ಭಕ್ತಿಯಿಂದ ಎಲ್ಲಿಯವರೆಗೆ ಕೇಳಿರುವುದಿಲ್ಲವೋ ಅಲ್ಲಿಯವರೆಗೆ ಮನುಷ್ಯನು ಪಾಪಿಷ್ಠನೆಂದೇ ಪರಿಗಣಿಸಲ್ಪಡುವನು.

೪೧. ಗಂಗಾದಿಪುಣ್ಯನದಿಗಳೂ, ಅಯೋಧ್ಯಾ, ಮಥುರಾ ಮೊದಲಾದ ಏಳು ಪವಿತ್ರವಾದ ಪುರಿಗಳೂ ಸಹ ಈ ಶಿವಪುರಾಣದ ಮಹಿಮೆಗೆ ಎಂದಿಗೂ ಸಾಟಿಯಾಗಲಾರವು.

ನಿತ್ಯಂ ಶಿವಪುರಾಣಸ್ಯ ಶ್ಲೋಕಂ ಶ್ಲೋಕಾರ್ಧಮೇವ ಚ ।
ಸ್ವಮುಖೇನ ಪಠೇದ್ಭಕ್ತ್ಯಾ ಯದೀಚ್ಛೇತ್ಪರಮಾಂ ಗತಿಂ ॥ ೪೨ ॥

ಏತಚ್ಛಿವಪುರಾಣಂ ಯೋ ವಾಚಯೇದರ್ಥತೋಽನಿಶಂ ।
ಪಠೇದ್ವಾ ಪ್ರೀತಿತೋ ನಿತ್ಯಂ ಸ ಪುಣ್ಯಾತ್ಮಾ ನ ಸಂಶಯಃ ॥ ೪೩ ॥

ಅಂತಕಾಲೇ ಹಿ ಯಶ್ಚೈನಂ ಶೃಣುಯಾದ್ಭಕ್ತಿತಸ್ಸುಧೀಃ ।
ಸುಪ್ರಸನ್ನೋ ಮಹೇಶಾನಸ್ತಸ್ಮೈ ಯಚ್ಛತಿ ಸ್ವಂ ಪದಂ ॥ ೪೪ ॥

ಏತಚ್ಛಿವಪುರಾಣಂ ಯಃ ಪೂಜಯೇನ್ನಿತ್ಯಮಾದರಾತ್ ।
ಸ ಭುಕ್ತ್ವೇಹಾಖಿಲಾನ್ಕಾಮಾನಂತೇ ಶಿವಪದಂ ಲಭೇತ್ ॥ ೪೫ ॥

ಏತಚ್ಛಿವಪುರಾಣಸ್ಯ ಕುರ್ವನ್ನಿತ್ಯಮತಂದ್ರಿತಃ ।
ಪಟ್ಟವಸ್ತ್ರಾದಿನಾ ಸಮ್ಯಕ್ ಸತ್ಕಾರಂ ಸ ಸುಖೀ ಸದಾ ॥ ೪೬ ॥

---

೪೨. ಉತ್ತಮಗತಿಯನ್ನಪೇಕ್ಷಿಸುವವನು ಪ್ರತಿನಿತ್ಯವೂ ಈ ಶಿವಪುರಾಣದ ಒಂದು ಶ್ಲೋಕವನ್ನಾಗಲೀ, ಅಥವಾ ಅರ್ಧ ಶ್ಲೋಕವನ್ನಾಗಲಿ, ಭಕ್ತಿಯಿಂದ ಪಠಿಸಬೇಕು.

೪೩. ಈ ಶಿವಪುರಾಣವನ್ನು ಯಾವನು ಪ್ರತಿನಿತ್ಯವೂ ಭಕ್ತಿಯಿಂದ ಪಠಿಸುವನೋ, ಅಥವಾ ಅರ್ಥಾನುವಾದ ಮಾಡುವನೋ ಅವನು ಪುಣ್ಯಾತ್ಮನೆಂಬುದರಲ್ಲಿ ಸಂಶಯವಿಲ್ಲ.

೪೪. ಮರಣವು ಸನ್ನಿಹಿತವಾಗಿರುವ ಕಾಲದಲ್ಲಿ ಯಾವ ಮನುಜನು ಇದನ್ನು ಭಕ್ತಿಯಿಂದ ಶ್ರವಣಮಾಡುವನೋ ಅವನಿಗೆ ಮಹೇಶ್ವರನು ಪ್ರಸನ್ನನಾಗಿ ತನ್ನ ಪರಮಪದವಾದ ಶಿವಲೋಕವನ್ನು ಅನುಗ್ರಹಿಸುವನು.

೪೫. ಈ ಶಿವಪುರಾಣವನ್ನು ಯಾವ ಮನುಷ್ಯನು ನಿತ್ಯವೂ ಭಕ್ತಿಯಿಂದ ಪೂಜಿಸುವನೋ ಅವನು ಈ ಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನು ಪಡೆದು, ಸಮಸ್ತ ಸುಖವನ್ನೂ ಅನುಭವಿಸಿ, ಕೊನೆಗೆ ಶಿವಸಾಯುಜ್ಯವನ್ನು ಹೊಂದುವನು.

೪೬. ಈ ಶಿವಪುರಾಣಗ್ರಂಥವನ್ನು ನಿತ್ಯವೂ ಯಾವನು ಪಟ್ಟೆವಸ್ತ್ರ ವೊದಲಾದವುಗಳಿಂದ ಸತ್ಕರಿಸಿ ಪೂಜಿಸುವನೋ ಅವನು ಯಾವಾಗಲೂ ಸುಖವಾಗಿರುವನು.

ಶೈವಂ ಪುರಾಣಮನುಲಂ ಶೈವಸರ್ವಸ್ವಮಾದರಾತ್ ।
ಸೇವನೀಯಂ ಪ್ರಯತ್ನೇನ ಪರತ್ರೇಹ ಸುಖೇಪ್ಸುನಾ ॥ ೪೭ ॥

ಚತುರ್ವರ್ಗಪ್ರದಂ ಶೈವಂ ಪುರಾಣಮನುಲಂ ಪರಂ ।
ಶ್ರೋತವ್ಯಂ ಸರ್ವದಾ ಪ್ರೀತ್ಯಾ ಪಠಿತವ್ಯಂ ವಿಶೇಷತಃ ॥ ೪೮ ॥

ವೇದೇತಿಹಾಸಶಾಸ್ತ್ರೇಷು ಪರಂ ಶ್ರೇಯಸ್ಕರಂ ಮಹತ್ ।
ಶೈವಂ ಪುರಾಣಂ ವಿಜ್ಞೇಯಂ ಸರ್ವಥಾ ಹಿ ಮುಮುಕ್ಷುಭಿಃ ॥ ೪೯ ॥

ಶೈವಂ ಪುರಾಣಮಿದಮಾತ್ಮವಿದಾಂ ವರಿಷ್ಠಂ
ಸೇವ್ಯಂ ಸದಾ ಪರಮವಸ್ತು ಸತಾಂ ಸಮರ್ಚ್ಯಂ ।
ತಾಪತ್ರಯಾಭಿಶಮನಂ ಸುಖದಂ ಸದೈವ
ಪ್ರಾಣಪ್ರಿಯಂ ವಿಧಿಹರೀಶಮುಖಾಮರಾಣಾಂ ॥ ೫೦ ॥

---

೪೭. ಈ ಲೋಕದಲ್ಲಿಯೂ. ಪರಲೋಕದಲ್ಲಿಯೂ ಸುಖವಾಗಿರಬೇಕೆಂದು ಬಯಸುವವನು ಶಿವತತ್ತ್ವಗಳಿಂದ ಪರಿಪೂರ್ಣವಾದ ಶಿವಪುರಾಣವೆಂಬ ಈ ಪವಿತ್ರಗ್ರಂಥವನ್ನು ಪ್ರಯತ್ನಪೂರ್ವಕವಾಗಿ ಶ್ರವಣಮನನಾದಿಗಳಿಂದ ಸೇವಿಸಬೇಕು.

೪೮. ಈ ಶೈವಪುರಾಣವು ಬಹು ಶ್ರೇಷ್ಠವಾದುದು. ಶ್ರವಣಮಾಡುವವರಿಗೆ ಧರ್ಮಾದಿಚತುರ್ವಿಧ ಪುರುಷಾರ್ಥಗಳನ್ನು ಕೊಡುವುದು. ಇಂತಹ ಉತ್ತಮವಾದ ಪುರಾಣವನ್ನು ಬಹು ಭಕ್ತಿಯಿಂದ ಕೇಳಬೇಕು. ಸ್ವಯಂಪಠನಮಾಡಿದರೆ ಇನ್ನೂ ವಿಶೇಷವಾದ ಫಲವುಂಟು.

೪೯. ವೇದ, ಇತಿಹಾಸ, ಶಾಸ್ತ್ರ ಮೊದಲಾದ ಉತ್ತಮಗ್ರಂಥಗಳಲ್ಲೆಲ್ಲಾ ಈ ಪುರಾಣವೇ ಬಹು ಶ್ರೇಷ್ಠವಾದುದು. ಮೋಕ್ಷವನ್ನು ಬಯಸುವವರು ಈ ಪುರಾಣವನ್ನು ಅವಶ್ಯಕವಾಗಿ ಅಧ್ಯಯನಮಾಡಬೇಕು.

೫೦. ಆತ್ಮತತ್ತ್ವಬೋಧಕಗಳಾದ ಪುರಾಣಗಳಲ್ಲೆಲ್ಲಾ ಈ ಶೈವಪುರಾಣವು ಬಹು ಶ್ರೇಷ್ಠವೆಂದು ಪ್ರಸಿದ್ಧಿಪಡೆದಿರುವುದು. ಪರಾಪರವಸ್ತುವಿನಂತೆ ಇದನ್ನು ಸಜ್ಜನರು ಅರ್ಚಿಸಿ ಸೇವಿಸುವರು. ಶ್ರವಣಮಾಡುವವರ ಸಂಸಾರತಾಪತ್ರಯಗಳನ್ನು ಎಂದರೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರು ವಿಧವಾದ ಕ್ಲೇಶಗಳನ್ನೂ ಪರಿಹರಿಸಿ ಯಾವಾಗಲೂ ಸುಖವನ್ನುಂಟುಮಾಡುವುದು. ಬ್ರಹ್ಮ ವಿಷ್ಣುಮಹೇಶ್ವರರೇ ಮೊದಲಾದ ದೇವತೆಗಳಿಗೆಲ್ಲಾ ಪ್ರಾಣಕ್ಕಿಂತಲೂ ಪ್ರಿಯವಾದುದು.

ವಂದೇ ಶಿವಪುರಾಣಂ ಹಿ ಸರ್ವದಾಹಂ ಪ್ರಸನ್ನಧೀಃ ।
ಶಿವಃ ಪ್ರಸನ್ನತಾಂ ಯಾಯಾದ್ದದ್ಯಾತ್ಸ್ವಪದಯೋಃ ರತಿಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯಂ
ತನ್ಮಹಿಮವರ್ಣನಂ ನಾಮ ಪ್ರಥಮೋಽಧ್ಯಾಯಃ.

---

೫೧. ಇಂತಹ ಈ ಶಿವಪುರಾಣವನ್ನು ಸಂತೋಷಚಿತ್ತನಾಗಿ ಯಾವಾಗಲೂ ನಮಸ್ಕರಿಸುವೆನು. ಇದರಿಂದ ಪರಶಿವನು ಪ್ರಸನ್ನನಾಗಿ ನನಗೆ ಅವನ ಪಾದಕಮಲಗಳಲ್ಲಿ ಭಕ್ತಿಯನ್ನು ಅನುಗ್ರಹಿಸಲಿ.

ಇಲ್ಲಿಗೆ ಶ್ರೀ ಸ್ಕಾಂದಮಹಾಪುರಾಣದಲ್ಲಿ ಶಿವಪುರಾಣಮಾಹಾತ್ಮ್ಯ ವರ್ಣನೆಯೆಂಬ
ಮೊದಲನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

## ॥ ಅಥ ಶ್ರೀ ಶಿವ ಪುರಾಣ ಮಾಹಾತ್ಮ್ಯೇ ॥

## ದ್ವಿತೀಯೋಽಧ್ಯಾಯಃ

---

॥ ಶೌನಕ ಉವಾಚ ॥

ಸೂತ ಸೂತ ಮಹಾಭಾಗ ಧನ್ಯಸ್ತ್ವಂ ಪರಮಾರ್ಥವಿತ್ ।
ಅದ್ಭುತೇಯಂ ಕಥಾ ದಿವ್ಯಾ ಶ್ರಾವಿತಾ ಕೃಪಯಾ ಹಿ ನಃ ॥ ೧ ॥

ಅಘೌಘವಿಧ್ವಂಸಕರೀ ಮನಃಶುದ್ಧಿವಿಧಾಯನೀ ।
ಶಿವಸಂತೋಷಜನನೀ ಕಥೇಯಂ ನಃ ಶ್ರುತಾದ್ಭುತಾ ॥ ೨ ॥

ಏತತ್ಕಥಾಸಮಾನಂ ನ ಭುವಿ ಕಿಂಚಿತ್ಪರಾಪರಂ ।
ನಿಶ್ಚಯೇನೇತಿ ವಿಜ್ಞಾತಮಸ್ಮಾಭಿಃ ಕೃಪಯಾ ತವ ॥ ೩ ॥

---

### ಎರಡನೆಯ ಅಧ್ಯಾಯ.

೧. ಶೌನಕಮುನಿಯು ಸೂತನನ್ನು ಪ್ರಶ್ನೆಮಾಡುವನು :—ಎಲೈ ಪೂಜ್ಯನಾದ ಸೂತಮುನಿಯೇ, ನೀನೇ ಧನ್ಯನು. ಪರತತ್ತ್ವವನ್ನು ತಿಳಿದವನು. ನಮ್ಮ ಮೇಲೆ ದಯವಿಟ್ಟು ಅದ್ಭುತವಾದ ಈ ದಿವ್ಯಕಥೆಯನ್ನು ನಮಗೆ ಹೇಳಿರುತ್ತೀಯೆ.

೨-೩. ಈ ಶಿವಕಥಾಶ್ರವಣವು ಸಮಸ್ತ ಪಾಪಗಳನ್ನು ಧ್ವಂಸಮಾಡಿ ಮನಃಶುದ್ಧಿಯನ್ನು ಉಂಟುಮಾಡುವುದು. ಈ ಕಥೆಯನ್ನು ಕೇಳುವುದರಿಂದ ಶಿವನಿಗೆ ಸಂತೋಷವನ್ನುಂಟುಮಾಡಿದಂತಾಗುವುದು. ಇದಕ್ಕೆ ಸಮಾನವಾದ ಕಥೆಯು ಈ ಭೂಮಿಯಲ್ಲಿ ಮತ್ತೊಂದಿಲ್ಲ. ಪರಾಪರಸ್ವರೂಪವನ್ನು ತಿಳಿಸುವ

ಕೇ ಕೇ ವಿಶುಧ್ಯಂತ್ಯನಯಾ ಕಥಯಾ ಪಾಪಿನಃ ಕಲೌ ।
ವದ ತಾನ್ ಕೃಪಯಾ ಸೂತ ಕೃತಾರ್ಥಂ ಭುವನಂ ಕುರು ॥ ೪ ॥

॥ ಸೂತ ಉವಾಚ ॥

ಯೇ ಮಾನವಾಃ ಪಾಪಕೃತೋ ದುರಾಚಾರರತಾಃ ಖಲಾಃ ।
ಕಾಮಾದಿನಿರತಾ ನಿತ್ಯಂ ತೇಽಪಿ ಶುಧ್ಯಂತ್ಯನೇನ ವೈ ॥ ೫ ॥

ಜ್ಞಾನಯಜ್ಞಃ ಪರೋ ಯಂ ವೈ ಭುಕ್ತಿಮುಕ್ತಿಪ್ರದಸ್ತಥಾ ।
ಶೋಧನಸ್ಸರ್ವಪಾಪಾನಾಂ ಶಿವಸಂತೋಷಕಾರಕಃ ॥ ೬ ॥

ತೃಷ್ಣಾಕುಲಾಃ ಸತ್ಯಹೀನಾಃ ಪಿತೃಮಾತೃವಿದೂಷಕಾಃ ।
ದಾಂಭಿಕಾ ಹಿಂಸಕಾ ಯೇ ಚ ತೇಽಪಿ ಶುದ್ಧ್ಯಂತ್ಯನೇನ ವೈ ॥ ೭ ॥

---

ಇಂತಹ ಅದ್ಭುತವಾದ ಶಿವಕಥಾಮೃತವನ್ನು ನಿನ್ನ ಅನುಗ್ರಹದಿಂದ ನಾವು ಕೇಳಿ ತಿಳಿದುಕೊಂಡೆವು.

೪. ಎಲೈ ಸೂತನೇ, ಈ ಕಲಿಯುಗದಲ್ಲಿ ಎಂತೆಂತಹ ಪಾಪಿಗಳು ಈ ಪುರಾಣಶ್ರವಣದಿಂದ ಶುದ್ಧರಾಗುವರು ? ಅದನ್ನೆಲ್ಲಾ ನಮಗೆ ದಯವಿಟ್ಟು ವಿಸ್ತಾರವಾಗಿ ತಿಳಿಸು. ಆದರಿಂದ ನೀನು ಲೋಕೋಪಕಾರವನ್ನು ಮಾಡಿದಂತಾಗುವುದು ಎಂದರು.

೫. ಸೂತನು ಹೇಳುತ್ತಾನೆ:—ಈ ಪುರಾಣಶ್ರವಣದಿಂದ ಪಾಪವನ್ನು ಮಾಡಿರುವ ಮಾನವರೂ, ಕೆಟ್ಟ ನಡೆತೆಯಿಂದಿರುವ ದುಷ್ಟರೂ, ಕಾಮಿಗಳೂ ಕೂಡ ಪರಿಶುದ್ಧರಾಗುವರು.

೬. ಜ್ಞಾನವೆಂಬ ಯಜ್ಞವು (ಪರಾಪರಸ್ವರೂಪಜ್ಞಾನವು) ಎಂದರೆ ಶಿವತತ್ತ್ವಸ್ವರೂಪಜ್ಞಾನವು ಭುಕ್ತಿಯನ್ನೂ, ಮುಕ್ತಿಯನ್ನೂ ಕೊಡುವುದಾಗಿಯೂ, ಎಲ್ಲ ಪಾಪಗಳನ್ನೂ ನಾಶಮಾಡುವುದಾಗಿಯೂ, ಮತ್ತು ಈಶ್ವರನಿಗೆ ಸಂತೋಷವನ್ನುಂಟುಮಾಡುವುದಾಗಿಯೂ ಇರುವುದು.

೭. ಈ ಜ್ಞಾನಯಜ್ಞದಿಂದ ಅಂದರೆ ಪರಾಪರತತ್ತ್ವವಿಚಾರದಿಂದ ಸುಳ್ಳು ಹೇಳುವವರೂ, ತಾಯಿತಂದೆಗಳನ್ನು ದೂಷಿಸುವವರೂ, ದಂಭಾಚಾರನಿರತರೂ, ಹಿಂಸೆಯನ್ನು ಮಾಡುವವರೂ ಕೂಡ ಪರಿಶುದ್ಧರಾಗುತ್ತಾರೆ.

ಸ್ವವರ್ಣಾಶ್ರಮಧರ್ಮೇಭ್ಯೋ ವರ್ಜಿತಾ ಮತ್ಸರಾನ್ವಿತಾಃ ।
ಜ್ಞಾನಯಜ್ಞೇನ ತೇಽನೇನ ಸಂಪುನಂತಿ ಕಲಾವಪಿ ॥ ೮ ॥

ಛಲಚ್ಛದ್ಮಕರಾ ಯೇ ಚ ಯೇ ಚ ಕ್ರೂರಾಸ್ಸುನಿರ್ದಯಾಃ ।
ಜ್ಞಾನಯಜ್ಞೇನ ತೇಽನೇನ ಸಂಪುನಂತಿ ಕಲಾವಪಿ ॥ ೯ ॥

ಬ್ರಹ್ಮಸ್ವಪುಷ್ಟಾಸ್ಸತತಂ ವ್ಯಭಿಚಾರರತಾಶ್ಚ ಯೇ ।
ಜ್ಞಾನಯಜ್ಞೇನ ತೇಽನೇನ ಸಂಪುನಂತಿ ಕಲಾವಪಿ ॥ ೧೦ ॥

ಸದಾ ಪಾಪರತಾ ಯೇ ಚ ಯೇ ಶಠಾತಿದುರಾಶಯಾಃ ।
ಜ್ಞಾನಯಜ್ಞೇನ ತೇಽನೇನ ಸಂಪುನಂತಿ ಕಲಾವಪಿ ॥ ೧೧ ॥

ಮಲಿನಾ ದುರ್ಧಿಯಃ ಶಾಂತಾ ದೇವತಾದ್ರವ್ಯಭೋಜಿನಃ ।
ಜ್ಞಾನಯಜ್ಞೇನ ತೇಽನೇನ ಸಂಪುನಂತಿ ಕಲಾವಪಿ ॥ ೧೨ ॥

---

೮. ಕುಲಹೀನನೂ, ಜಾತಿಹೀನನೂ, ಧರ್ಮಹೀನನೂ, ಅಸೂಯೆಯಿಂದ ಕೂಡಿದವನೂ ಕೂಡ, ಅಧರ್ಮಪ್ರಧಾನವಾದ ಕಲಿಯುಗದಲ್ಲಿಯೂ ಸಹಿತ ಈ ಪರಾಪರತತ್ವರೂಪವಾದ ಶಿವತತ್ತ್ವಜ್ಞಾನದಿಂದ ಪವಿತ್ರನಾಗುವನು.

೯. ಹಠಗಾರರೂ, ಮೋಸಮಾಡುವವರೂ, ಕ್ರೂರರೂ, ದಯೆಯಿಲ್ಲದವರೂ ಕೂಡ ಅಧರ್ಮಪ್ರಧಾನವಾದ ಕಲಿಯುಗದಲ್ಲೂ ಸಹಿತ ಈ ಜ್ಞಾನಯಜ್ಞದಿಂದ ಪವಿತ್ರರಾಗುವರು.

೧೦. ಬ್ರಹ್ಮಜ್ಞಾನವಿಲ್ಲದವರೂ, ಯಾವಾಗಲೂ ವ್ಯಭಿಚಾರಮಾಡುವವರೂ, ಈ ಜ್ಞಾನಯಜ್ಞದಿಂದ ಕಲಿಯುಗದಲ್ಲಿಯೂ ಕೂಡ ಪರಿಶುದ್ಧರಾಗುವರು.

೧೧-೧೨. ಈ ಪರಾವರತತ್ತ್ವರೂಪವಾದ ಜ್ಞಾನಯಜ್ಞದಿಂದ ಯಾವಾಗಲೂ ಪಾಪವನ್ನು ಮಾಡುತ್ತಿರುವವರೂ, ಮೂರ್ಖರೂ, ದುರಾಶೆಯುಳ್ಳವರೂ, ಕೊಳಕರೂ, ಕೆಟ್ಟ ಬುದ್ಧಿಯುಳ್ಳವರೂ, ದೇವತಾಸಂಬಂಧವಾದ ಹಣ ಮುಂತಾದುವುಗಳಿಂದ ಜೀವಿಸುವವರೂ, ಕೂಡ ಕಲಿಯುಗದಲ್ಲಿಯೂ ಸಹ ಪವಿತ್ರರಾಗುವರು.

ಪುರಾಣಸ್ಯಾಸ್ಯ ಪುಣ್ಯಂ ಸನ್ಮಹಾಪಾತಕನಾಶನಂ ।
ಭುಕ್ತಿಮುಕ್ತಿಪ್ರದಂ ಚೈವ ಶಿವಸಂತೋಷಹೇತುಕಂ ॥ ೧೩ ॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಯಸ್ಯ ಶ್ರವಣಮಾತ್ರೇಣ ಪಾಪಹಾನಿರ್ಭವತ್ಯಲಂ ॥ ೧೪ ॥

ಆಸೀತ್ಕಿರಾತನಗರೇ ಬ್ರಾಹ್ಮಣೋ ಜ್ಞಾನದುರ್ಬಲಃ ।
ದರಿದ್ರೋ ರಸನಿಕ್ರೇತಾ ದೇವಧರ್ಮಪರಾಙ್ಮುಖಃ ॥ ೧೫ ॥

ಸಂಧ್ಯಾಸ್ನಾನಪರಿಭ್ರಷ್ಟೋ ವೈಶ್ಯವೃತ್ತಿಪರಾಯಣಃ ।
ದೇವರಾಜ ಇತಿ ಖ್ಯಾತೋ ವಿಶ್ವಸ್ತಜನವಂಚಕಃ ॥ ೧೬ ॥

ಸ ವಿಪ್ರಾನ್ ಕ್ಷತ್ರಿಯಾನ್ ವೈಶ್ಯಾನ್ ಶೂದ್ರಾಂಶ್ಚಾಪಿ ತಥಾಪರಾನ್ ।
ಹತ್ವಾ ನಾನಾಮಿಷೇಣೈವ ತತ್ತದ್ಧನಮುಪಾಹರತ್ ॥ ೧೭ ॥

ಅಧರ್ಮಾದ್ಬಹುವಿತ್ತಾನಿ ಪಶ್ಚಾತ್ತೇನಾರ್ಜಿತಾನಿ ವೈ ।
ನ ಧರ್ಮಾಯ ಧನಂ ತಸ್ಯ ಸ್ವಲ್ಪಂ ಚಾಪೀಹ ಪಾಪಿನಃ ॥ ೧೮ ॥

---

೧೩. ಶಿವನ ಸಂತೋಷಕ್ಕೆ ಕಾರಣವಾದ ಈ ಪುರಾಣಶ್ರವಣದಿಂದುಂಟಾದ ಪುಣ್ಯವು ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು ನಾಶಮಾಡಿ, ಭುಕ್ತಿಯನ್ನೂ, ಮೋಕ್ಷವನ್ನೂ ಕೊಡುವುದು.

೧೪. ಈ ವಿಷಯದಲ್ಲಿ ಪೂರ್ವದಲ್ಲಿ ನಡೆದ ಒಂದು ಚರಿತ್ರೆಯನ್ನು ಹೇಳುವೆನು. ಈ ಚರಿತ್ರೆಯನ್ನು ಕೇಳುವುದರಿಂದ ಪಾಪಗಳೆಲ್ಲವೂ ನಾಶವಾಗುವುವು.

೧೫-೧೬. ಕಿರಾತವೆಂಬ ಪಟ್ಟಣದಲ್ಲಿ ಮೂಢನೂ, ದರಿದ್ರನೂ ಆದ ದೇವರಾಜನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ತನ್ನ ಸ್ವಧರ್ಮವಾದ ಬ್ರಾಹ್ಮಣಕರ್ಮವನ್ನು ಬಿಟ್ಟು ದೇವತಾಪೂಜಾದಿಗಳನ್ನೂ ಸ್ನಾನಸಂಧ್ಯಾವಂದನಾದಿ ನಿತ್ಯಕರ್ಮಗಳನ್ನೂ ಮಾಡದೆ, ರಸವಿಕ್ರಯ, ಪರವಂಚನ ಮೊದಲಾದ ದುರ್ವ್ಯಾಪಾರಗಳಲ್ಲಿಯೇ ಆಸಕ್ತನಾಗಿದ್ದನು.

೧೭-೧೮. ಆ ಬ್ರಾಹ್ಮಣನು ನಾನಾವಿಧವಾದ ನೆಪದಿಂದ ಕ್ಷತ್ರಿಯರನ್ನೂ, ವೈಶ್ಯರನ್ನೂ, ಶೂದ್ರರನ್ನೂ, ಮಿಕ್ಕ ಜಾತಿಯವರನ್ನೂ ಕೊಂದು ಅವರ ಧನ

ಏಕದೈಕತಡಾಗೇ ಸ ಸ್ನಾತುಂ ಯಾತೋ ಮಹೀಸುರಃ
ವೇಶ್ಯಾಂ ಶೋಭಾವತೀಂ ನಾಮ ದೃಷ್ಟ್ವಾ ತತ್ರಾತಿವಿಹ್ವಲಃ ॥ ೧೯ ॥

ಸ್ವವಶಂ ಧನಿನಂ ವಿಪ್ರಂ ಜ್ಞಾತ್ವಾ ದೃಷ್ಟ್ವಾಥ ಸುಂದರೀ ।
ವಾರ್ತಾಲಾಪೇನ ತಚ್ಚಿತ್ತಂ ಪ್ರೀತಿಮತ್ಸಮಜಾಯತ ॥ ೨೦ ॥

ಸ್ತ್ರಿಯಂ ಕರ್ತುಂ ಸ ತಾಂ ಮೇನೇ ಪತಿಂ ಕರ್ತುಂ ಚ ಸಾ ತಥಾ
ಏವಂ ಕಾಮವಶೌ ಭೂತ್ವಾ ಬಹುಕಾಲಂ ವಿಜಹ್ರತುಃ ॥ ೨೧ ॥

ಆಸನೇ ಶಯನೇ ಪಾನೇ ಭೋಜನೇ ಕ್ರೀಡನೇ ತಥಾ ।
ದಂಪತೀವ ಸದಾ ದ್ವೌ ತು ವವೃತಾತೇ ಪರಸ್ಪರಂ ॥ ೨೨ ॥

---

ವನ್ನೆಲ್ಲಾ ಅಪಹರಿಸುತ್ತಿದ್ದನು. ಈರೀತಿಯಾಗಿ ಅನ್ಯಾಯಮಾರ್ಗದಿಂದ ಬೇಕಾದಷ್ಟು ಹಣವನ್ನು ಸಂಪಾದಿಸಿದನು. ಆದರೆ ಆ ಪಾಪಿಯು ಆ ಹಣದಲ್ಲಿ ಸ್ವಲ್ಪವನ್ನೂ ಕೂಡ ಧರ್ಮಕ್ಕೋಸ್ಕರ ಉಪಯೋಗಿಸುತ್ತಿರಲಿಲ್ಲ.

೧೯-೨೦. ಒಂದು ದಿನ ಆ ಬ್ರಾಹ್ಮಣನು ಸ್ನಾನಮಾಡಲು ಕೆರೆಗೆಹೋದನು. ಅಲ್ಲಿ ಶೋಭಾವತೀ ಎಂಬ ರೂಪವತಿಯಾದ ವೇಶ್ಯೆಯನ್ನು ನೋಡಿ ಚಿತ್ತಚಾಂಚಲ್ಯದಿಂದ ಕಾಮಪರವಶನಾದನು. ಆ ಸುಂದರಿಯಾದರೋ ಈ ಬ್ರಾಹ್ಮಣನನ್ನು ನೋಡಿ ಇವನಲ್ಲಿ ಧನವಿದೆ ಎಂದು ತಿಳಿದು, ಅವನೊಡನೆ ಪ್ರೀತಿಯಿಂದ ಮಾತನಾಡುತ್ತಾ ಅವನಿಗೆ ತನ್ನಲ್ಲಿ ಪ್ರೀತಿಯು ಹುಟ್ಟುವಂತೆ ಮಾಡಿದಳು.

೨೧. ಅವರಿಬ್ಬರೂ ಪತಿಪತ್ನಿಯರಂತೆ ಇರಲು ಪರಸ್ಪರ ಸಂಮತಿಸಿ ಅದರಂತೆ ಇಬ್ಬರೂ ಕಾಮವಶರಾಗಿ ಬಹಳ ಕಾಲದವರೆಗೂ ಕ್ರೀಡಿಸಿದರು.

೨೨. ಕುಳಿತುಕೊಳ್ಳುವುದರಲ್ಲಿಯೂ, ಮಲಗುವುದರಲ್ಲಿಯೂ ಊಟಮಾಡುವುದರಲ್ಲಿಯೂ, ಕುಡಿಯುವುದರಲ್ಲಿಯೂ, ಆಟವಾಡುವುದರಲ್ಲಿಯೂ, ಇಬ್ಬರೂ ಒಟ್ಟಿಗೇ ಇದ್ದು ನಿಜವಾದ ಗಂಡ ಹೆಂಡತಿಯರಂತೆಯೇ ಪರಸ್ಪರವಾಗಿ ವರ್ತಿಸುತ್ತಿದ್ದರು.

ಮಾತ್ರಾ ಪಿತ್ರಾ ತಥಾ ಪತ್ನ್ಯಾ ವಾರಿತೋಽಪಿ ಪುನಃ ಪುನಃ ।
ನಾಮನ್ಯತ ವಚಸ್ತೇಷಾಂ ಪಾಪವೃತ್ತಿಪರಾಯಣಃ ॥ ೨೩ ॥

ಏಕದೇಷ್ಯಾರ್ವಶಾದ್ರಾತ್ರೌ ಮಾತರಂ ಪಿತರಂ ವಧೂಂ ।
ಪ್ರಸುಪ್ತಾನ್ಯವಧೀದ್ದುಷ್ಟೋ ಧನಂ ತೇಷಾಂ ತಥಾಹರತ್ ॥ ೨೪ ॥

ಆತ್ಮನೀನಂ ಧನಂ ಯಚ್ಚ ಪಿತ್ರಾದೀನಾಂ ತಥಾ ಧನಂ ।
ವೇಶ್ಯಾಯೈ ದತ್ತವಾನ್ಸರ್ವಂ ಕಾಮೀ ತದ್ಗತಮಾನಸಃ ॥ ೨೫ ॥

ಸೋಽಭಕ್ಷ್ಯಭಕ್ಷಕಃ ಪಾಪೀ ಮದಿರಾಪಾನಲಾಲಸಃ ।
ಏಕಪಾತ್ರೇ ಸದಾಭೌಕ್ಷೀತ್ ಸವೇಶ್ಯೋ ಬ್ರಾಹ್ಮಣಾಧಮಃ ॥ ೨೬ ॥

ಕದಾಚಿದ್ದೈವಯೋಗೇನ ಪ್ರತಿಷ್ಠಾನಮುಪಾಗತಃ ।
ಶಿವಾಲಯಂ ದದರ್ಶಾಸೌ ತತ್ರ ಸಾಧುಜನಾವೃತಂ ॥ ೨೭ ॥

---

೨೩. ಪಾಪಕೆಲಸದಲ್ಲಿಯೇ ಆಸಕ್ತನಾದ ಆ ದೇವರಾಜನಿಗೆ ಸೂಳೆಯಾದ ಶೋಭಾವತಿಯ ಸಹವಾಸವನ್ನು ಬಿಡೆಂದು ತಂದೆ, ತಾಯಿ, ಹೆಂಡತಿ ಇವರು ಎಷ್ಟು ಹೇಳಿದರೂ ಕೇಳಲಿಲ್ಲ.

೨೪-೨೫. ಇಷ್ಟೇ ಅಲ್ಲದೆ ಕಾಮಿಯಾದ ಆ ದೇವರಾಜನು ಒಂದು ದಿನ ಸಿಟ್ಟಿನಿಂದ, ಮಲಗಿದ್ದ ತನ್ನ ತಂದೆ, ತಾಯಿ, ಪತ್ನಿಯರನ್ನು ಕೊಂದುಬಿಟ್ಟು ಅವರ ಧನವನ್ನೆಲ್ಲಾ ಅಪಹರಿಸಿ ಆ ಹಣವನ್ನೆಲ್ಲಾ ತನ್ನ ಪ್ರೀತಿಪಾತ್ರಳಾದ ಸೂಳೆಗೆ ಕೊಟ್ಟನು.

೨೬. ಬ್ರಾಹ್ಮಣಾಧಮನಾದ ಆ ದೇವರಾಜನು ತಿನ್ನಬಾರದುದನ್ನೆಲ್ಲಾ ತಿನ್ನುತ್ತಿದ್ದನು. ಮದ್ಯವನ್ನು ಕುಡಿಯುತ್ತಿದ್ದನು ಆ ವೇಶ್ಯೆಯೊಡನೆ ಒಂದೇ ಪಾತ್ರೆಯಲ್ಲಿ ಊಟವನ್ನು ಸಹ ಮಾಡುತ್ತಾ ಅತಿ ಪಾಪಿಯಾಗಿದ್ದನು.

೨೭. ಹೀಗಿರುತ್ತಿರಲು ಒಂದು ದಿನ ಆ ನೀಚನಾದ ದೇವರಾಜನು ಅಲ್ಲಲ್ಲಿ ತಿರುಗುತ್ತಾ ಒಂದು ಶಿವದೇವಾಲಯವನ್ನು ನೋಡಿದನು. ಅಲ್ಲಿ ಅನೇಕ ಸಾಧುಗಳು ನೆರೆದು ಶಿವಕಥಾಶ್ರವಣವನ್ನು ಮಾಡುತ್ತಿದ್ದರು.

ಸ್ಥಿತ್ವಾ ತತ್ರ ಚ ವಿಪ್ರೋsಸೌ ಜ್ವರೇಣಾತಿಪ್ರಪೀಡಿತಃ ।
ಶುಶ್ರಾವ ಸತತಂ ಶೈವೀಂ ಕಥಾಂ ವಿಪ್ರಮುಖೋದ್ಗತಾಂ ॥ ೨೮ ॥

ದೇವರಾಜಸ್ತು ಮಾಸಾಂತೇ ಜ್ವರೇಣಾಪೀಡಿತೋ ಮೃತಃ ।
ಬದ್ಧೋ ಯಮಭಟೈಃ ಪಾಶೈರ್ನೀತೋ ಯಮಪುರಂ ಬಲಾತ್ ॥ ೨೯ ॥

ತಾವಚ್ಛಿವಗಣಾಃ ಶುಭ್ರಾಸ್ತ್ರಿಶೂಲಾಂಚಿತಪಾಣಯಃ ।
ಭಸ್ಮಭಾಸಿತಸರ್ವಾಂಗಾ ರುದ್ರಾಕ್ಷಾಂಚಿತವಿಗ್ರಹಾಃ ॥ ೩೦ ॥

ಶಿವಲೋಕಾತ್ಸಮಾಗತ್ಯ ಕ್ರುದ್ಧಾ ಯಮಪುರೀಂ ಯಯುಃ
ತಾಡಯಿತ್ವಾ ತು ತದ್ದೂತಾಸ್ತರ್ಜಯಿತ್ವಾ ಪುನಃ ಪುನಃ ॥ ೩೧ ॥

ದೇವರಾಜಂ ಸಮಾನೋಚ್ಯ ವಿಮಾನೇ ಪರಮಾದ್ಭುತೇ ।
ಉಪವೇಶ್ಯ ಯದಾ ದೂತಾಃ ಕೈಲಾಸಂ ಗಂತುಮುತ್ಸುಕಾಃ ॥ ೩೨ ॥

---

೨೮. ವಿಪರೀತವಾದ ಜ್ವರದಿಂದ ಪೀಡಿತನಾಗಿದ್ದುದರಿಂದ ಆ ಬ್ರಾಹ್ಮಣನು ಅದೇ ದೇವಾಲಯದಲ್ಲಿಯೇ ಸ್ವಲ್ಪಹೊತ್ತು ಕುಳಿತು, ಬ್ರಾಹ್ಮಣರು ಹೇಳುತ್ತಿರುವ ಶಿವನ ಕಥೆಯನ್ನು ಅಕಸ್ಮಾತ್ತಾಗಿ ಕೇಳಿದನು.

೨೯. ಒಂದು ತಿಂಗಳಾದನಂತರ ಆ ದೇವರಾಜನು ಜ್ವರದಿಂದ ಪೀಡಿತನಾಗಿ ಸತ್ತುಹೋದನು. ಅನಂತರ ಯಮನಭಟರು ಅವನನ್ನು ಯಮಪಾಶಗಳಿಂದ ಬಿಗಿದು ಯಮನಪಟ್ಟಣಕ್ಕೆ ಒಯ್ದರು.

೩೦. ಅದೇ ಸಮಯದಲ್ಲಿ ತ್ರಿಶೂಲಗಳನ್ನು ಹಿಡಿದು ಭಸ್ಮಲೇಪನದಿಂದ ಬಿಳುಪಾದ ಶರೀರವುಳ್ಳವರೂ, ರುದ್ರಾಕ್ಷಮಾಲೆಗಳನ್ನು ಧರಿಸಿದವರೂ ಆದ ಶಿವದೂತರ ಸಿಟ್ಟುಗೊಂಡು ಶಿವಲೋಕದಿಂದ ಬಂದು ಯಮನಪಟ್ಟಣವನ್ನು ಪ್ರವೇಶಿಸಿದರು.

೩೧-೩೪. ಆ ಶಿವದೂತರು ಆ ಯಮದೂತರನ್ನು ಹೊಡೆದು ಮತ್ತೆ ಮತ್ತೆ ಹೆದರಿಸುತ್ತಾ ದೇವರಾಜನನ್ನು ಅವರಿಂದ ಬಿಡಿಸಿ ಆಶ್ಚರ್ಯಕರವಾದ ವಿಮಾನದ ಮೇಲೆ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಹೊರಡಲನುವಾದರು. ಅನಂತರ ಯಮಪಟ್ಟಣದಲ್ಲಿ ಈ ವಿಷಯವಾಗಿ ತುಂಬಾ ಗಲಾಟೆಯಾಯಿತು. ಈ ಕೋಲಾಹಲವನ್ನು ಯಮನು ಕೇಳಿ ತನ್ನ ಮನೆಯಿಂದ ಹೊರಗೆ ಬಂದು ಈ ವಿಚಾರವನ್ನು

ತದಾ ಯಮಪುರೀಮಧ್ಯೇ ಮಹಾಕೋಲಾಹಲೋಽಭವತ್ ।
ಧರ್ಮರಾಜಸ್ತು ತಂ ಶ್ರುತ್ವಾ ಸ್ವಾಲಯಾದ್ಬಹಿರಾಗಮತ್ ॥ ೩೩ ॥

ದೃಷ್ಟ್ವಾಥ ಚತುರೋ ದೂತಾನ್ ಸಾಕ್ಷಾದ್ರುದ್ರಾನಿವಾಪರಾನ್ ।
ಪೂಜಯಾಮಾಸ ಧರ್ಮಜ್ಞೋ ಧರ್ಮರಾಜೋ ಯಥಾವಿಧಿ ॥ ೩೪ ॥

ಜ್ಞಾನೇನ ಚಕ್ಷುಷಾ ಸರ್ವಂ ವೃತ್ತಾಂತಂ ಜ್ಞಾತವಾನ್ ಯಮಃ ।
ನ ಭಯಾತ್ ಪೃಷ್ಟವಾನ್ ಕಿಂಚಿಚ್ಛಂಭೋರ್ದೂತಾನ್ಮಹಾತ್ಮನಃ ॥ ೩೫ ॥

ಪೂಜಿತಾಃ ಪ್ರಾರ್ಥಿತಾಸ್ತೇ ವೈ ಕೈಲಾಸಮಗಮಂಸ್ತದಾ ।
ದದುಶ್ಶಿವಾಯ ಸಾಂಬಾಯ ತಂ ದಯಾವಾರಿರಾಶಯೇ ॥ ೩೬ ॥

ಧನ್ಯಾ ಶಿವಪುರಾಣಸ್ಯ ಕಥಾ ಪರಮಪಾವನೀ ।
ಯಸ್ಯಾಃ ಶ್ರವಣಮಾತ್ರೇಣ ಪಾಪಿಯಾನಪಿ ಮುಕ್ತಿಭಾಕ್ ॥ ೩೭ ॥

---

ತಿಳಿದು, ಧರ್ಮಜ್ಞನಾದುದರಿಂದ, ಪ್ರತ್ಯಕ್ಷನಾದ ರುದ್ರನಂತಿರುವ ನಾಲ್ಕು ಮಂದಿ ಶಿವ ದೂತರನ್ನು ನೋಡಿ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು.

೩೫. ಜ್ಞಾನದೃಷ್ಟಿಯಿಂದ ಅವರು ಬಂದಿರುವ ಮತ್ತು ಅಲ್ಲಿ ನಡೆದ ವಿಚಾರಗಳನ್ನೆಲ್ಲಾ ತಿಳಿದನು. ಆದರೆ ಮಹಾತ್ಮರಾದ ಆ ಶಿವದೂತರನ್ನು ಈಶ್ವರನ ಹೆದರಿಕೆಯಿಂದ ಏನನ್ನೂ ಕೇಳಲಿಲ್ಲ.

೩೬. ಅನಂತರ ಯಮನು ಅವರನ್ನು ಯಥೋಚಿತವಾಗಿ ಪೂಜಿಸಿ ಬೀಳ್ಕೊಡಲು, ಅವರೆಲ್ಲರೂ ಕೈಲಾಸಕ್ಕೆ ತೆರಳಿದರು. ಮತ್ತು ದಯಾನಿಧಿಯೂ ಪಾರ್ವತೀ ಸಮೇತನೂ ಆದ ಈಶ್ವರನಿಗೆ ಆ ದೇವರಾಜನನ್ನು ಅರ್ಪಿಸಿದರು. ಈ ರೀತಿ ಆ ದೇವರಾಜನು ಶಿವಸಾನ್ನಿಧ್ಯವನ್ನು ಹೊಂದಿ ಸುಖದಿಂದಿದ್ದನು.

೩೭. ಶಿವಪುರಾಣದಲ್ಲಿರುವ ಕಥೆಗಳನ್ನು ಕೇಳುವ ಮಾತ್ರದಿಂದಲೇ ಪಾಪಿಯಾದವನೂ ಸಹ ಮುಕ್ತಿಯನ್ನು ಹೊಂದುವನು. ಆದುದರಿಂದ ಈ ಕಥೆಯು ಧನ್ಯವಾದುದು, ಪರಮಪವಿತ್ರವಾದುದು.

ಸದಾಶಿವಮಹಾಸ್ಥಾನಂ ಪರಂ ಧಾಮ ಪರಂ ಪದಂ ।
ಯದಾಹುರ್ವೇದವಿದ್ವಾಂಸಃ ಸರ್ವಲೋಕೋಪರಿಸ್ಥಿತಂ ॥ ೩೮ ॥

ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಅನ್ಯೇಽಪಿ ಪ್ರಾಣಿನಃ ।
ಹಿಂಸಿತಾ ಧನಲೋಭೇನ ಬಹವೋ ಯೇನ ಪಾಪಿನಾ ॥ ೩೯ ॥

ಮಾತೃಪಿತೃವಧೂಹಂತಾ ವೇಶ್ಯಾಗಾಮೀ ಚ ಮದ್ಯಪಃ ।
ದೇವರಾಜೋ ದ್ವಿಜಸ್ತತ್ರ ಗತ್ವಾ ಮುಕ್ತೋಽಭವತ್ ಕ್ಷಣಾತ್ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯೇ
ದೇವರಾಜಮುಕ್ತಿವರ್ಣನಂ ನಾಮ ದ್ವಿತೀಯೋಽಧ್ಯಾಯಃ

---

೩೮-೪೦. ವೇದವನ್ನು ಬಲ್ಲ ಜ್ಞಾನಿಗಳು ಶ್ರೇಷ್ಠವಾದ ಸ್ಥಾನವೂ ಸದಾಶಿವನ ಪವಿತ್ರವಾದ ವಾಸಸ್ಥಾನವೂ, ಆದ ಕೈಲಾಸವನ್ನು ಎಲ್ಲ ಲೋಕಗಳಿಗಿಂತಲೂ, ಮೇಲ್ಗಡೆಯಲ್ಲಿರುವುದೆಂದು ಹೇಳುವರು. ಬ್ರಹ್ಮ, ಕ್ಷತ್ರಿಯ ವೈಶ್ಯ ಶೂದ್ರಾದಿಗಳನ್ನೂ ಇನ್ನೂ ಇತರ ಜನಗಳನ್ನೂ ಹಣದ ಆಸೆಯಿಂದ ಹಿಂಸಿಸುತ್ತಿದ್ದ, ತಾಯಿ, ತಂದೆ, ಹೆಂಡತಿಯರನ್ನು ಕೊಂದು ಯಾವಾಗಲೂ ವೇಶ್ಯಾಸಕ್ತನಾಗಿ ಮದ್ಯವನ್ನು ಕುಡಿಯುತ್ತಿದ್ದ ಪಾಪಿಯಾದ ದೇವರಾಜನು ಶಿವಕಥೆಯನ್ನು ಕೇಳಿ ಇಂತಹ ಪವಿತ್ರವಾದ ಸ್ಥಾನವನ್ನು ಪಡೆದನು. ಕೈಲಾಸಕ್ಕೆ ಹೋಗಿ ಮುಕ್ತಿಯನ್ನು ಪಡೆದನು. ಅನೇಕ ಪಾಪಕೃತ್ಯಗಳನ್ನು ಮಾಡಿದ ದೇವರಾಜನಂತಹ ದುರ್ಜನರು ಸಹ ಶಿವಪುರಾಣದಿಂದ ಸದ್ಗತಿಯನ್ನು ಹೊಂದುವರೆಂದ ಮೇಲೆ ಭಕ್ತಿಯಿಂದ ಶಿವಪುರಾಣವನ್ನು ಕೇಳುವವರಿಗೆ ಶಿವಲೋಕಪ್ರಾಪ್ತಿಯುಂಟಾಗುವುದೆಂದು ಹೇಳಬೇಕಾದುದೇನು?

ಇಲ್ಲಿಗೆ ಸ್ಕಾಂದಮಹಾಪುರಾಣದ ಶಿವಪುರಾಣ ಮಹಾತ್ಮೆಯಲ್ಲಿ ದೇವರಾಜನ ಮುಕ್ತಿ
ವರ್ಣನೆಯೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ॥ ಅಥ ಶ್ರೀ ಶಿ ವ ಪು ರಾ ಣ ಮಾ ಹಾ ತ್ಮ್ಯೇ ॥

## ತೃತೀಯೋಽಧ್ಯಾಯಃ

॥ ಶೌನಕ ಉವಾಚ ॥

ಸೂತ ಸೂತ ಮಹಾಭಾಗ ಸರ್ವಜ್ಞೋಽಸಿ ಮಹಾಮತೇ ।
ತ್ವತ್ಪ್ರಸಾದಾತ್ಕೃತಾರ್ಥೋಽಹಂ ಕೃತಾರ್ಥೋಽಹಂ ಪುನಃ ಪುನಃ ॥ ೧ ॥

ಇತಿಹಾಸಮಿಮಂ ಶ್ರುತ್ವಾ ಮನೋ ಮೇಽತೀವ ಮೋದತೇ ।
ಅನ್ಯಾಮಪಿ ಕಥಾಂ ಶಂಭೋರ್ವದ ಪ್ರೇಮವಿವರ್ಧಿನೀಂ ॥ ೨ ॥

ನಾಮೃತಂ ಪಿಬತಾಂ ಲೋಕೇ ಮುಕ್ತಿಃ ಕ್ವಾಪಿ ಸಭಾಜ್ಯತೇ ।
ಶಂಭೋಃ ಕಥಾಸುಧಾಪಾನಂ ಪ್ರತ್ಯಕ್ಷಂ ಮುಕ್ತಿದಾಯಕಂ ॥ ೩ ॥

---

### ಮೂರನೆಯ ಅಧ್ಯಾಯವು.

೧. ಶೌನಕಮುನಿಯು ಸೂತಪುರಾಣಿಕನನ್ನು ಪ್ರಶ್ನೆಮಾಡುವನು :—ಎಲೆ ಸೂತ ಮಹಾಮುನಿಯೇ, ನೀನು ಸರ್ವಜ್ಞನು. ಮಹಾಬುದ್ಧಿಶಾಲಿಯು. ನಿನ್ನ ಅನುಗ್ರಹದಿಂದ ನಾನು ಕೃತಕೃತ್ಯನಾಗಿರುವೆನು. ಮತ್ತೆ ಮತ್ತೆ ಕೃತಾರ್ಥನಾಗಿರುವೆನು.

೨. ನೀನು ಹೇಳಿದ ಚರಿತ್ರೆಯನ್ನು ಕೇಳಿ ನನ್ನ ಮನಸ್ಸಿಗೆ ತುಂಬಾ ಸಂತೋಷವಾಯಿತು. ಈಶ್ವರನಲ್ಲಿ ಪ್ರೀತಿಯನ್ನು ಹುಟ್ಟಿಸುವ ಮತ್ತೊಂದು ಶಿವನ ಕಥೆಯನ್ನು ಹೇಳು.

೩. ಲೋಕದಲ್ಲಿ ಅಮೃತವನ್ನು ಕುಡಿಯುದೇ ಯಾರಿಗೂ ಮುಕ್ತಿಯುಂಟಾಗುವುದಿಲ್ಲ. ಆದರೆ ಈಶ್ವರನ ಕಥೆ ಎಂಬ ಅಮೃತಪಾನವು ಪ್ರತ್ಯಕ್ಷವಾಗಿ ಮುಕ್ತಿಯನ್ನುಂಟುಮಾಡುವುದು.

ಧನ್ಯಾ ಧನ್ಯಾ ಕಥಾ ಶಂಭೋಸ್ತ್ವಂ ಧನ್ಯೋ ಧನ್ಯ ಏವ ಚ ।
ಯದಾಕರ್ಣನಮಾತ್ರೇಣ ಶಿವಲೋಕಂ ವ್ರಜೇನ್ನರಃ ॥ ೪ ॥

॥ ಸೂತ ಉವಾಚ ॥
ಶೃಣು ಶೌನಕ ವಕ್ಷ್ಯಾಮಿ ತ್ವದಗ್ರೇ ಗುಹ್ಯಮುತ್ತಮ ।
ಯತಸ್ತ್ವಂ ಶಿವಭಕ್ತಾನಾಮಗ್ರಣೀರ್ವೇದವಿತ್ತಮಃ ॥ ೫ ॥

ಸಮುದ್ರನಿಕಟೇ ದೇಶೇ ಗ್ರಾಮೋ ಬಾಷ್ಕಲಸಂಜ್ಞಕಃ ।
ವಸಂತಿ ಯತ್ರ ಪಾಪಿಷ್ಠಾ ವೇದಧರ್ಮೋಜ್ಝಿತಾ ಜನಾಃ ॥ ೬ ॥

ದುಷ್ಟಾ ದುರ್ವಿಷಯಾತ್ಮಾನೋ ನಿರ್ದೈವಾ ಜಿಹ್ಮವೃತ್ತಯಃ ।
ಕೃಷೀವಲಾಃ ಶಸ್ತ್ರಧರಾಃ ಪರಸ್ತ್ರೀಭೋಗಿನಃ ಖಲಾಃ ॥ ೭ ॥

ಜ್ಞಾನವೈರಾಗ್ಯಸದ್ಧರ್ಮಂ ನ ಜಾನಂತಿ ಪರಂ ಹಿ ತೇ ।
ಕುಕಥಾಶ್ರವಣಾಧ್ಯೇಷು ನಿರತಾಃ ಪಶುಬುದ್ಧಯಃ ॥ ೮॥

---

೪. ಈಶ್ವರನ ಕಥೆಯು ಧನ್ಯವಾದುದು. ಅಂತಹ ಕಥೆಯನ್ನು ಕೇಳುವ ಮಾತ್ರದಿಂದಲೇ ಮನುಷ್ಯನಿಗೆ ಶಿವಲೋಕ ಪ್ರಾಪ್ತಿಯಾಗುವುದು. ಅಂತಹ ಕಥೆಯನ್ನು ಹೇಳುವ ನೀನು ಅತ್ಯಂತ ಧನ್ಯನಾಗಿರುವೆ.

೫. ಸೂತಪುರಾಣಿಕನು ಹೇಳುವನು:—ಎಲೈ ಶೌನಕನೇ, ನೀನು ಶಿವಭಕ್ತರಿಗೆಲ್ಲಾ ಶ್ರೇಷ್ಠನಾಗಿರುವುದರಿಂದಲೂ, ವೇದವನ್ನು ತಿಳಿದು ಜ್ಞಾನಿಯಾಗಿರುವುದರಿಂದಲೂ, ಅತ್ಯಂತ ಗೂಢವಾದ ವಿಷಯುವನ್ನು ನಿನಗೆ ಹೇಳುವೆನು ಕೇಳು.

೬-೮. ಸಮುದ್ರತೀರ ದೇಶಗಳಲ್ಲಿ ಬಾಷ್ಕಲವೆಂಬ ಹೆಸರುಳ್ಳ ಒಂದು ಗ್ರಾಮವಿದ್ದಿತು. ಅಲ್ಲಿ ಪಾಪಿಗಳೂ, ವೈದಿಕ ಧರ್ಮವನ್ನು ಬಿಟ್ಟವರೂ, ಕುಟಿಲಗಾಮಿಗಳೂ, ದುಷ್ಟರೂ. ಕೆಟ್ಟ ವಿಚಾರವನ್ನು ಯೋಚಿಸುವವರೂ, ದೇವತೆಗಳನ್ನು ಒಪ್ಪದೆ ನಾಸ್ತಿಕರಾದವರೂ, ವ್ಯವಸಾಯವನ್ನು ಮಾಡುವವರೂ, ಶಸ್ತ್ರಗಳನ್ನು ಧರಿಸಿರುವವರೂ, ಪರಸ್ತ್ರೀಯರಲ್ಲಿ ಆಸಕ್ತಿಯುಳ್ಳವರೂ ಆದ ಬ್ರಾಹ್ಮಣರು ವಾಸಮಾಡುತ್ತಿದ್ದರು. ಅವರು ಜ್ಞಾನ, ವೈರಾಗ್ಯ, ಒಳ್ಳೆಯ ಧರ್ಮಗಳನ್ನು ಸ್ವಲ್ಪವೂ ತಿಳಿದಿರಲಿಲ್ಲ. ಆದರೆ ಕೆಟ್ಟ ವೃತ್ತಾಂತವನ್ನು ಕೇಳುವುದರಲ್ಲೇ ಆಸಕ್ತರಾಗಿ, ಪಶುಗಳಂತೆ ವ್ಯವಹರಿಸುತ್ತಾ ಇರುತ್ತಿದ್ದರು.

ಅನ್ಯೇ ವರ್ಣಾಶ್ಚ ಕುಧಿಯಸ್ಸ್ವಧರ್ಮವಿಮುಖಾಃ ಖಲಾಃ ।
ಕುಕರ್ಮನಿರತಾ ನಿತ್ಯಂ ಸದಾ ವಿಷಯಿಣಶ್ಚ ತೇ ॥ ೯ ॥

ಸ್ತ್ರಿಯಃ ಸರ್ವಾಶ್ಚ ಕುಟಿಲಾಸ್ಸ್ವೈರಿಣ್ಯಃ ಪಾಪಲಾಲಸಾಃ ।
ಕುಧಿಯೋ ವ್ಯಭಿಚಾರಿಣ್ಯಸ್ಸದ್ವೃತ್ತಾಚಾರವರ್ಜಿತಾಃ ॥ ೧೦ ॥

ಏವಂ ಕುಜನಸಂವಾಸೇ ಗ್ರಾಮೇ ಬಾಷ್ಕಲಸಂಜ್ಞಿತೇ ।
ತತ್ರೈಕೋ ಬಿಂದುಗೋ ನಾಮ ವಿಪ್ರ ಆಸೀನ್ಮಹಾಧಮಃ ॥ ೧೧ ॥

ಸ ದುರಾತ್ಮಾ ಮಹಾಪಾಪೀ ಸುದಾರೋಽಪಿ ಕುಮಾರ್ಗಕಃ ।
ವೇಶ್ಯಾಪತಿರ್ಬಭೂವಾಥ ಕಾಮಾಕುಲಿತಮಾನಸಃ ॥ ೧೨ ॥

ಸ್ವಪತ್ನೀಂ ಚಂಚುಲಾಂ ನಾಮ ಹಿತ್ವಾ ನಿತ್ಯಂ ಸುಧರ್ಮಿಣೀಂ ।
ರೇಮೇ ಸ ವೇಶ್ಯಯಾ ದುಷ್ಟಃ ಸ್ಮರಬಾಣಪ್ರಪೀಡಿತಃ ॥ ೧೩ ॥

---

೯. ಇನ್ನು ಉಳಿದ ಕ್ಷತ್ರಿಯ, ವೈಶ್ಯ, ಶೂದ್ರರೇ ಮೊದಲಾದವರೂ ಕೆಟ್ಟ ಬುದ್ಧಿಯುಳ್ಳವರಾಗಿ ತಮ್ಮ ತಮ್ಮ ಜಾತಿಗೆ ಯೋಗ್ಯವಾದ ಧರ್ಮವನ್ನು ಬಿಟ್ಟು, ದುಷ್ಟರಾಗಿ ಕೆಟ್ಟ ಕೆಲಸದಲ್ಲೇ ಪ್ರವೃತ್ತರಾಗಿ ಯಾವಾಗಲೂ ವಿಷಯೋಪಭೋಗಗಳಲ್ಲಿ ಆಸಕ್ತರಾಗಿ ಇದ್ದರು.

೧೦. ಅಲ್ಲಿರುವ ಸ್ತ್ರೀಯರೂ ಸಹ ಸ್ವೇಚ್ಛಾಚಾರಿಣಿಯರಾಗಿಯೂ ಪಾಪ ಕೆಲಸದಲ್ಲಿ ಆಸಕ್ತರಾಗಿಯೂ, ಕೆಟ್ಟ ಬುದ್ಧಿಯುಳ್ಳವರಾಗಿಯೂ, ವ್ಯಭಿಚಾರಿಣಿಯರಾಗಿಯೂ, ಒಳ್ಳೆಯ ಕೆಲಸವನ್ನು ಬಿಟ್ಟು ಕೆಟ್ಟ ಕೆಲಸದಲ್ಲಿ ತೊಡಗಿರುವವರಾಗಿಯೂ ಇದ್ದರು.

೧೧. ಈ ರೀತಿ ಕೆಟ್ಟ ಜನಗಳಿಂದ ತುಂಬಿರುವ ಆ ಬಾಷ್ಕಲವೆಂಬ ಊರಿನಲ್ಲಿ ಬಿಂದುಗನೆಂಬ ಒಬ್ಬ ನೀಚನಾದ ಬ್ರಾಹ್ಮಣನಿದ್ದನು.

೧೨. ಆ ದುರಾತ್ಮನೂ, ಮಹಾಪಾಪಿಯೂ ಆದ ಬಿಂದುಗನಿಗೆ ಸುಂದರಿಯಾದ ಹೆಂಡತಿ ಇದ್ದರೂಕೂಡ ಕೆಟ್ಟ ಮಾರ್ಗಕ್ಕೆ ಬಿದ್ದು, ಕಾಮಾತುರನಾಗಿ ವೇಶ್ಯೆಯಲ್ಲಿಯೇ ಆಸಕ್ತನಾಗಿದ್ದನು.

೧೩. ಆ ದುಷ್ಟನು ಸಹಧರ್ಮಿಣಿಯಾದ ಚಂಚುಲಾ ಎಂಬ ತನ್ನ ಪತ್ನಿಯನ್ನು ಬಿಟ್ಟು ಕಾಮಾತುರನಾಗಿ ನಿತ್ಯವೂ ಆ ವೇಶ್ಯೆಯೊಡನೆ ಕ್ರೀಡಿಸುತ್ತಿದ್ದನು.

ಏವಂ ಕಾಲೋ ವ್ಯತೀಯಾಯ ಮಹಾಂಸ್ತಸ್ಯ ಕುಕರ್ಮಣಃ ।
ಸಾ ಸ್ವಧರ್ಮಭಯಾತ್ ಕ್ಲೇಶಾತ್ಸ್ಮರಾರ್ತಾಪಿ ಚ ಚಂಚುಲಾ ॥ ೧೪ ॥

ಅಥ ತಸ್ಯಾಂಗನಾ ಸಾಪಿ ಪ್ರರೂಢನವಯೌವನಾ ।
ಅವಿಷ್ಯಹ್ಯಸ್ಮರಾವೇಶಾ ಸ್ವಧರ್ಮಾದ್ವಿರರಾಮ ಹ ॥ ೧೫ ॥

ಜಾರೇಣ ಸಂಗತಾಂ ರಾತ್ರೌ ರೇಮೇ ಪಾಪೇನ ಗುಪ್ತತಃ ।
ಪತಿದೃಷ್ಟಿಂ ವಂಚಯಿತ್ವಾ ಭ್ರಷ್ಟಸತ್ತ್ವಾ ಕುಮಾರ್ಗಗಾ ॥ ೧೬ ॥

ಕದಾಚಿತ್ತಾಂ ದುರಾಚಾರಂ ಸ್ವಪತ್ನೀಂ ಚಂಚುಲಾಂ ಮುನೇ ।
ಜಾರೇಣ ಸಂಗತಾಂ ರಾತ್ರೌ ದದರ್ಶ ಸ್ಮರವಿಹ್ವಲಾಂ ॥ ೧೭ ॥

ದೃಷ್ಟ್ವಾ ತಾಂ ದುಷ್ಟಿನೀಂ ಪತ್ನೀಂ ಕುಕರ್ಮಾಸಕ್ತಮಾನಸಾಂ ।
ಜಾರೇಣ ಸಂಗತಾಂ ರಾತ್ರೌ ಕ್ರೋಧಾದ್ದುದ್ರಾವ ವೇಗತಃ ॥ ೧೮ ॥

ತಮಾಗತಂ ಗೃಹೇ ದುಷ್ಟಮಾಜ್ಞಾಯ ಬಿಂದುಗಂ ಖಲಃ ।
ಪಲಾಯಿತೋ ದ್ರುತಂ ಜಾರೋ ವೇಗತಶ್ಛದ್ಮವಾನ್ ಸ ವೈ ॥ ೧೯ ॥

---

೧೪-೧೬. ಈರೀತಿಯಾಗಿ ಆ ದುಷ್ಟನು ಕಾಲವನ್ನು ಕಳೆಯುತ್ತಿರಲು, ಅವನ ಹೆಂಡತಿಯಾದ ಚಂಚುಲೆಯು ತನ್ನ ಸತೀ ಧರ್ಮವನ್ನು ಮೀರಲು ಭಯಗೊಂಡಿದ್ದರೂ, ಮನ್ಮಥಬಾಣಪೀಡಿತಳಾಗಿ, ಯೌವನವು ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿರಲು ಕಾಮವನ್ನು ತಡೆಯಲಾರದೆ ತನ್ನ ಧರ್ಮವನ್ನು ಬಿಟ್ಟು, ಕೆಟ್ಟ ಮಾರ್ಗಕ್ಕೆ ಬಿದ್ದವಳಾಗಿ ರಾತ್ರಿ ವೇಳೆಯಲ್ಲಿ ಜಾರನೊಡನೆ ಸೇರಿ ಗುಪ್ತವಾಗಿ ಪತಿಗೆ ಕಾಣದಂತೆ ರಮಿಸುತ್ತಿದ್ದಳು.

೧೭. ಹೀಗಿರಲು ಒಂದಾನೊಂದು ದಿನ ಆ ಬಿಂದುಗನು ತನ್ನ ಹೆಂಡತಿಯು ಕಾಮಾತುರಳಾಗಿ ರಾತ್ರಿಯಲ್ಲಿ ಜಾರನೊಡನೆ ರಮಿಸುತ್ತಿರುವುದನ್ನು ನೋಡಿದನು.

೧೮. ಕೆಟ್ಟಮಾರ್ಗದಲ್ಲಿ ಪ್ರವರ್ತಿಸುತ್ತಾ ಜಾರನೊಡನೆ ಸೇರಿ ಕ್ರೀಡಿಸುತ್ತಿರುವ ದುಷ್ಟಳಾದ ತನ್ನ ಪತ್ನಿಯನ್ನು ನೋಡಿ ಕೋಪದಿಂದ ಹೊಡೆಯಲು ಜಾಗ್ರತೆಯಾಗಿ ಅವಳ ಬಳಿಗೆ ಬಂದನು.

೧೯. ಬಿಂದುಗನು ಒಳಗೆ ಬಂದುದನ್ನು ತಿಳಿದು ಆದುಷ್ಟನಾದ ಜಾರನು ಅವನಿಗೆ ಕಾಣದಂತೆ ಉಪಾಯದಿಂದ ತಪ್ಪಿಸಿಕೊಂಡು ಓಡಿಹೋದನು.

ಅಥ ಸ ಬಿಂದುಗಃ ಪತ್ನೀಂ ಗೃಹೀತ್ವಾ ಸುದುರಾಶಯಃ ।
ಮುಷ್ಟಿಬಂಧೇನ ಸಂತರ್ಜ್ಯ ಪುನಃ ಪುನರತಾಡಯತ್ ॥ ೨೦ ॥

ಸಾ ನಾರೀ ತಾಡಿತಾ ಭರ್ತ್ರಾ ಚಂಚುಲಾ ಸ್ವೈರಿಣೀ ಖಲಾ ।
ಕುಪಿತಾ ನಿರ್ಭಯಾ ಪ್ರಾಹ ಸ್ವಪತಿಂ ಬಿಂದುಗಂ ಖಲಂ ॥ ೨೧ ॥

॥ ಚಂಚುಲೋವಾಚ ॥

ಭವಾನ್ಪ್ರತಿದಿನಂ ಕಾಮಂ ರಮತೇ ವೇಶ್ಯಯಾ ಕುಧೀಃ ।
ಮಾಂ ವಿಹಾಯ ಸ್ವಪತ್ನೀಂ ಚ ಯುವತೀಂ ಪತಿಸೇವಿನೀಂ ॥ ೨೨ ॥

ರೂಪವತ್ಯಾ ಯುವತ್ಯಾಶ್ಚ ಕಾಮುಕುಲಿತಚೇತಸಃ ।
ವಿನಾ ಪತಿವಿಹಾರಂ ಸ್ಯಾತ್ಕಾ ಗತಿರ್ಮೇ ಭವಾನ್ ವದೇತ್ ॥ ೨೩ ॥

ಅಹಂ ಮಹಾರೂಪವತೀ ನವಯೌವನವಿಹ್ವಲಾ ।
ಕಥಂ ಸಹೇ ಕಾಮದುಃಖಂ ತವ ಸಂಗಂ ವಿನಾರ್ತಧೀಃ ॥ ೨೪ ॥

---

೨೦. ಅನಂತರ ಈ ಬಿಂದುಗನು ಇವಳ ಕೆಟ್ಟ ನಡತೆಯನ್ನು ತಿಳಿದು ಪತ್ನಿಯನ್ನು ಹಿಡಿದುಕೊಂಡು ಬಯ್ಯುತ್ತಾ ಬಾರಿಬಾರಿಗೂ ಮುಷ್ಟಿಯಿಂದ ಹೊಡೆದನು.

೨೧. ಸ್ವೇಚ್ಛಾಚಾರಿಣಿಯಾದ ಆ ಚಂಚುಲೆಯು ತನ್ನ ಗಂಡನನ್ನು ಹೊಡೆದುದರಿಂದ ಸಿಟ್ಟುಕೊಂಡು ನೀಚನಾದ ತನ್ನ ಪತಿಬಿಂದುಗನನ್ನು ಕುರಿತು ನಿರ್ಭಯಳಾಗಿ ಈರೀತಿ ಹೇಳಿದಳು.

೨೨-೨೪. ಚಂಚುಲೆಯು ಹೇಳಿದಳು:—ನೀನು ಯೌವನದಿಂದ ಕೂಡಿ ರೂಪವತಿಯಾದ, ಪತಿಸೇವಾಪರಾಯಣಳಾದ ಪತ್ನಿಯಾದ ನನ್ನನ್ನು ಬಿಟ್ಟು ಪ್ರತಿ ದಿನವೂ ಕೆಟ್ಟ ಬುದ್ಧಿಯಿಂದ ಸೂಳೆಯೊಡನೆ ರಮಿಸುತ್ತಿರುವೆ. ನಾನಾದರೋ ರೂಪವತಿಯಾಗಿಯೂ, ಯುವತಿಯಾಗಿಯೂ ಇರುವೆನು. ಯೌವನದಿಂದ ಕಾಮವು ಉದ್ಬೋಧಕವಾಗಿ ಪರಿತಪಿಸುತ್ತಿರುವೆನು. ನನಗೆ ಪತಿಯಾದ ನಿನ್ನೊಡನೆ ಸೇರಿ ರಮಿಸುವ ಅದೃಷ್ಟವಿಲ್ಲದಿದ್ದರೆ ನಾನೇನು ಮಾಡಬೇಕು ಎಂಬುದನ್ನು ನೀನೇ ತಿಳಿಸು. ನಾನು ಬಲು ಸುಂದರಿಯಾಗಿಯೂ, ಈಗ ತಾನೆ ಯೌವನದಲ್ಲಿ ಕಾಲಿಟ್ಟವಳಾಗಿಯೂ ಇರುವುದರಿಂದ ಕಾಮಾತುರಳಾದ ನಾನು ಪತಿಯಾದ ನಿನ್ನ ಸಹವಾಸವಿಲ್ಲವೆ ಆ ದುಃಖವನ್ನು ಹೇಗೆ ತಾನೇ ಸಹಿಸಿಕೊಂಡಿರಲಿ ?

॥ ಸೂತ ಉವಾಚ ॥
ಇತ್ಯುಕ್ತಸ್ಸ ತಯಾ ಮೂರ್ಖೋ ಮೂಢಧೀರ್ಬ್ರಾಹ್ಮಣಾಧಮಃ ।
ಪ್ರೋವಾಚ ಬಿಂದುಗಃ ಪಾಪೀ ಸ್ವಧರ್ಮವಿಮುಖಃ ಖಲಃ ॥ ೨೫ ॥

॥ ಬಿಂದುಗ ಉವಾಚ ॥
ಸತ್ಯಮೇತತ್ತ್ವಯೋಕ್ತಂ ಹಿ ಕಾಮವ್ಯಾಕುಲಚೇತಸಾ ।
ಹಿತಂ ವಕ್ಷ್ಯಾಮಿ ತಸ್ಮಾತ್ತೇ ಶೃಣು ಕಾಂತೇ ಭಯಂ ತ್ಯಜ ॥ ೨೬ ॥

ಜಾರೈರ್ವಿಹರ ನಿತ್ಯಂ ತ್ವಂ ಚೇತಸಾ ನಿರ್ಭಯೇನ ವೈ ।
ಧನಮಾಕರ್ಷ ತೇಭ್ಯೋ ಹಿ ದತ್ವಾ ತೇಭ್ಯಃ ಪರಾಂ ರತಿಂ ॥ ೨೭ ॥

ತದ್ಧನಂ ದೇಹಿ ಸರ್ವಂ ಮೇ ವೇಶ್ಯಾಸಂಸಕ್ತಚೇತಸಃ ।
ಮಹತ್ಸ್ವಾರ್ಥ ಭವೇನ್ನೂನಂ ತವಾಪಿ ಚ ಮಮಾಪಿ ಚ ॥ ೨೮ ॥

॥ ಸೂತ ಉವಾಚ ॥
ಇತಿ ಭರ್ತೃವಚಃ ಶ್ರುತ್ವಾ ಚಂಚುಲಾ ತದ್ವಧೂಶ್ಚ ಸಾ ।
ತಥೇತಿ ಭರ್ತೃವಚನಂ ಪ್ರತಿಜಗ್ರಾಹ ಹೃಷ್ಟಧೀಃ ॥ ೨೯ ॥

---

೨೫-೨೬. ಸೂತಮುನಿಯು ಹೇಳುವನು :—ಈ ರೀತಿಯಾಗಿ ಆ ನೀಚ ಬ್ರಾಹ್ಮಣನನ್ನು ಕುರಿತು ಚಂಚುಲೆಯು ಹೇಳಲು, ಗೃಹಸ್ಥಾಶ್ರಮ ಧರ್ಮವನ್ನು ಬಿಟ್ಟಿರುವ ಪಾಪಿಯಾದ ಆ ಬಿಂದುಗನು ಚಂಚುಲೆಗೆ ಹೇಳುವನು-ಎಲೌ ಕಾಂತೆಯೇ, ಕಾಮಾತುರಳಾದುದರಿಂದ ನೀನು ಮಾಡಿದ ಕೆಲಸವು ಸರಿಯಾದುದೇ. ಆದರೆ ಈಗ ನಾನು ನಿನಗೆ ಹಿತವಾದ ಒಂದು ಉಪಾಯವನ್ನು ಹೇಳುವೆನು. ಭಯವನ್ನು ಬಿಟ್ಟು ಅದನ್ನು ಕೇಳು.

೨೭-೨೮. ನೀನು ಹೆದರಿಕೆಯನ್ನು ಬಿಟ್ಟು ಜಾರರೊಡನೆ ನಿನ್ನ ಮನ ಬಂದಂತೆ ರಮಿಸು. ಅವರಿಗೆ ರತಿಸುಖವನ್ನುಂಟುಮಾಡಿ ಅವರಿಂದ ಹಣವನ್ನು ಸಂಪಾದಿಸು. ಆ ಧನವನ್ನೆಲ್ಲಾ ವೇಶ್ಯಾಸಕ್ತನಾದ ನನಗೆ ಕೊಡು. ಆಗ ನನಗೂ ನಿನಗೂ ಈಗಿರುವುದಕ್ಕಿಂತ ಇನ್ನೂ ಹೆಚ್ಚಾದ ಸಂಬಂಧವಾಗುವುದು ಎಂದನು.

೨೯. ಸೂತಮುನಿಯು ಹೇಳುವನು :—ಅನಂತರ ಬಿಂದುಗನ ಹೆಂಡತಿಯಾದ ಚಂಚುಲೆಯು ಗಂಡನು ಈ ರೀತಿ ಹೇಳಿದುದನ್ನು ಕೇಳಿ ಸಂತೋಷಪಟ್ಟು ಅದೇರೀತಿ ಮಾಡುವೆನೆಂದು ಒಪ್ಪಿಕೊಂಡಳು.

ಕೃತ್ಸ್ವೈವಂ ಸಮಯಂ ತೌ ವೈ ದಂಪತೀ ದುಷ್ಟಮಾನಸೌ ।
ಕುಕರ್ಮನಿರತೌ ಜಾತೌ ನಿರ್ಭಯೇನ ಕುಚೇತಸೌ ॥ ೩೦ ॥

ಏವಂ ತಯೋಸ್ತು ದಂಪತ್ಯೋರ್ದುರಾಚಾರಪ್ರವೃತ್ತಯೋಃ ।
ಮಹಾನ್ಕಾಲೋ ವ್ಯತೀಯಾಯ ನಿಷ್ಫಲೋ ಮೂಢಚೇತಸೋಃ ॥ ೩೧ ॥

ಅಥ ವಿಪ್ರಸ್ಸ ಕುಮತಿರ್ಬಿಂದುಗೋ ವೃಷಲೀಪತಿಃ ।
ಕಾಲೇನ ನಿಧನಂ ಪ್ರಾಪ್ತೋ ಜಗಾಮ ನರಕಂ ಖಲಃ ॥ ೩೨ ॥

ಭುಕ್ತ್ವಾ ನರಕದುಃಖಾನಿ ಬಹ್ವಹಾನಿ ಸ ಮೂಢಧೀಃ ।
ವಿಂಧ್ಯೇಽಭವತ್ಪಿಶಾಚೋ ಹಿ ಗಿರೌ ಪಾಪೀ ಭಯಂಕರಃ ॥ ೩೩ ॥

ಮೃತೇ ಭರ್ತರಿ ತಸ್ಮಿನ್ವೈ ದುರಾಚಾರೇಽಥ ಬಿಂದುಗೇ ।
ಉವಾಸ ಸ್ವಗೃಹೇ ಪುತ್ರೈಶ್ಚಿರಕಾಲಂ ವಿಮೂಢಧೀಃ ॥ ೩೪ ॥

ಏವಂ ವಿಹರತೀ ಜಾರೈಸ್ಸಾ ನಾರೀ ಚಂಚುಲಾಹ್ವಯಾ ।
ಆಸೀತ್ಕಾಮರತಾ ಪ್ರೀತಾ ಕಿಂಚಿದುತ್ಕ್ರಾಂತಯೌವನಾ ॥ ೩೫ ॥

---

೩೦. ಆ ಪತಿಪತ್ನಿಯರಿಬ್ಬರೂ ತಮ್ಮ ತಮ್ಮ ಸಮಯವನ್ನು ಕೆಟ್ಟ ಕೆಲಸದಲ್ಲೇ ಕಳೆಯುತ್ತಾ ನಿರ್ಭಯರಾಗಿ ಇರುತ್ತಿದ್ದರು.

೩೧. ಮೂಢರಾದ, ದುರಾಚರದಲ್ಲಿ ಪ್ರವೃತ್ತಿಸುತ್ತಿರುವ ಅವರಿಬ್ಬರೂ ನಿಷ್ಫಲವಾಗಿ ಬಹಳ ಕಾಲವನ್ನು ಈ ರೀತಿಯಾಗಿಯೇ ಕಳೆದರು.

೩೨. ಹೀಗಿರುತ್ತಿರಲು ಒಂದು ದಿನ ನೀಚನಾದ ಆ ಬಿಂದುಗನು ಮರಣವನ್ನು ಹೊಂದಿದನು. ಮತ್ತು ಪಾಪವನ್ನು ಮಾಡಿದುದರಿಂದ ನರಕಕ್ಕೆ ಹೋದನು.

೩೩. ನರಕದಲ್ಲಿ ತನ್ನ ಪಾಪಗಳಿಗೆ ಯೋಗ್ಯವಾದ ಹಿಂಸೆಗಳನ್ನನುಭವಿಸಿದ ಮೇಲೆ ಆ ಮೂಢನಾದ ಬಿಂದುಗನಿಗೆ ವಿಂಧ್ಯಾರಣ್ಯದಲ್ಲಿ ಭಯಂಕರವಾದ ಪಿಶಾಚ ಜನ್ಮವು ಪ್ರಾಪ್ತವಾಯಿತು.

೩೪-೩೫. ನೀಚನೂ, ದುರಾಚಾರಿಯೂ ಆದ ತನ್ನ ಗಂಡನು ಸಾಯಲು ಚಂಚುಲೆಯು ಬಹಳ ಕಾಲದವರೆಗೂ ಮಕ್ಕಳೊಡನೆ ತನ್ನ ಮನೆಯಲ್ಲಿ ವಾಸಮಾಡುತ್ತಿದ್ದಳು. ಮತ್ತು ಕಾಮಾಸಕ್ತಳಾಗಿ ಜಾರರೊಡನೆ ರಮಿಸುತ್ತಾ ಇರಲು ಕಾಲಕ್ರಮೇಣ ಅವಳ ಯೌವನವು ಇಳಿಯುತ್ತಾ ಬಂದಿತು.

ಏಕದಾ ದೈವಯೋಗೇನ ಸಂಪ್ರಾಪ್ತೇ ಪುಣ್ಯಪರ್ವಣಿ ।
ಸಾ ನಾರೀ ಬಂಧುಭಿಸ್ಸಾರ್ಧಂ ಗೋಕರ್ಣಂ ಕ್ಷೇತ್ರಮಾಯಯೌ ॥ ೩೬ ॥

ಪ್ರಸಂಗಾತ್ಸಾ ತದಾ ಗತ್ವಾ ಕಸ್ಮಿಂಶ್ಚಿತ್ತೀರ್ಥಪಾಥಸಿ ।
ಸಸ್ನೌ ಸಾಮಾನ್ಯತೋ ಯತ್ರ ತತ್ರ ಬಭ್ರಾಮ ಬಂಧುಭಿಃ ॥ ೩೭ ॥

ದೇವಾಲಯೇಽಥ ಕಸ್ಮಿಂಶ್ಚಿದ್ದೈವಜ್ಞಮುಖತಃ ಶುಭಾಂ ।
ಶುಶ್ರಾವ ಸತ್ಕಥಾಂ ಶಂಭೋಃ ಪುಣ್ಯಾಂ ಪೌರಾಣಿಕೀಂ ಚ ಸಾ ॥ ೩೮ ॥

ಯೋಷಿತಾಂ ಜಾರಸಕ್ತಾನಾಂ ನರಕೇ ಯಮಕಿಂಕರಾಃ ।
ಸಂತಪ್ತಲೋಹಪರಿಘಂ ಕ್ಷಿಪಂತಿ ಸ್ಮರಮಂದಿರೇ ॥ ೩೯ ॥

ಇತಿ ಪೌರಾಣಿಕೇನೋಕ್ತಾಂ ಶ್ರುತ್ವಾ ವೈರಾಗ್ಯವರ್ಧಿನೀಂ ।
ಕಥಾಮಾಸೀದ್ಭಯೋದ್ವಿಗ್ನಾ ಚಕಂಪೇ ತತ್ರ ಸಾ ಚ ವೈ ॥ ೪೦ ॥

ಕಥಾಸಮಾಪ್ತೌ ಸಾ ನಾರೀ ನಿರ್ಗತೇಷು ಜನೇಷು ಚ ।
ಭೀತಾ ರಹಸಿ ತಂ ಪ್ರಾಹ ಶೈವಂ ಸಂವಾಚಕಂ ದ್ವಿಜಂ ॥ ೪೧ ॥

---

೩೬. ಒಂದಾನೊಂದು ದಿವಸ ಆ ಚಂಚುಲೆಯು ಸಂಕ್ರಮಣ ದಿವಸವಲ್ಲಿ ತನ್ನ ಬಂಧುಗಳೊಡನೆ ಅದೃಷ್ಟವಶದಿಂದ ಗೋಕರ್ಣವೆಂಬ ತೀರ್ಥಕ್ಷೇತ್ರಕ್ಕೆ ಹೋದಳು.

೩೭-೩೮. ಅಲ್ಲಿರುವ ಒಂದು ತೀರ್ಥಜಲದಲ್ಲಿ ಸ್ನಾನಮಾಡಿ ತನ್ನ ಬಂಧುಗಳೊನೆ ಅಲ್ಲಲ್ಲಿ ಸಂಚರಿಸುತ್ತಾ, ಕೊನೆಗೆ ಅಲ್ಲಿದ್ದ ಒಂದು ದೇವಾಲಯಕ್ಕೆ ಬಂದು ಅಲ್ಲಿ ಒಬ್ಬ ಜೋಯಿಸನು ಹೇಳುತ್ತಿರುವ ಪುಣ್ಯಕರವಾದ ಈಶ್ವರನ ಪುರಾಣದ ಕಥೆಯನ್ನು ಕೇಳಿದಳು.

೩೯-೪೦. “ ಜಾರರಲ್ಲಿ ಆಸಕ್ತರಾದ ಹೆಂಗಸರಿಗೆ ಯಮಕಿಂಕರರು ಚೆನ್ನಾಗಿ ಕಾಯಿಸಿರುವ ಕಬ್ಬಿಣದ ಗಡಾರಿಯನ್ನು ಕಾಮೋತ್ಪತ್ತಿ ಸ್ಥಾನವಲ್ಲಿ ಇಡುವರು ” ಎಂದು ಪೌರಣಿಕನು ಹೇಳುತ್ತಿರಲು ವೈರಾಗ್ಯವನ್ನುಂಟುಮಾಡುವ ಆ ಕಥೆಯನ್ನು ಕೇಳಿ ಬಹಳ ಭಯಗೊಂಡು ನಡುಗಿದಳು.

೪೧. ಕಥೆಯೆಲ್ಲ ಮುಗಿದನಂತರ ಜನರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದ ಮೇಲೆ ಚಂಚುಲೆಯು ಹೆದರಿದವಳಾಗಿ ಶಿವಪುರಾಣವನ್ನು ಹೇಳುತ್ತಿದ್ದ ಬ್ರಾಹ್ಮಣನನ್ನು ಕುರಿತು ಗುಟ್ಟಾಗಿ ಹೇಳಿದಳು.

॥ ಚಂಚುಲೋವಾಚ ॥

ಬ್ರಹ್ಮನ್ಸ್ವಂ ಶೃಣ್ವಸಜ್ವೃತ್ತಮಜಾನಂತ್ಯಾ ಸ್ವಧರ್ಮಕಂ ।
ಶ್ರುತ್ವಾ ಮಾಮುದ್ಧರ ಸ್ವಾಮಿನ್ ಕೃಪಾಂ ಕೃತ್ವಾತುಲಾಮಪಿ ॥ ೪೨ ॥

ಚರಿತಂ ಸುಲ್ಬಣಂ ಪಾಪಂ ಮಯಾ ಮೂಢಧಿಯಾ ಪ್ರಭೋ ।
ನೀತಂ ಪೌಂಶ್ಚಲ್ಯತಸ್ಸರ್ವಂ ಯೌವನಂ ಮದನಾಂಧಯಾ ॥ ೪೩ ॥

ಶ್ರುತ್ವೇದಂ ವಚನಂ ತೇsದ್ಯ ವೈರಾಗ್ಯರಸಜೃಂಭಿತಂ ।
ಜಾತಾ ಮಹಾಭಯಾ ಸಾಹಂ ಸಕಂಪಾತ್ತವಿಯೋಗಿಕಾ ॥ ೪೪ ॥

ಧಿಙ್ಮಾಂ ಮೂಢಧಿಯಂ ಪಾಪಾಂ ಕಾಮಮೋಹಿತಚೇತಸಂ ।
ನಿಂದ್ಯಾಂ ದುರ್ವಿಷಯಾಸಕ್ತಾಂ ವಿಮುಖೀಂ ಹಿ ಸ್ವಧರ್ಮತಃ ॥ ೪೫ ॥

ಯದಲ್ಪಸ್ಯ ಸುಖಸ್ಯಾರ್ಥೇ ಸ್ವಕಾಯಸ್ಯ ವಿನಾಶಿನಃ ।
ಮಹಾಪಾಪಂ ಕೃತಂ ಘೋರಮಜಾನಂತ್ಯಾತಿಕಷ್ಟದಂ ॥ ೪೬ ॥

---

೪೨. ಚಂಚುಲೆಯು ಹೇಳುವಳು:—ಎಲೈ ಬ್ರಾಹ್ಮಣನೇ, ಧರ್ಮವನು ತಿಳಿಯದೆ ನಾನು ಅನೇಕ ಪಾಪಕೆಲಸಗಳನ್ನು ಮಾಡಿರುವೆನು. ಅವೆಲ್ಲವನ್ನೂ ಕೇಳಿ ನನ್ನಲ್ಲಿ ಅತ್ಯಂತ ದಯವನ್ನು ತೋರಿ ನನ್ನನ್ನು ಕಾಪಾಡು.

೪೩. ಮೂಢ ಬುದ್ಧಿಯುಳ್ಳ ನಾನು ಅತ್ಯಧಿಕವಾದ ಪಾಪಗಳನ್ನು ಮಾಡುತ್ತಾ ಕಮಾಂಧಳಾಗಿ ನನ್ನ ಯೌವನವನ್ನು ಜಾರವೃತ್ತಿಯಲ್ಲೇ ಕಳೆದನು.

೪೪. ನೀನು ಹೇಳಿದ ಪುರಾಣವಚನವನ್ನು ನಾನಿಂದು ಕೇಳಿ ವೈರಾಗ್ಯ ಯುಕ್ತಳಾಗಿ ತುಂಬಾ ಹೆದರಿಕೆಯಿಂದ ನಡುಗುತ್ತಾ ದುಃಖಿತಳಾಗಿರುವೆನು.

೪೫. ನಾನು ಮೂಢಬುದ್ಧಿಯುಳ್ಳವಳು, ಪಾಪಿಷ್ಠಳು, ಕಾಮದಿಂದ ಮೋಹ ಗೊಂಡ ಮನಸುಳ್ಳವಳು. ನೀಚಳೂ ಕೆಟ್ಟ ಕೆಲಸದಲ್ಲಿ ಪ್ರವೃತ್ತಿಸಿದವಳೂ, ಧರ್ಮ ವನ್ನು ಬಿಟ್ಟವಳೂ ಆದುದರಿಂದ ನಾನು ನಿಂದ್ಯಳು.

೪೬. ಕೇವಲ ಒಂದು ಕ್ಷಣದ ಸುಖಕ್ಕೋಸ್ಕರವಾಗಿ, ಅತ್ಯಂತ ಕಷ್ಟವನ್ನು ಕೊಡುವುದೆಂಬ ಜ್ಞಾನವಿಲ್ಲದೆ ಶರೀರವನ್ನು ಹಾಳುಮಾಡುವ ಮಹಾ ಪಾಪಕಾರ್ಯ ವನ್ನು ಮಾಡಿದೆನು.

ಯಾಸ್ಯಾಮಿ ದುರ್ಗತಿಂ ಕಾಂ ಕಾಂ ಘೋರಾಂ ಹಾ ಕಷ್ಟದಾಯಿನೀಂ ।
ಕೋ ಜ್ಞೋ ಯಾಸ್ಯತಿ ಮಾಂ ತತ್ರ ಕುಮಾರ್ಗರತಮಾನಸಾಂ ॥ ೪೭ ॥

ಮರಣೇ ಯಮದೂತಾಂಸ್ತಾನ್ ಕಥಂ ದ್ರಕ್ಷ್ಯೇ ಭಯಂಕರಾನ್ ।
ಕಥಂ ಪಾಶೈರ್ಬಲಾತ್ಕಂಠೇ ಬಧ್ಯಮಾನಾ ಧೃತಿಂ ಲಭೇ ॥ ೪೮ ॥

ಕಥಂ ಸಹಿಷ್ಯೇ ನರಕೇ ಖಂಡಶೋ ದೇಹಕೃಂತನಂ ।
ಯಾತನಾಂ ತತ್ರ ಮಹತೀಂ ದುಃಖದಾಂ ಚ ವಿಶೇಷತಃ ॥ ೪೯ ॥

ದಿವಾ ಚೇಷ್ಟಾಮಿಂದ್ರಿಯಾಣಾಂ ಕಥಂ ಪ್ರಾಪ್ಸ್ಯಾಮಿ ಶೋಚತೀ ।
ರಾತ್ರೌ ಕಥಂ ಲಭಿಷ್ಯೇಽಹಂ ನಿದ್ರಾಂ ದುಃಖಪರಿಪ್ಲುತಾ ॥ ೫೦ ॥

ಹಾ ಹತಾಸ್ಮಿ ಚ ದಗ್ಧಾಸ್ಮಿ ವಿದೀರ್ಣಹೃದಯಾಸ್ಮಿ ಚ ।
ಸರ್ವಥಾಹಂ ವಿನಷ್ಟಾಸ್ಮಿ ಪಾಪಿನೀ ಸರ್ವಥಾಪ್ಯಹಂ ॥ ೫೧ ॥

---

೪೭. ಅಯ್ಯೋ ! ಎಂಥೆಂತಹ ಘೋರವಾದ ಕಷ್ಟವನ್ನು ಕೊಡುವ ದುರ್ಗತಿಯನ್ನು ಹೊಂದುವೆನೋ ಕಾಣೆನಲ್ಲಾ ? ಇಂತಹ ಕೆಟ್ಟ ಮಾರ್ಗಕ್ಕೆ ಬಿದ್ದಿರುವ ನನ್ನ ಪಾಪವನ್ನು ತಿಳಿದ ಯಾವನು ತಾನೇ ರಕ್ಷಿಸುವನು ?

೪೮. ಭಯಂಕರರಾದ ಯಮದೂತರು ಮರಣ ಸಮಯದಲ್ಲಿ ಬರುವರಲ್ಲ ? ಅವರನ್ನು ಹೇಗೆ ತಾನೇ ನೋಡಲಿ ? ಅವರು ಬಲಾತ್ಕಾರವಾಗಿ ನನ್ನ ಕತ್ತಿಗೆ ಹಗ್ಗವನ್ನು ಬಿಗಿಯುತ್ತಿರಲು ಹೇಗೆ ತಾನೇ ಧೈರ್ಯದಿಂದಿರಲಿ ?

೪೯. ನರಕದಲ್ಲಿ ನನ್ನ ದೇಹವನ್ನು ಚೂರು ಚೂರಾಗಿ ಕತ್ತರಿಸುತ್ತಿರಲು ಆ ದುಃಖವನ್ನು ಹೇಗೆ ತಾನೇ ತಡೆಯಲಿ ? ದುಃಖಮಯವಾದ, ಬಗೆ ಬಗೆಯಾದ ಯಾತನೆಗಳನ್ನು ನಾನೆಂತು ಸಹಿಸಲಿ ?

೫೦. ಹಗಲಿನಲ್ಲಿ ದುಃಖಪಡುತ್ತಾ ಇಂದ್ರಿಯ ವ್ಯಾಪಾರವನ್ನು ಹೇಗೆ ತಾನೇ ಮಾಡಲಿ ? ರಾತ್ರಿಯಲ್ಲಿ ಈಗ ಉಂಟಾಗಿರುವ ದುಃಖದಿಂದ ನಿದ್ರೆ ತಾನೇ ಹೇಗೆ ಬರುವುದು ?

೫೧. ಅಯ್ಯೋ ! ನಾನು ದುಃಖದಿಂದ ಹತಳಾಗಿರುವೆನು. ಪಶ್ಚಾತ್ತಾಪದಿಂದ ದಗ್ಧಳಾಗಿರುವೆನು. ನನ್ನ ಹೃದಯವು ಸೀಳಿಹೋಗಿರುವುದು. ಖಂಡಿತವಾಗಿಯೂ ನಾನು ನಾಶವಾಗಿರುವೆನು. ನಾನು ಮಹಾಪಾಪಿಯು.

ಹಾ ವಿಧೇ ಮಾಂ ಮಹಾಪಾಪೇ ದತ್ವಾ ದುಶ್ಶೇಮುಷೀಂ ಹಠಾತ್ ।
ಅಪ್ಯೈತಿ ಯತ್ಸ್ವಧರ್ಮಾದ್ವೈ ಸರ್ವಸೌಖ್ಯಕರಾದಹೋ ॥ ೫೨ ॥

ಶೂಲಪ್ರೋತಸ್ಯ ಶೈಲಾಗ್ರಾತ್ಪತತಸ್ತುಂಗತೋ ದ್ವಿಜ ।
ಯದ್ದುಃಖಂ ದೇಹಿನೋ ಘೋರಂ ತಸ್ಮಾತ್ಕೋಟಿಗುಣಂ ಮಮ ॥ ೫೩ ॥

ಅಶ್ವಮೇಧಶತಂ ಕೃತ್ವಾ ಗಂಗಾಂ ಸ್ನಾತ್ವಾ ಶತಂ ಸಮಾಃ ।
ನ ಶುದ್ಧಿರ್ಜಾಯತೇ ಪ್ರಾಯೋ ಮತ್ಪಾಪಸ್ಯ ಗರೀಯಸಃ ॥ ೫೪ ॥

ಕಿಂ ಕರೋಮಿ ಕ್ವ ಗಚ್ಛಾಮಿ ಕಂ ವಾ ಶರಣಮಾಶ್ರಯೇ ।
ಕಸ್ತ್ರಾಯತೇ ಮಾಂ ಲೋಕೇಽಸ್ಮಿನ್ ಪತಂತೀಂ ನರಕಾರ್ಣವೇ ೫೫ ॥

ತ್ವಮೇವ ಮೇ ಗುರುರ್ಬ್ರಹ್ಮನ್ ತ್ವಂ ಮಾತಾ ತ್ವಂ ಪಿತಾಸಿ ಚ ।
ಉದ್ಧರೋದ್ಧರ ಮಾಂ ದೀನಾಂ ತ್ವಮೇವ ಶರಣಂ ಗತಾಂ ॥ ೫೬ ॥

---

೫೨. ಎಲೈ ವಿಧಿಯೇ, ಘೋರವಾದ ಪಾಪ ಕೆಲಸವನ್ನು ಮಾಡುವಂತೆ ಬುದ್ಧಿಯನ್ನು ನನಗೆ ಕೊಟ್ಟು, ಸರ್ವಸೌಖ್ಯಕರವಾದ ನನ್ನ ಧರ್ಮದಿಂದ ನನ್ನನ್ನು ವಂಚಿತಳನ್ನಾಗಿಮಾಡಿದೆ.

೫೩. ಎಲೈ ಬ್ರಾಹ್ಮಣನೇ, ಶೂಲದಿಂದ ಇರಿದರೆ, ಮತ್ತು ಎತ್ತರವಾದ ಪರ್ವತದ ತುದಿಯಿಂದ ಬಿದ್ದರೆ, ಎಷ್ಟು ದುಃಖವುಂಟಾಗುವುದೋ ಆದರ ಕೋಟಿಯಷ್ಟು ದುಃಖವು ನನಗೀಗ ಉಂಟಾಗಿರುವುದು.

೫೪. ನಾನು ಮಾಡಿರುವ ಘೋರವಾದ ಪಾಪವು ನೂರು ಅಶ್ವಮೇಧ ಯಜ್ಞವನ್ನು ಮಾಡಿದರೂ, ಗಂಗಾನದಿಯಲ್ಲಿ ನೂರು ವರ್ಷಗಳು ಸ್ನಾನಮಾಡಿದರೂ ಕೂಡ ಶುದ್ಧಿಯಾಗುವುದಿಲ್ಲವಲ್ಲ?

೫೫. ಈಗ ನಾನೇನು ಮಾಡಲಿ? ಎಲ್ಲಿಗೆ ಹೋಗಲಿ? ಯಾರನ್ನು ಮರೆಹೋಗಲಿ? ನರಕವೆಂಬ ಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಈ ಲೋಕದಲ್ಲಿ ಯಾರು ಉದ್ಧಾರಮಾಡುವರು?

೫೬. ಆದುದರಿಂದ ಎಲೈ ಬ್ರಾಹ್ಮಣನೇ, ನನಗೆ ನೀನೇ ಗುರುವು, ನೀನೇ ತಂದೆ ತಾಯಿಯು. ದೀನಳಾದ ನಾನು ನಿನ್ನನ್ನೇ ಮರೆಹೊಕ್ಕಿರುವೆನು. ನನ್ನನ್ನು ನೀನೇ ಉದ್ಧಾರಮಾಡು ಎಂದು ಪ್ರಾರ್ಥಿಸಿದಳು.

॥ ಸೂತ ಉವಾಚ ॥
ಇತಿ ಸಂಜಾತನಿರ್ವೇದಾಂ ಪತಿತಾಂ ಚರಣದ್ವಯೇ ।
ಉತ್ಥಾಪ್ಯ ಕೃಪಯಾ ಧೀಮಾನ್ಸಭಾಷೇ ಬ್ರಾಹ್ಮಣಸ್ಸ ಹಿ ॥ ೫೭ ॥

ಇತಿ ಶ್ರೀ ಸ್ಕಾಂದಪುರಾಣೇ ಶಿವಪುರಾಣಮಾಹಾತ್ಮ್ಯೇ
ಚಂಚುಲಾವೈರಾಗ್ಯವರ್ಣನಂ ನಾಮ
ತೃತೀಯೋಽಧ್ಯಾಯಃ-

---

೫೭. ಸೂತನು ಹೇಳುವನು :—ಈ ರೀತಿಯಾಗಿ ಶಿವಕಥೆಯನ್ನು ಕೇಳುದುದರಿಂದ ಪಶ್ಚಾತ್ತಾಪ ಉಂಟಾಗಿ ಆ ಬ್ರಾಹ್ಮಣನ ಪಾದಗಳಿಗೆ ನಮಸ್ಕರಿಸುತ್ತಿರುವ ಆ ಚಂಚುಲೆಯನ್ನು ಆ ವಿಪ್ರನು ಮೇಲಕ್ಕೆ ಎತ್ತಿ ದಯೆಯಿಂದ ಈ ರೀತಿಯಾಗಿ ಹೇಳಿದನು.

ಇಲ್ಲಿಗೆ ಸ್ಕಾಂದಪುರಾಣದ ಶಿವಪುರಾಣ ಮಾಹಾತ್ಮ್ಯೆಯಲ್ಲಿ ಚಂಚುಲೆಯ
ವೈರಾಗ್ಯವರ್ಣನವೆಂಬ ಮೂರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

## ॥ ಅಥ ಶಿವಪುರಾಣಮಾಹಾತ್ಮ್ಯೇ ॥

## ಚತುರ್ಥೋಽಧ್ಯಾಯಃ

॥ ಬ್ರಾಹ್ಮಣ ಉವಾಚ ॥

ದಿಷ್ಟ್ಯಾ ಕಾಲೇ ಪ್ರಬುದ್ಧಾಸಿ ಶಿವಾನುಗ್ರಹತೋ ವರಾಂ ।
ಇಮಾಂ ಶಿವಪುರಾಣಸ್ಯ ಶ್ರುತ್ವಾ ವೈರಾಗ್ಯವತ್ಕಥಾಂ ॥ ೧ ॥

ಮಾ ಭೈಷೀರ್ದ್ವಿಜಪತ್ನಿ ತ್ವಂ ಶಿವಸ್ಯ ಶರಣಂ ವ್ರಜ ।
ಶಿವಾನುಗ್ರಹತಸ್ಸರ್ವಂ ಪಾಪಂ ಸದ್ಯೋ ವಿನಶ್ಯತಿ ॥ ೨ ॥

ವಕ್ಷ್ಯಾಮಿ ತೇ ಪರಂ ವಸ್ತು ಶಿವಕೀರ್ತಿಸಮನ್ವಿತಂ ।
ಭವಿಷ್ಯತಿ ಗತಿರ್ಯೇನ ಸರ್ವದಾ ತೇ ಸುಖಾವಹಾ ॥ ೩ ॥

---

## ನಾಲ್ಕನೆಯ ಅಧ್ಯಾಯವು.

೧. ಬ್ರಾಹ್ಮಣನು ಹೇಳುವನು :—ಎಲೌ ಸ್ತ್ರೀಯೇ, ಪವಿತ್ರವಾದ ವೈರಾಗ್ಯವನ್ನುಂಟುಮಾಡುವ ಶಿವಪುರಾಣದ ಕಥೆಯನ್ನು ಕೇಳಿ, ಸರಿಯಾದ ಸಮಯದಲ್ಲಿ ಶಿವಾನುಗ್ರಹದಿಂದ ಎಚ್ಚೆತ್ತಿರುವೆ. ಇದು ನಿನ್ನ ಅದೃಷ್ಟವು.

೨. ಎಲೌ ಬ್ರಾಹ್ಮಣನ ಪತ್ನಿಯೇ, ನೀನು ಇನ್ನು ಹೆದರಬೇಡ, ಈಶ್ವರನನ್ನು ಮರೆಹೋಗು. ಅವನ ಅನುಗ್ರಹದಿಂದ ನಿನ್ನ ಪಾಪವೆಲ್ಲವೂ ತಕ್ಷಣ ನಾಶವಾಗುವುದು.

೩. ಶಿವನ ಕೀರ್ತನೆಯಿಂದ ಕೂಡಿ, ಪಾಪವನ್ನು ನಾಶಮಾಡಿ ಯಾವಾಗಲೂ ನಿನಗೆ ಸುಖವನ್ನುಂಟುಮಾಡುವ ಪವಿತ್ರವಾದ ವಸ್ತುವಿನ ವಿಷಯವನ್ನು ಹೇಳುವೆನು.

ಸತ್ಕಥಾಶ್ರವಣಾದೇವ ಜಾತಾ ತೇ ಮತಿರೀದೃಶೀ ।
ಪಶ್ಚಾತ್ತಾಪಾನ್ವಿತಾ ಶುದ್ಧಾ ವೈರಾಗ್ಯಂ ವಿಷಯೇಷು ಚ ॥ ೪ ॥

ಪಶ್ಚಾತ್ತಾಪಃ ಪಾಪಕೃತಾಂ ಪಾಪಾನಾಂ ನಿಷ್ಕೃತಿಃ ಪರಾ ।
ಸರ್ವೇಷಾಂ ವರ್ಣಿತಂ ಸದ್ಭಿಸ್ಸರ್ವಪಾಪವಿಶೋಧನಂ ॥ ೫ ॥

ಪಶ್ಚಾತ್ತಾಪೇನೈವ ಶುದ್ಧಿಃ ಪ್ರಾಯಶ್ಚಿತ್ತಂ ಕರೋತಿ ಸಃ ।
ಯಥೋಪದಿಷ್ಟಂ ಸದ್ಭಿರ್ಹಿ ಸರ್ವಪಾಪವಿಶೋಧನಂ ॥ ೬ ॥

ಪ್ರಾಯಶ್ಚಿತ್ತಮಧೀಕೃತ್ಯಾವಿಧಿವನ್ನಿರ್ಭಯಃ ಪುಮಾನ್ ।
ನ ಯಾತಿ ಸುಗತಿಂ ಪ್ರಾಯಃ ಪಶ್ಚಾತ್ತಾಪೀ ನ ಸಂಶಯಃ ॥ ೭ ॥

ಏತಚ್ಛಿವಪುರಾಣಸ್ಯ ಕಥಾಶ್ರವಣತೋ ಯಥಾ ।
ಜಾಯತೇ ಚಿತ್ತಶುದ್ಧಿರ್ಹಿ ನ ತಥಾನ್ಯೈರುಪಾಯತಃ ॥ ೮ ॥

---

೪. ಶಿವನ ಸತ್ಕಥೆಯನ್ನು ಕೇಳಿದ್ದರಿಂದ ನಿನಗೆ ಈಗ ಈ ರೀತಿ ಬುದ್ಧಿ ಬಂದಿದೆ. ನೀನು ಮಾಡಿದ ಪಾಪಗಳಿಗೆ ಪಶ್ಚಾತ್ತಾಪಗೊಂಡು, ವಿಷಯೋಪಭೋಗಗಳಲ್ಲಿ ವೈರಾಗ್ಯವನ್ನು ಪಡೆದು ಶುದ್ಧಳಾಗಿರುವೆ.

೫. ಪಾಪವನ್ನು ಮಾಡಿರುವ ಪಾಪಿಗಳಿಗೆ ಪಶ್ಚಾತ್ತಾಪವು ಶ್ರೇಷ್ಠವಾದುದು. ಪಶ್ಚಾತ್ತಾಪವು ಪಾಪಗಳನ್ನೆಲ್ಲಾ ನಾಶಮಾಡುವುದೆಂದು ಸತ್ಪುರುಷರೆಲ್ಲರೂ ಹೇಳುವರು.

೬. ಪಶ್ಚಾತ್ತಾಪದಿಂದಲೇ ಪಾಪವು ಶುದ್ಧಿಯಾಗುವುದು. ಪಶ್ಚಾತ್ತಾಪವೇ ಪಾಪಕ್ಕೆ ಪ್ರಾಯಶ್ಚಿತ್ತವು. ಪಶ್ಚಾತ್ತಾಪವು ಪಾಪಗಳೆಲ್ಲವನ್ನೂ ಪರಿಶುದ್ಧಮಾಡುವುದೆಂದು ಸತ್ಪುರುಷರು ಉಪದೇಶಿಸಿರುವರು.

೭. ಪಾಪಕ್ಕೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತ ಎಂದು ಮಾತ್ರ ತಿಳಿದು, ಎಷ್ಟು ಪಾಪಮಾಡಿದರೂ ಪಶ್ಚಾತ್ತಾಪಪಟ್ಟರೆ ಸಾಕು ಎಂದು ನಿರ್ಭಯನಾಗಿ ಯಾವನು ಮಾರ್ಗ ತಪ್ಪಿ ನಡೆಯುವನೋ ಅವನಿಗೆ ಸದ್ಗತಿಯು ಸಿಕ್ಕಲಾರದು.

೮. ಈ ಶಿವಪುರಾಣ ಕಥೆಯನ್ನು ಕೇಳಿದುದರಿಂದ ಹೇಗೆ ಮನಸ್ಸು ಶುದ್ಧಿಯಾಗುವುದೋ ಹಾಗೆ ಇನ್ನು ಯಾವ ಉಪಾಯದಿಂದಲೂ ಶುದ್ಧಿಯಾಗುವುದಿಲ್ಲ.

ಶೋಧ್ಯಮಾನಂ ದರ್ಪಣಂ ಹಿ ಯಥಾ ಭವತಿ ನಿರ್ಮಲಂ ।
ತಥೈತತ್ಕಥಯಾ ಚೇತೋ ವಿಶುದ್ಧಿಂ ಯಾತ್ಯಸಂಶಯಂ ॥ ೯ ॥

ವಿಶುದ್ಧೇ ಚೇತಸಿ ಶಿವೋ ನೃಣಾಂ ತಿಷ್ಠತಿ ಸಾಂಬಿಕಃ ।
ತತೋ ಯಾತಿ ವಿಶುದ್ಧಾತ್ಮಾ ಸಾಂಬಶಂಭೋಃ ಪರಂ ಪದಂ ॥ ೧೦ ॥

ಅತಃ ಸರ್ವಸ್ಯ ವರ್ಗಸ್ಯೈತತ್ಕಥಾಸಾಧನಂ ಮತಂ ।
ಏತದರ್ಥಂ ಮಹಾದೇವೋ ನಿರ್ಮಮೇ ತ್ವಾಗ್ರಹಾದಿಮಾಂ ॥ ೧೧ ॥

ಕಥಯಾ ಸಿಧ್ಯತಿ ಧ್ಯಾನಮನಯಾ ಗಿರಿಜಾಪತೇಃ ।
ಧ್ಯಾನಾಜ್ಜ್ಞಾನಂ ಪರಂ ತಸ್ಮಾತ್ಕೈವಲ್ಯಂ ಭವತಿ ಧ್ರುವಂ ॥ ೧೨ ॥

ಅಸಿದ್ಧಶಂಕರಧ್ಯಾನಃ ಕಥಾಮೇವ ಶೃಣೋತಿ ಯಃ ।
ಸ ಪ್ರಾಪ್ಯಾನ್ಯಭವೇ ಧ್ಯಾನಂ ಶಂಭೋರ್ಯಾತಿ ಪರಾಂ ಗತಿಂ ॥ ೧೩ ॥

---

೯. ತೊಳೆದ ಕನ್ನಡಿಯು ಹೇಗೆ ನಿರ್ಮಲವಾಗಿರುತ್ತದೆಯೋ ಹಾಗೆ ಈ ಶಿವ ಪುರಾಣವನ್ನು ಕೇಳುವುದರಿಂದ ನಿಸ್ಸಂಶಯವಾಗಿಯೂ ಮನಸ್ಸು ನಿಷ್ಕಲ್ಮಷ ವಾಗುವುದು.

೧೦. ಮನುಷ್ಯನ ನಿಷ್ಕಲ್ಮಷವಾದ ಮನಸ್ಸಿನಲ್ಲಿ ಪಾರ್ವತಿಯೊಡನೆ ಈಶ್ವರನು ಸದಾ ನೆಲಸಿರುವನು. ಅಂತಹ ಪವಿತ್ರಾತ್ಮನಾದ ಆ ಮನುಜನು ಶಿವನ ಶ್ರೇಷ್ಠ ಸ್ಥಾನವಾದ ಕೈಲಾಸವನ್ನು ಹೊಂದುವನು.

೧೧. ಆದುದರಿಂದ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದವರೆಲ್ಲರೂ ಈ ಕಥಾಶ್ರವಣವನ್ನು ಅವಶ್ಯವಾಗಿ ಮಾಡಬೇಕು. ಈ ಕಾರಣದಿಂದಲೇ ಈಶ್ವರನು ಈ ಶಿವಪುರಾಣ ಕಥೆಯನ್ನು ಒತ್ತಾಯವಾಗಿ ನಿರ್ಮಿಸಿರುವನು.

೧೨. ಕಥೆಯನ್ನು ಕೇಳಿದರೆ ಈಶ್ವರನಲ್ಲಿ ಭಕ್ತಿ ಹುಟ್ಟುವುದು. ಅನಂತರ ಅವನನ್ನು ಧ್ಯಾನಿಸಲು ಮನಸ್ಸು ಬರುವುದು. ಧ್ಯಾನದಿಂದ ತತ್ತ್ವಜ್ಞಾನವುಂಟಾಗುವುದು. ತತ್ತ್ವಜ್ಞಾನದಿಂದ ಶಾಶ್ವತವಾದ ಮುಕ್ತಿಯು ಲಭಿಸುವುದು.

೧೩. ಈಶ್ವರನ ಧ್ಯಾನಮಾಡಿದರೂ ಯಾರಿಗೆ ಧ್ಯಾನವು ಸಿದ್ಧಿಸುವುದಿಲ್ಲವೋ ಅವರು ಈ ಕಥೆಯನ್ನು ಕೇಳಿದರೆ, ಅವರಿಗೆ ಮುಂದಿನ ಜನ್ಮದಲ್ಲಿ ಧ್ಯಾನವು ಸಿದ್ಧಿಸಿ ಅತ್ಯುತ್ಕೃಷ್ಟವಾದ ಶಿವನ ಸ್ಥಾನವನ್ನು ಹೊಂದುವರು.

ಏತತ್ಕಥಾಶ್ರವಣತಃ ಕೃತ್ವಾ ಧ್ಯಾನಮುಮಾಪತೇಃ ।
ತೇ ಪಶ್ಚಾತ್ತಾಪಿನಃ ಪಾಪಾ ಬಹವಃ ಸಿದ್ಧಿಮಾಗತಾಃ ॥ ೧೪ ॥

ಸರ್ವೇಷಾಂ ಶ್ರೇಯಸಾಂ ಬೀಜಂ ಸತ್ಕಥಾಶ್ರವಣಂ ನೃಣಾಂ ।
ಯಥಾವತ್ಸ್ಮ ಸಮಾರಾಧ್ಯಂ ಭವಬಂಧಗದಾಪಹಂ ॥ ೧೫ ॥

ಕಥಾಶ್ರವಣತಃ ಶಂಭೋರ್ಮನನಾಚ್ಚ ತತೋ ಹೃದಾ ।
ನಿದಿಧ್ಯಾಸನತಶ್ಚೈವ ಚಿತ್ತಶುದ್ಧಿರ್ಭವತ್ಯಲಂ ॥ ೧೬ ॥

ಅತೋ ಭಕ್ತಿರ್ಮಹೇಶಸ್ಯ ಪುತ್ರಾಭ್ಯಾಂ ಭವತಿ ಧ್ರುವಂ ।
ತದನುಗ್ರಹತೋ ದಿವ್ಯಾ ಽತತೋ ಮುಕ್ತಿರ್ನ ಸಂಶಯಃ ॥ ೧೭ ॥

ತದ್ವಿಹೀನಃ ಪಶುರ್ಜ್ಞೇಯೋ ಮಾಯಾಬಂಧನಸಕ್ತಧೀಃ ।
ಸಂಸಾರಬಂಧನಾನ್ನೈವ ಮುಕ್ತೋ ಭವತಿ ಸ ಧ್ರುವಂ ॥ ೧೮ ॥

---

೧೪. ಈ ಕಥೆಯನ್ನು ಕೇಳುವುದರಿಂದ ಈಶ್ವರನ ಧ್ಯಾನಮಾಡಲು ಬುದ್ಧಿ ಹುಟ್ಟುವುದು. ಅನಂತರ ಧ್ಯಾನಮಾಡುವುದರಿಂದ ತಾವು ಮಾಡಿದ ಪಾಪಗಳಿಗೆ ಪಶ್ಚಾತ್ತಾಪಪಟ್ಟು ಸಿದ್ಧಿಯನ್ನು ಹೊಂದುವರು.

೧೫. ಈ ಸತ್ಕಥಾಶ್ರವಣವು ಮನುಜರಿಗೆ ಶ್ರೇಯಸ್ಸಿಗೆ ಕಾರಣವಾದುದು. ಮತ್ತು ಸರಿಯಾದ ರೀತಿಯಿಂದ ಆರಾಧಿಸಿದರೆ ಸಂಸಾರಬಂಧವೆಂಬ ರೋಗವು ನಾಶವಾಗಿ ಮುಕ್ತಿಯು ಉಂಟಾಗುವುದು.

೧೬. ಈ ಕಥೆಯನ್ನು ಕೇಳುವುದರಿಂದಲೂ, ಮನಸ್ಸಿನಲ್ಲಿ ಶಿವನನ್ನು ಧ್ಯಾನ ಮಾಡುವುದರಿಂದಲೂ ಮತ್ತು ಪುನಃ ಪುನಃ ಶಿವನನ್ನೇ ಯೋಚಿಸುವುದರಿಂದಲೂ ಸಹ ಮನಸ್ಸು ಶುದ್ಧಿಯಾಗುವುದು.

೧೭. ಆದುದರಿಂದ ಅವನ ಪುತ್ರರಾದ ಗಣಪತಿ, ಷಣ್ಮುಖ, ಇವರುಗಳ ಮೂಲಕ ಶಿವನಲ್ಲಿ ಭಕ್ತಿಯು ಹುಟ್ಟಿ ಶಿವನ ಅನುಗ್ರಹದಿಂದ ದಿವ್ಯವಾದ ಮುಕ್ತಿಯು ಖಂಡಿತವಾಗಿ ಲಭಿಸುತ್ತದೆ.

೧೮. ಈಶ್ವರನಲ್ಲಿ ಭಕ್ತಿ ಇಲ್ಲದವನು, ಏನೂ ಜ್ಞಾನವಿಲ್ಲದ ಪಶುವಿಗೆ ಸಮಾನನು. ಅವನು ಪತ್ನೀಪುತ್ರರೆಂಬ ಭ್ರಮೆಯಲ್ಲಿ ಬಿದ್ದು ಸಂಸಾರಬಂಧನದಿಂದ ಎಂದಿಗೂ ಮುಕ್ತಿಯನ್ನು ಪಡೆಯಲಾರನು.

ಅತೋ ಹಿ ದ್ವಿಜಪತ್ನಿ ತ್ವಂ ವಿಷಯೇಭ್ಯೋ ನಿವೃತ್ತಧೀಃ ।
ಶೃಣು ಶಂಭೋಃ ಕಥಾಂ ಚೇತಾಂ ಭಕ್ತ್ಯಾ ಪರಮಪಾವನೀಂ ॥ ೧೯ ॥

ಶೃಣ್ವಂತ್ಯಾಸ್ಸತ್ಕಥಾಮೇತಾಂ ಶಂಕರಸ್ಯ ಪರಾತ್ಮನಃ ।
ಶುದ್ಧಿರ್ಮೇಷ್ಯತಿ ಚೇತಸ್ತೇ ತತೋ ಮುಕ್ತಿಮವಾಪ್ಸ್ಯಸಿ ॥ ೨೦ ॥

ಧ್ಯಾಯತಃ ಶಿವಪಾದಾಬ್ಜಂ ಚೇತಸಾ ನಿರ್ಮಲೇನ ವೈ ।
ಏಕೇನ ಜನ್ಮನಾ ಮುಕ್ತಿಸ್ಸತ್ಯಂ ಸತ್ಯಂ ವದಾಮ್ಯಹಂ ॥ ೨೧ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ದ್ವಿಜವರೋ ವರಃ ಶೈವಃ ಕೃಪಾರ್ದ್ರಧೀಃ ।
ತೂಷ್ಣೀಂ ಬಭೂವ ಶುದ್ಧಾತ್ಮಾ ಶಿವಧ್ಯಾನಪರಾಯಣಃ ॥ ೨೨ ॥

ಅಥ ಬಿಂದುಗಪತ್ನೀ ಸಾ ಚಂಚುಲಾಹ್ವಾ ಪ್ರಸನ್ನಧೀಃ ।
ಇತ್ಯುಕ್ತ್ವಾ ತೇನ ವಿಪ್ರೇಣ ಸಮಾಸೀದ್ಬಾಷ್ಪಲೋಚನಾ ॥ ೨೩ ॥

---

೧೯. ಆದುದರಿಂದ ಎಲೌ ಚಂಚುಲೆಯೇ, ನಿನಗೀಗ ವಿಷಯ ಸುಖಗಳಲ್ಲಿ ವೈರಾಗ್ಯ ಬಂದಿರುವುದು. ನೀನೀಗ ಪರಮಪವಿತ್ರವಾದ ಈಶ್ವರನ ಕಥೆಯನ್ನು ಭಕ್ತಿಯಿಂದ ಕೇಳು.

೨೦. ನೀನು ಈಶ್ವರ ಸತ್ಕಥೆಯನ್ನು ಕೇಳಿದರೆ ನಿನ್ನ ಮನಸ್ಸು ಶುದ್ಧಿಯಾಗಿ ಮುಕ್ತಿಯನ್ನು ಪಡೆಯುವೆ.

೨೧. ನಿರ್ಮಲವಾದ ಮನಸ್ಸಿನಿಂದ ಈಶ್ವರನ ಚರಣಕಮಲಗಳನ್ನು ಧ್ಯಾನ ಮಾಡಿದರೆ ಒಂದೇ ಜನ್ಮದಲ್ಲೇ ಮುಕ್ತಿಯುಂಟಾಗುವುದು. ಇದು ಸತ್ಯವು.

೨೨. ಸೂತಮುನಿಯು ಹೇಳುವನು :—ಈ ರೀತಿಯಾಗಿ ಆ ಶಿವಭಕ್ತನಾದ ಬ್ರಾಹ್ಮಣನು, ದಯೆಯಿಂದ ಕೂಡಿ ಚಂಚುಲೆಗೆ ಉಪದೇಶಮಾಡಿ ಶಿವಧ್ಯಾನಾಸಕ್ತನಾದನು.

೨೩-೨೫. ಅನಂತರ ಬಿಂದುಗನ ಪತ್ನಿಯಾದ ಚಂಚುಲೆಯು ಬ್ರಾಹ್ಮಣನ ಉಪದೇಶವನ್ನು ಕೇಳಿ ಹರ್ಷದಿಂದ ಆನಂದಾಶ್ರುವನ್ನು ಸುರಿಸುತ್ತಾ ಸ್ವಲ್ಪ ಕಾಲ ಕುಳಿತಿದ್ದು, ಆಮೇಲೆ ಪಾಪವನ್ನು ಪರಿಹರಿಸುವ ಆ ಬ್ರಾಹ್ಮಣನ ಪಾದಗಳಿಗೆ

ಪಪಾತಾರಂ ದ್ವಿಜೇಂದ್ರಸ್ಯ ಪಾದಯೋಸ್ತಸ್ಯ ಹೃಷ್ಟಧೀಃ ।
ಚಂಚುಲಾ ಸಾಂಜಲಿಸ್ಸಾ ಚ ಕೃತಾರ್ಥಾಸ್ಮೀತ್ಯಭಾಷತ ॥ ೨೪ ॥

ಅಥ ಸೋತ್ಥಾಯ ಸಾತಂಕಾ ಸಾಂಜಲಿರ್ಗದ್ಗದಾಕ್ಷರಂ ।
ತಮುವಾಚ ಮಹಾಶೈವಂ ದ್ವಿಜಂ ವೈರಾಗ್ಯಯುಕ್ತಧೀಃ ॥ ೨೫ ॥

॥ ಚಂಚುಲೋವಾಚ ॥

ಬ್ರಹ್ಮನ್ ಶೈವವರ ಸ್ವಾಮಿನ್ ಧನ್ಯಸ್ತ್ವಂ ಪರಮಾರ್ಥದೃಕ್ ।
ಪರೋಪಕಾರನಿರತೋ ವರ್ಣನೀಯಃ ಸುಸಾಧುಷು ॥ ೨೬ ॥

ಉದ್ಧರೋದ್ಧರ ಮಾಂ ಸಾಧೋ ಪತಂತೀ ನರಕಾರ್ಣವೇ ।
ಶ್ರುತ್ವಾ ಯಾಂ ಸುಕಥಾಂ ಶೈವೀಂ ಪುರಾಣಾರ್ಥವಿಜೃಂಭಿತಾಂ ॥ ೨೭ ॥

ವಿರಕ್ತಧೀರಹಂ ಜಾತಾ ವಿಷಯೇಭ್ಯಶ್ಚ ಸರ್ವತಃ ।
ಸುಶ್ರದ್ಧಾ ಮಹತೀ ಹ್ಯೇತತ್ಪುರಾಣಶ್ರವಣೇಽಧುನಾ ॥ ೨೮ ॥

---

ಸಂತೋಷದಿಂದ ನಮಸ್ಕರಿಸಿ ಅಂಜಲಿಬದ್ಧಳಾಗಿ" ನಾನಿಂದು ಶಿವಕಥೆಯನ್ನು ಕೇಳಿ ಕೃತಾರ್ಥಳಾದೆನು " ಎಂದು ಹೇಳಿ ಮೇಲಕ್ಕೆದ್ದು ಕೈಮುಗಿದುಕೊಂಡು ಗದ್ಗದಸ್ವರದಿಂದ ಆ ಮಹಾಶೈವ ಬ್ರಾಹ್ಮಣನನ್ನು ಕುರಿತು ವೈರಾಗ್ಯಬುದ್ಧಿಯುಳ್ಳವಳಾಗಿ ಈ ರೀತಿ ಹೇಳಿದಳು.

೨೬. ಚಂಚುಲೆಯು ಹೇಳುವಳು:—ಎಲೈ ಶೈವಶ್ರೇಷ್ಠನಾದ ಬ್ರಾಹ್ಮಣನೇ, ಪರಾಪರತತ್ತ್ವವನ್ನು ತಿಳಿದ ನೀನು ಧನ್ಯನು. ಪರೋಪಕಾರದಲ್ಲಿಯೇ ಆಸಕ್ತನಾದುದರಿಂದ ನೀನು ಸತ್ಪುರುಷನು. ಆದುದರಿಂದ ನರಕವೆಂಬ ಸಮುದ್ರದಲ್ಲಿ ಬಿದ್ದು ಒದ್ದಾಡುತ್ತಿರುವ ನನ್ನನ್ನು ನೀನೇ ಉದ್ಧಾರಮಾಡಬೇಕಾಗಿದೆ.

೨೭-೨೮. ಪುರಾಣದ ಮೂಲಕ ಹೇಳಿರುವ ಶಿವನ ಸತ್ಕಥೆಯನ್ನು ಕೇಳಿ ನನಗೆ ವಿಷಯ ಸುಖಗಳಲ್ಲಿ ವೈರಾಗ್ಯವುಂಟಾಗಿದೆ. ಮತ್ತು ಈಗ ಶಿವಪುರಾಣವನ್ನು ಕೇಳುವುದರಲ್ಲಿ ಆಸಕ್ತಿಯುಂಟಾಗಿದೆ. ಆದುದರಿಂದ ನನಗೆ ಶಿವಕಥಾ ಶ್ರವಣಮಾಡಿಸಿ ನನ್ನನ್ನು ಕೃತಕೃತ್ಯಳನ್ನಾಗಿಮಾಡು ಎಂದು ಪ್ರಾರ್ಥಿಸಿದಳು.

॥ ಸೂತ ಉವಾಚ ॥

ಇತ್ಯುಕ್ತ್ವಾ ಸಾಂಜಲಿಃ ಸಾ ವೈ ಸಂಪ್ರಾಪ್ಯ ತದನುಗ್ರಹಂ ।
ತತ್ಪುರಾಣಂ ಶ್ರೋತುಕಾಮಾತಿಷ್ಠತ್ತತ್ಸೇವನೇ ರತಾ ॥ ೨೯ ॥

ಅಥ ಶೈವವರೋ ವಿಪ್ರಸ್ತಸ್ಮಿನ್ನೇವ ಸ್ಥಲೇ ಸುಧೀಃ ।
ಸತ್ಕಥಾಂ ಶ್ರಾವಯಾಮಾಸ ತತ್ಪುರಾಣಸ್ಯ ತಾಂ ಸ್ತ್ರಿಯಂ ॥ ೩೦ ॥

ಇತ್ಥಂ ತಸ್ಮಿನ್ಮಹಾಕ್ಷೇತ್ರೇ ತಸ್ಮಾದೇವ ದ್ವಿಜೋತ್ತಮಾತ್ ।
ಕಥಾಂ ಶಿವಪುರಾಣಸ್ಯ ಸಾ ಶುಶ್ರಾವ ಮಹೋತ್ತಮಾಂ ॥ ೩೧ ॥

ಭಕ್ತಿಜ್ಞಾನವಿರಾಗಾಣಾಂ ವರ್ಧಿನೀಂ ಮುಕ್ತಿದಾಯಿನೀಂ ।
ಬಭೂವ ಸುಕೃತಾರ್ಥಾ ಸಾ ಶ್ರುತ್ವಾ ತಾಂ ಸತ್ಕಥಾಂ ಪರಾಂ ॥ ೩೨ ॥

ಸದ್ಗುರೋಸ್ತಸ್ಯ ಕೃಪಯಾ ಶುದ್ಧಚಿತ್ತಾ ಚ ಸಾ ದ್ರುತಂ ।
ಶಿವಾನುಗ್ರಹತಃ ಶಂಭೋ ರೂಪಧ್ಯಾನಮವಾಪ ಹ ॥ ೩೩ ॥

---

೨೯. ಸೂತಮುನಿಯು ಹೇಳುವನು :—ಈ ರೀತಿಯಾಗಿ ಚಂಚುಲೆಯು ಹೇಳಿ ಆ ಬ್ರಾಹ್ಮಣನ ದಯೆಗೆ ಪಾತ್ರಳಾಗಿ ಶಿವಪುರಾಣವನ್ನು ಕೇಳಲು ಕುತೂಹಲ ದಿಂದ ಅವನ ಸೇವೆಯನ್ನು ಮಾಡುತ್ತಿದ್ದಳು.

೩೦. ಅನಂತರ ಶೈವಶ್ರೇಷ್ಠನಾದ ಆ ಬ್ರಾಹ್ಮಣನು ಶಿವಪುರಾಣದ ಕಥೆಯನ್ನು ಚಂಚುಲೆಗೆ ಹೇಳಿದನು.

೩೧. ಈ ರೀತಿಯಾಗಿ ಆ ಗೋಕರ್ಣಕ್ಷೇತ್ರದಲ್ಲಿ ಚಂಚುಲೆಯು ಬ್ರಾಹ್ಮಣ ನಿಂದ ಉತ್ಕೃಷ್ಟವಾದ ಶಿವಪುರಾಣದ ಕಥೆಯನ್ನು ಕೇಳಿದಳು.

೩೨. ಭಕ್ತಿ, ಜ್ಞಾನ, ವೈರಾಗ್ಯಗಳನ್ನುಂಟುಮಾಡುವ, ಮೋಕ್ಷವನ್ನು ಕೊಡುವ ಆ ಪುರಾಣದ ಕಥೆಯನ್ನು ಕೇಳಿ ಆ ಚಂಚುಲೆಯು ಕೃತಾರ್ಥಳಾದಳು.

೩೩. ಸದ್ಗುರುವಾದ ಆ ಬ್ರಾಹ್ಮಣನ ದಯೆಯಿಂದ ಪುರಾಣವನ್ನು ಕೇಳಿ ಪರಿಶುದ್ಧವಾದ ಮನಸ್ಸುಳ್ಳವಳಾದಳು. ಮತ್ತು ಈಶ್ವರನ ಅನುಗ್ರಹದಿಂದ ಈಶ್ವರನ ಧ್ಯಾನದಲ್ಲಿ ಆಸಕ್ತಳಾದಳು.

ಇತ್ಥಂ ಸದ್ಗುರುಮಾಶ್ರಿತ್ಯ ಸಾ ಪ್ರಾಪ್ತಶಿವಸನ್ಮತಿಃ ।
ದಧ್ಯೌ ಮುಹುರ್ಮುಹುಃ ಶಂಭೋಶ್ಚಿದಾನಂದಮಯಂ ವಪುಃ ॥ ೩೪ ॥

ಸ್ನಾತ್ವಾ ತೀರ್ಥಜಲೇ ನಿತ್ಯಂ ಜಟಾವಲ್ಕಲಧಾರಿಣೀ ।
ಭಸ್ಮೋದ್ಧೂಲಿತಸರ್ವಾಂಗೀ ರುದ್ರಾಕ್ಷಕೃತಭೂಷಣಾ ॥ ೩೫ ॥

ಶಿವನಾಮಜಪಾಸಕ್ತಾ ವಾಗ್ಯತಾ ಮಿತಭೋಜನಾ ।
ಗುರೂಪದಿಷ್ಟಮಾರ್ಗೇಣ ಸಾ ಶಿವಂ ಸಮತೋಷಯತ್ ॥ ೩೬ ॥

ಏವಂ ತಸ್ಯಾಶ್ಚಂಚುಲಾಯಾಃ ಕುರ್ವಂತ್ಯಾ ಧ್ಯಾನಮುತ್ತಮಂ ।
ಬಹುಕಾಲೋ ವ್ಯತೀಯಾಯ ಶಂಭೋಸ್ತತ್ರೈವ ಶೌನಕ ॥ ೩೭ ॥

ಅಥ ಕಾಲೇನ ಪೂರ್ಣೇನ ಭಕ್ತಿತ್ರಿಕಸಮನ್ವಿತಾ ।
ಸಮುತ್ಸಸರ್ಜ ದೇಹಂ ಸ್ವಮನಾಯಾಸೇನ ಚಂಚುಲಾ ॥ ೩೮ ॥

ವಿಮಾನಂ ದ್ರುತಮಾಯಾಂತಂ ಪ್ರೇಷಿತಂ ತ್ರಿಪುರಾರಿಣಾ ।
ದಿವ್ಯಂ ಸ್ವಗಣಸಂಯುಕ್ತಂ ನಾನಾಶೋಭಾಸಮನ್ವಿತಂ ॥ ೩೯ ॥

---

೩೪. ಈ ರೀತಿಯಾಗಿ ಸದ್ಗುರುವಿನ ಮೂಲಕ ಈಶ್ವರನಲ್ಲಿ ಭಕ್ತಿಯನ್ನು ಪಡೆದು ಬಾರಿ ಬಾರಿಗೂ ಜ್ಞಾನಾನಂದರೂಪವಾದ ಶಿವನ ಶರೀರವನ್ನು ಧ್ಯಾನಿಸಿದಳು.

೩೫-೩೬. ತೀರ್ಥಜಲದಲ್ಲಿ ನಿತ್ಯವೂ ಸ್ನಾನಮಾಡುತ್ತಾ, ಜಟೆಯನ್ನು ಬಿಟ್ಟು ನಾರುಬಟ್ಟೆಗಳನ್ನುಟ್ಟು, ಮೈಗೆಲ್ಲಾ ಭಸ್ಮವನ್ನು ಲೇಪಿಸಿಕೊಂಡು, ಕೊರಳಿನಲ್ಲಿ ರುದ್ರಾಕ್ಷಿಸರವನ್ನು ಧರಿಸಿ, ಹೆಚ್ಚಿಗೆ ಆಹಾರವನ್ನು ತೆಗೆದುಕೊಳ್ಳದೆ, ಮೌನವನ್ನು ಆಚರಿಸುತ್ತಾ ಬ್ರಾಹ್ಮಣನು ಹೇಳಿದ ಪ್ರಕಾರ ಈಶ್ವರನನ್ನು ಧ್ಯಾನಮಾಡುತ್ತ ಅವನನ್ನು ಸಂತೋಷಪಡಿಸಿದಳು.

೩೭. ಎಲೈ ಶೌನಕನೇ, ಈ ರೀತಿಯಾಗಿ ಚಂಚುಲೆಯು ಈಶ್ವರನನ್ನು ಧ್ಯಾನ ಮಾಡುತ್ತ ಆ ಕ್ಷೇತ್ರದಲ್ಲಿಯೇ ಬಹಳ ದಿವಸಗಳನ್ನು ಕಳೆದಳು.

೩೮. ಅವಳ ಆಯುಸ್ಸು ಮುಗಿಯಲು ಭಕ್ತಿ, ಜ್ಞಾನ, ವೈರಾಗ್ಯಯುಕ್ತಳಾದುದರಿಂದ ಅವಳಿಗೆ ಅನಾಯಾಸ ಮರಣವು ಪ್ರಾಪ್ತವಾಯಿತು.

೩೯-೪೦. ಚಂಚುಲೆಯ ಭಕ್ತಿಗೆ ಮೆಚ್ಚಿ ಈಶ್ವರನು ವಿಮಾನವನ್ನು ತನ್ನ ಗಣಗಳೊಡನೆ ಕಳುಹಿಸಿಕೊಟ್ಟನು. ಶಿವದೂತರು ಮನೋಹರವಾದ ಆ ವಿಮಾನವಲ್ಲಿ

ಅಥ ತತ್ರ ಸಮಾರೂಢಾ ಮಹೇಶಾನುಚರೈರ್ವರೈಃ ।
ನೀತಾ ಶಿವಪುರೀಂ ಸದ್ಯೋ ಧ್ವಸ್ತಸರ್ವಮಲಾ ಚ ಸಾ ॥ ೪೦ ॥

ದಿವ್ಯರೂಪಧರಾ ದಿವ್ಯಾ ದಿವ್ಯಾವಯವಶಾಲಿನೀ ।
ಚಂದ್ರಾರ್ಧಶೇಖರಾ ಗೌರೀ ವಿಲಸದ್ದಿವ್ಯಭೂಷಣಾ ॥ ೪೧ ॥

ಗತ್ವಾ ತತ್ರ ಮಹಾದೇವಂ ಸಾ ದದರ್ಶ ತ್ರಿಲೋಚನಂ ।
ವಿಷ್ಣುಬ್ರಹ್ಮಾದಿಭಿರ್ದೇವೈಃ ಸೇವ್ಯಮಾನಂ ಸನಾತನಂ ॥ ೪೨ ॥

ಗಣೇಶಭೃಂಗಿನಂದೀಶವೀರಭದ್ರೇಶ್ವರಾದಿಭಿಃ ।
ಉಪಾಸ್ಯಮಾನಂ ಸದ್ಭಕ್ತ್ಯಾ ಕೋಟಿಸೂರ್ಯಸಮಪ್ರಭಂ ॥ ೪೩ ॥

ನೀಲಗ್ರೀವಂ ಪಂಚವಕ್ತ್ರಂ ತ್ರ್ಯಂಬಕಂ ಚಂದ್ರಶೇಖರಂ ।
ವಾಮಾಂಗೇ ಬಿಭ್ರತಂ ಗೌರೀಂ ವಿದ್ಯುತ್ಪುಂಜಸಮಪ್ರಭಾಂ ॥ ೪೪ ॥

ಕರ್ಪೂರಗೌರಂ ಗೌರೀಶಂ ಸರ್ವಾಲಂಕಾರಧಾರಿಣಂ ।
ಸಿತಭಸ್ಮಲಸದ್ದೇಹಂ ಸಿತವಸ್ತ್ರಂ ಮಹೋಜ್ಜ್ವಲಂ ॥ ೪೫ ॥

---

ನಿಷ್ಕಲ್ಮಷಳಾದ ಆ ಚಂಚುಲೆಯನ್ನು ಕೂರಿಸಿಕೊಂಡು ಕೈಲಾಸಕ್ಕೆ ಕರೆದುಕೊಂಡು ಹೋದರು.

೪೧ ಅಲ್ಲಿಗೆ ಹೋದನಂತರ ದೇವಲೋಕದವರಂತೆ ರೂಪವೂ, ಶರೀರವೂ ಚಂಚುಲೆಗೆ ಬಂದಿತು. ದಿವ್ಯವಾದ ಅಲಂಕಾರಗಳಿಂದ ಚಂಚುಲೆಯು ಶೋಭಿಸಿದಳು.

೪೨-೪೩. ಕೈಲಾಸದಲ್ಲಿ ತ್ರಿಲೋಚನನಾದ ಈಶ್ವರನನ್ನು ವಿಷ್ಣು, ಬ್ರಹ್ಮ, ಇಂದ್ರನೇ ಮೊದಲಾದ ದೇವತೆಗಳು ಸೇವಿಸುತ್ತಿದ್ದರು. ಗಣೇಶ, ಭೃಂಗಿ, ನಂದಿ, ವೀರಭದ್ರ ಮುಂತಾದ ಗಣಗಳು ಕೋಟಿ ಸೂರ್ಯರಂತೆ ಪ್ರಕಾಶಮಾನನಾಗಿರುವ ಶಿವನನ್ನು ಭಕ್ತಿಯಿಂದ ಧ್ಯಾನಮಾಡುತ್ತಿದ್ದರು.

೪೪-೪೫. ಆ ಶಿವನಾದರೋ ವಿಷವನ್ನು ಕುಡಿದುದರಿಂದ ಕಪ್ಪಾದ ಕತ್ತುಳ್ಳವನಾಗಿಯೂ, ಐದು ಮುಖವುಳ್ಳವನಾಗಿಯೂ ಇದ್ದನು ತನ್ನೆಡಭಾಗದಲ್ಲಿ ಮಿಂಚಿನಂತೆ ಪ್ರಕಾಶಿಸುತ್ತಿದ್ದ ಗೌರಿಯನ್ನು ಕೂರಿಸಿಕೊಂಡಿದ್ದನು. ಅವನ ದೇಹವೆಲ್ಲ ವಿಭೂತಿಯನ್ನು ಲೇಪಿಸಿಕೊಂಡಿದ್ದುದರಿಂದ ಬಿಳುಪಾಗಿತ್ತು. ಮತ್ತು ಉತ್ತಮವಾದ ಶುಭ್ರವಸ್ತ್ರವನ್ನುಟ್ಟು ಕುಳಿತಿದ್ದನು.

ದೃಷ್ಟ್ವೈವಂ ಶಂಕರಂ ನಾರೀ ಸಾ ಮುಮೋದಾತಿ ಚಂಚುಲಾ ।
ಸುಸಂಭ್ರಮಾನ್ಮಹಾಪ್ರೀತಾ ಪ್ರಣನಾಮ ಪುನಃ ಪುನಃ ॥ ೪೬ ॥

ಸಾಂಜಲಿಸ್ಸಾ ಮುದಾ ಪ್ರೇಮ್ಣಾ ಸಂತುಷ್ಟಾ ಚ ವಿನೀತಕಾ ।
ಆನಂದಾಶ್ರುಜಲೈರ್ಯುಕ್ತಾ ರೋಮಹರ್ಷಸಮನ್ವಿತಾ ॥ ೪೭ ॥

ಅಥ ಸಾ ವೈ ಕರುಣಯಾ ಪಾರ್ವತ್ಯಾ ಶಂಕರೇಣ ಚ ।
ಸಮಾನೀತೋಪಕಂಠಂ ಹಿ ಸುದೃಷ್ಟ್ಯಾ ಚ ವಿಲೋಕಿತಾ ॥ ೪೮ ॥

ಪಾರ್ವತ್ಯಾ ಸಾ ಕೃತಾ ಪ್ರೀತ್ಯಾ ಸ್ವಸಖೀ ದಿವ್ಯರೂಪಿಣೀ ।
ದಿವ್ಯಸೌಖ್ಯಾನ್ವಿತಾ ತತ್ರ ಚಂಚುಲಾ ಬಿಂದುಗಪ್ರಿಯಾ ॥ ೪೯ ॥

ತಸ್ಮಿನ್ ಲೋಕೇ ಪರಾನಂದಘನಜ್ಯೋತಿಷಿ ಶಾಶ್ವತೇ ।
ಲಬ್ಧ್ವಾ ನಿವಾಸಮಚಲಂ ಲೇಭೇ ಸುಖಮನಾಹತಂ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯೇ
ಚಂಚುಲಾಸದ್ಗತಿವರ್ಣನಂ ನಾಮ
ಚತುರ್ಥೋಽಧ್ಯಾಯಃ.

---

೪೬-೪೭. ಈ ರೀತಿಯಾಗಿರುವ ಶಿವನನ್ನು ನೋಡಿ ಚಂಚುಲೆಯು ಸಂತೋಷ ಗೊಂಡು, ನೇತ್ರಗಳಲ್ಲಿ ಆನಂದಬಾಷ್ಪಗಳು ತುಂಬಿರಲು, ಶರೀರವು ರೋಮಾಂಚ ವಾಗಲು ಅತಿ ನಮ್ರಳಾಗಿ ಸಂಭ್ರಮದಿಂದ ಬಾರಿ ಬಾರಿಗೂ ಈಶ್ವರನನ್ನು ನಮಸ್ಕರಿಸಿದಳು.

೪೮. ಹತ್ತಿರಕ್ಕೆ ಬಂದು ನಮಸ್ಕರಿಸುತ್ತಿರುವ ಚಂಚುಲೆಯನ್ನು ಪಾರ್ವತಿಯೂ, ಈಶ್ವರನೂ ದಯಾಪೂರಿತದೃಷ್ಟಿಯಿಂದ ನೋಡಿದರು.

೪೯. ಅನಂತರ ಪಾರ್ವತಿಯು ಚಂಚುಲೆಯನ್ನು ಪ್ರೀತಿಯಿಂದ ತನ್ನ ಸಖಿಯನ್ನಾಗಿಮಾಡಿಕೊಂಡಳು. ಈ ರೀತಿ ಚಂಚುಲೆಯು ಕೈಲಾಸದಲ್ಲಿ ದಿವ್ಯವಾದ ಸುಖವನ್ನನುಭವಿಸಿದಳು.

೫೦. ಜ್ಯೋತಿರ್ಮಯಿಯುವೂ, ಆನಂದಮಯವೂ, ಶಾಶ್ವತವೂ ಆದ ಆ ಕೈಲಾಸದಲ್ಲಿ ಚಂಚುಲೆಯು ಶಾಶ್ವತವಾದ ಸುಖವನ್ನನುಭವಿಸುತ್ತಾ ಇದ್ದಳು.

ಇಲ್ಲಿಗೆ ಸ್ಕಾಂದಪುರಾಣದ ಶಿವಪುರಾಣ ಮಹಾತ್ಮೆಯಲ್ಲಿ ಚಂಚುಲೆಯ ಸದ್ಗತಿ ವರ್ಣನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

ಶ್ರೀಃ

---

# ॥ ಅಥ ಶ್ರೀ ಶಿವಪುರಾಣಮಾಹಾತ್ಮ್ಯೇ ॥

## ಪಂಚಮೋಽಧ್ಯಾಯಃ

---

॥ ಶೌನಕ ಉವಾಚ ॥

ಸೂತ ಸೂತ ಮಹಾಭಾಗ ಧನ್ಯಸ್ತ್ವಂ ಶಿವಸಕ್ತಧೀಃ ।
ಶ್ರಾವಿತೇಯಂ ಕಥಾಸ್ಮಾಕಮದ್ಭುತಾ ಭಕ್ತಿವರ್ಧಿನೀ ॥ ೧ ॥

ತತ್ರ ಗತ್ವಾ ಕಿಂ ಚಕಾರ ಚಂಚುಲಾ ಪ್ರಾಪ್ತಸದ್ಗತಿಃ ।
ತತ್ತ್ವಂ ವದ ವಿಶೇಷೇಣ ತತ್ಪತೇಶ್ಚ ಮಹಾಮತೇ ॥ ೨ ॥

॥ ಸೂತ ಉವಾಚ ॥

ಸಾ ಕದಾಚಿದುಮಾಂ ದೇವೀಮುಪಗಮ್ಯ ಪ್ರಣಮ್ಯ ಚ ।
ಸುತುಷ್ಟಾವ ಕರೌ ಬಧ್ವಾ ಪರಮಾನಂದಸಂಪ್ಲುತಾ ॥ ೩ ॥

---

## ಐದನೆಯ ಅಧ್ಯಾಯವು.

೧. ಶೌನಕನು ಸೂತಪುರಾಣಿಕನನ್ನು ಪ್ರಶ್ನೆಮಾಡುವನು :— ಎಲೈ ಮಹಾ ಮಹಿಮನಾದ ಸೂತಮುನಿಯೇ, ನಿನ್ನ ಬುದ್ಧಿಯು ಶಿವಧ್ಯಾನದಲ್ಲೇ ಇರುವುದರಿಂದ ನೀನೇ ಧನ್ಯನು. ನೀನು ನನಗೆ ಭಕ್ತಿಯನ್ನು ಹೆಚ್ಚಿಸುವ ಅದ್ಭುತವಾದ ಶಿವಕಥೆಯನ್ನು ಹೇಳಿದೆ.

೨. ಎಲೈ ಬುದ್ಧಿಶಾಲಿಯೇ, ಚಂಚುಲೆಯು ಶಿವಸಾನ್ನಿಧ್ಯವನ್ನು ಹೊಂದಿದಳೆಂದು ಹೇಳಿದೆಯಷ್ಟೆ. ಬಳಿಕ ಅವಳು ಅಲ್ಲಿ ಏನನ್ನು ಮಾಡಿದಳು ? ಅವಳ ಗಂಡನಾದ ಬಿಂದುಗನ ಗತಿ ಏನಾಯಿತು ? ಈ ವಿಷಯವನ್ನೀಗ ಹೇಳು ಎಂದು ಕೇಳಿದನು.

೩. ಸೂತನು ಹೇಳುವನು :—ಒಂದಾನೊಂದು ದಿವಸ ಆ ಚಂಚುಲೆಯು ಪಾರ್ವತಿಯ ಸಮೀಪಕ್ಕೆ ಹೋಗಿ ಅವಳನ್ನು ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ಪರಮಾನಂದಭರಿತಳಾಗಿ ದೇವಿಯನ್ನು ಸ್ತೋತ್ರಮಾಡಿದಳು.

॥ ಚಂಚುಲೋವಾಚ ॥

ಗಿರಿಜೇ ಸ್ಕಂದಮಾತಸ್ತ್ವಂ ಸೇವಿತಾ ಸರ್ವದಾ ನರೈಃ ।
ಸರ್ವಸೌಖ್ಯಪ್ರದೇ ಶಂಭುಪ್ರಿಯೇ ಬ್ರಹ್ಮಸ್ವರೂಪಿಣಿ ॥ ೪ ॥

ವಿಷ್ಣುಬ್ರಹ್ಮಾದಿಭಿಸ್ಸೇವ್ಯಾ ಸಗುಣಾ ನಿರ್ಗುಣಾಪಿ ಚ ।
ತ್ವಮಾದ್ಯಾ ಪ್ರಕೃತಿಸ್ಸೂಕ್ಷ್ಮಾ ಸಚ್ಚಿದಾನಂದರೂಪಿಣೀ ॥ ೫ ॥

ಸೃಷ್ಟಿಸ್ಥಿತಿಲಯಕರೀ ತ್ರಿಗುಣಾ ತ್ರಿಸುರಾಲಯಾ ।
ಬ್ರಹ್ಮವಿಷ್ಣುಮಹೇಶಾನಾಂ ಸುಪ್ರತಿಷ್ಠಾಕರಾ ಪರಾ ॥ ೬ ॥

॥ ಸೂತ ಉವಾಚ ॥

ಇತಿ ಸ್ತುತ್ವಾ ಮಹೇಶೀಂ ತಾಂ ಚಂಚುಲಾ ಪ್ರಾಪ್ತಸದ್ಗತಿಃ ।
ವಿರರಾಮ ನತಸ್ಕಂಧಾ ಪ್ರೇಮಪೂರ್ಣಾಶ್ರುಲೋಚನಾ ॥ ೭ ॥

ತತಸ್ಸಾ ಕರುಣಾವಿಷ್ಟಾ ಪಾರ್ವತೀ ಶಂಕರಪ್ರಿಯಾ ।
ತಾಮುವಾಚ ಮಹಾಪ್ರೀತ್ಯಾ ಚಂಚುಲಾಂ ಭಕ್ತವತ್ಸಲಾ ॥ ೮ ॥

---

೪-೬. ಎಲೌ ಗಿರಿಜೆಯೇ, ನೀನು ಸ್ಕಂದನ ತಾಯಿಯು, ಜನರು ಯಾವಾಗಲೂ ನಿನ್ನನ್ನು ಧ್ಯಾನಮಾಡುವರು. ನೀನು ಜನಗಳಿಗೆ ಸೌಖ್ಯವನ್ನು ಕೊಡುವೆ. ನೀನು ಮಹೇಶ್ವರನಿಗೆ ಪತ್ನಿಯೂ, ಬ್ರಹ್ಮಸ್ವರೂಪಿಣಿಯೂ ಆಗಿರುವೆ. ನಿನ್ನನ್ನು ವಿಷ್ಣು ಬ್ರಹ್ಮಾದಿಗಳು ಸಗುಣಳೆಂದೂ, ನಿರ್ಗುಣಳೆಂದೂ, ತಿಳಿದು ಸೇವೆಮಾಡುವರು. ನೀನು ಪ್ರಪಂಚ ಸೃಷ್ಟಿಗೆ ಕಾರಣಳಾದ ಪ್ರಕೃತಿಯು. ಸೂಕ್ಷ್ಮರೂಪಳೂ, ಚಿತ್ಸ್ವರೂಪಳೂ ಆಗಿರುವೆ. ಲೋಕದ ಉತ್ಪತ್ತಿಗೂ, ಸ್ಥಿತಿಗೂ, ನಾಶಕ್ಕೂ ನೀನೇ ಕಾರಣಳು. ಸತ್ವರಜಸ್ತಮೋ ಗುಣಾತ್ಮಕಗಳು. ನಿನ್ನಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಉತ್ಕೃಷ್ಟವಾದ ಪದವಿಯು ದೊರೆತಿರುವುದು.

೭-೮. ಸೂತಮುನಿಯು ಹೇಳುವನು:—ಈ ರೀತಿಯಾಗಿ ಚಂಚುಲೆಯು ಪಾರ್ವತಿಯನ್ನು ಧ್ಯಾನಮಾಡುತ್ತಾ ಭಕ್ತಿಭರದಿಂದ ಆನಂದಬಾಷ್ಪವನ್ನು ಸುರಿಸುತ್ತಾ ಕತ್ತುಬಗ್ಗಿಸಿ ನಿಂತುಕೊಂಡಿರಲು, ಪಾರ್ವತಿಯು ಕರುಣೆಯಿಂದ ಚಂಚುಲೆಯನ್ನು ಕುರಿತು ಪ್ರೀತಿಪೂರ್ವಕವಾಗಿ ಈ ರೀತಿ ಹೇಳಿದಳು.

॥ ಪಾರ್ವತ್ಯುವಾಚ ॥

ಚಂಚುಲೇ ಸಖಿ ಸುಪ್ರೀತಾನಯಾ ಸ್ತುತ್ಯಾಸ್ಮಿ ಸುಂದರಿ ।
ಕಿಂ ಯಾಚಸೇ ವರಂ ಬ್ರೂಹಿ ನಾದೇಯಂ ವಿದ್ಯತೇ ತವ ॥ ೯ ॥

॥ ಸೂತ ಉವಾಚ ॥

ಇತ್ಯುಕ್ತಾ ಸಾ ಗಿರಿಜಯಾ ಚಂಚುಲಾ ಸುಪ್ರಣಮ್ಯ ತಾಂ ।
ಪರ್ಯಪೃಚ್ಛತ ಸುಪ್ರೀತ್ಯಾ ಸಾಂಜಲಿರ್ನತಮಸ್ತಕಾ ॥ ೧೦ ॥

॥ ಚಂಚುಲೋವಾಚ ॥

ಮಮ ಭರ್ತಾಧುನಾ ಕ್ವಾಸ್ತೇ ನೈವ ಜಾನಾಮಿ ತದ್ಗತಿಂ ।
ತೇನ ಯುಕ್ತಾ ಯಥಾಹಂ ವೈ ಭವಾಮಿ ಗಿರಿಜೇಽನಘೇ ॥ ೧೧ ॥

ತಥೈವ ಕುರು ಕಲ್ಯಾಣಿ ಕೃಪಯಾ ದೀನವತ್ಸಲೇ ।
ಮಹಾದೇವಿ ಮಹೇಶಾನಿ ಭರ್ತಾ ಮೇ ವೃಷಲೀಪತಿಃ ॥ ೧೨ ॥

---

೯. ಪಾರ್ವತಿಯು ಹೇಳಿದಳು:—ಎಲೌ ಸಖಿ ಚಂಚುಲೆಯೇ, ನಿನ್ನ ಸ್ತುತಿಗೆ ನಾನು ಮೆಚ್ಚಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ, ವರವನ್ನು ಕೊಡುವೆನು ಎಂದಳು.

೧೦. ಸೂತಮುನಿಯು ಹೇಳುವನು:—ಈ ರೀತಿಯಾಗಿ ಗಿರಿಜೆಯು ಹೇಳಿದ ನಂತರ ಚಂಚುಲೆಯು ಪುನಃ ನಮಸ್ಕರಿಸಿ ಅಂಜಲಿಬದ್ಧಳಾಗಿ, ಕತ್ತನ್ನು ಬಗ್ಗಿಸಿ ಕೊಂಡು ಭಕ್ತಿಯಿಂದ ಕೇಳಿದಳು.

೧೧-೧೨. ಚಂಚುಲೆಯು ಕೇಳುವಳು:— ಪೂಜ್ಯಳಾದ ಎಲೌ ಗಿರಿಜೆಯೇ ನನ್ನ ಪತಿಯು ಈಗ ಎಲ್ಲಿರುವನು? ಅವನ ವಿಷಯವೇ ನನಗೆ ಗೊತ್ತಿಲ್ಲವಲ್ಲ? ಹಿಂದೆ ನಾನು ಅವನೊಡನೆಯೇ ಇರುತ್ತಿದ್ದೆನು. ನನ್ನ ಪತಿಯೊಡನೆ ನಾನು ಸೇರುವಂತೆ ನನಗೆ ಅನುಗ್ರಹಮಾಡು. ನೀನು ದೀನರನ್ನು ರಕ್ಷಿಸುವವಳು ಮಹಾ ದೇವಿಯು, ಈಶ್ವರನ ಪತ್ನಿಯು. ಆದುದರಿಂದ ನನ್ನ ಗಂಡನ ವಿಷಯವನ್ನು ತಿಳಿಸು. ಅವನು ಹಿಂದೆ ವೇಶ್ಯಾಪತಿಯಾಗಿ ಪಾಪಿಷ್ಟನಾಗಿ ಸತ್ತುಹೋದನು. ಈಗ ಅವನ ಸ್ಥಿತಿಯು ಹೇಗಿರುವುದೋ ನನಗೆ ಗೊತ್ತಿಲ್ಲ ಎಂದು ಕೇಳಲು,

ಮತ್ತಃ ಪೂರ್ವಂ ಮೃತಃ ಪಾಪೀ ನ ಜಾನೇ ಕಾಂ ಗತಿಂ ಗತಃ ।

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಶ್ಚಂಚುಲಾಯಾ ಹಿ ಪಾರ್ವತೀ
ಪ್ರತ್ಯುವಾಚ ಸುಸಂಪ್ರೀತ್ಯಾ ಗಿರಿಜಾ ನಯವತ್ಸಲಾ ॥ ೧೩ ॥

॥ ಗಿರಿಜೋವಾಚ ॥

ಸುತೇ ಭರ್ತಾ ಬಿಂದುಗಾಹ್ವೋ ಮಹಾಪಾಪೀ ದುರಾಶಯಃ
ವೇಶ್ಯಾಭೋಗೀ ಮಹಾಮೂಢೋ ಮೃತ್ವಾ ಸ ನರಕಂ ಗತಃ । ॥ ೧೪ ॥

ಭುಕ್ತ್ವಾ ನರಕದುಃಖಾನಿ ವಿವಿಧಾನ್ಯಮಿತಾಃ ಸಮಾಃ
ಪಾಪಶೇಷೇಣ ಪಾಪಾತ್ಮಾ ವಿಂಧ್ಯೇ ಜಾತಃ ಪಿಶಾಚಕಃ । ॥ ೧೫ ॥

ಇದಾನೀಂ ಸ ಪಿಶಾಚೋಽಸ್ತಿ ನಾನಾಕ್ಲೇಶಸಮನ್ವಿತಃ
ತತ್ರೈವ ವಾತಭುಗ್ದುಷ್ಟಸ್ಸರ್ವಕಷ್ಟವಹಸ್ಸದಾ । ॥ ೧೬ ॥

॥ ಸೂತ ಉವಾಚ ॥

ಇತಿ ಗೌರ್ಯಾ ವಚಃ ಶ್ರುತ್ವಾ ಚಂಚುಲಾ ಸಾ ಶುಭವ್ರತಾ ।
ಪತಿದುಃಖೇನ ಮಹತಾ ದುಃಖಿತಾಸೀತ್ತದಾ ಕಿಲ । ॥ ೧೭ ॥

---

೧೩. ಚಂಚುಲೆಯ ಮಾತನ್ನು ಕೇಳಿ ಪಾರ್ವತಿಯು ಸಂತುಷ್ಟಳಾಗಿ ಅವಳನ್ನು ಕುರಿತು,

೧೪. ಗಿರಿಜೆಯು ಹೇಳುವಳು:—ಎಲೌ ಪುತ್ರಿ, ನಿನ್ನ ಗಂಡನಾದ ಬಿಂದುಗನು ಮಹಾಪಾಪಿಯೂ, ದುರಾಶೆಯುಳ್ಳವನೂ ಆಗಿ ವೇಶ್ಯೆಯಲ್ಲಿ ರಮಿಸುತ್ತಾ ಮೂಢನಾಗಿದ್ದು ಮೃತನಾಗಲು ಅವನಿಗೆ ನರಕವು ಪ್ರಾಪ್ತವಾಯಿತು.

೧೫. ಬಹುಕಾಲ ನರಕದಲ್ಲಿ ದುಃಖವನ್ನನುಭವಿಸಿದನಂತರ ಪಾಪಾತ್ಮನಾದ ಅವನಿಗೆ ಕೊನೆಯಲ್ಲಿ ವಿಂಧ್ಯಾರಣ್ಯದಲ್ಲಿ ಪಿಶಾಚಿಯ ಜನ್ಮವು ಬಂದಿತು.

೧೬. ಈಗ ಅವನು ಪಿಶಾಚಿಯಾಗಿ ನಾನಾ ದುಃಖಗಳನ್ನು ಅನುಭವಿಸುತ್ತಾ ವಿಂಧ್ಯಾರಣ್ಯದಲ್ಲಿ ಗಾಳಿಯನ್ನೇ ಆಹಾರಮಾಡಿಕೊಂಡು ಅಲೆಯುತ್ತಿರುವನು.

೧೭-೧೮. ಸೂತನು ಹೇಳುವನು:—ಈ ರೀತಿಯಾಗಿ ಗೌರಿಯು ಹೇಳಿದುದನ್ನು ಕೇಳಿ ಶುಭವ್ರತೆಯಾದ ಚಂಚುಲೆಯು ಪತಿವಿರಹದಿಂದ ತುಂಬಾ ದುಃಖಪಟ್ಟು

ಸಮಾಧಾಯ ತತಶ್ಚಿತ್ತಂ ಸುಪ್ರಣಮ್ಯ ಮಹೇಶ್ವರೀಂ
ಪುನಃ ಪಪ್ರಚ್ಛ ಸಾ ನಾರೀ ಹೃದಯೇನ ವಿದೂಯತಾ । ॥ ೧೮ ॥

॥ ಚಂಚುಲೋವಾಚ ॥

ಮಹೇಶ್ವರಿ ಮಹಾದೇವಿ ಕೃಪಾಂ ಕುರು ಮಮೋಪರಿ ।
ಸಮುದ್ಧರ ಪತಿಂ ಮೇಽದ್ಯ ದುಷ್ಟಕರ್ಮಕರಂ ಖಲಂ ॥ ೧೯ ॥

ಕೇನೋಪಾಯೇನ ಮೇ ಭರ್ತಾ ಪಾಪಾತ್ಮಾ ಸ ಕುಬುದ್ಧಿಮಾನ್ ।
ಸದ್ಗತಿಂ ಪ್ರಾಪ್ನುಯಾದ್ದೇವಿ ತದ್ವದಾಶು ನಮೋಽಸ್ತು ತೇ ॥ ೨೦ ॥

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಃ ಪಾರ್ವತೀ ಭಕ್ತವತ್ಸಲಾ ।
ಪ್ರತ್ಯುವಾಚ ಪ್ರಸನ್ನಾತ್ಮಾ ಚಂಚುಲಾಂ ಸ್ವಸಖೀಂ ಚ ತಾಂ । ॥ ೨೧ ॥

॥ ಪಾರ್ವತ್ಯುವಾಚ ॥

ಶೃಣುಯಾದ್ಯದಿ ತೇ ಭರ್ತಾ ಪುಣ್ಯಾಂ ಶಿವಕಥಾಂ ಪರಾಂ ॥ ೨೨ ॥

---

ಅನಂತರ ಮನಸ್ಸನ್ನು ಸಮಾಧಾನಮಾಡಿಕೊಂಡು ಪಾರ್ವತಿಯನ್ನು ನಮಸ್ಕರಿಸಿ ಪುನಃ ಕೇಳಿದಳು.

೧೯. ಚಂಚುಲೆಯು ಕೇಳುವಳು :—ಮಹಾದೇವಿಯಾದ ಗೌರಿಯೇ, ನನ್ನಲ್ಲಿ ದಯೆ ಇಟ್ಟು, ದುಷ್ಕೃತ್ಯವನ್ನು ಮಾಡಿ ನೀಚನಾದ ನನ್ನ ಪತಿಯನ್ನು ಉದ್ಧಾರಮಾಡು.

೨೦. ಕೆಟ್ಟ ಬುದ್ಧಿಯಿಂದ ಪಾಪಿಯಾದ ನನ್ನ ಪತಿಯು ಯಾವ ಉಪಾಯದಿಂದ ಸದ್ಗತಿಯನ್ನು ಹೊಂದುವನು ? ಅದನ್ನು ಜಾಗ್ರತೆ ತಿಳಿಸು. ಇಗೋ ನಿನಗೆ ನಮಸ್ಕಾರಮಾಡುವೆನು ಎಂದು ಪ್ರಾರ್ಥಿಸಿದಳು.

೨೧. ಸೂತನು ಹೇಳುವನು :—ಚಂಚಲೆಯ ಮಾತನ್ನು ಕೇಳಿ ಭಕ್ತವತ್ಸಲೆಯಾದ ಪಾರ್ವತಿಯು ಸಖಿಯಾದ ಚಂಚುಲೆಗೆ ಪ್ರಸನ್ನಳಾಗಿ,

೨೨. ಪಾರ್ವತಿಯು ಹೇಳುವಳು :—ನಿನ್ನ ಪತಿಯು ಪವಿತ್ರವಾದ ಶಿವಕಥೆಯನ್ನು ಕೇಳಿದರೆ ದುರ್ಗತಿ ನಾಶವಾಗಿ ಸದ್ಗತಿಯನ್ನು ಹೊಂದುವನು ಎನ್ನಲು,

ನಿಸ್ತ್ರೀಯರ್ಯ ದುರ್ಗತಿಂ ಸರ್ವಾಂ ಸದ್ಗತಿಂ ಪ್ರಾಪ್ನುಯಾದಿತಿ ॥ ೨೨ ॥
ಇತಿ ಗೌರ್ಯಾ ವಚಃ ಶ್ರುತ್ವಾಮೃತಾಕ್ಷರಮಥಾದರಾತ್ ।
ಕೃತಾಂಜಲಿರ್ನತಸ್ಕಂಧಾ ಪ್ರಣನಾಮ ಪುನಃ ಪುನಃ ॥ ೨೩ ॥

ತತ್ಕಥಾಶ್ರವಣಂ ಭರ್ತುಸ್ಸರ್ವಪಾಪವಿಶುದ್ಧಯೇ ।
ಸದ್ಗತಿಪ್ರಾಪ್ತಯೇ ಚೈವ ಪ್ರಾರ್ಥಯಾಮಾಸ ತಾಂ ತದಾ ॥ ೨೪ ॥

॥ ಸೂತ ಉವಾಚ ॥

ತಯಾ ಮುಹುರ್ಮುಹುರ್ನಾರ್ಯಾ ಪ್ರಾರ್ಥ್ಯಮಾನಾ ಶಿವಪ್ರಿಯಾ ।
ಗೌರೀ ಕೃಪಾನ್ವಿತಾಸೀತ್ಸಾ ಮಹೇಶೀ ಭಕ್ತವತ್ಸಲಾ ॥ ೨೫ ॥

ಅಥ ತುಂಬುರುಮಾಹೂಯ ಶಿವಸತ್ಕೀರ್ತಿಗಾಯಕಂ ।
ಪ್ರೀತ್ಯಾ ಗಂಧರ್ವರಾಜಂ ಹಿ ಗಿರಿಕನ್ಯೇದಮಬ್ರವೀತ್ ॥ ೨೬ ॥

॥ ಗಿರಿಜೋವಾಚ ॥

ಹೇ ತುಂಬುರೋ ಶಿವಪ್ರೀತ ಮಮ ಮಾನಸಕಾರಕ ।

---

೨೩-೨೪. ಗೌರಿಯು ಹೇಳಿದ ಅಮೃತಕ್ಕೆ ಸಮಾನವಾದ ಮಾತನ್ನು ಕೇಳಿ ಆದರದಿಂದ ಕೈಮುಗಿದುಕೊಂಡು ಪುನಃ ಪುನಃ ಗೌರಿಯನ್ನು ನಮಸ್ಕರಿಸಿ, ತನ್ನ ಪತಿಯ ಪಾಪಗಳೆಲ್ಲವೂ ನಾಶವಾಗಿ ಸದ್ಗತಿಯುಂಟಾಗುವುದಕ್ಕೋಸ್ಕರ ತನ್ನ ಗಂಡನಿಗೆ ಶಿವಕಥಾಶ್ರವಣವನ್ನು ಮಾಡಿಸಬೇಕೆಂದು ಪಾರ್ವತಿಯನ್ನು ಕೇಳಿಕೊಂಡಳು.

೨೫-೨೬. ಸೂತಮುನಿಯು ಹೇಳುವನು :—ಚಂಚುಲೆಯು ಈ ರೀತಿಯಾಗಿ ಬಾರಿಬಾರಿಗೂ ಪಾರ್ವತಿಯನ್ನು ಪ್ರಾರ್ಥಿಸುತ್ತಿರಲು ಭಕ್ತವತ್ಸಲಳಾದ ಪಾರ್ವತಿಯು ಚಂಚುಲೆಯ ಮೇಲೆ ದಯೆಯಿಂದ ಶಿವನ ಕೀರ್ತನೆಯನ್ನು ಗಾನಮಾಡುತ್ತಾ ಸಂಚರಿಸುತ್ತಿರುವ ಗಂಧರ್ವರಾಜನಾದ ತುಂಬುರುವನ್ನು ಕರೆದು ಅವನಿಗೆ ಈರೀತಿ ಹೇಳಿದಳು.

೨೭. ಪಾರ್ವತಿಯು ಹೇಳಿದಳು :—ಎಲೈ ತುಂಬುರುವೇ, ನೀನು ನನ್ನ ಮಾನಸಪುತ್ರನು. ನೀನು ಯಾವಾಗಲೂ ಶಿವನಿಗೆ ಸಂತೋಷವನ್ನುಂಟುಮಾಡುವವನು. ಈಗ ನೀನು ಜಾಗ್ರತೆಯಾಗಿ ಈ ಚಂಚುಲೆಯೊಡನೆ ವಿಂಧ್ಯಪರ್ವತಕ್ಕೆ

ಸಹಾನಯಾ ವಿಂಧ್ಯಶೈಲಂ ಭದ್ರಂ ತೇ ಗಚ್ಛ ಸತ್ವರಂ ॥ ೨೭ ॥

ಆಸ್ತೇ ತತ್ರ ಮಹಾಘೋರಃ ಪಿಶಾಚೋಽತಿಭಯಂಕರಃ ।
ತದ್ವೃತ್ತಂ ಶೃಣು ಸುಪ್ರೀತ್ಯಾದಿತಸ್ಸರ್ವಂ ಬ್ರವೀಮಿ ತೇ ॥ ೨೮ ॥

ಪುರಾಭವೇ ಪಿಶಾಚಸ್ಸ ಬಿಂದುಗಾಹ್ವೋಽಭವದ್ದ್ವಿಜಃ ।
ಅಸ್ಯಾ ನಾರ್ಯಾಃ ಪತಿರ್ದುಷ್ಟೋ ಮತ್ಸಖ್ಯಾ ವೃಷಲೀಪತಿಃ ॥ ೨೯ ॥

ಸ್ನಾನಸಂಧ್ಯಾಕ್ರಿಯಾಹೀನೋಽಶೌಚಃ ಕ್ರೋಧವಿಮೂಢಧೀಃ ।
ಭರ್ತ್ಸಕೋ ಸಜ್ಜನದ್ವೇಷೀ ದುಷ್ಪರಿಗ್ರಹಕಾರಕಃ ॥ ೩೦ ॥

ಹಿಂಸಕಃ ಶಸ್ತ್ರಧಾರೀ ಚ ಸವ್ಯಹಸ್ತೇನ ಭೋಜನೀ ।
ದೀನಾನಾಂ ಪೀಡಕಃ ಕ್ರೂರಃ ಪರವೇಶ್ಮಪ್ರದೀಪಕಃ ॥ ೩೧ ॥

ಚಂಡಾಲಾಭಿರತೋ ನಿತ್ಯಂ ವೇಶ್ಯಾಭೋಗೀ ಮಹಾಖಲಃ ।

---

ಹೊರಡು ಕಾಲವಿಳಂಬ ಮಾಡಬೇಡ ಬೇಗ ಹೊರಡು. ನಿನಗೆ ಒಳ್ಳೆಯದಾಗಲಿ.

೨೮. ಆ ವಿಂಧ್ಯಾರಣ್ಯದಲ್ಲಿ ಭಯಂಕರವಾದ ಒಂದು ಪಿಶಾಚವಿರುವುದು. ಅದರ ವೃತ್ತಾಂತವನ್ನು ಮೊದಲಿನಿಂದ ಹೇಳುವೆನು ಪ್ರೀತಿಯಿಂದ ಕೇಳು.

೨೯. ನನ್ನ ಸಖಿಯಾದ ಚಂಚುಲೆಯ ಗಂಡನಾದ ಬಿಂದುಗನೇ ಈಗ ಅಲ್ಲಿ ಪಿಶಾಚಿಯಾಗಿರುವನು.

೩೦-೩೧. ಅವನು ಹಿಂದಿನ ಜನ್ಮದಲ್ಲಿ ಸ್ನಾನಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಬಿಟ್ಟು ಕೋಪದಿಂದ ಕೂಡಿ ಕೆಟ್ಟ ಬುದ್ಧಿಯುಳ್ಳವನಾಗಿದ್ದನು. ಅನ್ಯರನ್ನು ನಿಂದಿಸುತ್ತಿದ್ದನು. ಸತ್ಪುರುಷರನ್ನು ದ್ವೇಷಿಸುತ್ತಿದ್ದನು. ಅವನ ಬುದ್ಧಿಯೆಲ್ಲವೂ ಕೆಟ್ಟ ವಿಷಯವನ್ನು ಗ್ರಹಿಸುವುದರಲ್ಲೇ ಆಸಕ್ತವಾಗಿತ್ತು. ಶಸ್ತ್ರವನ್ನು ಹಿಡಿದು ಜನರನ್ನು ಹಿಂಸೆಮಾಡುತ್ತಿದ್ದನು. ಎಡಗೈಯಲ್ಲಿ ಊಟವನ್ನು ಮಾಡುತ್ತಿದ್ದನು. ಬಹಳ ಕ್ರೂರಿಯಾಗಿ ದೀನರನ್ನು ಪೀಡಿಸುತ್ತಿದ್ದನು. ಬೇರೆಯವರ ಮನೆಯಲ್ಲೇ ಇರುತ್ತಾ ಚಂಡಾಲರೊಡನೆ ವ್ಯವಹರಿಸುತ್ತಿದ್ದನು. ವೇಶ್ಯೆಯರಲ್ಲಿ ಆಸಕ್ತನಾಗಿದ್ದನು.

ಸ್ವಪತ್ನೀತ್ಯಾಗಕೃತ್ಪಾಪೀ ದುಷ್ಟಸಂಗರತಸ್ತದಾ ॥ ೩೨ ॥

ತೇನ ವೇಶ್ಯಾಕುಸಂಗೇನ ಸುಕೃತಂ ನಾಶಿತಂ ಮಹತ್ ।
ಚಿತ್ತಲೋಭೇನ ಮಹಿಷೀ ನಿರ್ಭಯಾ ಜಾರಿಣೀ ಕೃತಾ ॥ ೩೩ ॥

ಅನ್ಯೃಶ್ಯೋಽಸ್ಸ ದುರಾಚಾರೀ ಕಾಲೇನ ನಿಧನಂ ಗತಃ ।
ಯಯೌ ಯಮಪುರಂ ಘೋರಂ ಭೋಗಸ್ಥಾನಂ ಹಿ ಪಾಪಿನಾಂ ॥ ೩೪ ॥

ತತ್ರ ಭುಕ್ತ್ವಾ ಸ ದುಷ್ಟಾತ್ಮಾ ನರಕಾನಿ ಬಹೂನಿ ಚ ।
ಇದಾನೀಂ ಸ ಪಿಶಾಚೋಽಸ್ತಿ ವಿಂಧ್ಯೇಽದ್ರೌ ಪಾಪಭುಕ್ ಖಲಃ ೩೫ ॥

ತಸ್ಯಾಗ್ರೇ ಪರಮಾಂ ಪುಣ್ಯಾಂ ಸರ್ವಪಾಪವಿನಾಶಿನೀಂ ।
ದಿವ್ಯಾಂ ಶಿವಪುರಾಣಸ್ಯ ಕಥಾಂ ಕಥಯ ಯತ್ನತಃ ॥ ೩೬ ॥

ದ್ರುತಂ ಶಿವಪುರಾಣಸ್ಯ ಕಥಾಶ್ರವಣತಃ ಪರಾತ್ ।
ಸರ್ವಪಾಪವಿಶುದ್ಧಾತ್ಮಾ ಹಾಸ್ಯತಿ ಪ್ರೇತತಾಂ ಚ ಸಃ ॥ ೩೭ ॥

---

೩೩. ಆ ಬಿಂದುಗನು ದುಷ್ಟರೊಡನೆ ಸಹವಾಸಮಾಡಿ ತನ್ನ ಹೆಂಡತಿಯನ್ನು ಬಿಟ್ಟುಬಿಟ್ಟನು. ಮತ್ತು ವೇಶ್ಯಾಸಕ್ತನಾಗಿ ತನ್ನ ಪುಣ್ಯವನ್ನೆಲ್ಲಾ ಕಳೆದುಕೊಂಡನು.

೩೪. ಗಂಡನು ತನ್ನನ್ನು ಬಿಟ್ಟಿದ್ದರಿಂದ ಅವನ ಹೆಂಡತಿಯು ಚಿತ್ತಚಾಂಚಲ್ಯವುಳ್ಳವಳಾಗಿ ನಿರ್ಭಯದಿಂದ ಜಾರಿಣಿಯಾದಳು. ಬಿಂದುಗನು ತನ್ನ ಮರಣಪರ್ಯಂತವಾಗಿ ದುರಾಚಾರಿಯಾಗಿಯೇ ಇದ್ದು ಪ್ರಾಣವನ್ನು ಬಿಟ್ಟನು.

೩೫. ಪಾಪಿಗಳಿಗೆ ಸರಿಯಾದ ಸ್ಥಾನವಾದ ನರಕಕ್ಕೆ ಹೋಗಿ ಅಲ್ಲಿ ಅನೇಕ ದುಃಖಗಳನ್ನನುಭವಿಸಿ ಈಗ ಪಾಪದ ಫಲವಾಗಿ ಪಿಶಾಚ ಜನ್ಮವನ್ನು ಹೊಂದಿ ವಿಂಧ್ಯ ಪರ್ವತದಲ್ಲಿ ತಿರುಗುತ್ತಿರುವನು.

೩೬. ಆದುದರಿಂದ ನೀನು ಹೋಗಿ ಅವನಿಗೆ ಪರಮಪವಿತ್ರವಾದ, ಎಲ್ಲ ಪಾಪಗಳನ್ನೂ ನಾಶಮಾಡುವ, ಪುಣ್ಯಕರವಾದ ಶಿವಪುರಾಣದ ಕಥೆಯನ್ನು ಪ್ರಯತ್ನಪೂರ್ವಕವಾಗಿ ಹೇಳು.

೩೭-೩೮. ಬಿಂದುಗನು ಶಿವಪುರಾಣವನ್ನು ಕೇಳಿದರೆ ಅವನ ಪಾಪವೆಲ್ಲವೂ ನಾಶವಾಗುವುದು. ಮತ್ತು ಪಿಶಾಚಜನ್ಮವು ಹೋಗುವುದು. ಆದುದರಿಂದ ನೀನು

ಮುಕ್ತಂ ಚ ದುರ್ಗತೇಸ್ತ್ರಂ ವೈ ಬಿಂದುಗಂ ತ್ವಂ ಪಿಶಾಚಕಂ ।
ಮದಾಜ್ಞಯಾ ವಿಮಾನೇನ ಸಮಾನಯ ಶಿವಾಂತಿಕಂ ॥ ೩೮ ॥

॥ ಸೂತ ಉವಾಚ ॥

ಇತ್ಯಾದಿಷ್ಟೋ ಮಹೇಶಾನ್ಯಾ ಗಂಧರ್ವೇಂದ್ರಶ್ಚ ತುಂಬುರುಃ ।
ಮುಮುದೇಽತೀವ ಮನಸಿ ಭಾಗ್ಯಂ ನಿಜಮವರ್ಣಯತ್ ॥ ೩೯ ॥

ಆರುಹ್ಯ ಸುವಿಮಾನಂ ಸ ಸತ್ಯಾ ತತ್ಪ್ರಿಯಯಾ ಸಹ ।
ಯಯೌ ವಿಂಧ್ಯಾಚಲೇ ಸೋऽರಂ ಯತ್ರಾಸ್ತೇ ನಾರದಪ್ರಿಯಃ ॥ ೪೦ ॥

ತತ್ರಾಪಶ್ಯತ್ಪಿಶಾಚಂ ತಂ ಮಹಾಕಾಯಂ ಮಹಾಹನುಂ ।
ಪ್ರಹಸಂತಂ ರುದಂತಂ ಚ ವಲ್ಗಂತಂ ವಿಕಟಾಕೃತಿಂ ॥ ೪೧ ॥

ಬಲಾಜ್ಜಗ್ರಾಹ ತಂ ಪಾಶೈಃ ಪಿಶಾಚಂ ಚಾತಿಭೀಕರಂ ।
ತುಂಬುರುಶ್ಶಿವಸತ್ಕೀರ್ತಿಗಾಯಕಶ್ಚ ಮಹಾಬಲೀ ॥ ೪೨ ॥

---

ನನ್ನ ಅಪ್ಪಣೆ ಮೇರೆ ಅಲ್ಲಿಗೆ ಶಿವಕಥಾಶ್ರವಣದಿಂದ ಪಾಪವಿಮುಕ್ತನಾದ ಆ ಬಿಂದುಗ ನನ್ನು ವಿಮಾನದಲ್ಲಿ ಕೂರಿಸಿಕೊಂಡು ಮಹೇಶ್ವರನ ಹತ್ತಿರಕ್ಕೆ ಕರೆದುಕೊಂಡು ಬಾ ಎಂದು ಹೇಳಿದಳು.

೩೯-೪೦. ಸೂತಮುನಿಯು ಹೇಳುವನು:—ಈ ರೀತಿಯಾಗಿ ಪಾರ್ವತಿಯ ಅಪ್ಪಣೆಯನ್ನು ಪಡೆದು ಗಂಧರ್ವರಾಜನಾದ ಆ ತುಂಬುರುವು ಬಹು ಸಂತೋಷಪಟ್ಟು ತನ್ನ ಅದೃಷ್ಟವನ್ನು ಕೊಂಡಾಡುತ್ತಾ ಬಿಂದುಗನ ಹೆಂಡತಿಯಾದ ಚಂಚುಲೆಯೊಡನೆ ವಿಮಾನವನ್ನೇರಿ ಆ ಬಿಂದುಗನು ಇರುವ ವಿಂಧ್ಯಾದ್ರಿಯನ್ನು ಬಹಳ ಜಾಗ್ರತೆಯಾಗಿ ಸೇರಿದನು.

೪೧. ಆ ಸ್ಥಳದಲ್ಲಿ ದೊಡ್ಡದಾದ ದೇಹವೂ, ಉದ್ದವಾದ ದವಡೆಯೂ ಉಳ್ಳ ಒಂದು ಪಿಶಾಚಿಯನ್ನು ನೋಡಿದನು. ಆ ಪಿಶಾಚಿಯು ಘೋರಾಕಾರವಾಗಿ ಕೆಲ ಸಮಯ ನಗುತ್ತಲೂ, ಕೆಲ ಸಮಯ ಅಳುತ್ತಲೂ, ಅತ್ತಿತ್ತ ಓಡಾಡುತ್ತಲೂ ಇತ್ತು.

೪೨-೪೩. ಅನಂತರ ತುಂಬುರುವು ಆ ಪಿಶಾಚಿಯನ್ನು ಹಗ್ಗಗಳಿಂದ ಬಲವಾಗಿ ಕಟ್ಟಿ ಶಿವಕೀರ್ತನೆಯನ್ನು ಮಾಡಲುದ್ಯುಕ್ತನಾಗಿ ಬಹು ಸಂಭ್ರಮದಿಂದ ಶಿವ

ಅಥೋ ಶಿವಪುರಾಣಸ್ಯ ವಾಚನಾರ್ಥಂ ಸ ತುಂಬುರುಃ ।
ನಿಶ್ಚಿತ್ಯ ರಚನಾಂ ಚಕ್ರೇ ಮಹೋತ್ಸವಸಮನ್ವಿತಂ ॥ ೪೩ ॥

ಪಿಶಾಚಂ ತಾರಿತುಂ ದೇವ್ಯಾಃ ಶಾಸನಾತ್ತುಂಬುರುರ್ಗತಃ ।
ವಿಂಧ್ಯಂ ಶಿವಪುರಾಣಂ ಸ ಹ್ಯದ್ರಿಂ ಶ್ರಾವಯಿತುಂ ಪರಂ ॥ ೪೪ ॥

ಇತಿ ಕೋಲಾಹಲೋ ಜಾತಃ ಸರ್ವಲೋಕೇಷು ವೈ ಮಹಾನ್ ।
ತತ್ರ ತಚ್ಛ್ರವಣಾರ್ಥಾಯ ಯಯುರ್ದೇವರ್ಷಯೋ ದ್ರುತಂ ॥ ೪೫ ॥

ಸಮಾಜಸ್ತತ್ರ ಪರಮೋಽದ್ಭುತಶ್ಚಾಸೀಚ್ಛುಭಾವಹಃ ।
ತೇಷಾಂ ಶಿವಪುರಾಣಸ್ಯಾಗತಾನಾಂ ಶ್ರೋತುಮಾದರಾತ್ ॥ ೪೬ ॥

ಪಿಶಾಚಮಥ ತಂ ಪಾಶೈರ್ಬದ್ಧ್ವಾ ಸಮುಪವೇಶ್ಯ ಚ ।
ತುಂಬುರುರ್ವಲ್ಲಕೀಹಸ್ತೋ ಜಗೌ ಗೌರೀಪತೇಃ ಕಥಾಂ ॥ ೪೭ ॥

ಆರಭ್ಯ ಸಂಹಿತಾಮಾದ್ಯಾಂ ಸಪ್ತಮೀಸಂಹಿತಾವಧಿ ।
ಸ್ಪಷ್ಟಂ ಶಿವಪುರಾಣಂ ಹಿ ಸಮಾಹಾತ್ಮ್ಯಂ ಸಮಾವದತ್ ॥ ೪೮ ॥

---

ಪುರಾಣವನ್ನು ಹೇಳಬೇಕೆಂದು ನಿಶ್ಚಯಿಸಿ ಅದಕ್ಕೆ ಬೇಕಾದ ಉತ್ಸವಾದಿಗಳನ್ನು ಮಾಡಿದನು.

೪೪-೪೫. ಪಾರ್ವತಿಯ ಅಪ್ಪಣೆಯಂತೆ ಪಿಶಾಚಿಯನ್ನು ಉದ್ಧಾರಮಾಡಲು ತುಂಬುರುವು ವಿಂಧ್ಯಪರ್ವತಕ್ಕೆ ಹೋಗಿರುವನು. ಮತ್ತು ಅಲ್ಲಿ ಪುರಾಣವನ್ನು ಹೇಳುವನು. ಎಂಬುದಾಗಿ ಎಲ್ಲೆಲ್ಲೂ ಕೋಲಾಹಲವೆದ್ದಿತು. ಆ ಶಿವಪುರಾಣವನ್ನು ಕೇಳಲು ದೇವತೆಗಳೂ, ಋಷಿಗಳೂ ಎಲ್ಲರೂ ಒಟ್ಟಾಗಿ ಅಲ್ಲಿಗೆ ಬಂದು ಸೇರಿದರು.

೪೬. ತುಂಬುರುವು ಹೇಳುವ ಮಂಗಳಕರವಾದ ಶಿವಪುರಾಣವನ್ನು ಆದರಪೂರ್ವಕವಾಗಿ ಕೇಳಲು ಆ ದೇವಋಷಿಗಳ ಒಂದು ದೊಡ್ಡ ಗುಂಪೇ ಅಲ್ಲಿ ಸೇರಿತು.

೪೭. ಬಳಿಕ ಆ ಪಿಶಾಚಿಯನ್ನು ಕಟ್ಟಿ ತನ್ನ ಮುಂದೆ ಕುಳ್ಳಿರಿಸಿಕೊಂಡು ಆ ತುಂಬುರುವು ವೀಣೆಯನ್ನು ನುಡಿಸುತ್ತಾ ಶಿವನ ಕಥೆಯನ್ನು ಹಾಡಿದನು.

೪೮. ಮೊದಲನೆಯ ಸಂಹಿತೆಯಿಂದ ಹಿಡಿದು ಏಳು ಸಂಹಿತೆಯವರೆಗೆ ಪೂರ್ತಿಯಾಗಿ ಶಿವಪುರಾಣವನ್ನು ಪುರಾಣಮಾಹಾತ್ಮ್ಯೆಯೊಡನೆ ಹಾಡಿದನು.

ಶ್ರುತ್ವಾ ಶಿವಪುರಾಣಂ ತಂ ಸಪ್ತಸಂಹಿತಮಾದರಾತ್ ।
ಬಭೂವುಃ ಸುಕೃತಾರ್ಥಾಸ್ತೇ ಸರ್ವೇ ಶ್ರೋತಾರ ಏವ ಹಿ ॥ ೪೯ ॥

ಸ ಪಿಶಾಚೋ ಮಹಾಪುಣ್ಯಂ ಶ್ರುತ್ವಾ ಶಿವಪುರಾಣಕಂ ।
ವಿಧೂಯ ಕಲುಷಂ ಸರ್ವಂ ಜಹೌ ಪೈಶಾಚಿಕಂ ವಪುಃ ॥ ೫೦ ॥

ದಿವ್ಯರೂಪೋ ಬಭೂವಾಶು ಗೌರವರ್ಣಃ ಸಿತಾಂಶುಕಃ ।
ಸರ್ವಾಲಂಕಾರದೀಪ್ತಾಂಗಸ್ತ್ರಿನೇತ್ರಶ್ಚಂದ್ರಶೇಖರಃ ॥ ೫೧ ॥

ದಿವ್ಯಂ ದಿವ್ಯವಪುರ್ಭೂತ್ವಾ ತಯಾ ಸ ನಿಜಕಾಂತಯಾ ।
ಜಗೌ ಸ್ವಯಮಪಿ ಶ್ರೀಮಾಂಶ್ಚರಿತಂ ಪಾರ್ವತೀಪತೇಃ ॥ ೫೨ ॥

ತದ್ವಧೂಮಿತಿ ಸಂದೃಷ್ಟ್ವಾ ಸರ್ವೇ ದೇವರ್ಷಯಶ್ಚ ತೇ ।
ಬಭೂವುರ್ವಿಸ್ಮಿತಾಶ್ಚಿತ್ತೇ ಪರಮಾನಂದಸಂಯುತಾಃ ॥ ೫೩ ॥

---

೪೯-೫೦. ಏಳು ಸಂಹಿತೆ ಶಿವಪುರಾಣವನ್ನು ಕೇಳಿ, ಕೇಳುವುದಕ್ಕೆ ಬಂದಿದ್ದ ದೇವಋಷಿಗಳೆಲ್ಲರೂ ಕೃತಾರ್ಥರಾದರು. ಆ ಪಿಶಾಚನಾದ ಬಿಂದುಗನೂ ಅದನ್ನು ಕೇಳಿ ಅವನ ಪಾಪವೆಲ್ಲಾ ನಾಶವಾಗಲು, ಪಿಶಾಚಜನ್ಮವು ಹೋಗಿ ಶುದ್ಧನಾದನು.

೫೧. ಆ ಕ್ಷಣವೇ ಅವನ ರೂಪು ಬದಲಾಯಿಸಿತು. ಅವನ ಶರೀರವು ಬಿಳುಪಾಯಿತು. ಅವನು ಬಿಳುಪಾದ ಬಟ್ಟೆಯನ್ನುಟ್ಟು, ಸರ್ವಾಲಂಕಾರಭೂಷಿತನಾದನು. ಶಿವನಂತೆ ಅವನಿಗೆ ಮೂರು ಕಣ್ಣು ಬಂದಿತು. ತಲೆಯ ಮೇಲೆ ಚಂದ್ರನನ್ನು ಧರಿಸಿದನು.

೫೨. ಈ ರೀತಿಯಾಗಿ ದಿವ್ಯರೂಪವನ್ನೂ, ದಿವ್ಯಶರೀರವನ್ನೂ ಧರಿಸಿ ಬಿಂದುಗನು ತನ್ನಪತ್ನಿಯಾದ ಚಂಚುಲೆಯೊಡನೆ ಮಹೇಶ್ವರನ ಚರಿತ್ರೆಯನ್ನು ತಾನೂ ಗಾನಮಾಡಿದನು.

೫೩. ದೇವರ್ಷಿಗಳೆಲ್ಲರೂ ಚಂಚುಲೆಯನ್ನು ಬಿಂದುಗನ ಹೆಂಡತಿ ಎಂದು ತಿಳಿದು ವಿಸ್ಮಿತಚಿತ್ತರಾಗಿ ಆನಂದಪಟ್ಟರು.

ಸುಕೃತಾರ್ಥಾ ಮಹೇಶಸ್ಯ ಶ್ರುತ್ವಾ ಚರಿತಮುದ್ಭುತಂ ।
ಸ್ವಂ ಸ್ವಂ ಧಾಮ ಯಯುಃ ಪ್ರೀತ್ಯಾ ಶಂಸಂತಃ ಶಾಂಕರಂ ಯಶಃ ॥ ೫೪ ॥

ಬಿಂದುಗಸ್ಸೋಽಪಿ ದಿವ್ಯಾತ್ಮಾ ಸುವಿಮಾನಸ್ಥಿತಸ್ಸುಖೀ ।
ಸ್ವಕಾಂತಾಪಾರ್ಶ್ವಗಃ ಶ್ರೀಮಾನ್ ಶುಶುಭೇಽತೀವ ಖಸ್ಥಿತಃ ॥ ೫೫ ॥

ಅಥ ಗಾಯನ್ಮಹೇಶಸ್ಯ ಸುಗುಣಾನ್ಸುಮನೋಹರಾನ್ ।
ಸ ತುಂಬುರುರ್ಜಗಾಮಾಶು ಸಕಾಂತಶ್ಶಂಕರಂ ಪದಂ ॥ ೫೬ ॥

ಸುಸತ್ಕೃತೋ ಮಹೇಶೇನ ಪಾರ್ವತ್ಯಾ ಚ ಸಬಿಂದುಗಃ ।
ಸ್ವಗಣಶ್ಚ ಕೃತಃ ಪ್ರೀತ್ಯಾ ಸಾಽಭವದ್ಗಿರಿಜಾಸಖೀ ॥ ೫೭ ॥

ತಸ್ಮಿನ್ ಲೋಕೇ ಪರಾನಂದೇ ಘನಜ್ಯೋತಿಷಿ ಶಾಶ್ವತೇ ।
ಲಬ್ಧ್ವಾ ನಿವಾಸಮಚಲಂ ಪ್ರಭೂತೇ ಪರಮಂ ಸುಖಂ ॥ ೫೮ ॥

---

೫೪. ಮಹೇಶ್ವರನ ಚರಿತ್ರೆಯನ್ನು ಕೇಳಿ ಕೃತಾರ್ಥರಾದ ಆ ದೇವಋಷಿಗಳೆಲ್ಲರೂ ಪ್ರೀತಿಯಿಂದ ಶಂಕರನನ್ನು ಹೊಗಳುತ್ತಾ ಅವನ ಕೀರ್ತಿಯನ್ನು ಕೊಂಡಾಡುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೫೫. ಆ ಬಿಂದುಗನೂ ದಿವ್ಯವಾದ ರೂಪಿನಿಂದ ವಿಮಾನದಲ್ಲಿ ತನ್ನ ಪತ್ನಿಯಾದ ಚಂಚುಲೆಯ ಪಕ್ಕದಲ್ಲಿ ಕುಳಿತು ಬಹಳ ಆನಂದಪಟ್ಟನು.

೫೬. ಅನಂತರ ಮಹೇಶ್ವರನ ಮನೋಹರವಾದ ಗುಣಗಳ ಕೀರ್ತನೆಯನ್ನು ಗಾನಮಾಡುತ್ತಾ ತುಂಬುರುವು ಈಶ್ವರನ ಸಮೀಪಕ್ಕೆ ಹೋಗಲು,

೫೭. ಅಲ್ಲಿ ಈಶ್ವರನೂ ಪಾರ್ವತಿಯೂ ಬಿಂದುಗನನ್ನು ಕರುಣಾಪೂರಿತ ದೃಷ್ಟಿಯಿಂದ ನೋಡಿ ಅನುಗ್ರಹಿಸಿದರು. ದೇವಗಣಗಳೂ ಅನುಗೃಹೀತರಾದರು. ಚಂಚುಲೆಯು ಪಾರ್ವತಿಗೆ ಪ್ರಿಯಸಖಿಯಾದಳು.

೫೮. ಆನಂದಮಯವೂ ಶಾಶ್ವತವೂ ಆದ ಆ ಕೈಲಾಸದಲ್ಲಿ ಬಿಂದುಗನು ನಿಶ್ಚಲವಾದ ಸ್ಥಿತಿಯನ್ನು ಪಡೆದು ಪರಮಸುಖವನ್ನು ಹೊಂದಿದನು.

ಇತ್ಯೇತತ್ಕಥಿತಂ ಪುಣ್ಯಮಿತಿಹಾಸಮಘಾಪಹಂ ।
ಶಿವಾಶಿವಪರಾನಂದಂ ನಿರ್ಮಲಂ ಭಕ್ತಿವರ್ಧನಂ ॥ ೫೯ ॥

ಯ ಇದಂ ಶೃಣುಯಾದ್ಭಕ್ತ್ಯಾ ಕೀರ್ತಯೇದ್ವಾ ಸಮಾಹಿತಃ ।
ಸ ಭುಕ್ತ್ವಾ ವಿಪುಲಾನ್ಭೋಗಾನಂತೇ ಮುಕ್ತಿಮವಾಪ್ನುಯಾತ್ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯೇ
ಬಿಂದುಗಸದ್ಗತಿವರ್ಣನಂ ನಾಮ
ಪಂಚಮೋಽಧ್ಯಾಯಃ.

---

೫೯. ಈ ರೀತಿಯಾಗಿ ಪುಣ್ಯಕರವೂ, ಪಾಪವನ್ನು ನಾಶಮಾಡುವುದೂ ಆದ ಈ ಪುರಾಣ ಕಥೆಯನ್ನು ಹೇಳಿಯಾಯಿತು. ಇದು ಈಶ್ವರನಿಗೂ ಪಾರ್ವತಿಗೂ ಆನಂದವನ್ನುಂಟುಮಾಡುವುದು. ಮತ್ತು ನಿಷ್ಕಲ್ಮಷವಾದ ಭಕ್ತಿಯನ್ನು ಹೆಚ್ಚಿಸುವುದು.

೬೦. ಯಾರು ಈ ಪುರಾಣವನ್ನು ಭಕ್ತಿಯಿಂದ ಕೇಳುವರೋ, ಒಂದೇ ಮನಸ್ಸುಳ್ಳವರಾಗಿ ಯಾವಾಗಲೂ ಗಾನಮಾಡುವರೋ ಅವರು ಈ ಲೋಕದಲ್ಲಿ ಅನೇಕ ಭೋಗಗಳನ್ನು ಭವಿಸಿ ಕೊನೆಯಲ್ಲಿ ಮುಕ್ತಿಯನ್ನೈದುವರು.

ಇಲ್ಲಿಗೆ ಶ್ರೀ ಸ್ಕಾಂದಪುರಾಣದ ಶಿವಪುರಾಣ ಮಾಹಾತ್ಮ್ಯೆಯಲ್ಲಿ ಬಿಂದುಗನ ಸದ್ಗತಿ
ವರ್ಣನೆಯೆಂಬ ಐದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

## ॥ ಅಥ ಶ್ರೀ ಶಿ ವ ಪು ರಾ ಣ ಮಾ ಹಾ ತ್ಮ್ಯೇ ॥

## ಷಷ್ಠೋಽಧ್ಯಾಯಃ

---

॥ ಶೌನಕಉವಾಚ ॥

ಸೂತ ಸೂತ ಮಹಾಪ್ರಾಜ್ಞ ವ್ಯಾಸಶಿಷ್ಯ ನಮೋಽಸ್ತು ತೇ ।
ಧನ್ಯಸ್ತ್ವಂ ಶೈವವರ್ಯೋಽಸಿ ವರ್ಣನೀಯಮಹದ್ಗುಣಃ ॥ ೧ ॥

ಶ್ರೀಮಚ್ಛಿವಪುರಾಣಸ್ಯ ಶ್ರವಣಸ್ಯ ವಿಧಿಂ ವದ ।
ಯೇನ ಸರ್ವಂ ಲಭೇಚ್ಛ್ರೋತಾ ಸಂಪೂರ್ಣಂ ಫಲಮುತ್ತಮಂ ॥ ೨ ॥

॥ ಸೂತ ಉವಾಚ ॥

ಅಥ ತೇ ಸಂಪ್ರವಕ್ಷ್ಯಾಮಿ ಸಂಪೂರ್ಣಫಲಹೇತವೇ ।
ವಿಧಿಂ ಶಿವಪುರಾಣಸ್ಯ ಶೌನಕ ಶ್ರವಣೇ ಮುನೇ ॥ ೩ ॥

---

### ಆರನೆಯ ಅಧ್ಯಾಯವು.

೧-೨. ಶೌನಕನು ಸೂತಪುರಾಣೀಕನನ್ನು ಪ್ರಶ್ನೆಮಾಡುವನು :—ಎಲೈ ಸೂತಮುನಿಯೇ, ನೀನು ಮಹಾಪ್ರಾಜ್ಞನು, ಶೈವ ಶ್ರೇಷ್ಠನು. ವ್ಯಾಸ ಮಹರ್ಷಿಯ ಮುಖ್ಯ ಶಿಷ್ಯನು. ನಿನ್ನ ಗುಣಗಳನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ. ನೀನೇ ಧನ್ಯನು, ನಿನಗೆ ನಮಸ್ಕಾರವು. ಪ್ರಕೃತಸಂದರ್ಭದಲ್ಲಿ ಶಿವಪುರಾಣವನ್ನು ಕೇಳುವ ವಿಧಾನವಾವುದು? ಯಾವ ರೀತಿ ಕೇಳಿದರೆ ಉತ್ತಮ ಫಲ ಪ್ರಾಪ್ತಿಯಾಗುವುದು? ಅಂತಹ ಶ್ರವಣ ವಿಧಿಯನ್ನು ನನಗೆ ಹೇಳು ಎಂದು ಕೇಳಿದನು.

೩. ಸೂತನು ಹೇಳುವನು :—ಎಲೈ ಶೌನಕಮುನಿಯೇ, ಯಾವ ರೀತಿ ಕೇಳುವುದರಿಂದ ಸಂಪೂರ್ಣ ಫಲವು ಬರುತ್ತದೆಯೋ ಅಂತಹ ಪುರಾಣಶ್ರವಣವಿಧಿಯನ್ನು ಹೇಳುವೆನು, ಕೇಳು.

ದೈವಜ್ಞಂ ಚ ಸಮಾಹೂಯ ಸಂತೋಷ್ಯ ಚ ಜನಾನ್ವಿತಃ ।
ಮುಹೂರ್ತಂ ಶೋಧಯೇಚ್ಛುದ್ಧಂ ನಿರ್ವಿಘ್ನೇನ ಸಮಾಪ್ತಯೇ ॥ ೪ ॥

ವಾರ್ತಾ ಪ್ರೇಷ್ಯಾ ಪ್ರಯತ್ನೇನ ದೇಶೇ ದೇಶೇ ಚ ಸಾ ಶುಭಾ ।
ಭವಿಷ್ಯತಿ ಕಥಾ ಶೈವೀ ಆಗಂತವ್ಯಂ ಶುಭಾರ್ಥಿಭಿಃ ॥ ೫ ॥

ದೂರೇ ಹರಿಕಥಾಃ ಕೇಚಿದ್ದೂರೇ ಶಂಕರಕೀರ್ತನಾಃ ।
ಸ್ತ್ರಿಯಃ ಶೂದ್ರಾದಯೋ ಯೇ ಚ ಬೋಧಸ್ತೇಷಾಂ ಭವೇದ್ಯತಃ ॥ ೬ ॥

ದೇಶೇ ದೇಶೇ ಶಾಂಭವಾ ಯೇ ಕೀರ್ತನಶ್ರವಣೋತ್ಸುಕಾಃ ।
ತೇಷಾಮಾನಯನಂ ಕಾರ್ಯಂ ತತ್ಪ್ರರಾರ್ಥಮಾದರಾತ್ ॥ ೭ ॥

ಭವಿಷ್ಯತಿ ಸಮಾಜೋಽತ್ರ ಸಾಧೂನಾಂ ಪರಮೋತ್ಸವಃ ।
ಪಾರಾಯಣೇ ಪುರಾಣಸ್ಯ ಶೈವಸ್ಯ ಪರಮಾದ್ಭುತಃ ॥ ೮ ॥

---

೪. ಪುರಾಣಶ್ರವಣಮಾಡಬೇಕೆನ್ನುವವರು ಮೊದಲು ಒಬ್ಬ ಜೋಯಿಸನನ್ನು ಕರೆದುಕೊಂಡು ಬಂದು ಇಷ್ಟಜನಗಳೊಡನೆ ಕೂಡಿ, ಸಂತೋಷದಿಂದ ಪುರಾಣಶ್ರವಣವು ನಿರ್ವಿಘ್ನವಾಗಿ ಸಮಾಪ್ತಿಯಾಗುವುದಕ್ಕೋಸ್ಕರ ಒಂದು ಒಳ್ಳೆಯ ಮುಹೂರ್ತವನ್ನಿಡಿಸಬೇಕು.

೫. ಶುಭಪ್ರದವಾದ ಶಿವಕಥೆಯು ನಡೆಯಲಿದೆ. ಕೇಳತಕ್ಕವರೆಲ್ಲರೂ ಬರಬೇಕು ಎಂಬುದಾಗಿ ಊರು ಊರುಗಳಲ್ಲಿಯೂ ವರ್ತಮಾನವನ್ನು ಹರಡಬೇಕು.

೬. ದೂರದಲ್ಲಿರುವ ಗ್ರಾಮಗಳಲ್ಲಿ ಯಾರು ಹರಿಕಥೆಯಲ್ಲಿ ಆಸಕ್ತರಾಗಿರುವರೋ ಮತ್ತು ಯಾರು ಈಶ್ವರನ ನಾಮಕೀರ್ತನೆಯಲ್ಲಿ ಆಸಕ್ತರಾಗಿರುವರೋ ಅಂತಹ ಸ್ತ್ರೀಯರಿಗೂ, ಶೂದ್ರಾದಿಗಳಿಗೂ ಈ ಪುರಾಣಶ್ರವಣವಿಷಯವು ತಿಳಿಯುವಂತೆ ಮಾಡಬೇಕು.

೭. ಗ್ರಾಮ ಗ್ರಾಮಗಳಲ್ಲಿಯೂ ಯಾರು ಶಿವಕೀರ್ತನೆಯನ್ನು ಮಾಡಲು ಮತ್ತು ಅದನ್ನುಕೇಳಲು ಉತ್ಸುಕರಾಗಿರುವರೋ ಅವರನ್ನೆಲ್ಲ ಶಿವಪುರಾಣವನ್ನು ಕೇಳಲು ಆದರದಿಂದ ಕರೆಯಬೇಕು.

೮-೧೦. ಹಾಗೆ ಕರೆಯುವಾಗ "ಶಿವಪುರಾಣವನ್ನು ಕೇಳಲು ಸತ್ಪುರುಷರೆಲ್ಲರೂ ಬಂದು ಸೇರಿರುವರು. ತಾವೆಲ್ಲರೂ ಕೂಡ ಶಿವಪುರಾಣವನ್ನು ಪಾರಾಯಣಮಾಡು

ಶ್ರೀಮಚ್ಛಿವಪುರಾಣಾಖ್ಯರಸಪಾನಾಯ ಚಾದರಾತ್ ।
ಆಯಾಂತ್ವರಂ ಭವಂತಶ್ಚ ಕೃಪಯಾ ಪ್ರೇಮತತ್ಪರಾಃ ॥ ೯ ॥

ನಾವಕಾಶೋ ಯದಿ ಪ್ರೇಮ್ಣಾ ಗಂತವ್ಯಂ ದಿನಮೇಕಕಂ ।
ಸರ್ವಥಾ ಗಮನಂ ಕಾರ್ಯಂ ದುರ್ಲಭಾ ಚ ಕ್ಷಣಸ್ಥಿತಿಃ ॥ ೧೦ ॥

ತೇಷಾಮಾಹ್ವಾನಮೇವಂ ಹಿ ಕಾರ್ಯಂ ಸವಿನಯಂ ಮುದಾ ।
ಆಗತಾನಾಂ ಚ ತೇಷಾಂ ಹಿ ಸರ್ವಥಾ ಕಾರ್ಯ ಆದರಃ ॥ ೧೧ ॥

ಶಿವಾಲಯೇ ಚ ತೀರ್ಥೇ ವಾ ವನೇ ವಾಪಿ ಗೃಹೇಽಥವಾ ।
ಕಾರ್ಯಂ ಶಿವಪುರಾಣಸ್ಯ ಶ್ರವಣಸ್ಥಲಮುತ್ತಮಂ ॥ ೧೨ ॥

ಕಾರ್ಯಂ ಸಂಶೋಧನಂ ಭೂಮೇರ್ಲೇಪನಂ ಧಾತುಮಂಡನಂ ।
ವಿಚಿತ್ರಾ ರಚನಾ ದಿವ್ಯಾ ಮಹೋತ್ಸವಪುರಸ್ಸರಂ ॥ ೧೩ ॥

---

ವುದಕ್ಕಾಗಲೀ, ಅದನ್ನು ಪ್ರೀತಿಯಿಂದ ಕೇಳುವುದಕ್ಕಾಗಲೀ ಆದರಪೂರ್ವಕವಾಗಿ ಜಾಗ್ರತೆ ದಯಮಾಡಿಸಬೇಕು. ನಿಮಗಿನ್ನೂ ಹೊರಡಲು ಅವಕಾಶವಾಗಲಿಲ್ಲವೇ ? ಇನ್ನು ಒಂದೇ ದಿನ ಉಳಿದಿರುವುದು. ಸಮಯವು ಕ್ಷಣಿಕವಾದುದು. ಪುನಃ ಇಂತಹ ಸಮಯ ಸಿಕ್ಕಲಾರದು. ಆದುದರಿಂದ ಜಾಗ್ರತೆಯಾಗಿ ನಡೆಯಿರಿ"

೧೧. ಈ ರೀತಿಯಾಗಿ ಭಕ್ತಜನಗಳನ್ನು ವಿನಯಪೂರ್ವಕವಾಗಿ ಪ್ರೀತಿಯಿಂದ ಆಹ್ವಾನಮಾಡಬೇಕು. ಮತ್ತು ಬಂದ ಜನಗಳನ್ನು ಆದರಿಸಬೇಕು.

೧೨. ಶಿವಪುರಾಣವನ್ನು ಕೇಳಲು ಸರಿಯಾದ ಸ್ಥಳಗಳಾವುವೆಂದರೆ:— ಈಶ್ವರನ ದೇವಸ್ಥಾನ, ಅಥವಾ ಯಾವುದಾದರೂ ತೀರ್ಥಕ್ಷೇತ್ರ ಅದೂ ಇಲ್ಲದಿದ್ದರೆ ಒಂದು ಉಪವನವಾದರೂ ಆಗಬಹುದು. ಚೊಕ್ಕಟವಾದ ಮನೆಯಾದರೂ ಸರಿಯೇ.

೧೩. ಇಂತಹ ಯೋಗ್ಯವಾದ 'ಸ್ಥಳದಲ್ಲಿ ನೆಲವನ್ನು ಸಾರಿಸಿ ಶುದ್ಧಿಮಾಡಿ, ರಂಗವಲ್ಲಿಗಳಿಂದ ಚಿತ್ರವಿಚಿತ್ರವಾಗಿ ಅಲಂಕರಿಸಬೇಕು. ಧ್ವಜತೋರಣಾದಿಗಳಿಂದ ಅಲಂಕರಿಸಿ ಮಹಾವೈಭವಪೂರ್ವಕವಾಗಿ ಉತ್ಸವವನ್ನೇರ್ಪಡಿಸಬೇಕು.

ಗೃಹೋಪಸ್ಕರಮುದ್ಧೃತ್ಯ ನಿಖಿಲಂ ತದಯೋಗ್ಯಕಂ ।
ಏಕಾಂತೇ ಗೃಹಕೋಣೇ ಚಾದೃಶ್ಯೇ ಯತ್ನಾನ್ನಿವೇಶಯೇತ್ ॥ ೧೪ ॥

ಕರ್ತವ್ಯೋ ಮಂಡಪೋತ್ಯುಚ್ಚೈಃ ಕದಲೀಸ್ತಂಭಮಂಡಿತಃ ।
ಫಲಪುಷ್ಪಾದಿಭಿಸ್ಸಮ್ಯಗ್ವಿಷ್ವಗ್ವೈತಾನರಾಜಿತಃ ॥ ೧೫ ॥

ಚತುರ್ದಿಕ್ಷು ಧ್ವಜಾರೋಪಸ್ಸಪತಾಕಃ ಸುಶೋಭನಃ ।
ಸಭಕ್ತಿಸ್ಸರ್ವಥಾ ಕಾರ್ಯಾ ಸರ್ವಾನಂದವಿಧಾಯಿನೀ ॥ ೧೬ ॥

ಸಂಕಲ್ಪ್ಯಮಾಸನಂ ದಿವ್ಯಂ ಶಂಕರಸ್ಯ ಪರಾತ್ಮನಃ ।
ವಕ್ತುಶ್ಚಾಪಿ ತಥಾ ದಿವ್ಯಮಾಸನಂ ಸುಖಸಾಧನಂ ॥ ೧೭ ॥

ಶ್ರೋತೄಣಾಂ ಕಲ್ಪನೀಯಾನಿ ಸುಸ್ಥಲಾನಿ ಯಥಾರ್ಹತಃ ।
ಅನ್ಯೇಷಾಂ ಚ ಸ್ಥಲಾನ್ಯೇವ ಸಾಧಾರಣತಯಾ ಮುನೇ ॥ ೧೮ ॥

---

೧೪. ಮನೆಯಲ್ಲಿ ಪುರಾಣಶ್ರವಣವ್ಯವಸ್ಥೆಯನ್ನು ಮಾಡುವಾಗ ಆ ಸಮಯಕ್ಕೆ ಬೇಡದಿರುವ ಅಲ್ಲಿರುವ ಸಾಮಾನುಗಳನ್ನೆಲ್ಲಾ ತೆಗೆದು ಮನೆಯ ಒಂದು ಕೋಣೆಯಲ್ಲಾಗಲೀ ಅಥವಾ ಎಲ್ಲಾದರೂ ಕಣ್ಣಿಗೆ ಕಾಣದಂತೆ ಇಡಬೇಕು.

೧೫. ಆ ಸ್ಥಳದಲ್ಲಿ ಒಂದು ಮಂಟಪವನ್ನು ರಚಿಸಬೇಕು. ಅದಕ್ಕೆ ಬಾಳೆಯ ಕಂಭವನ್ನು ಕಟ್ಟಬೇಕು. ಹಣ್ಣು ಕಾಯಿಗಳನ್ನು ತೂಗುಹಾಕಬೇಕು. ಹೂಗಳಿಂದ ಅಲಂಕರಿಸಬೇಕು. ಮತ್ತು ಸುತ್ತಲೂ ಮಕರತೋರಣವನ್ನು ಕಟ್ಟಬೇಕು.

೧೬. ಆ ಮಂಟಪದ ನಾಲ್ಕು ದಿಕ್ಕುಗಳಲ್ಲೂ ಶುಭ್ರವಾದ ಧ್ವಜಗಳನ್ನು ಕಟ್ಟಬೇಕು. ಸರ್ವಾನಂದವನ್ನುಂಟುಮಾಡುವ ಆ ಮಂಟಪದಲ್ಲಿ ಎಲ್ಲರೂ ಭಕ್ತಿಯನ್ನಿಡಬೇಕು.

೧೭. ಪರಮಾತ್ಮನಾದ ಈಶ್ವರನನ್ನು ಇಟ್ಟು ಪೂಜಿಸಲು ಆ ಮಂಟಪದಲ್ಲಿ ಒಂದು ದಿವ್ಯವಾದ ಪೀಠವನ್ನು ಇಡಬೇಕು. ಮತ್ತು ಪುರಾಣವನ್ನು ಹೇಳುವವನಿಗೂ ಒಂದು ಸುಖವಾದ ಆಸನವನ್ನು ಕಲ್ಪಿಸಬೇಕು.

೧೮. ಪುರಾಣವನ್ನು ಕೇಳಲು ಬರುವವರಿಗೆ ಯೋಗ್ಯತಾನುಸಾರವಾದ ಆಸನಗಳನ್ನು ಕಲ್ಪಿಸಬೇಕು. ಇನ್ನುಳಿದ ಜನಗಳಿಗೆ ಸಾಧಾರಣವಾದ ನೆಲವೇ ಆಸನವಾಗುವುದು.

ವಿವಾಹೇ ಯಾದೃಶಂ ಚಿತ್ತಂ ತಾದೃಶಂ ಕಾರ್ಯಮೇವ ಹಿ ।
ಅನ್ಯಾ ಚಿಂತಾ ವಿನಿರ್ವಾರ್ಯಾ ಸರ್ವಾ ಶೌನಕ ಲೌಕಿಕೀ ॥ ೧೯ ॥

ಉದುಙ್ಮುಖೋ ಭವೇದ್ವಕ್ತಾ ಶ್ರೋತಾ ಪ್ರಾಗ್ವದನಸ್ತಥಾ ।
ವ್ಯುತ್ಕ್ರಮಃ ಪಾದಯೋರ್ಜ್ಞೇಯೋ ವಿರೋಧೋ ನಾಸ್ತಿ ಕಶ್ಚನ ॥ ೨೦ ॥

ಅಥವಾ ಪೂರ್ವದಿಗ್ಜ್ಞೇಯಾ ಪೂಜ್ಯಪೂಜಕಮಧ್ಯತಃ ।
ಅಥವಾ ಸಂಮುಖೇ ವಕ್ತುಃ ಶ್ರೋತೄಣಾಮಾನನಂ ಸ್ಮೃತಂ ॥ ೨೧ ॥

ವ್ಯಾಸಾಸನಸಮಾರೂಢೋ ಯದಾ ಪೌರಾಣಿಕೋ ದ್ವಿಜಃ ।
ಅಸಮಾಪ್ತೌ ಪ್ರಸಂಗಸ್ಯ ನಮಸ್ಕುರ್ಯಾನ್ನಕಸ್ಯಚಿತ್ ॥ ೨೨ ॥

---

೧೯. ಪುರಾಣಶ್ರವಣ ಕಾಲದಲ್ಲಿ ಇಲ್ಲದ ಚಿಂತೆಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಸರ್ವರೂ ಹರ್ಷಚಿತ್ತರಾಗಿರಬೇಕು. ಮದುವೆ ಮುಂತಾದ ಶುಭಕಾರ್ಯಗಳಲ್ಲಿ ಜನರು ಯಾವ ರೀತಿ ಹರ್ಷವಾಗಿರುವರೋ ಆರೀತಿ ಪುರಾಣಶ್ರವಣ ಕಾಲದಲ್ಲಿ ಸಂಭ್ರಮಯುಕ್ತರಾಗಿರಬೇಕು.

೨೦. ಪುರಾಣವನ್ನು ಹೇಳುವವನು ಉತ್ತರಾಭಿಮುಖವಾಗಿಯೂ, ಕೇಳುವವರು ಪೂರ್ವಾಭಿಮುಖವಾಗಿಯೂ ಕುಳಿತುಕೊಳ್ಳಬೇಕು. ಕಾಲನ್ನು ನೀಡಿಕೊಂಡು ಕುಳಿತುಕೊಳ್ಳಬಾರದು. ಯತ್ನವಿಲ್ಲದಿದ್ದಾಗ ಬೇರೆ ದಿಕ್ಕಿಗೆ ತಿರುಗಿಕೊಂಡು ಕುಳಿತು ಕೇಳಿದರೂ ಬಾಧಕವಿಲ್ಲ.

೨೧. ಅಥವಾ ಪೌರಾಣಿಕರ ಮತ್ತು ಕೇಳುವವರ ಮಧ್ಯಭಾಗವನ್ನೇ ಪೂರ್ವದಿಕ್ಕೆಂದೂ ಅಥವಾ ಪೌರಾಣಿಕನ ಮುಂಭಾಗವೇ ಕೇಳುವವರ ಮುಖವೆಂತಲೂ ಭಾವಿಸಬಹುದು.

೨೨. ಪೌರಾಣಿಕನಾದ ದ್ವಿಜನು ಬಂದು ವ್ಯಾಸಾಸನದಲ್ಲಿ ಕುಳಿತುಕೊಂಡು ಪ್ರಾಸಂಗಿಕ ವಿಷಯವನ್ನು ಮುಗಿಸುವುದಕ್ಕಿಂತ ಮುಂಚೆ ಯಾರೂ ನಮಸ್ಕರಿಸಬಾರದು.

ಬಾಲೋ ಯುವಾಥ ವೃದ್ಧೋ ವಾ ದರಿದ್ರೋ ವಾಪಿ ದುರ್ಬಲಃ ।
ಪುರಾಣಜ್ಞಸ್ಸದಾ ವಂದ್ಯಃ ಪೂಜ್ಯಶ್ಚ ಸುಕೃತಾರ್ಥಿಭಿಃ ॥ ೨೩ ॥

ನೀಚಬುದ್ಧಿಂ ನ ಕುರ್ವೀತ ಪುರಾಣಜ್ಞೇ ಕದಾಚನ ।
ಯಸ್ಯ ವಕ್ತ್ರೋದ್ಗತಾ ವಾಣೀ ಕಾಮಧೇನುಶ್ಶರೀರಿಣಾಂ ॥ ೨೪ ॥

ಗುರುವತ್ಸಂತಿ ಬಹವೋ ಜನ್ಮತೋ ಗುಣತಶ್ಚ ವೈ ।
ಪರೋ ಗುರುಃ ಪುರಾಣಜ್ಞಸ್ತೇಷಾಂ ಮಧ್ಯೇ ವಿಶೇಷತಃ ॥ ೨೫ ॥

ಭವಕೋಟಿಸಹಸ್ರೇಷು ಭೂತ್ವಾ ಭೂತ್ವಾವಸೀದತಾಂ ।
ಯೋ ದದಾತಿ ಪರಾಂ ಮುಕ್ತಿಂ ಕೋಽನ್ಯಸ್ತಸ್ಮಾತ್ಪರೋ ಗುರುಃ ॥ ೨೬ ॥

ಪುರಾಣಜ್ಞಃ ಶುಚಿರ್ದಕ್ಷಃ ಶಾಂತೋ ವಿಜಿತಮತ್ಸರಃ ।
ಸಾಧುಃ ಕಾರುಣ್ಯವಾನ್ವಾಗ್ಮೀ ವದೇತ್ಪುಣ್ಯಕಥಾಮಿಮಾಂ ॥ ೨೭ ॥

---

೨೩. ಪುರಾಣವನ್ನು ಹೇಳುವವನು ಹುಡುಗನಾಗಲಿ, ತರುಣನಾಗಲಿ, ಮುದುಕನಾಗಲಿ, ದರಿದ್ರನಾಗಲಿ, ದುರ್ಬಲನಾಗಿರಲಿ, ಅವನು ಯಾವಾಗಲೂ ಪೂಜ್ಯನೇ ಆಗಿರುವನು. ಅವನ ವಿಷಯದಲ್ಲಿ ಯಾವಾಗಲೂ, ಯಾರೂ ನೀಚಬುದ್ಧಿಯನ್ನಿಡಬಾರದು.

೨೪-೨೫. ಪುರಾಣಜ್ಞನ ಮಾತುಗಳು ಕಾಮಧೇನುವಿನಂತೆ ಜನಗಳಿಗೆ ಇಷ್ಟಾರ್ಥವನ್ನು ಕೊಡುವುವು. ಎಷ್ಟೋ ಜನರು ಜನ್ಮಾರಭ್ಯ ಗುರುಗಳಾಗಿಯೂ, ಇನ್ನೂ ಕೆಲವರು ತಮ್ಮ ಗುಣಗಳಿಂದ ಗುರುಗಳಾಗಿಯೂ ಇರುವರು. ಆದರೆ ಪುರಾಣಜ್ಞನು ಅವರುಗಳಲ್ಲಿ ಅತ್ಯಂತ ಶ್ರೇಷ್ಠನಾದ ಗುರುವು.

೨೬. ಕೋಟಿ ಸಹಸ್ರ ಜನ್ಮಗಳನ್ನೆತ್ತಿ ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿರುವವರಿಗೆ ಯಾವನು ಮುಕ್ತಿಯನ್ನು ಕೊಡುವನೋ ಅವನಿಗಿಂದ ಉತ್ತಮವಾದ ಗುರುವು ಮತ್ತೊಬ್ಬನಿಲ್ಲ. ಅವನೇ ಪುರಾಣಜ್ಞನು.

೨೭. ಪುಣ್ಯ ಕಥೆಯಾದ ಈ ಶಿವಪುರಾಣವನ್ನು ಹೇಳುವವನು ಶುಚಿಯಾಗಿಯೂ, ದಕ್ಷನಾಗಿಯೂ ಇರಬೇಕು. ಅವನಿಗೆ ಯಾರಲ್ಲಿಯೂ ದ್ವೇಷವಿರಬಾರದು. ಶಾಂತನಾಗಿರಬೇಕು. ಸತ್ಪುರುಷನಾಗಿಯೂ, ದಯಾಶಾಲಿಯಾಗಿಯೂ ಇರಬೇಕು. ಆತನು ಸ್ಪಷ್ಟವಾಗಿ ಮಾತನಾಡಲು ಸಮರ್ಥನಾಗಿರಬೇಕು.

ಆಸೂರ್ಯೋದಯಮಾರಭ್ಯ ಸಾರ್ಧತ್ರಿಪ್ರಹರಾಂತಕಂ ।
ಕಥಾ ಶಿವಪುರಾಣಸ್ಯ ವಾಚ್ಯಾ ಸಮ್ಯಕ್ ಸುಧೀಮತಾ ॥ ೨೮ ॥

ಯೇ ಧೂರ್ತಾ ಯೇ ಚ ದುರ್ವೃತ್ತಾ ಯೇ ಚಾನ್ಯೇ ವಿಜಿಗೀಷವಃ ।
ತೇಷಾಂ ಕುಟಿಲವೃತ್ತೀನಾಮಗ್ರೇ ನೈವ ವದೇತ್ಕಥಾಂ ॥ ೨೯ ॥

ನ ದುರ್ಜನಸಮಾಕೀರ್ಣೇ ನ ತು ದಸ್ಯುಸಮಾವೃತೇ ।
ದೇಶೇ ಚ ಧೂರ್ತಸದನೇ ವದೇತ್ಪುಣ್ಯಕಥಾಮಿಮಾಂ ॥ ೩೦ ॥

ಕಥಾವಿರಾಮಃ ಕರ್ತವ್ಯೋ ಮಧ್ಯಾಹ್ನೇ ಹಿ ಮುಹೂರ್ತಕಂ ।
ಮಲಮೂತ್ರೋತ್ಸರ್ಜನಾರ್ಥಂ ತತ್ಕಥಾಕೀರ್ತನಾನ್ನರೈಃ ॥ ೩೧ ॥

ವಕ್ತ್ರಾ ಕ್ಷೌರಂ ಹಿ ಸಂಕಾರ್ಯಂ ದಿನಾದರ್ವಾಗ್ವ್ರತಾಪ್ತಯೇ ।
ಕಾರ್ಯಃ ಸಂಕ್ಷೇಪತೋ ನಿತ್ಯಕ್ರಮಃ ಸರ್ವಪ್ರಯತ್ನತಃ ॥ ೩೨ ॥

---

೨೮. ಸೂರ್ಯೋದಯದಿಂದ ಹಿಡಿದು ಮೂರೂವರೆ ಯಾಮಪೂರ್ತಿಯಾಗಿ ಶಿವಪುರಾಣವನ್ನು ಹೇಳಬೇಕು.

೨೯. ಶಿವಪುರಾಣವನ್ನು ಧೂರ್ತರ ಮುಂದೂ, ಕೆಟ್ಟ ನಡತೆಯುಳ್ಳವರ ಮತ್ತು ತಾವೇ ಹೆಚ್ಚೆಂದು ಹೆಮ್ಮೆ ಪಡುವ ಕುಟಿಲಮಾರ್ಗಗಾಮಿಗಳಾದವರ ಮುಂದೆಯೂ ಎಂದಿಗೂ ಹೇಳಬಾರದು.

೩೦. ದುರ್ಜನರಿಂದ ತುಂಬಿ ಕಳ್ಳರಿಂದ ಕೂಡಿರುವ ದೇಶದಲ್ಲಿಯೂ ಧೂರ್ತನ ಮನೆಯಲ್ಲಿಯೂ ಈ ಪುಣ್ಯ ಕಥೆಯನ್ನು ಹೇಳಬಾರದು.

೩೧. ಪುರಾಣವನ್ನು ಹೇಳುತ್ತಿರುವಾಗ ಮಧ್ಯಾಹ್ನದಲ್ಲಿ ಒಂದು ಮುಹೂರ್ತ ಕಾಲ ಮಲಮೂತ್ರೋತ್ಸರ್ಜನೆಗಾಗಿ ವಿರಾಮವನ್ನು ಕೊಡಬೇಕು.

೩೨. ಪುರಾಣವನ್ನು ಹೇಳುವವನು ವ್ರತವನ್ನು ಕೈಗೊಳ್ಳುವ ಪೂರ್ವದ ದಿನವೇ ಕ್ಷೌರವನ್ನು ಮಾಡಿಸಿಕೊಂಡು ದೀಕ್ಷಾಬದ್ಧನಾಗಿರಬೇಕು. ತನ್ನ ನಿತ್ಯಕರ್ಮಗಳನ್ನು ಸಾಧ್ಯವಾದ ಮಟ್ಟಿಗೆ ಸಂಕ್ಷೇಪವಾಗಿ ಮಾಡಬೇಕು.

ವಕ್ತುಃ ಪಾರ್ಶ್ವೇ ಸಹಾಯಾರ್ಥಮನ್ಯಃ ಸ್ಥಾಪ್ಯಸ್ತಥಾವಿಧಃ ।
ಪಂಡಿತಃ ಸಂಶಯಚ್ಛೇತ್ತಾ ಲೋಕಬೋಧನತತ್ಪರಃ ॥ ೩೩ ॥

ಕಥಾವಿಘ್ನವಿನಾಶಾರ್ಥಂ ಗಣನಾಥಂ ಪ್ರಪೂಜಯೇತ್ ।
ಕಥಾಧೀಶಂ ಶಿವಂ ಭಕ್ತ್ಯಾ ಪುಸ್ತಕಂ ಚ ವಿಶೇಷತಃ ॥ ೩೪ ॥

ಶ್ರೋತಾ ಸುವಿಧಿನಾ ಶುದ್ಧಃ ಶುದ್ಧಚಿತ್ತಃ ಪ್ರಸನ್ನಧೀಃ ।
ಕಥಾಂ ಶಿವಪುರಾಣಸ್ಯ ಶೃಣುಯಾದಾದರಾತ್ಸುಧೀಃ ॥ ೩೫ ॥

ಅನೇಕಕರ್ಮವಿಭ್ರಾಂತಃ ಕಾಮಾದಿಷಡ್ವಿಕಾರವಾನ್ ।
ಸ್ತ್ರೈಣಃ ಪಾಷಂಡವಾದೀ ಚ ವಕ್ತಾ ಶ್ರೋತಾ ನ ಪುಣ್ಯಭಾಕ್ ॥ ೩೬ ॥

ಲೋಕಚಿಂತಾಂ ಧನಾಗಾರಪುತ್ರಚಿಂತಾಂ ವ್ಯುದಸ್ಯ ಚ ।
ಕಥಾಚಿತ್ತಃ ಶುದ್ಧಮತಿಃ ಸ ಲಭೇತ್ಫಲಮುತ್ತಮಂ ॥ ೩೭ ॥

---

೩೩. ಪೌರಾಣಿಕನ ಪಕ್ಕದಲ್ಲಿ ಸಮರ್ಥನಾದ ಒಬ್ಬ ಪಂಡಿತನುಅವನಿಗೆ ಸಹಾಯಾರ್ಥವಾಗಿ ಇರಬೇಕು. ಅವನು ಸಂಶಯನಿವಾರಣೆಯನ್ನು ಮಾಡುವವನೂ ಮತ್ತು ಜನಗಳಿಗೆ ಅರ್ಥ ಹೇಳಿ ಬೋಧಿಸಲು ದಕ್ಷನೂ ಆಗಿರಬೇಕು.

೩೪. ಕಥಾಶ್ರವಣವು ನಿರ್ವಿಘ್ನವಾಗಿ ನೆರವೇರಲು ಮೊದಲು ಗಣಪತಿಯನ್ನು ಪೂಜಿಸಿ, ಅನಂತರ ಕಥೆಗೆ ಅಧಿಪತಿಯಾದ ಶಿವನನ್ನೂ, ಅನಂತರ ಪುರಾಣದ ಪುಸ್ತಕವನ್ನೂ ಭಕ್ತಿಯಿಂದ ಪೂಜಿಸಬೇಕು.

೩೫. ಕೇಳುವವರು ಶುದ್ಧರಾಗಿಯೂ, ಪ್ರಸನ್ನಚಿತ್ತರಾಗಿಯೂ, ಒಳ್ಳೆ ಬುದ್ಧಿಯುಳ್ಳವರಾಗಿಯೂ ಇದ್ದು, ನಿಯಮವಾಗಿ ಆದರದಿಂದ ಶಿವಪುರಾಣವನ್ನು ಕೇಳಬೇಕು.

೩೬. ಪುರಾಣವನ್ನು ಹೇಳುವವನಾಗಲೀ, ಕೇಳುವವನಾಗಲೀ, ನಾನಾ ಕೆಲಸಗಳ ಗಡಿಬಿಡಿಯಲ್ಲಿರಬಾರದು. ಕಾಮಾದಿವಿಕಾರರಹಿತರಾಗಿರಬೇಕು. ನಾಸ್ತಿಕನಾಗಿರಬಾರದು. ಇದಕ್ಕೆ ವ್ಯತಿರಿಕ್ತವಾಗಿದ್ದರೆ, ಹೇಳುವವನಿಗೂ, ಕೇಳುವವರಿಗೂ ಯಾವ ಪುಣ್ಯವೂ ಬರಲಾರದು.

೩೭. ಲೋಕವ್ಯವಹಾರದ ಚಿಂತೆಯನ್ನೂ, ಧನ, ಮನೆ, ಪುತ್ರ ಮುಂತಾದವರ ಯೋಚನೆಯನ್ನೂ ತೊರೆದು, ಕೇವಲ ಕಥೆಯನ್ನು ಕೇಳುವುದರಲ್ಲೇ ಮನಸ್ಸಿಟ್ಟು ಶುದ್ಧಮತಿಗಳಾಗಿ ಯಾರು ಹೇಳುವರೋ ಮತ್ತು ಕೇಳುವರೋ ಅವರು ಉತ್ತಮವಾದ ಫಲವನ್ನು ಹೊಂದುವರು.

ಶ್ರದ್ಧಾಭಕ್ತಿಸಮಾಯುಕ್ತಾ ನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾಃ ಶುಚಯೋಽವ್ಯಗ್ರಾಃ ಶ್ರೋತಾರಃ ಪುಣ್ಯಭಾಗಿನಃ ॥ ೩೮ ॥

ಅಭಕ್ತ್ಯಾ ಯೇ ಕಥಾಂ ಪುಣ್ಯಾಂ ಶೃಣ್ವಂತೀಮಾಂ ನರಾಧಮಾಃ ।
ತೇಷಾಂ ಶ್ರವಣಜಂ ನಾಸ್ತಿ ಫಲಂ ದುಃಖಂ ಭವೇ ಭವೇ ॥ ೩೯ ॥

ಅಸಂಪೂಜ್ಯ ಪುರಾಣಂ ಯೇ ಯಥಾಶಕ್ತ್ಯಾ ಹ್ಯುಪಾಯನೈಃ ।
ಶೃಣ್ವಂತೀಮಾಂ ಕಥಾಂ ಮೂಢಾಃ ಸ್ಯುರ್ದರಿದ್ರಾ ನ ಪಾವನಾಃ ॥ ೪೦ ॥

ಕಥಾಯಾಂ ಕಥ್ಯಮಾನಾಯಾಂ ಗಚ್ಛಂತ್ಯನ್ಯತ್ರ ಯೇ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾದಿಸಂಪದಃ ॥ ೪೧ ॥

ಸೋಷ್ಣೀಷಮಸ್ತಕಾ ಯೇ ಚ ಶೃಣ್ವಂತೀಮಾಂ ಕಥಾಂ ನರಾಃ ।
ತತ್ಪುತ್ರಾಶ್ಚ ಪ್ರಜಾಯಂತೇ ಪಾಪಿನಃ ಕುಲದೂಷಕಾಃ ॥ ೪೨ ॥

---

೩೮. ಶ್ರದ್ಧಾಭಕ್ತಿಯುಳ್ಳವರಾಗಿ ಬೇರೆ ಕಾರ್ಯಗಳ ಯೋಚನೆಯನ್ನು ಬಿಟ್ಟು ಶುಚಿಯಾಗಿ ಪುರಾಣಕೇಳುವುದರಲ್ಲೇ ಆಸಕ್ತರಾಗಿ, ಮೌನದಿಂದ ಯಾರು ಕೇಳುವರೋ ಅವರು ಪುಣ್ಯವನ್ನು ಹೊಂದುವರು.

೩೯. ಭಕ್ತಿಯಿಲ್ಲದೆ ಕುಹಕಬುದ್ಧಿಯಿಂದ ಯಾವ ನರಾಧಮರು ಈಪುಣ್ಯಕಥೆಯನ್ನು ಕೇಳುವರೋ ಅವರಿಗೆ ಶ್ರವಣಫಲವು ಬರುವುದಿಲ್ಲ. ಅದಕ್ಕೆ ಬದಲು ಜನ್ಮ ಜನ್ಮದಲ್ಲಿಯೂ ದುಃಖವೇ ಉಂಟಾಗುವುದು.

೪೦. ತಮ್ಮ ಕೈಲಾದಷ್ಟು ಕಾಣಿಕೆಯೊಡನೆ ಪೂಜಿಸದೆ ಪುರಾಣಶ್ರವಣ ಮಾಡುವವರು ಮುಂದಿನ ಜನ್ಮದಲ್ಲಿ ಮೂಢರಾಗಿಯೂ ಅಪವಿತ್ರರಾಗಿಯೂ ದರಿದ್ರ ರಾಗಿಯೂ ಜನಿಸುವರು.

೪೧. ಪುರಾಣವನ್ನು ಹೇಳುತ್ತಿರುವಾಗ ಮಧ್ಯದಲ್ಲಿ ಯಾರಾದರೂ ಬೇರೇ ಕಡೆ ಎದ್ದು ಹೋದರೆ ಅವರಿಗೆ ದಾರಾದಿವಿಷಯೋಪಭೋಗದ ಮಧ್ಯದಲ್ಲಿ ಆಯಾ ಸಂಪತ್ತುಗಳು ನಾಶವಾಗುವುವು.

೪೨. ಯಾರು ಪುರಾಣಶ್ರವಣ ಕಾಲದಲ್ಲಿ ಪೇಟವನ್ನು ಹಾಕಿಕೊಂಡು ಕೇಳುತ್ತಾರೆಯೋ ಅವರಲ್ಲಿ ಹುಟ್ಟುವ ಮಕ್ಕಳು ಪಾಪಿಗಳಾಗಿಯೂ, ಕುಲದೂಷಕ ರಾಗಿಯೂ ಆಗುವರು.

ತಾಂಬೂಲಂ ಭಕ್ಷಯಂತೋ ಯೇ ಶೃಣ್ವಂತೀಮಾಂ ಕಥಾಂ ನರಾಃ ।
ಸ್ವವಿಷ್ಠಾಂ ಸ್ವಾದಯಂತ್ಯೇತಾನ್ನರಕೇ ಯಮಕಿಂಕರಾಃ ॥ ೪೩ ॥

ಯೇ ಚ ತುಂಗಾಸನಾರೂಢಾಃ ಶೃಣ್ವಂತೀಮಾಂ ಕಥಾಂ ನರಾಃ ।
ಭುಕ್ತ್ವಾ ತೇ ನರಕಾನ್ಸರ್ವಾಂಸ್ತತಃ ಕಾಕಾ ಭವಂತಿ ಹ ॥ ೪೪ ॥

ಯೇ ವಿರಾದ್ಯಾಸನಾರೂಢಾಃ ಶೃಣ್ವಂತೀಮಾಂ ಕಥಾಂ ಶುಭಾಂ ।
ಭುಕ್ತ್ವಾ ತೇ ನರಕಾನ್ಸರ್ವಾನ್ವಿಷವೃಕ್ಷಾ ಭವಂತಿ ವೈ ॥ ೪೫ ॥

ಅಸಂಪ್ರಣಮ್ಯ ವಕ್ತಾರಂ ಕಥಾಂ ಶೃಣ್ವಂತಿ ಯೇ ನರಾಃ ।
ಭುಕ್ತ್ವಾ ತೇ ನರಕಾನ್ಸರ್ವಾನ್ ಭವಂತ್ಯರ್ಜುನಪಾದಪಾಃ ॥ ೪೬ ॥

ಅನಾತುರಾಶ್ಶಯಾನಾ ಯೇ ಶೃಣ್ವಂತೀಮಾಂ ಕಥಾಂ ನರಾಃ ।
ಭುಕ್ತ್ವಾ ತೇ ನರಕಾನ್ಸರ್ವಾನ್ ಭವಂತ್ಯಜಗರಾದಯಃ ॥ ೪೭ ॥

---

೪೩. ಯಾರು ತಾಂಬೂಲಚರ್ವಣಮಾಡುತ್ತಾ ಪುರಾಣವನ್ನು ಕೇಳುವರೋ ಅವರನ್ನೂ ಯಮಕಿಂಕರರು ನರಕಕ್ಕೆ ಒಯ್ದು ಅಲ್ಲಿ ಅವರಿಗೆ ಅವರ ಅಮೇಧ್ಯವನ್ನೇ ತಿನ್ನಿಸುವರು.

೪೪. ಎತ್ತರವಾದ ಆಸನದಲ್ಲಿ ಕುಳಿತು ಶಿವಪುರಾಣವನ್ನು ಕೇಳುವವರು ನರಕದಲ್ಲಿ ದುಃಖವನ್ನು ಅನುಭವಿಸಿ ಅನಂತರ ಕಾಗೆಗಳಾಗುವರು.

೪೫. ವೀರಾದಿ ಆಸನಗಳನ್ನು ಹಾಕಿಕೊಂಡು ಕುಳಿತು ಈ ಪುರಾಣವನ್ನು ಕೇಳುವವರು ನರಕವನ್ನನುಭವಿಸಿ ವಿಷವೃಕ್ಷಗಳಾಗುವರು.

೪೬. ಯಾರು ಪುರಾಣಿಕನನ್ನು ನಮಸ್ಕರಿಸದೆ ಪುರಾಣವನ್ನು ಕೇಳುವರೋ ಆವರು ನರಕಗಳನ್ನು ಅನುಭವಿಸಿ ಮತ್ತೀವೃಕ್ಷವಾಗಿ ಹುಟ್ಟುವರು.

೪೭. ರೋಗವಿಲ್ಲದಿದ್ದರೂ ಯಾರು ಮಲಗಿಕೊಂಡು ಪುರಾಣವನ್ನು ಕೇಳುವರೋ ಅವರು ನರಕವನ್ನನುಭವಿಸಿ ಅಜಗರವೇ ಮುಂತಾದ ಸರ್ಪಗಳಾಗಿ ಹುಟ್ಟುವರು.

ವಕ್ತುಸ್ಸಮಾಸನಾರೂಢಾ ಯೇ ಶೃಣ್ವಂತಿ ಕಥಾಮಿಮಾಂ ।
ಗುರುತಲ್ಪಸಮಂ ಪಾಪಂ ಪ್ರಾಪ್ಯತೇ ನಾರಕೈಃ ಸದಾ ॥ ೪೮ ॥

ಯೇ ನಿಂದಂತಿ ಚ ವಕ್ತಾರಂ ಕಥಾಂ ಚೇಮಾಂ ಸುಪಾವನೀಂ ।
ಭವಂತಿ ಶುನಕಾ ಭುಕ್ತ್ವಾ ದುಃಖಂ ಜನ್ಮಶತಂ ಹಿ ತೇ ॥ ೪೯ ॥

ಕಥಯಾಂ ವರ್ತಮಾನಾಯಾಂ ದುರ್ವಾದಂ ಯೇ ವದಂತಿ ಹಿ ।
ಭುಕ್ತ್ವಾ ತೇ ನರಕಾನ್ ಘೋರಾನ್ ಭವಂತಿ ಗರ್ದಭಾಸ್ತತಃ ॥ ೫೦ ॥

ಕದಾಚಿನ್ನಾಪಿ ಶೃಣ್ವಂತಿ ಕಥಾಮೇತಾಂ ಸುಪಾವನೀಂ ।
ಭುಕ್ತ್ವಾ ತೇ ನರಕಾನ್ ಘೋರಾನ್ ಭವಂತಿ ವನಸೂಕರಾಃ ॥ ೫೧ ॥

ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ಖಲಾಃ ।
ಕೋಟ್ಯಬ್ದಂ ನರಕಾನ್ ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥ ೫೨ ॥

---

೪೮. ಪುರಾಣಿಕನ ಆಸನಕ್ಕೆ ಸಮನಾಗಿ ಆಸನವನ್ನು ಹಾಕಿಕೊಂಡು ಯಾರು ಪುರಾಣವನ್ನು ಕೇಳುವರೋ ಅವರು ನರಕವನ್ನನುಭವಿಸಿ ಗುರುತಲ್ಪಗಮನ ಮಾಡಿದ ದೋಷವನ್ನು ಪಡೆವರು.

೪೯. ಯಾರು ಕಥೆಯನ್ನೂ ಮತ್ತು ಕಥೆ ಹೇಳುವವನನ್ನೂ ನಿಂದಿಸುವರೋ ಅವರು ನೂರು ಜನ್ಮಗಳು ದುಃಖವನ್ನನುಭವಿಸಿ ನಾಯಿಗಳಾಗಿ ಹುಟ್ಟುವರು.

೫೦. ಪುರಾಣವನ್ನು ಹೇಳುತ್ತಿರುವಾಗ ಕೆಟ್ಟ ಮಾತುಗಳನ್ನಾಡುವವರು ಘೋರವಾದ ನರಕವನ್ನು ಅನುಭವಿಸಿ ಕತ್ತೆಗಳಾಗಿ ಹುಟ್ಟುವರು.

೫೧. ಯಾರು ಈ ಶಿವಪುರಾಣವನ್ನು ಯಾವಾಗಲೂ ಕೇಳುವುದಿಲ್ಲವೋ ಅವರು ಘೋರವಾಧ ನರಕಗಳನ್ನನುಭವಿಸಿ ಕಾಡುಹಂದಿಗಳಾಗಿ ಹುಟ್ಟುವರು.

೫೨. ಪುರಾಣಕೀರ್ತನೆಯು ನಡೆಯುತ್ತಿರುವಾಗ ಅದಕ್ಕೆ ವಿಘ್ನಮಾಡುವವರು ಒಂದು ಕೋಟಿ ವರ್ಷಗಳು ನರಕವನ್ನನುಭವಿಸಿ ಗ್ರಾಮದ ಹಂದಿಗಳಾಗಿ ಹುಟ್ಟುವರು.

ಏವಂ ವಿಚಾರ್ಯ ಶುದ್ಧಾತ್ಮಾ ಶ್ರೋತಾ ವಕ್ತ್ರೃಸುಭಕ್ತಿಮಾನ್ ।
ಕಥಾಶ್ರವಣಹೇತೋರ್ಹಿ ಭವೇತ್ಪ್ರೀತ್ಯೋದ್ಯತಃ ಸುಧೀಃ ॥ ೫೩ ॥

ಕಥಾವಿಘ್ನವಿನಾಶಾರ್ಥಂ ಗಣೇಶಂ ಪೂಜಯೇತ್ಪುರಾ ।
ನಿತ್ಯಂ ಸಂಪಾದ್ಯ ಸಂಕ್ಷೇಪಾತ್ಪ್ರಾಯಶ್ಚಿತ್ತಂ ಸಮಾಚರೇತ್ ॥ ೫೪ ॥

ನವಗ್ರಹಾಂಶ್ಚ ಸಂಪೂಜ್ಯ ಸರ್ವತೋಭದ್ರದೈವತಂ ।
ಶಿವಪೂಜೋಕ್ತವಿಧಿನಾ ಪುಸ್ತಕಂ ತತ್ಸಮರ್ಚಯೇತ್ ॥ ೫೫ ॥

ಪೂಜನಾಂತೇ ಮಹಾಭಕ್ತ್ಯಾ ಕರೌ ಬದ್ಧ್ವಾ ವಿನೀತಕಃ ।
ಸಾಕ್ಷಾಚ್ಛಿವಪುರಾಣಸ್ಯ ಪುಸ್ತಕಸ್ಯ ಸ್ತುತಿಂ ಚರೇತ್ ॥ ೫೬ ॥

ಶ್ರೀಮಚ್ಛಿವಪುರಾಣಾಖ್ಯಃ ಪ್ರತ್ಯಕ್ಷಸ್ತ್ವಂ ಮಹೇಶ್ವರಃ ।
ಶ್ರವಣಾರ್ಥಂ ಸ್ವೀಕೃತೋಽಸಿ ಸಂತುಷ್ಟೋ ಭವ ವೈ ಮಯಿ ॥ ೫೭ ॥

---

೫೩. ಈ ರೀತಿಯಾಗಿ ವಿಷಯಗಳನ್ನು ತಿಳಿದು ಶುದ್ಧಚಿತ್ತನಾಗಿ ಕೇಳುವವನು ಪುರಾಣಿಕನಲ್ಲಿ ಭಕ್ತಿಯಿಟ್ಟವನಾಗಿ ಪುರಾಣವನ್ನು ಸಂತೋಷಚಿತ್ತನಾಗಿ ಕೇಳಬೇಕು.

೫೪. ಕಥಾವಿಘ್ನವು ನಾಶವಾಗಲು, ಮೊದಲು ಗಣಪತಿಯ ಪೂಜೆಯನ್ನು ನಿತ್ಯವೂ ಮಾಡಬೇಕು. ಅನಂತರ ಸಂಕ್ಷೇಪವಾಗಿ ಪ್ರಾಯಶ್ಚಿತ್ತವನ್ನಾಚರಿಸಬೇಕು.

೫೫. ನವಗ್ರಹಗಳನ್ನು ಪೂಜೆಮಾಡಿ, ಶಿವಪೂಜೆಯ ವಿಧಿಯಂತೆ ಎಲ್ಲೆಡೆಯಲ್ಲೂ ಮಂಗಳಕರವಾದ ದೈವತೆಯಾಗಿರುವ ಪುಸ್ತಕವನ್ನು ಪೂಜಿಸಬೇಕು.

೫೬. ಪೂಜೆಯಾದನಂತರ ಅತ್ಯಂತ ಭಕ್ತಿಯಿಂದ ಕೈಗಳನ್ನು ಜೋಡಿಸಿಕೊಂಡು ನಮ್ರವಾಗಿ ನಿಂತು ಶಿವಸ್ವರೂಪವಾಗಿರುವ ಪುಸ್ತಕದ ಸ್ತೋತ್ರವನ್ನು ಈ ರೀತಿಯಾಗಿ ಮಾಡಬೇಕು.

೫೭. ಶ್ರೀಮಚ್ಛಿವಪುರಾಣವೆಂದು ಪ್ರಸಿದ್ಧವಾಗಿರುವ ಎಲೈ ಪುಸ್ತಕವೇ, ನೀನು ಪ್ರತ್ಯಕ್ಷನಾದ ಪರಮೇಶ್ವರನ ಸ್ವರೂಪವು. ನಾನು ನಿನ್ನನ್ನು ಕೇಳಲು ಬಂದಿರುವೆನು. ಆದುದರಿಂದ ನೀನು ನನ್ನಲ್ಲಿ ಪ್ರಸನ್ನನಾಗು.

ಮನೋರಥೋ ಮದೀಯೋಽಯಂ ಕರ್ತವ್ಯಸ್ಸಫಲಸ್ತ್ವಯಾ ।
ನಿರ್ವಿಘ್ನೇನ ಸುಸಂಪೂರ್ಣಂ ಕಥಾಶ್ರವಣಮಸ್ತು ಮೇ ॥ ೫೮ ॥

ಭವಾಬ್ಧಿಮಗ್ನಂ ದೀನಂ ಮಾಂ ಸಮುದ್ಧರ ಭವಾರ್ಣವಾತ್ ।
ಕರ್ಮಗ್ರಾಹಗೃಹೀತಾಂಗಂ ದಾಸೋಽಹಂ ತವ ಶಂಕರ ॥ ೫೯ ॥

ಏವಂ ಶಿವಪುರಾಣಂ ಹಿ ಸಾಕ್ಷಾಚ್ಛಿವಸ್ವರೂಪಕಂ ।
ಸ್ತುತ್ವಾ ದೀನವಚಃ ಪ್ರೋಚ್ಯ ವಕ್ತುಃ ಪೂಜಾಂ ಸಮಾರಭೇತ್ ॥ ೬೦ ॥

ಶಿವಪೂಜೋಕ್ತವಿಧಿನಾ ವಕ್ತಾರಂ ಚ ಸಮರ್ಚಯೇತ್ ।
ಸಪುಷ್ಪವಸ್ತ್ರಭೂಷಾಭಿರ್ಧೂಪದೀಪಾದಿನಾರ್ಚಯೇತ್ ॥ ೬೧ ॥

ತದಗ್ರೇ ಶುದ್ಧಚಿತ್ತೇನ ಕರ್ತವ್ಯೋ ನಿಯಮಸ್ತದಾ ।
ಆಸಮಾಪ್ತಿ ಯಥಾಶಕ್ತ್ಯಾ ಧಾರಣೀಯಸ್ಸುಯತ್ನತಃ ॥ ೬೨ ॥

---

೫೮. ನನ್ನ ಮನೋರಥವೆಲ್ಲವೂ ಸಫಲವಾಗುವಂತೆ ಮಾಡು ಮತ್ತು ನಿರ್ವಿಘ್ನವಾಗಿಯೂ ಸಂಪೂರ್ಣವಾಗಿ ಕಥಾಶ್ರವಣವಾಗುವಂತೆ ಅನುಗ್ರಹಿಸು.

೫೯. ಎಲೈ ಶಂಕರನೇ, ಸಂಸಾರಸಾಗರದಲ್ಲಿ ಮುಳುಗಿ ದೀನನಾಗಿಯೂ ಪೂರ್ವಾರ್ಜಿತ ಕರ್ಮಗಳೆಂಬ ಮೊಸಳೆಗಳಿಂದ ಹಿಡಿಯಲ್ಪಟ್ಟೂ ಇರುವ ನನ್ನನ್ನು ಸಂಸಾರಸಮುದ್ರದಿಂದ ಉದ್ಧಾರಮಾಡು. ನಾನು ನಿನ್ನ ದಾಸನಾಗಿರುವೆನು.

೬೦. ಈ ರೀತಿಯಾಗಿ ಸಾಕ್ಷಾತ್ ಶಿವಸ್ವರೂಪವಾಗಿರುವ ಶಿವಪುರಾಣವನ್ನು ಸ್ತೋತ್ರಮಾಡಿ ನಮ್ರವಾದ ಮಾತುಗಳನ್ನಾಗಿ ಅನಂತರ ಪುರಾಣಿಕನನ್ನು ಪೂಜಿಸಬೇಕು.

೬೧. ಶಿವಪೂಜಾವಿಧಿಯಂತೆ ಪುರಾಣಿಕನನ್ನು ಪುಷ್ಪ, ವಸ್ತ್ರ, ಒಡವೆ, ಧೂಪ, ದೀಪಾದಿ ಸಾಮಗ್ರಿಗಳಿಂದ ಪೂಜಿಸಬೇಕು.

೬೨. ಆ ಪುರಾಣಿಕನ ಎದುರಿಗೆ ಶುದ್ಧವಾದ ಮನಸ್ಸಿನಿಂದ–ನಾನು ಪುರಾಣವು ಮುಗಿಯುವವರೆಗೂ ಪ್ರಯತ್ನಪೂರ್ವಕವಾಗಿ ಇರುತ್ತೇನೆ ಎಂದು ನಿಯಮವನ್ನು ಮಾಡಬೇಕು.

ವ್ಯಾಸರೂಪ ಪ್ರಭೋಧಾಗ್ರ್ಯ ಶಿವಶಾಸ್ತ್ರವಿಶಾರದ ।
ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ ॥ ೬೩ ॥

ವರಣಂ ಪಂಚವಿಪ್ರಾಣಾಂ ಕಾರ್ಯಂ ನೈಕಸ್ಯ ಭಕ್ತಿತಃ ।
ಶಿವಪಂಚಾರ್ಣಮಂತ್ರಸ್ಯ ಜಪಃ ಕಾರ್ಯಶ್ಚ ತೈಸ್ಸದಾ ॥ ೬೪ ॥

ಇತ್ಯುಕ್ತಸ್ತೇ ಮುನೇ ಭಕ್ತ್ಯಾ ಕಥಾಶ್ರವಣಸದ್ವಿಧಿಃ ।
ಶ್ರೋತೄಣಾಂ ಚೈವ ಭಕ್ತಾನಾಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೬೫ ॥

ಇತಿ ಶ್ರೀ ಸ್ಕಾಂದಪುರಾಣೇ ಶಿವಪುರಾಣಮಾಹಾತ್ಮ್ಯೇ
ಶ್ರವಣವಿಧಿವರ್ಣನಂ ನಾಮ ಷಷ್ಠೋಽಧ್ಯಾಯಃ.

---

೬೩. ಎಲೈ ವ್ಯಾಸರೂಪಿಯಾದ ಪುರಾಣಿಕನೇ, ನೀನು ಜ್ಞಾನಶ್ರೇಷ್ಠನು. ಶಿವಶಾಸ್ತ್ರವಿಶಾರದನು. ನೀನು ಈ ಕಥೆಯನ್ನು ಹೇಳಿ ನನ್ನ ಅಜ್ಞಾನವನ್ನು ಪರಿಹರಿಸು ಎಂದು ಪ್ರಾರ್ಥಿಸಿಕೊಳ್ಳಬೇಕು.

೬೪. ಅನಂತರ ಐದು ಜನಗಳಿಗಾಗಲೀ ಅಥವಾ ಒಬ್ಬನಿಗೇ ಆಗಲೀ ಶಿವ ಪಂಚಾಕ್ಷರೀ ಜಪಕ್ಕೋಸ್ಕರ ವರಣವನ್ನು ಕೊಡಬೇಕು. ಅನಂತರ ಅವರು ಶಿವ ಪಂಚಾಕ್ಷರೀ ಜಪವನ್ನು ಮಾಡುತ್ತಿರಬೇಕು.

೬೫. ಎಲೈ ಶೌನಕಮುನಿಯೇ ಈ ರೀತಿಯಾಗಿ ಪುರಾಣವನ್ನು ಕೇಳುವವರಿಗೂ ಭಕ್ತರಿಗೂ ಪುರಾಣಶ್ರವಣ ವಿಧಿಯನ್ನು ತಿಳಿಸಿರುವೆನು. ಮತ್ತೇನನ್ನು ಕೇಳಲಿಚ್ಛಿಸುವೆ?

ಇಲ್ಲಿಗೆ ಶ್ರೀ ಸ್ಕಾಂದಪುರಾಣದ ಶಿವಪುರಾಣ ಮಾಹಾತ್ಮ್ಯೆಯಲ್ಲಿ ಶ್ರವಣವಿಧಿ ವರ್ಣನೆಯೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ॥ ಅಥ ಶಿವಪುರಾಣಮಾಹಾತ್ಮ್ಯೇ ॥

## ಸಪ್ತಮೋಽಧ್ಯಾಯಃ

---

॥ ಶೌನಕ ಉವಾಚ ॥

ಸೂತ ಸೂತ ಮಹಾಪ್ರಾಜ್ಞ ಧನ್ಯಸ್ತ್ವಂ ಶೈವಪುಂಗವ ।
ಶ್ರಾವಿತೇಯಂ ಕಥಾಸ್ಮಾಕಮದ್ಭುತೇಯಂ ಶುಭಾವಹಾ ॥ ೧ ॥

ಪುಂಸಾಂ ಶಿವಪುರಾಣಸ್ಯ ಶ್ರವಣಂ ವ್ರತಿನಾಂ ಮುನೇ।
ಸರ್ವಲೋಕಹಿತಾರ್ಥಾಯ ದಯಯಾ ನಿಯಮಂ ವದ ॥ ೨ ॥

---

## ಏಳನೆಯ ಅಧ್ಯಾಯವು.

೧. ಶೌನಕನು ಸೂತಪುರಾಣಿಕನನ್ನು ಪ್ರಶ್ನೆಮಾಡುವನು :—ಎಲೈ ಸೂತ ಮುನಿಯೇ, ನೀನು ಮಹಾಪ್ರಾಜ್ಞನು. ಶಿವಭಕ್ತರಲ್ಲಿ ಶ್ರೇಷ್ಠನಾದ ನೀನೇ ಧನ್ಯನು. ಇಂತಹ ಪವಿತ್ರವೂ ಆಶ್ಚರ್ಯಕರವೂ ಆದ ಶಿವಪುರಾಣಕಥೆಯನ್ನು ನೀನು ನನಗೆ ಹೇಳಿರುವೆ.

೨. ಶಿವಪುರಾಣವನ್ನು ಕೇಳಲಿಚ್ಛೆಯುಳ್ಳ ಜನರಿಗೂ, ಲೋಕಕ್ಕೆಲ್ಲಾ ಹಿತವನ್ನುಂಟುಮಾಡುವುದಕ್ಕಾಗಿಯೂ ಈಗ ದಯವಿಟ್ಟು ಪುರಾಣಶ್ರವಣ ನಿಯಮವನ್ನು ಹೇಳು ಎನ್ನಲು,

॥ ಸೂತ ಉವಾಚ ॥

ನಿಯಮಂ ಶೃಣು ಸದ್ಭಕ್ತ್ಯಾ ಪುಂಸಾಂ ತೇಷಾಂ ಚ ಶೌನಕ ।
ನಿಯಮಾತ್ ಸತ್ಕಥಾಂ ಶ್ರುತ್ವಾ ನಿರ್ವಿಘ್ನಂ ಫಲಮುತ್ತಮಂ ॥ ೩ ॥

ಪುಂಸಾಂ ದೀಕ್ಷಾವಿಹೀನಾನಾಂ ನಾಧಿಕಾರಃ ಕಥಾಶ್ರವೇ ।
ಶ್ರೋತುಕಾಮೈರತೋ ವಕ್ತುರ್ದೀಕ್ಷಾ ಗ್ರಾಹ್ಯಾ ಚ ತೈರ್ಮುನೇ ॥ ೪ ॥

ಬ್ರಹ್ಮಚರ್ಯಮಧಸ್ಸುಪ್ತಿಃ ಪತ್ರಾವಳ್ಯಾಂ ಚ ಭೋಜನಂ ।
ಕಥಾಸಮಾಪ್ತೌ ಭುಕ್ತಿಂ ಚ ಕುರ್ಯಾನ್ನಿತ್ಯಂ ಕಥಾವ್ರತೀ ॥ ೫ ॥

ಆಸಮಾಪ್ತಪುರಾಣಂ ಹಿ ಸಮುಪೋಷ್ಯ ಸುಶಕ್ತಿಮಾನ್ ।
ಶೃಣುಯಾದ್ಭಕ್ತಿತಃ ಶುದ್ಧಃ ಪುರಾಣಂ ಶೈವಮುತ್ತಮಂ ॥ ೬ ॥

ಘೃತಪಾನಂ ಪಯಃಪಾನಂ ಕೃತ್ವಾ ವಾ ಶೃಣುಯಾತ್ಸುಖಂ ।
ಫಲಾಹಾರೇಣ ವಾ ಶ್ರಾವ್ಯಮೇಕಭುಕ್ತಂ ನ ವಾ ಹಿ ತತ್ ॥ ೭ ॥

---

೩. ಸೂತಮುನಿಯು ಹೇಳುವನು :—ಎಲೈ ಶೌನಕನೇ, ನಾನು ಈಗ ಹೇಳಲಿರುವ ಪುರಾಣನಿಯಮವನ್ನು ಭಕ್ತಿಯಿಂದ ಕೇಳು. ಈ ನಿಯಮದಿಂದ ಪುರಾಣವನ್ನು ಕೇಳಿದ್ದೇ ಆದರೆ ಉತ್ತಮವಾದ ಫಲವುಂಟಾಗುವುದು.

೪. ಎಲೌ ಶೌನಕಮುನಿಯೇ, ಶಿವದೀಕ್ಷೆಯನ್ನು ತೆಗೆದುಕೊಳ್ಳದಿರುವ ಜನರಿಗೆ ಪುರಾಣವನ್ನು ಕೇಳಲು ಅಧಿಕಾರವಿಲ್ಲ. ಆದುದರಿಂದ ಪುರಾಣವನ್ನು ಕೇಳಲಿಚ್ಛೆಯುಳ್ಳವರು ಪುರಾಣಿಕನಿಂದ ದೀಕ್ಷೆಯನ್ನು ತೆಗೆದುಕೊಳ್ಳಬೇಕು.

೫. ಪುರಾಣವನ್ನು ಕೇಳಲು ಈ ರೀತಿಯಾದ ನಿಯಮವನ್ನು ಪಾಲಿಸಬೇಕು. ಬ್ರಹ್ಮಚರ್ಯವನ್ನು ಪಾಲಿಸಬೇಕು. ಹಾಸಿಗೆ ಮುಂತಾದುವುಗಳ ಮೇಲೆ ಮಲಗದೆ ನೆಲದ ಮೇಲೆ ಮಲಗಬೇಕು. ಎಲೆಯಲ್ಲಿ ಊಟಮಾಡಬೇಕು. ಕಥೆಯಲ್ಲಿ ಕೇಳಿದ ಮೇಲೆ ಹೋಗಿ ಊಟಮಾಡಬೇಕು. ಅದಕ್ಕೆ ಮುಂಚೆ ಮಾಡಬಾರದು.

೬. ಪುರಾಣವು ಮುಗಿಯುವವರೆಗೂ ಉಪವಾಸವಿರಲು ಶಕ್ತನಾದವನು ಉಪವಾಸವಿದ್ದು ಶುಚಿಯಾಗಿ ಭಕ್ತಿಯಿಂದ ಶ್ರೇಷ್ಠವಾದ ಶಿವಪುರಾಣವನ್ನು ಕೇಳಬೇಕು.

೭. ಆ ರೀತಿ ಉಪವಾಸವಿರಲು ಅಶಕ್ತನಾದವನು ತುಪ್ಪವನ್ನು ತಿಂದಾದರೂ ಅಥವಾ ಹಾಲನ್ನು ಕುಡಿದಾದರೂ ಪುರಾಣವನ್ನು ಕೇಳಬಹುದು. ಆ ರೀತಿಯೂ

ಏಕವಾರಂ ಹವಿಷ್ಯಾನ್ನಂ ಭುಂಜ್ಯಾದೇತ್ಕಥಾವ್ರತೀ ।
ಸುಖಸಾಧ್ಯಂ ಯಥಾ ಸ್ಯಾತ್ತಚ್ಛ್ರವಣಂ ಕಾರ್ಯಮೇವ ಚ ॥ ೮ ॥

ಭೋಜನಂ ಸುಕರಂ ಮನ್ಯೇ ಕಥಾಸು ಶ್ರವಣಪ್ರದಂ ।
ನೋಪವಾಸೋ ವರಶ್ಚೇತ್ಸ್ಯಾತ್ಕಥಾಶ್ರವಣವಿಘ್ನಕೃತ್ ॥ ೯ ॥

ಗರಿಷ್ಠಂ ದ್ವಿದಲಂ ದಗ್ಧಂ ನಿಷ್ಪಾವಾಂಶ್ಚ ಮಸೂರಿಕಾಂ ।
ಭಾವದುಷ್ಟಂ ಪರ್ಯುಷಿತಂ ಜಗ್ಧ್ವಾ ನಿತ್ಯಂ ಕಥಾವ್ರತೀ ॥ ೧೦ ॥

ವಾರ್ತಾಕಂ ಚ ಕಲಿಂದಂ ಚ ಪಿಚಂಡಂ ಮೂಲಕಂ ತಥಾ ।
ಕೂಷ್ಮಾಂಡಂ ನಾಲಿಕೇರಂ ಚ ಮೂಲಂ ಜಗ್ಧ್ವಾ ಕಥಾವ್ರತೀ ॥ ೧೧ ॥

---

ಮಾಡಲು ಶಕ್ತನಲ್ಲದವನು ಫಲಾಹಾರವನ್ನಾದರೂ ಮಾಡಿ ಪುರಾಣವನ್ನು ಕೇಳ ಬಹುದು. ಹಾಗೆ ಮಾಡಲೂ ಅಸಮರ್ಥನಾದವನು ಒಪ್ಪತ್ತು ಊಟವನ್ನು ಮಾಡಿ ಪುರಾಣವನ್ನು ಕೇಳಬಹುದು.

೮. ಈ ಪುರಾಣವನ್ನು ಕೇಳುವವರು ಒಂದು ಸಾರಿ ಹವಿಷ್ಯಾನ್ನವನ್ನು ತೆಗೆದುಕೊಳ್ಳಬಹುದು. ಮತ್ತು ಸುಖವಾಗಿ ಪುರಾಣವನ್ನು ಕೇಳಲು ಸಾಧ್ಯವಾಗು ವಷ್ಟು ಮಾತ್ರ ಆಹಾರವನ್ನು ತೆಗೆದುಕೊಳ್ಳಬಹುದು.

೯. ಉಪವಾಸವಿರುವುದರಿಂದ ಪುರಾಣವನ್ನು ಕೇಳಲು ತೊಂದರೆಯಾದ ಪಕ್ಷಕ್ಕೆ ಊಟಮಾಡಿ ಕೇಳುವುದೇ ಮೇಲು.

೧೦-೧೨. ಪುರಾಣವನ್ನು ಕೇಳುವವರು ಮುಂದೆ ಹೇಳುವ ಪದಾರ್ಥಗಳನ್ನು ತಿನ್ನಲು ಉಪಯೋಗಿಸಬಾರದು. ದ್ವಿದಲಧಾನ್ಯವಾಗಿರುವ ಅವರೆ ಮತ್ತು ಮಸೂ ರಿಕಾಗಳನ್ನು ಬೇಯಿಸಿ ತಿನ್ನಬಾರದು. ಮನಸ್ಸಿನ ಭಾವನೆಯು ವ್ಯತ್ಯಾಸವಾಗು ವಂತಹ ಆಹಾರವನ್ನಾಗಲೀ ತಂಗಳು ಪದಾರ್ಥವನ್ನಾಗಲೀ ತಿನ್ನಬಾರದು. ಬದನೇ ಕಾಯನ್ನೂ, ಕೊಡಶೀಹಣ್ಣನ್ನೂ, ಸೋರೇಕಾಯನ್ನೂ, ಮೂಲಂಗಿಯನ್ನೂ, ಕುಂಬಳಕಾಯನ್ನೂ, ತೆಂಗಿನಕಾಯನ್ನೂ ತಿನ್ನಲು ಉಪಯೋಗಿಸಬಾರದು. ಮತ್ತು

ಪಲಾಂಡುಂ ಲಶುನಂ ಹಿಂಗುಂ ಗೃಂಜನಂಮಾದಕಂ ಹಿ ತತ್ ।
ವಸ್ತೂನ್ಯಾಮಿಷಸಂಜ್ಞಾನಿ ವರ್ಜಯೇದ್ಯಃ ಕಥಾವ್ರತೀ ॥ ೧೨ ॥

ಕಾಮಾದಿಷಡ್ವಿಕಾರಂ ಚ ದ್ವಿಜಾನಾಂ ಚ ವಿನಿಂದನಂ ।
ಪತಿವ್ರತಾಸತಾಂ ನಿಂದಾಂ ವರ್ಜಯೇದ್ಯಃ ಕಥಾವ್ರತೀ ॥ ೧೩ ॥

ರಜಸ್ವಲಾಂ ನ ಪಶ್ಯೇಚ್ಚ ಪತಿತಾನ್ನ ವದೇತ್ಕಥಾಂ ।
ದ್ವಿಜದ್ವಿಷೋ ವೇದವರ್ಜ್ಯಾನ್ನ ವದೇದ್ಯಃ ಕಥಾವ್ರತೀ ॥ ೧೪ ॥

ಸತ್ಯಂ ಶೌಚಂ ದಯಾಂ ಮೌನಮಾರ್ಜವಂ ವಿನಯಂ ತಥಾ ।
ಔದಾರ್ಯಂ ಮನಸಶ್ಚೈವ ಕುರ್ಯಾನ್ನಿತ್ಯಂ ಕಥಾವ್ರತೀ ॥ ೧೫ ॥

---

ಈರುಳ್ಳಿ, ಬೆಳ್ಳುಳ್ಳಿ, ಇಂಗು, ಗಾಂಜಾ ಮೊದಲಾದ ಮಾದಕಪದಾರ್ಥಗಳು ಇವುಗಳನ್ನು ಸೇವಿಸಬಾರದು. ಇವಕ್ಕೆಲ್ಲ ಪಲಾಶ ಎಂದರೆ ಮಾಂಸದ ಅಂಶವು ಇವುಗಳಲ್ಲಿವೆ ಎಂದು ಹೆಸರು.

೧೩. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆಂಬ ಆರು ವಿಕಾರಗಳನ್ನು ಬಿಟ್ಟಿರಬೇಕು. ದ್ವಿಜರನ್ನು ಎಂದರೆ ಬ್ರಹ್ಮ, ಕ್ಷತ್ರ, ವೈಶ್ಯರನ್ನು ನಿಂದಿಸಬಾರದು. ಪತಿವ್ರತೆಯರನ್ನೂ ಸತ್ಪುರುಷರನ್ನೂ ನಿಂದಿಸಬಾರದು.

೧೪. ಪುರಾಣವನ್ನು ಕೇಳುವವರು ಮುಟ್ಟಾಗಿರುವ ಸ್ತ್ರೀಯರನ್ನು ನೋಡಲೂ ಬಾರದು. ಜಾತಿಭ್ರಷ್ಟರಾದವರೊಡನೆ ಮಾತುಕಥೆಗಳನ್ನಾಡಬಾರದು. ಬ್ರಾಹ್ಮಣರನ್ನು ದ್ವೇಷಿಸುವನೊಡನೆಯೂ ವೇದಮಾರ್ಗವನ್ನು ಬಿಟ್ಟು ನಡೆಯುತ್ತಿರುವನೊಡನೆಯೂ ಮಾತನಾಡಬಾರದು.

೧೫. ಪುರಾಣವನ್ನು ಕೇಳುವವನು ಈ ರೀತಿಯಾಗಿರಬೇಕು :—ಸತ್ಯವನ್ನು ನುಡಿಯುವವನಾಗಿಯೂ, ಶುದ್ಧನಾಗಿಯೂ ಇರಬೇಕು. ದಯಾಶೀಲನಾಗಿರಬೇಕು. ಸಾಧ್ಯವಾದಷ್ಟು ಮೌನವನ್ನವಲಂಬಿಸಬೇಕು. ಮೃದುವಾಗಿಯೂ ನಮ್ರನಾಗಿಯೂ ಇರಬೇಕು. ಉದಾರಮನಸ್ಸುಳ್ಳವನಾಗಿರಬೇಕು.

ನಿಷ್ಕಾಮಶ್ಚ ಸಕಾಮಶ್ಚ ನಿಯಮಾಚ್ಛೃಣುಯಾತ್ಕಥಾಂ ।
ಸಕಾಮಃ ಕಾಮಮಾಪ್ನೋತಿ ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥

ದರಿದ್ರಶ್ಚ ಕ್ಷಯೀ ರೋಗೀ ಪಾಪೀ ನಿರ್ಭಾಗ್ಯ ಏವ ಚ ।
ಅನಪತ್ಯೋಽಪಿ ಪುರುಷಃ ಶೃಣುಯಾತ್ಸತ್ಕಥಾಮಿಮಾಂ ॥ ೧೭ ॥

ಕಾಕವಂಧ್ಯಾದಯಸ್ಸಪ್ತವಿಧಾ ಅಪಿ ಖಲಸ್ತ್ರಿಯಃ ।
ಸ್ರವದ್ಗರ್ಭಾ ಚ ಯಾ ನಾರೀ ತಾಭ್ಯಾಂ ಶ್ರಾವ್ಯಾ ಕಥಾಪರೀ ॥ ೧೮ ॥

ಸರ್ವೇಷಾಂ ಶ್ರವಣಂ ಕಾರ್ಯಂ ಸ್ತ್ರೀಭಿಃ ಪುಂಭಿಶ್ಚ ಯತ್ನತಃ ।
ಏತಚ್ಛಿವಪುರಾಣಸ್ಯ ವಿಧಿನಾ ಚ ಕಥಾಂ ಮುನೇ ॥ ೧೯ ॥

ಏತಚ್ಛಿವಪುರಾಣಸ್ಯ ಪಾರಾಯಣದಿನಾನಿ ವೈ ।
ಅತ್ಯುತ್ತಮಾನಿ ಬೋಧ್ಯಾನಿ ಕೋಟಿಯಜ್ಞಸಮಾನಿ ಚ ॥ ೨೦ ॥

---

೧೬. ಈ ರೀತಿಯಾದ ನಿಯಮಗಳನ್ನು ಪಾಲಿಸುತ್ತಾ ಯಾರು ಪುರಾಣವನ್ನು ಕೇಳುವರೋ ಅಂತಹವರಲ್ಲಿ ಫಲಾಪೇಕ್ಷೆಯುಳ್ಳವರು ತಮಗಿಷ್ಟವಾದ ಫಲವನ್ನೂ, ಫಲಾಪೇಕ್ಷೆಯಿಲ್ಲದವರು ಮೋಕ್ಷವನ್ನೂ ಹೊಂದುವರು.

೧೭. ದರಿದ್ರನೂ, ಕ್ಷಯರೋಗಿಯೂ, ಪಾಪಿಯೂ, ಧನವಿಲ್ಲದವನೂ, ಮಕ್ಕಳಿಲ್ಲದವನೂ ಇದನ್ನು ಕೇಳಬಹುದು.

೧೮. ಕಾಕವಂಧ್ಯಾ ಮುಂತಾದ ಏಳು ವಿಧವಾದ ದುಷ್ಟ ಸ್ತ್ರೀಯರಿಗೂ, ಗರ್ಭಸ್ರಾವವುಳ್ಳ ಸ್ತ್ರೀಗೂ ಈ ಪುರಾಣವನ್ನು ಹೇಳಬಹುದು.

೧೯. ಎಲ್ಲಾ ಸ್ತ್ರೀಯರೂ ಮತ್ತು ಪುರುಷರೂ ಪುರಾಣಶ್ರವಣವಿಧಿಯನ್ನನುಸರಿಸಿ ಈ ಶಿವಪುರಾಣವನ್ನು ಕೇಳಬೇಕು.

೨೦. ಈ ಶಿವಪುರಾಣವನ್ನು ಕೇಳುವ ದಿವಸಗಳನ್ನು ಅತ್ಯುತ್ತಮವಾದ ದಿವಸಗಳೆಂಬುದಾಗಿಯೂ, ಕೋಟಿ ಯಜ್ಞಕ್ಕೆ ಸಮಾನವಾದುವುಗಳೆಂಬುದಾಗಿಯೂ ತಿಳಿಯತಕ್ಕದ್ದು,

ಏತೇಷು ವಿಧಿನಾ ದತ್ತಂ ಯದಲ್ಪಮಪಿ ವಸ್ತು ಹಿ ।
ದಿವಸೇಷು ಪರಿಷ್ಟೇಷು ತದಕ್ಷಯ್ಯಫಲಂ ಲಭೇತ್ ॥ ೨೧ ॥

ಏವಂ ಕೃತ್ವಾ ವ್ರತವಿಧಿಂ ಶ್ರುತ್ವೇಮಾಂ ಪರಮಾಂ ಕಥಾಂ ।
ಪರಾನಂದಯುತಃ ಶ್ರೀಮಾನುದ್ಯಾಪನಮಥಾಚರೇತ್ ॥ ೨೨ ॥

ಏತದುದ್ಯಾಪನವಿಧಿಶ್ಚತುರ್ದಶ್ಯಾಸ್ಸಮೋ ಮತಃ !
ಕಾರ್ಯಸ್ತದ್ವದ್ಧನಾಢ್ಯೈಶ್ಚ ತದುಕ್ತಫಲಕಾಂಕ್ಷಿಭಿಃ ॥ ೨೩ ॥

ಅಕಿಂಚನೇಷು ಭಕ್ತೇಷು ಪ್ರಾಯೋ ನೋದ್ಯಾಪನಗ್ರಹಃ ।
ಶ್ರವಣೇನೈವ ಪೂತಾಸ್ತೇ ನಿಷ್ಕಾಮಾಶ್ಯಾಂಭವಾ ಮತಾಃ ॥ ೨೪ ॥

---

೨೧. ಈ ರೀತಿಯಾದ ವಿಧಿಯಿಂದ ಪುರಾಣವನ್ನು ಕೇಳುವ ದಿನಗಳಲ್ಲಿ ಅಲ್ಪವನ್ನಾದರೂ ದಾನಮಾಡಿದರೆ ಅದಕ್ಕೆ ನಾಶರಹಿತವಾದ ಹೆಚ್ಚಾದ ಫಲವು ಬರುವುದು.

೨೨. ಹಿಂದೆ ಹೇಳಿದ ವಿಧಿಯನ್ನು ಪಾಲಿಸಿ ಈ ಶಿವಪುರಾಣವನ್ನು ಕೇಳಿ ಸಂತೋಷಪಟ್ಟನಂತರ ಉದ್ಯಾಪನೆಯನ್ನು ಮಾಡಬೇಕು.

೨೩. ಈ ಉದ್ಯಾಪನ ವಿಧಿಯು ಚತುರ್ದಶೀ ಉದ್ಯಾಪನೆಯ ವಿಧಿಯಂತೆಯೇ ಇರುವುದು. ಆ ವಿಧಿಯನ್ನನುಸರಿಸಿಯೇ, ಉದ್ಯಾಪನೆಯಿಂದ ಬರುವ ಫಲದ ಅಪೇಕ್ಷೆಯುಳ್ಳ ಧನಿಕರು ಉದ್ಯಾಪನೆಯನ್ನೂ ಮಾಡಬಹುದು.

೨೪. ಧನವಿಲ್ಲದವರೂ, ಮಹೇಶ್ವರನ ಭಕ್ತರೂ ಸಾಮಾನ್ಯವಾಗಿ ಈ ಉದ್ಯಾಪನೆಯನ್ನು ಮಾಡದಿದ್ದರೂ ಬಾಧಕವಿಲ್ಲ. ಅವರು ಪುರಾಣವನ್ನು ಕೇಳುವುದರಿಂದಲೇ ಶುದ್ಧರಾಗಿಯೂ ಫಲಾಪೇಕ್ಷೆರಹಿತರಾಗಿಯೂ ಆಗುವರು.

ಏವಂ ಶಿವಪುರಾಣಸ್ಯ ಪಾರಾಯಣಮಹೋತ್ಸವೇ ।
ಸಮಾಪ್ತೇ ಶ್ರೋತೃಭಿರ್ಭಕ್ತ್ಯಾ ಪೂಜಾ ಕಾರ್ಯಾ ಪ್ರಯತ್ನತಃ ॥ ೨೩ ॥

ಶಿವಪೂಜನವತ್ಸಮ್ಯಕ್ ಪುಸ್ತಕಸ್ಯ ಪುರೋ ಮುನೇ ।
ಪೂಜಾ ಕಾರ್ಯಾ ಸುವಿಧಿನಾ ವಕ್ತುಶ್ಚ ತದನಂತರಂ ॥ ೨೬ ॥

ಪುಸ್ತಕಾಚ್ಛಾದನಾರ್ಥಂ ಹಿ ನವೀನಂ ಚಾಸನಂ ಶುಭಂ ।
ಸಮರ್ಚಯೇದ್ದೃಢಂ ದಿವ್ಯಂ ಬಂಧನಾರ್ಥಂ ಚ ಸೂತ್ರಕಂ ॥ ೨೭ ॥

ಪುರಾಣಾರ್ಥಂ ಪ್ರಯಚ್ಛಂತಿ ಯೇ ಸೂತ್ರಂ ವಸನಂ ನವಂ ।
ಭೋಗಿನೋ ಜ್ಞಾನಸಂಪನ್ನಾಸ್ತೇ ಭವಂತಿ ಭವೇ ಭವೇ ॥ ೨೮ ॥

ವಕ್ತ್ರೇ ದದ್ಯಾನ್ಮಹಾರ್ಹಾಣಿ ವಸ್ತೂನಿ ವಿವಿಧಾನಿ ಚ ।
ವಸ್ತ್ರಭೂಷಣಪಾತ್ರಾಣಿ ದಿವ್ಯಂ ಬಹು ವಿಶೇಷತಃ ॥ ೨೯ ॥

---

೨೫. ಈ ರೀತಿಯಾಗಿ ಶಿವಪುರಾಣ ಪಾರಾಯಣವು ಮುಗಿಯಲು ಕೇಳಲು ಬಂದಿದ್ದವರೆಲ್ಲರೂ ಭಕ್ತಿಯಿಂದ ಪೂಜೆಮಾಡಬೇಕು.

೨೬. ಮೊದಲು ಶಿವಪುರಾಣ ಪುಸ್ತಕವನ್ನು ಈಶ್ವರನಿಗೆ ಪೂಜೆಮಾಡು ವಂತೆಯೇ ನಿಯಮದಿಂದ ಪೂಜಿಸಬೇಕು. ಅನಂತರ ಪುರಾಣಿಕನನ್ನು ಪೂಜಿಸ ಬೇಕು.

೨೭. ಪುಸ್ತಕವನ್ನು ಮುಚ್ಚಿಡಲು ಒಂದು ಹೊಸದಾದ ಶುಭ್ರಪ್ರದವಾದ ಆಸನವನ್ನೂ ಮತ್ತು ಬಿಗಿಯಾಗಿಯೂ ಮನೋಹರವಾಗಿಯೂ ಇರುವ ಪುರಾಣವನ್ನು ಕಟ್ಟುವ ದಾರವನ್ನೂ ಪೂಜಿಸಬೇಕು.

೨೮. ಯಾರು ಪುರಾಣದ ಪುಸ್ತಕವನ್ನು ಇಡಲು ಹೊಸದಾದ ಬಟ್ಟೆಯನ್ನೂ ಅದನ್ನು ಕಟ್ಟಲು ದಾರವನ್ನೂ ಕೊಡುವರೋ ಅವರು ಪ್ರತಿ ಜನ್ಮದಲ್ಲೂ ಭೋಗ ಶಾಲಿಗಳಾಗಿಯೂ ಜ್ಞಾನಸಂಪನ್ನರಾಗಿಯೂ ಆಗುವರು.

೨೯-೩೧. ಯಾರು ಪುರಾಣಿಕನಿಗೆ ಬೆಲೆಬಾಳುವ ವಿಧವಿಧವಾದ ವಸ್ತು ಗಳನ್ನೂ ವಸ್ತ್ರ, ಒಡವೆ, ಪಾತ್ರೆ ಮುಂತಾದವುಗಳನ್ನು ವಿಶೇಷವಾಗಿ ಕೊಡುವರೋ ಮತ್ತು ಕುಳಿತುಕೊಳ್ಳಲು ಕಂಬಲ, ಕೃಷ್ಣಾಜಿನ, ಬಟ್ಟೆ, ಮಂಚ, ಮಣೆ ಮುಂತಾ

ಆಸನಾರ್ಥಂ ಪ್ರಯಚ್ಛಂತಿ ಪುರಾಣಸ್ಯ ಚ ಯೇ ನರಾಃ ।
ಕಂಬಲಾಜಿನವಾಸಾಂಸಿ ಮಂಚಂ ಫಲಕಮೇವ ಚ ॥ ೩೦ ॥

ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಸ್ಥಿತ್ವಾ ಬ್ರಹ್ಮಪದೇ ಕಲ್ಪಂ ಯಾಂತಿ ಶೈವಪದಂ ತತಃ ॥ ೩೧ ॥

ಏವಂ ಕೃತ್ವಾ ವಿಧಾನೇನ ಪುಸ್ತಕಸ್ಯ ಪ್ರಪೂಜನಂ ।
ವಕ್ತುಶ್ಚ ಭುವಿಶಾರ್ದೂಲ ಮಹೋತ್ಸವಪುರಸ್ಸರಂ ॥ ೩೨ ॥

ಸಹಾಯಾರ್ಥಂ ಸ್ಥಾಪಿತಸ್ಯ ಪಂಡಿತಸ್ಯ ಪ್ರಪೂಜನಂ ।
ಕುರ್ಯಾತ್ತದನುಸಾರೇಣ ಕಿಂಚಿದೂನಂ ಧನಾದಿಭಿಃ ॥ ೩೩ ॥

ಸಮಾಗತೇಭ್ಯೋ ವಿಪ್ರೇಭ್ಯೋ ದದ್ಯಾದನ್ನಂ ಧನಾದಿಕಂ ।
ಮಹೋತ್ಸವಃ ಪ್ರಕರ್ತವ್ಯೋ ಗೀತವಾದ್ಯೈಶ್ಚ ನರ್ತನೈಃ ॥ ೩೪ ॥

---

ದುವುಗಳನ್ನು ಕೊಡುವರೋ ಅವರಿಗೆ ಸ್ವರ್ಗಲೋಕವು ಪ್ರಾಪ್ತಿಯಾಗುವುದು. ಅಲ್ಲಿ ವರು ಅನೇಕ ಭೋಗಗಳನ್ನನುಭವಿಸಿ ಒಂದು ಕಲ್ಪಕಾಲ ಬ್ರಹ್ಮನ ಸ್ಥಾನವನ್ನು ಪಡೆದು ಅನಂತರ ಈಶ್ವರನ ಸ್ಥಾನಕ್ಕೆ ಹೋಗುವರು.

೩೨. ಈ ರೀತಿಯಾಗಿ ಪುಸ್ತಕದ ಪೂಜೆಯಾದ ಮೇಲೆ ಪುರಾಣಿಕನ ಮುಂಭಾಗದಲ್ಲಿ ಮಹೋತ್ಸವದೊಡನೆ ಅವನ ಪೂಜೆಯನ್ನು ಮಾಡಬೇಕು.

೩೩. ಅನಂತರ ಪುರಾಣಿಕನ ಸಹಾಯಾರ್ಥವಾಗಿ ಇರುವ ಪಂಡಿತನನ್ನು, ಪುರಾಣೀಕನಿಗೆ ಕೊಟ್ಟುದಕ್ಕಿಂತ ಸ್ವಲ್ಪ ಕಡಿಮೆ ಧನಾದಿಗಳನ್ನು ಕೊಡುವುದರ ಮೂಲಕ ಪುರಾಣಿಕನನ್ನು ಪೂಜೆಮಾಡಿದಂತೆಯೇ ಪೂಜಿಸಬೇಕು.

೩೪. ಅನಂತರ ಅಲ್ಲಿಗೆ ಬಂದಿರುವ ಬ್ರಾಹ್ಮಣರಿಗೆಲ್ಲಾ ಭೋಜನಾದಿಗಳಿಂದ ತೃಪ್ತಿಪಡಿಸಿ ಧನಾದಿಗಳನ್ನು ಕೊಡಬೇಕು. ಅನಂತರ ಗೀತ, ವಾದ್ಯ ಮುಂತಾದುವುಗಳನ್ನೇರ್ಪಡಿಸಿ ನರ್ತನ ಮುಂತಾದುವುಗಳಿಂದ ಉತ್ಸವವನ್ನು ಮಾಡಬೇಕು.

ವಿರಕ್ತಶ್ಚ ಭವೇಚ್ಛ್ರೋತಾ ಪರ್ವೇಽಹನಿ ವಿಶೇಷತಃ ।
ಗೀತಾ ವಾಚ್ಯಾ ಶಿವೇನೋಕ್ತಾ ರಾಮಚಂದ್ರಾಯ ಯಾ ಮುನೇ ॥ ೩೫ ॥

ಗೃಹಸ್ಥಶ್ಚೇದ್ಭವೇಚ್ಛ್ರೋತಾ ಕರ್ತವ್ಯಸ್ತೇನ ಧೀಮತಾ ।
ಹೋಮಃ ಶುದ್ಧೇನ ಹವಿಷಾ ಕರ್ಮಣಸ್ತಸ್ಯ ಶಾಂತಯೇ ॥ ೩೬ ॥

ರುದ್ರಸಂಹಿತಯಾ ಹೋಮಃ ಪ್ರತಿಶ್ಲೋಕೇನ ವಾ ಮುನೇ ।
ಗಾಯತ್ರ್ಯಾಸ್ತನ್ಮಯತ್ವಾಚ್ಚ ಪುರಾಣಸ್ಯಾಸ್ಯ ತತ್ತ್ವತಃ ॥ ೩೭ ॥

ಅಥವಾ ಮೂಲಮಂತ್ರೇಣ ಪಂಚವರ್ಣೇನ ಶೈವತಃ ।
ಹೋಮಾಶಕ್ತೋ ಬುಧೋ ಹೋಮ್ಯಹವಿರ್ದದ್ಯಾದ್ದ್ವಿಜಾಯ ತತ್ ॥

ದೋಷಯೋಃ ಪ್ರಶಮಾರ್ಥಂ ಚ ನ್ಯೂನತಾಧಿಕತಾಖ್ಯಯೋಃ ।
ಪಠೇಚ್ಚ ಶೃಣ್ಯಾಯಾದ್ಭಕ್ತ್ಯಾ ಶಿವನಾಮಸಹಸ್ರಕಂ ॥ ೩೯ ॥

---

೩೫. ಪುರಾಣವನ್ನು ಕೇಳುವವನು ವಿರಕ್ತನಾದ ಪಕ್ಷದಲ್ಲಿ ಎಂದರೆ ಗೀತ ವಾದ್ಯ, ನರ್ತನಾದಿಗಳಲ್ಲಿ ಅಭಿಲಾಷೆ ಇಲ್ಲದವನಾದರೆ ಮಾರನೆಯ ದಿನ ಮಹೇಶ್ವರನು ಶ್ರೀರಾಮಚಂದ್ರನಿಗೆ ಹೇಳಿದ ಶಿವಗೀತೆಯನ್ನು ಪಠಿಸಬೇಕು.

೩೬. ಪುರಾಣವನ್ನು ಕೇಳುವವನು ಗೃಹಸ್ಥನಾದಲ್ಲಿ ಅವನು ಶುದ್ಧವಾದ ಹವಿಸ್ಸಿನಿಂದ ಕರ್ಮಶಾಂತಿಗೋಸ್ಕರವಾಗಿ ಹೋಮಮಾಡಬೇಕು.

೩೭. ರುದ್ರಗಾಯತ್ರಿಯು ಶಿವಪುರಾಣದ ತತ್ತ್ವಸ್ವರೂಪವಾದುದರಿಂದ ಆ ರುದ್ರಸಂಹಿತೆಯಿಂದಲಾದರೂ ಅಥವಾ ಆ ರುದ್ರಸಂಹಿತೆಯ ಪ್ರತಿಯೊಂದು ಶ್ಲೋಕ ವನ್ನು ಹೇಳುತ್ತಲಾದರೂ ಹೋಮಮಾಡಬೇಕು.

೩೮. ಅಥವಾ ಶಿವಪಂಚಾಕ್ಷರಿಯನ್ನು ಪಠಿಸುತ್ತಾ ಹೋಮಮಾಡಬಹುದು. ಹೋಮಮಾಡಲಶಕ್ತನಾದವನು ಆ ಹೋಮದ್ರವ್ಯಾದಿಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

೩೯. ನ್ಯೂನಾಧಿಕದೋಷ ಪರಿಹಾರಾರ್ಥವಾಗಿ ಶಿವಸಹಸ್ರ ನಾಮವನ್ನು ಭಕ್ತಿ ಯಿಂದ ಓದಬೇಕು. ಅಥವಾ ಓದಿಸಿ ಕೇಳಲೂ ಬಹುದು.

ತೇನ ಸ್ಯಾತ್ಸಫಲಂ ಸರ್ವಂ ಸಫಲಂ ನಾತ್ರ ಸಂಶಯಃ ।
ಯತೋ ನಾಸ್ತ್ಯಧಿಕಂ ತ್ವಸ್ಮಾತ್ತ್ರೈಲೋಕ್ಯೇ ವಸ್ತು ಕಿಂಚನ ॥ ೪೦ ॥

ಏಕಾದಶಮಿತಾನ್ವಿಪ್ರಾನ್ಭೋಜಯೇನ್ಮಧುಪಾಯಸೈಃ ।
ದದ್ಯಾತ್ತೇಭ್ಯೋ ದಕ್ಷಿಣಾಂ ಚ ವ್ರತಪೂರ್ಣತ್ವಸಿದ್ಧಯೇ ॥ ೪೧ ॥

ಶಕ್ತ್ಯಾ ಪಲತ್ರಯಮಿತಸ್ವರ್ಣೇನ ಸುಂದರಂ ಮುನೇ ।
ಸಿಂಹಂ ವಿಧಾಯ ತತ್ರಾಸ್ಯ ಪುರಾಣಸ್ಯ ಶುಭಾಕ್ಷರಂ ॥ ೪೨ ॥

ಲೇಖಿತಂ ಲಿಖಿತಂ ವಾಪಿ ಸಂಸ್ಥಾಪ್ಯ ವಿಧಿನಾ ಪುಮಾನ್ ।
ಸಂಪೂಜ್ಯ ವಾಹನಾದ್ಯೈಶ್ಚ ಹ್ಯುಪಚಾರೈಸ್ಸದಕ್ಷಿಣಾಂ ॥ ೪೩ ॥

ವಸ್ತ್ರಭೂಷಣಗಂದಾದ್ಯೈಃ ಪೂಜಿತಾಯ ಯತಾತ್ಮನೇ ।
ಆಚಾರ್ಯಾಯ ಸುಧೀರ್ದದ್ಯಾಚ್ಛಿವಸಂತೋಷಹೇತವೇ ॥ ೪೪ ॥

---

೪೦. ಆ ರೀತಿಯಾಗಿ ಮಾಡುವುದರಿಂದ ತನ್ನ ಇಷ್ಟಾರ್ಥವೆಲ್ಲವೂ ಸಫಲವಾಗುವುದು. ಇದಕ್ಕಿಂತಲೂ ಅಧಿಕವಾದ ವಸ್ತುವು ಮೂರು ಲೋಕದಲ್ಲಿ ಎಲ್ಲಿಯೂ ಯಾವುದೂ ಇಲ್ಲ.

೪೧. ಹನ್ನೊಂದು ಜನ ಬ್ರಾಹ್ಮಣರನ್ನು ಕರೆದು, ಮಧು, ಪಾಯಸ ಮುಂತಾದುವುಗಳೊಡನೆ ಭೋಜನಮಾಡಿಸಬೇಕು. ವ್ರತಪೂರ್ಣವಾಗುವುದಕ್ಕೋಸ್ಕರ ಅವರಿಗೆ ದಕ್ಷಿಣೆಯನ್ನು ಕೊಡಬೇಕು.

೪೨-೪೪. ಧನವಂತನಾದಲ್ಲಿ ಮೂರುಪಲ ತೂಕದ ಸುವರ್ಣದಲ್ಲಿ ಒಂದು ಸಿಂಹಾಕಾರವಾದ ಒಡವೆಯನ್ನು ಮಾಡಿಸಿ ಅದರಲ್ಲಿ ಶಿವಪುರಾಣವೆಂದು ಅಕ್ಷರವನ್ನು ಕೆತ್ತಿಸಿ ಅಥವಾ ತಾನೇ ಬರೆದು ಅದನ್ನು ಪೂಜಿಸಿ, ವಾಹನಾದ್ಯುಪಚಾರಗಳಿಂದಲೂ, ವಸ್ತ್ರಭೂಷಣಗಂಧಾದಿಗಳಿಂದಲೂ ಪುರಾಣಿಕನನ್ನು ಪೂಜಿಸಿ ಆ ಆಚಾರ್ಯನಿಗೆ ಶಿವನು ತೃಪ್ತಿ ಹೊಂದಲೆಂದು ಅದನ್ನು ದಾನಮಾಡಬೇಕು.

ತೇನ ದಾನಪ್ರಭಾವೇಣ ಪುರಾಣಸ್ಯಾಸ್ಯ ಶೌನಕ ।
ಸಂಪ್ರಾಪ್ಯಾನುಗ್ರಹಂ ಶೈವಂ ಮುಕ್ತಃ ಸ್ಯಾದ್ಭವಬಂಧನಾತ್ ॥ ೪೫ ॥

ಏವಂ ಕೃತೇ ವಿಧಾನೇ ಚ ಶ್ರೀಮಚ್ಛಿವಪುರಾಣಕಂ ।
ಸಂಪೂರ್ಣಫಲದಂ ಸ್ಯಾದ್ವೈ ಭುಕ್ತಿಮುಕ್ತಿಪ್ರದಾಯಕಂ ॥ ೪೬ ॥

ಇತೀ ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।
ಶ್ರೀಮಚ್ಛಿವಪುರಾಣಸ್ಯ ಮಾಹಾತ್ಮ್ಯಂ ಸರ್ವಕಾಮದಂ ॥ ೪೭ ॥

ಶ್ರೀಮಚ್ಛಿವಪುರಾಣಂ ತು ಪುರಾಣತಿಲಕಂ ಸ್ಮೃತಂ ।
ಮಹಚ್ಛಿವಪ್ರಿಯಂ ರಮ್ಯಂ ಭವರೋಗನಿವಾರಣಂ ॥ ೪೮ ॥

ಯೇ ಜನ್ಮಭಾಜಃ ಖಲು ಜೀವಲೋಕೇ
ಯೇ ವೈ ಸದಾ ಧ್ಯಾಯಂತಿ ವಿಶ್ವನಾಥಂ ।

---

೪೫. ಆ ರೀತಿಯಾದ ದಾನದ ಪ್ರಭಾವದಿಂದ ಈಶ್ವರನ ಕೃಪೆಗೆ ಪಾತ್ರನಾಗಿ ಸಂಸಾರದಿಂದ ಬಿಡಲ್ಪಟ್ಟು ಮೋಕ್ಷವನ್ನು ಹೊಂದುವನು.

೪೬. ಈ ರೀತಿಯಾಗಿ ಶಿವಪುರಾಣವನ್ನು ಕೇಳಿದರೆ ಭುಕ್ತಿಯನ್ನೂ ಮೋಕ್ಷವನ್ನೂ ಕೊಡುವ ಸಂಪೂರ್ಣ ಫಲವು ಬರುತ್ತದೆ.

೪೭. ಸರ್ವೇಷ್ಟ ಫಲದಾಯಕವಾದ ಶಿವಪುರಾಣ ಮಾಹಾತ್ಮ್ಯೆಯನ್ನು ಹೇಳಿರುವೆನು. ಎಲೈ ಶೌನಕನೇ, ಈಗ ನೀನು ಮತ್ತೇನನ್ನು ಕೇಳಲಿಚ್ಛಿಸುವೆ?

೪೮. ಸಂಪದ್ಯುಕ್ತವಾದ ಶಿವಪುರಾಣವು ಪುರಾಣಗಳಲ್ಲೆಲ್ಲಾ ಶ್ರೇಷ್ಠವಾದುದು. ಇದು ಮಹೇಶ್ವರನಿಗೆ ಸಂತೋಷದಾಯಕವಾದುದು. ಇದನ್ನು ಕೇಳುವುದರಿಂದ ಸಂಸಾರವೆಂಬ ರೋಗವು ನಾಶವಾಗಿ ಮೋಕ್ಷವು ಲಭಿಸುವುದು.

೪೯. ಮನುಷ್ಯ ಜನ್ಮದಲ್ಲಿ ಹುಟ್ಟಿ ಯಾರು ಯಾವಾಗಲೂ ಪ್ರಪಂಚಕ್ಕೆ ಅಧಿಪತಿಯಾದ ಈಶ್ವರನನ್ನು ಧ್ಯಾನಮಾಡುವರೋ ಅವರ ಗುಣಗಳನ್ನು

ವಾಣೀ ಗುಣಾರ್ ಸ್ತೌತಿ ಕಥಾಂ ಶೃಣೋತಿ
ಶ್ರೋತೃಪ್ರರಾಸ್ತೇ ಭವಮುತ್ತರಂತಿ ॥ ೪೯ ॥

ಸಕಲಗುಣವಿಭೇಧೈರ್ನಿತ್ಯಮಸ್ಪಷ್ಟರೂಪಂ
ಜಗತಿ ಚ ಬಹಿರಂತರ್ಭಾಸಮಾನಂ ಮಹಿಮ್ನಾ ।
ಮನಸಿ ಚ ಬಹಿರಂತರ್ವಾಙ್ಮನೋವೃತ್ತಿರೂಪಂ
ಪರಮಶಿವಮನಂತಾನಂದಸಾಂದ್ರಂ ಪ್ರಪದ್ಯೇ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಸನತ್ಕುಮಾರಸಂಹಿತಾಯಾಂ
ಶಿವಪುರಾಣಶ್ರವಣವ್ರತೀನಾಂ ವಿಧಿನಿಷೇಧಪುಸ್ತಕ
ವಕ್ತೃಪೂಜನವರ್ಣನಂ ನಾಮ
ಸಪ್ತಮೋಽಧ್ಯಾಯಃ

---

ಸಾಕ್ಷಾತ್ಸರಸ್ವತಿಯೇ ವರ್ಣಿಸುವಳು. ಅಂಥವರೆಲ್ಲರೂ ಸಂಸಾರವನ್ನು ದಾಟಿ ಮೋಕ್ಷವನ್ನು ಪಡೆವರು.

೫೦. ಪರಮೇಶ್ವರನು ಸತ್ವರಜಸ್ತಮೋಗುಣರಹಿತನಾದ ಅವ್ಯಕ್ತಸ್ವರೂಪನು. ತನ್ನ ಅಸಾಧಾರಣ ಮಹಿಮೆಯಿಂದ ಪ್ರಪಂಚದ ಹೊರಗೂ ಒಳಗೂ ಪ್ರಕಾಶಿಸುತ್ತಿರುವನು. ಮನಸ್ಸಿನ ಒಳಗೂ ಹೊರಗೂ ವಾಕ್‌ಸ್ವರೂಪನಾಗಿಯೂ ಮನಸ್ಸಿನ ಸ್ವರೂಪನಾಗಿಯೂ ಇರುವ ಪರಶಿವನನ್ನು ಭಕ್ತಿಯಿಂದ ಧ್ಯಾನಮಾಡುವೆನು.

ಇಲ್ಲಿಗೆ ಶ್ರೀ ಸ್ಕಾಂದಮಹಾಪುರಾಣದಲ್ಲಿ ಸನತ್ಕುಮಾರಸಂಹಿತೆಯಲ್ಲಿ ಶಿವಪುರಾಣ
ಶ್ರವಣವಿಧಿ, ನಿಷೇಧ, ಪುಸ್ತಕ ಪೂಜೆ, ಪುರಾಣಿಕನ ಪೂಜೆಯು
ವರ್ಣನೆ, ಇವುಗಳನ್ನೊಳಗೊಂಡಿರುವ ಏಳನೆಯ
ಅಧ್ಯಾಯವು ಮುಗಿದುದು.

**ಶಿವಪುರಾಣಮಾಹಾತ್ಮ್ಯೆಯು ಮುಗಿದುದು.**

---

॥ ಶ್ರೀಃ ॥

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ಶಿವಮಹಾಪುರಾಣಂ



॥ ಶ್ರೀಃ ॥

॥ ಓಂ ನಮಃ ಶಿವಾಯ ॥

ಶ್ರೀ ವ್ಯಾಸಮಹರ್ಷಿಪ್ರಣೀತಂ

# ॥ ಶ್ರೀ ಶಿವಮಹಾಪುರಾಣಂ ॥

## ವಿದ್ಯೇಶ್ವರಸಂಹಿತಾಯಾಂ

## ಪ್ರಥಮೋಽಧ್ಯಾಯಃ

ಆದ್ಯಂತಮಂಗಲಮಜಾತಸಮಾನಭಾವ-
ಮಾರ್ಯಂ ತಮೀಶಮಜರಾಮರಮಾತ್ಮದೇವಂ ।
ಪಂಚಾನನಂ ಪ್ರಬಲಪಂಚವಿನೋದಶೀಲಂ
ಸಂಭಾವಯೇ ಮನಸಿ ಶಂಕರಮಂಬಿಕೇಶಂ ॥

---

## ಮೊದಲನೆಯ ಅಧ್ಯಾಯವು.

ಪುರಾಣಗಳಲ್ಲಿ ಅತಿ ಶ್ರೇಷ್ಠವೆನಿಸಿದ ಶಿವಮಹಾಪುರಾಣವನ್ನು ರಚಿಸಲು ಉದ್ದೇಶಿಸಿ, ಶ್ರೀ ವ್ಯಾಸಮಹರ್ಷಿಯು ಈ ಪುರಾಣ ಪ್ರತಿಪಾದ್ಯನಾದ ಪರಮೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುವುದರ ಮೂಲಕ ಮಂಗಳಾಚರಣೆಯನ್ನು ಮಾಡಿ ಗ್ರಂಥಾರಂಭವನ್ನು ಮಾಡುವನು.

ಶ್ಲೋಕಾರ್ಥವು—ಅಂಬಿಕಾಪತಿಯಾದ ಶ್ರೀ ಪರಮೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುವೆನು. ಆ ಪರಮೇಶ್ವರನು ಜಗತ್ಸೃಷ್ಟಿಕಾಲದಲ್ಲಿಯೂ, ಸಂಹಾರ ಕಾಲದಲ್ಲಿಯೂ ಸಮಸ್ತ ಪ್ರಾಣಿಗಳಿಗೂ ಮಂಗಳವನ್ನುಂಟುಮಾಡುವವನು; ಸೃಷ್ಟಿಸಿದ ಪ್ರಾಣಿಗಳಿಗೆ ಹಿತವನ್ನುಂಟುಮಾಡಿ ಕಾಪಾಡುವುದರಲ್ಲಿ ಎಲ್ಲ ದೇವತೆಗಳಿಗಿಂತಲೂ ಅತ್ಯಧಿಕನು; ಪರಮಪೂಜ್ಯನು; ಚರಾಚರಾತ್ಮಕವಾದ ಸಮಸ್ತ ಪ್ರಪಂಚಕ್ಕೂ ಒಡೆಯನು; ಮುಪ್ಪು, ಮರಣ ಮೊದಲಾದ ವಿಕಾರವಿಲ್ಲದವನು; ಸ್ವಯಂ ಪ್ರಕಾಶ

॥ ವ್ಯಾಸ ಉವಾಚ ॥

ಧರ್ಮಕ್ಷೇತ್ರೇ ಮಹಾಕ್ಷೇತ್ರೇ ಗಂಗಾಕಾಲಿಂದಿಸಂಗಮೇ ।
ಪ್ರಯಾಗೇ ಪರಮೇ ಪುಣ್ಯೇ ಬ್ರಹ್ಮಲೋಕಸ್ಯ ವರ್ತ್ಮನಿ ॥ ೧ ॥

ಮುನಯಃ ಶಂಸಿತಾತ್ಮಾನಃ ಸತ್ಯವ್ರತಪರಾಯಣಾಃ ।
ಮಹೌಜಸೋ ಮಹಾಭಾಗಾ ಮಹಾಸತ್ರಂ ವಿತೇನಿರೇ ॥ ೨ ॥

ತತ್ರ ಸತ್ರಂ ಸಮಾಕರ್ಣ್ಯ ವ್ಯಾಸಶಿಷ್ಯೋ ಮಹಾಮುನಿಃ ।
ಆಜಗಾಮ ಮುನೀನ್ದ್ರಷ್ಟುಂ ಸೂತಃ ಪೌರಾಣಿಕೋತ್ತಮಃ ॥ ೩ ॥

---

ಸ್ವರೂಪನು ; ಐದು ಮುಖಗಳುಳ್ಳವನು ; ಪಂಚಮಹಾಪಾತಕಗಳನ್ನು ಅಥವಾ ಶಬ್ದಾದಿಪಂಚವಿಷಯಗಳನ್ನು ಹೋಗಲಾಡಿಸಿ ಪ್ರಾಣಿಗಳಿಗೆ ಸುಖವನ್ನೂ ಮುಕ್ತಿಯನ್ನೂ ಕೊಡುವವನು ; ಇಂತಹ ದೇವದೇವನಾದ ಪರಮೇಶ್ವರನನ್ನು ಮನಸ್ಸಿನಲ್ಲಿ ಅನನ್ಯಭಾವದಿಂದ ಧ್ಯಾನಮಾಡುವೆನು.

ಈ ರೀತಿ ಪರಮೇಶ್ವರನ ಸ್ಮರಣೆಯನ್ನು ಮಾಡಿ ಶಿವಪುರಾಣವನ್ನು ಹೇಳಲುದ್ಯುಕ್ತನಾಗುವನು.

೧-೨. ವ್ಯಾಸಮಹರ್ಷಿಯು ಈರೀತಿ ಹೇಳಲುಪಕ್ರಮಿಸಿದನು :—ಗಂಗಾಯಮುನಾನದಿಗಳ ಸಂಗಮಸ್ಥಳದಲ್ಲಿ ಪರಮಪವಿತ್ರವೂ, ಧರ್ಮಕ್ಷೇತ್ರವೂ ಆದ ಪ್ರಯಾಗವೆಂಬ ಮಹಾಕ್ಷೇತ್ರವಿರುವುದು. ಅದು ಬ್ರಹ್ಮಲೋಕಪ್ರಾಪ್ತಿಗೆ ದ್ವಾರಭೂತವಾಗಿರುವುದು. ಇಂತಹ ಕ್ಷೇತ್ರದಲ್ಲಿ ಜಿತೇಂದ್ರಿಯರೂ, ಸತ್ಯನಿಷ್ಠರೂ, ಮಹಾತೇಜಸ್ವಿಗಳೂ, ತಪಸ್ವಿಗಳೂ ಆದ ಅನೇಕ ಮುನಿಗಳು ಮಹಾಸತ್ರವೆಂಬ ದೊಡ್ಡ ಯಾಗವನ್ನು ಮಾಡಿದರು.

೩. ಅಲ್ಲಿ ನಡೆಯುತ್ತಿರುವ ಯಾಗವಿಚಾರವನ್ನು ಕೇಳಿ, ಪುರಾಣಗಳನ್ನು ಚನ್ನಾಗಿ ತಿಳಿದಿರುವ, ವ್ಯಾಸಮಹರ್ಷಿಯ ಶಿಷ್ಯನಾದ ಸೂತನೆಂಬ ಮಹಾಮುನಿಯು ಆ ಪ್ರಯಾಗಕ್ಷೇತ್ರದಲ್ಲಿರುವ ಋಷಿಗಳನ್ನು ನೋಡಲು ಅಲ್ಲಿಗೆ ಬಂದನು.

ತಂ ದೃಷ್ಟ್ವಾ ಸೂತಮಾಯಾಂತಂ ಹರ್ಷಿತಾ ಮುನಯಸ್ತದಾ ।
ಚೇತಸಾ ಸುಪ್ರಸನ್ನೇನ ಪೂಜಾಂ ಚಕ್ರುರ್ಯಥಾವಿಧಿ ॥ ೪ ॥

ತತೋ ವಿನಯಸಂಯುಕ್ತಾಃ ಪ್ರೋಚುಃ ಸಾಂಜಲಯಶ್ಚ ತೇ ।
ಸುಪ್ರಸನ್ನಾ ಮಹಾತ್ಮಾನಃ ಸ್ತುತಿಂ ಕೃತ್ವಾ ಯಥಾವಿಧಿ ॥ ೫ ॥

ರೋಮಹರ್ಷಣ ಸರ್ವಜ್ಞ ಭವಾನ್ವೈ ಭಾಗ್ಯಗೌರವಾತ್ ।
ಪುರಾಣವಿದ್ಯಾಮಖಿಲಾಂ ವ್ಯಾಸಾತ್ಪ್ರತ್ಯರ್ಥಮೀಯಿವಾನ್ ॥ ೬ ॥

ತಸ್ಮಾದಾಶ್ಚರ್ಯಭೂತಾನಾಂ ಕಥಾನಾಂ ತ್ವಂ ಹಿ ಭಾಜನಂ ।
ರತ್ನಾನಾಮುರುಸಾರಾಣಾಂ ರತ್ನಾಕರ ಇವಾರ್ಣವಃ ॥ ೭ ॥

ಯಚ್ಚ ಭೂತಂ ಚ ಭವ್ಯಂ ಚ ಯಚ್ಚಾನ್ಯದ್ವಸ್ತು ವರ್ತತೇ ।
ನ ತ್ವಯಾಽವಿದಿತಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥ ೮ ॥

---

೪. ಹೀಗೆ ಅಲ್ಲಿಗೆ ಬಂದ ಸೂತಪೌರಾಣಿಕನನ್ನು ನೋಡಿ ಅಲ್ಲಿದ್ದ ಋಷಿಗಳು ಹರ್ಷಗೊಂಡು ಸಂಭ್ರಮದಿಂದ ಆತನನ್ನು ಯಥಾ ವಿಧಿಯಾಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು.

೫. ಬಳಿಕ ಮಹಾತ್ಮರಾದ ಆ ಋಷಿಗಳು ಸಂತೋಷದಿಂದ ಕೈಮುಗಿದುಕೊಂಡು ಆ ಸೂತಮುನಿಯನ್ನು ಸ್ತೋತ್ರಮಾಡಿ, ವಿನಯಪೂರ್ವಕವಾಗಿ ಹೀಗೆ ಹೇಳಿದರು.

೬-೭. ಎಲೈ ಸರ್ವಜ್ಞನಾದ ಸೂತಮುನಿಯೇ, ನೀನು ಪೂರ್ವಸುಕೃತದಿಂದ ಪುರಾಣವಿದ್ಯೆಗಳೆಲ್ಲವನ್ನೂ ವ್ಯಾಸಮಹರ್ಷಿಯಿಂದ ಅಧ್ಯಯನಮಾಡಿರುವೆ. ಆದುದರಿಂದ ಅನರ್ಘ್ಯವಾದ ರತ್ನಗಳಿಗೆ ಸಮುದ್ರವು ಆವಾಸಸ್ಥಾನವಾಗಿರುವಂತೆ ನೀನು ಆಶ್ಚರ್ಯಕರವಾದ ಕಥೆಗಳಿಗೆ ನಿಧಿಯಾಗಿರುವೆ.

೮. ಈ ಮೂರು ಲೋಕಗಳಲ್ಲಿ ಹಿಂದೆ ನಡೆದಿರುವ, ಮುಂದೆ ನಡೆಯುವ ಮತ್ತು ಈಗ ನಡೆಯುತ್ತಿರುವ ಸಂಗತಿಗಳಾವವುಂಟೋ ಅವುಗಳಲ್ಲಿ ನಿನಗೆ ತಿಳಿಯದ ವಿಷಯವು ಒಂದೂ ಇರುವುದಿಲ್ಲ.

ತ್ವಂ ಮದಿಷ್ಟಿವಶಾದಸ್ಯ ದರ್ಶನಾರ್ಥಮಿಹಾಽಗತಃ ।
ಕುರ್ವನ್ಕಿಮಪಿ ನಃ ಶ್ರೇಯೋ ನ ವೃಥಾ ಗಂತುಮರ್ಹಸಿ ॥ ೯ ॥

ತತ್ತ್ವಂ ಶ್ರುತಂ ಸ್ಮ ನಃ ಸರ್ವಂ ಪೂರ್ವಮೇವ ಶುಭಾಶುಭಂ ।
ನ ತೃಪ್ತಿಮಧಿಗಚ್ಛಾಮಃ ಶ್ರವಣೇಚ್ಛಾ ಮುಹುರ್ಮುಹುಃ ॥ ೧೦ ॥

ಇದಾನೀಮೇಕಮೇವಾಸ್ತಿ ಶ್ರೋತವ್ಯಂ ಸೂತ ಸನ್ಮತೇ ।
ತದ್ರಹಸ್ಯಮಪಿ ಬ್ರೂಹಿ ಯದಿ ತೇಽನುಗ್ರಹೋ ಭವೇತ್ ॥ ೧೧ ॥

ಪ್ರಾಪ್ತೇ ಕಲಿಯುಗೇ ಘೋರೇ ನರಾಃ ಪುಣ್ಯವಿವರ್ಜಿತಾಃ ।
ದುರಾಚಾರರತಾಃ ಸರ್ವೇ ಸತ್ಯವಾರ್ತಾಪರಾಙ್ಮುಖಾಃ ॥ ೧೨ ॥

---

೯. ಈ ನಮ್ಮ ಯಜ್ಞವನ್ನು ನೋಡುವ ಕಾರಣದಿಂದ ನೀನು ಇಲ್ಲಿಗೆ ಬಂದಿರುವೆ. ನಮ್ಮಗಳಿಗೆ ಯಥೋಚಿತವಾಗಿ ಶ್ರೇಯಸ್ಸನ್ನುಂಟುಮಾಡದೆ ಹೋಗುವುದು ನಿನಗೆ ಯೋಗ್ಯವಲ್ಲ.

೧೦. ಒಳ್ಳೆಯದೂ ಕೆಟ್ಟದ್ದೂ ಆದ ಅನೇಕ ಬಗೆಯ ತತ್ತ್ವವಿಚಾರಗಳನ್ನು ನಾವು ಈ ಮೊದಲೇ ಕೇಳಿರುವೆವು. ಆದರೂ ಅದರಿಂದ ನಮಗೆ ತೃಪ್ತಿಯುಂಟಾಗಿರುವುದಿಲ್ಲ. ಮತ್ತೆ ಮತ್ತೆ ಕೇಳಬೇಕೆಂಬ ಕುತೂಹಲವು ಅಧಿಕವಾಗಿರುವುದು.

೧೧. ಸದ್ಬುದ್ಧಿಯುಳ್ಳ ಎಲೈ ಸೂತಮುನಿಯೇ, ಈಗ ನಾವು ಕೇಳಬೇಕೆಂದಿರುವ ವಿಷಯವು ಒಂದುಳಿದಿರುವುದು. ನಮಗೆ ಅನುಗ್ರಹವನ್ನು ಮಾಡಬೇಕೆಂಬ ಇಚ್ಛೆಯು ನಿನಗಿದ್ದಲ್ಲಿ, ರಹಸ್ಯವಾದರೂ ಆ ವಿಷಯವನ್ನು ನಮಗೆ ಹೇಳಬೇಕು.

೧೨. ಆ ವಿಷಯವೇನೆಂದರೆ—ಘೋರವಾದ ಕಲಿಯುಗವು ಪ್ರಾಪ್ತವಾಗಲು ಜನಗಳೆಲ್ಲರೂ ಪುಣ್ಯಕಾರ್ಯಗಳನ್ನು ಮಾಡುವುದನ್ನು ಬಿಟ್ಟು ಕೆಟ್ಟ ಕೆಲಸಗಳಲ್ಲಿಯೇ ಆಸಕ್ತರಾಗಿರುತ್ತಾ ಸತ್ಯಮಾರ್ಗದಲ್ಲಿ ವಿಮುಖರಾಗಿರುವರು.

ಪರಾಪವಾದನಿರತಾಃ ಪರದ್ರವ್ಯಾಭಿಲಾಷಿಣಃ ।
ಪರಸ್ತ್ರೀಸಕ್ತಮನಸಃ ಪರಹಿಂಸಾಪರಾಯಣಾಃ ॥ ೧೩ ॥

ದೇಹಾತ್ಮದೃಷ್ಟಯೋ ಮೂಢಾ ನಾಸ್ತಿಕಾಃ ಪಶುಬುದ್ಧಯಃ ।
ಮಾತೃಪಿತೃಕೃತದ್ವೇಷಾಃ ಸ್ತ್ರೀದೇವಾಃ ಕಾಮಕಿಂಕರಾಃ ॥ ೧೪ ॥

ವಿಪ್ರಾ ಲೋಭಗ್ರಹಗ್ರಸ್ತಾ ವೇದವಿಕ್ರಯಜೀವಿನಃ ।
ಧನಾರ್ಜನಾರ್ಥಮಭ್ಯಸ್ತವಿದ್ಯಾ ಮದವಿಮೋಹಿತಾಃ ॥ ೧೫ ॥

ತ್ಯಕ್ತಸ್ವಜಾತಿಕರ್ಮಾಣಃ ಪ್ರಾಯಶಃ ಪರವಂಚಕಾಃ ।
ತ್ರಿಕಾಲಸಂಧ್ಯಯಾ ಹೀನಾ ಬ್ರಹ್ಮಬೋಧವಿವರ್ಜಿತಾಃ ॥ ೧೬ ॥

---

೧೩. ಮತ್ತು ಕಲಿಯುಗದಲ್ಲಿ ಜನರು ಇತರರನ್ನು ದೂಷಣೆಮಾಡುವುದರಲ್ಲೇ ಆಸಕ್ತರು; ಮತ್ತೊಬ್ಬರ ದ್ರವ್ಯವನ್ನು ಅಪಹರಿಸಲು ಬಯಸುವರು; ಪರಸ್ತ್ರೀಯರಲ್ಲಿ ಮನಸ್ಸುಳ್ಳವರು; ಇತರರನ್ನು ಹಿಂಸೆಮಾಡುವುದರಲ್ಲಿ ನಿಪುಣರು.

೧೪. ತಮ್ಮ ಶರೀರವೇ ಆತ್ಮವೆಂದು ಭ್ರಮೆಯುಳ್ಳವರು; ಸನಾತನಧರ್ಮದಲ್ಲಿಯೂ, ಈಶ್ವರನಲ್ಲಿಯೂ ನಂಬಿಕೆಯಿಲ್ಲದೆ ನಾಸ್ತಿಕರಾಗಿ ಪಶುಗಳಂತೆ ವರ್ತಿಸುವರು, ತಮ್ಮ ಸ್ವಂತ ತಂದೆತಾಯಿಗಳನ್ನೂ ದ್ವೇಷಿಸುವರು; ಕಾಮಪರವಶರಾಗಿ ಸ್ತ್ರೀಯಿಂದಲೇ ತಮಗೆ ಸಮಸ್ತ ಸುಖವೂ ಉಂಟಾಗುವುದೆಂದು ಭ್ರಮೆಯಿಂದ ಸ್ತ್ರೀಯನ್ನೇ ದೇವರಂತೆ ಭಾವಿಸುವರು.

೧೫. ಬ್ರಾಹ್ಮಣರು ದುರಾಶೆಯಿಂದ ಕೂಡಿ, ವೇದವನ್ನು ಅಪಾತ್ರರಾದವರಿಗೆ ದ್ರವ್ಯದಾಶೆಗೋಸ್ಕರ ಹೇಳಿಕೊಟ್ಟು ಆ ದ್ರವ್ಯದಿಂದ ಜೀವನಮಾಡುವರು. ಇವರಿಗೆ ಧನಾರ್ಜನೆಯೇ ಮುಖ್ಯವಾದ ಗುರಿಯಾಗಿರುವುದು. ಅದಕ್ಕಾಗಿಯೇ ವಿದ್ಯಾಭ್ಯಾಸವನ್ನು ಮಾಡುವರು. ಅಹಂಕಾರದಿಂದ ಮೆರೆಯುತ್ತಿರುವರು.

೧೬. ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ತ್ಯಜಿಸಿ ಇತರರನ್ನು ವಂಚಿಸುತ್ತಿರುವರು; ಪ್ರಾತರ್ಮಧ್ಯಾಹ್ನಸಾಯಂಕಾಲಗಳಲ್ಲಿ ಆಚರಿಸಬೇಕಾದ ಸಂಧ್ಯಾದಿ ನಿತ್ಯಕರ್ಮಗಳನ್ನು ತೊರೆದಿರುವರು. ಬ್ರಹ್ಮಜ್ಞಾನಸಂಬಂಧವಾದ ವೇದಾಂತ ವಿದ್ಯೆಯಲ್ಲಿ ತಿಳಿವಳಿಕೆಯಿಲ್ಲದಿರುವರು.

ಅದಯಾಃ ಪಂಡಿತಂಮನ್ಯಾಃ ಸ್ವಾಚಾರವ್ರತಲೋಪಕಾಃ ।
ಕೃಷ್ಯುದ್ಯಮರತಾಃ ಕ್ರೂರಸ್ವಭಾವಾ ಮಲಿನಾಶಯಾಃ ॥ ೧೭ ॥

ಕ್ಷತ್ರಿಯಾಶ್ಚ ತಥಾ ಸರ್ವೇ ಸ್ವಧರ್ಮತ್ಯಾಗಶೀಲಿನಃ
ಅಸತ್ಸಂಗಾಃ ಪಾಪರತಾ ವ್ಯಭಿಚಾರಪರಾಯಣಾಃ ॥ ೧೮ ॥

ಅಶೂರಾ ಅರಣಪ್ರೀತಾಃ ಪಲಾಯನಪರಾಯಣಾಃ ।
ಕುಚಾರವೃತ್ತಯಃ ಶೂದ್ರಾಃ ಕಾಮುಕಿಂಕರಚೇತಸಃ ॥ ೧೯ ॥

ಶಸ್ತ್ರಾಸ್ತ್ರವಿದ್ಯಯಾ ಹೀನಾ ಧೇನುವಿಪ್ರಾವನೋಜ್ಝಿತಾಃ ।
ಶರಣ್ಯಾವನಹೀನಾಶ್ಚ ಕಾಮಿನ್ಯೂತಿಮೃಗಾಸ್ಸದಾ ॥ ೨೦ ॥

---

೧೭. ಪ್ರಾಣಿಗಳಲ್ಲಿ ದಯಾಹೀನರಾಗಿರುವರು ; ತಾವೇ ಪಂಡಿತರೆಂದು ದುರಹಂಕಾರದಿಂದ ಮೆರೆಯುತ್ತಿರುವರು ; ತಾವು ಮಾಡಬೇಕಾದ ವ್ರತಾಚಾರಗಳನ್ನು ಬಿಟ್ಟಿರುವರು. ವ್ಯವಸಾಯದಲ್ಲಿ ನಿರತರಾಗಿರುವರು. ಸ್ವಭಾವತಃ ಕ್ರೂರಿಗಳಾಗಿರುವರು. ಯಾವಾಗಲೂ ಕೆಟ್ಟ ಆಲೋಚನೆಗಳನ್ನೇ ಮಾಡುತ್ತಿರುವರು.

೧೮. ಕ್ಷತ್ರಿಯರಾದರೋ ತಮ್ಮ ಸ್ವಧರ್ಮವಾದ ಪ್ರಜಾಪಾಲನವನ್ನು ಬಿಟ್ಟು ಕೆಟ್ಟ ಸಹವಾಸವುಳ್ಳವರೂ, ಪಾಪಬುದ್ಧಿಯುಳ್ಳವರೂ, ಪರಸ್ತ್ರೀಗಮನದಲ್ಲಿ ಆಸಕ್ತಿಯುಳ್ಳವರೂ ಆಗಿರುವರು.

೧೯. ಮತ್ತು ಈ ಕ್ಷತ್ರಿಯರು ಹೇಡಿಗಳಾಗಿಯೂ, ಯುದ್ಧದಲ್ಲಿ ಪರಾಙ್ಮುಖರಾಗಿಯೂ, ಸೋತು ಓಡಿಹೋಗುವುದರಲ್ಲಿ ನಿಸ್ಸೀಮರಾಗಿಯೂ, ಕಳ್ಳತನವೇ ಮೊದಲಾದ ದುರ್ವ್ಯಾಪಾರಗಳಲ್ಲಿ ಪ್ರವೃತ್ತರಾಗಿಯೂ, ಶೂದ್ರಸದೃಶರಾಗಿಯೂ, ಕಾಮಾಭಿಲಾಷೆಯಿಂದ ಯಾವಾಗಲೂ ಸ್ತ್ರೀಯರಲ್ಲಿ ಆಸಕ್ತರಾಗಿಯೂ ಇರುವರು.

೨೦. ಇವರು ಧನುರ್ವೇದ ಮೊದಲಾದ ಶಸ್ತ್ರವಿದ್ಯೆಗಳನ್ನೂ, ಆಯುಧಪ್ರಯೋಗಗಳನ್ನು ಅರಿಯರು ; ಗೋಬ್ರಾಹ್ಮಣರನ್ನೂ, ಭೂಮಿಯನ್ನೂ ಪಾಲಿಸುವುದೇ ಇಲ್ಲ; ತನ್ನ ಮರೆಹೊಕ್ಕವರನ್ನು ಕಾಪಾಡುವರಲ್ಲ ; ಯಾವಾಗಲೂ ಸ್ತ್ರೀಸಂಗಮೃಗಯಾವಿಹಾರಗಳಲ್ಲಿ ಆಸಕ್ತಿಯುಳ್ಳವರು.

ಪ್ರಜಾಪಾಲನಸದ್ಧರ್ಮವಿಹೀನಾ ಭೋಗತತ್ಪರಾಃ ।
ಪ್ರಜಾಸಂಹಾರಕಾ ದುಷ್ಟಾ ಜೀವಹಿಂಸಾಕರಾ ಮುದಾ ॥ ೨೧ ॥

ವೈಶ್ಯಾಃ ಸಂಸ್ಕಾರಹೀನಾಸ್ತೇ ಸ್ವಧರ್ಮತ್ಯಾಗಶೀಲಿನಃ ।
ಕುಪಥಾಃ ಸ್ವಾರ್ಜನರತಾಸ್ತುಲಾಕರ್ಮಕುವೃತ್ತಯಃ ॥ ೨೨ ॥

ಗುರುದೇವದ್ವಿಜಾತೀನಾಂ ಭಕ್ತಿಹೀನಾಃ ಕುಬುದ್ಧಯಃ ।
ಅಭೋಜಿತದ್ವಿಜಾಃ ಪ್ರಾಯಃ ಕೃಪಣಾ ಬದ್ಧಮುಷ್ಟಯಃ ॥ ೨೩ ॥

ಕಾಮಿನೀಜಾರಭಾವೇಷು ಸುರತಾ ಮಲಿನಾಶಯಾಃ ।
ಲೋಭಮೋಹವಿಚೇತಸ್ಕಾಃ ಪೂರ್ತಾದಿಷು ವೃಷೋಜ್ಝಿತಾಃ ॥ ೨೪ ॥

---

೨೧. ಪ್ರಜಾಪಾಲನವೇ ಮೊದಲಾದ ಕ್ಷತ್ರಿಯರಿಗೆ ವಿಧಿಸಿರುವ ಸದ್ಧರ್ಮಗಳನ್ನು ತ್ಯಜಿಸಿ ಯಾವಾಗಲೂ ಭೋಗಲಾಲಸರಾಗಿ, ಪ್ರಜಾಕ್ಷೋಭೆಯನ್ನುಂಟುಮಾಡುತ್ತಾ, ಪ್ರಾಣಿಹಿಂಸೆಯನ್ನು ಸಂತೋಷದಿಂದ ಮಾಡುತ್ತಾ ಅತಿ ದುಷ್ಟರಾಗಿರುವರು.

೨೨. ಇನ್ನು ಈ ಕಲಿಕಾಲದಲ್ಲಿ ವೈಶ್ಯರು ಷೋಡಶಕರ್ಮರಹಿತರಾಗಿ ತಮ್ಮ ಧರ್ಮವಾದ ಕೃಷಿವಾಣಿಜ್ಯಾದಿಗಳನ್ನು ಬಿಟ್ಟು ದ್ರವ್ಯಾರ್ಜನೆಯಲ್ಲಿ ಆಸಕ್ತರಾಗಿ ಅದಕ್ಕಾಗಿ ಅನ್ಯಾಯ, ವಂಚನೆ ಮೊದಲಾದ ಕೆಟ್ಟಮಾರ್ಗಗಳನ್ನು ಅನುಸರಿಸುತ್ತಿರುವರು.

೨೩. ಗುರುಗಳು, ದೇವರು, ಬ್ರಾಹ್ಮಣರು ಇವರುಗಳಲ್ಲಿ ಗೌರವವನ್ನು ತೊರದು ಕೆಟ್ಟಬುದ್ಧಿಯುಳ್ಳವರಾಗಿರುವರು. ಅತಿಲೋಭಾವಿಷ್ಟರಾಗಿ, ಅವಶ್ಯವಾಗಿ ಮಾಡಬೇಕಾದ ಬ್ರಾಹ್ಮಣಭೋಜನಾದಿಗಳನ್ನೂ ಮಾಡಿಸುವುದಿಲ್ಲ.

೨೪. ಕೆಟ್ಟಬುದ್ಧಿಯುಳ್ಳವರಾಗಿ ಜಾರಸ್ತ್ರೀಲಂಪಟರಾಗಿರುವರು. ಸತ್ಯಮಾರ್ಗವನ್ನು ಬಿಟ್ಟು ಯಾವಾಗಲೂ ಜಿಪುಣತನ, ಮೋಹ ಇವುಗಳಿಂದ ಕೂಡಿರುವರು.

ತದ್ವಚ್ಛೂದ್ರಾಶ್ಚ ಯೇ ಕೇಚಿದ್ಬ್ರಾಹ್ಮಣಾಚಾರತತ್ಪರಾಃ ।
ಉಜ್ಜ್ವಲಾಕೃತಯೋ ಮೂಢಾಃ ಸ್ವಧರ್ಮತ್ಯಾಗಶೀಲಿನಃ ॥ ೨೫ ॥

ಕರ್ತಾರಸ್ತಪಸಾಂ ಭೂಯೋ ದ್ವಿಜತೇಜೋಪಹಾರಕಾಃ ।
ಶಿಶ್ವಲ್ಪಮೃತ್ಯುಕಾರಾಶ್ಚ ಮಂತ್ರೋಚ್ಚಾರಪರಾಯಣಾಃ ॥ ೨೬ ॥

ಶಾಲಗ್ರಾಮಶಿಲಾದೀನಾಂ ಪೂಜಕಾ ಹೋಮತತ್ಪರಾಃ ।
ಪ್ರತಿಕೂಲವಿಚಾರಾಶ್ಚ ಕುಟಿಲಾ ದ್ವಿಜದೂಷಕಾಃ ॥ ೨೭ ॥

ಧನವಂತಃ ಕುಕರ್ಮಾಣೋ ವಿದ್ಯಾವಂತೋ ವಿವಾದಿನಃ ।
ಆಖ್ಯಾಯೋಪಾಸನಾಧರ್ಮವಕ್ತಾರೋ ಧರ್ಮಲೋಪಕಾಃ ॥ ೨೮ ॥

---

೨೫. ಅದರಂತೆ ಶೂದ್ರರೂ ಸಹ ತಮ್ಮ ಧರ್ಮವನ್ನು ಬಿಟ್ಟು ಮೂಢಬುದ್ಧಿಯಿಂದ ಬ್ರಾಹ್ಮಣರು ಮಾಡಬೇಕಾದ ಸಂಧ್ಯಾದ್ಯಾಚಾರಗಳಲ್ಲಿ ಮನಸ್ಸುಳ್ಳವರಾಗಿ ಮಹಾ ಆಡಂಬರದಿಂದ ಮೆರೆಯುತ್ತಿರುವರು.

೨೬. ಮತ್ತು ಇವರು ತಪಸ್ಸನ್ನು ಮಾಡುವರು, ದ್ವಿಜರಿಗೆ ಅವಮಾನವನ್ನು ಮಾಡುವರು. ವೇದಾದಿಮಂತ್ರಗಳನ್ನು ಪಠಿಸಲು ಪ್ರಯತ್ನಿಸುವರು.

೨೭. ಸಾಲಗ್ರಾಮವೇ ಮೊದಲಾದ ದೇವತಾಪ್ರತಿಮೆಗಳನ್ನು ಪೂಜಿಸುತ್ತಾ, ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡಬಯಸುವರು; ವಿರುದ್ಧಾಚಾರಗಳನ್ನೆಸಗುತ್ತಾ ಕೆಟ್ಟ ಬುದ್ಧಿಯಿಂದ ಬ್ರಾಹ್ಮಣಾದಿಗಳನ್ನು ದೂಷಿಸುವರು.

೨೮. ಮತ್ತು ಈ ಕಲಿಯುಗದಲ್ಲಿ ಧನವಂತರು ಕೆಟ್ಟ ಕೆಲಸಗಳನ್ನೇ ಮಾಡುವರು. ವಿದ್ಯಾವಂತರಾದವರು ವಾದವಿವಾದ ಮೊದಲಾದ ವ್ಯಾಜ್ಯಗಳಲ್ಲಿ ತೊಡಗಿರುವರು. ಧರ್ಮವೇನೆಂಬುದನ್ನೇ ತಿಳಿಯದೆ ಇರುವ ಅಧರ್ಮಪ್ರವೃತ್ತಕರು ಇತರರಿಗೆ ಪುರಾಣ, ದೇವತಾಪೂಜಾ, ಧರ್ಮಾಚರಣೆ ಮೊದಲಾದ ಸತ್ಕರ್ಮಗಳನ್ನು ಉಪದೇಶ ಮಾಡಲು ತೊಡಗುವರು.

ಸುಭೂಪಾಕೃತಯೋ ದಂಭಾಃ ಸುದಾತಾರೋ ಮಹಾಮದಾಃ ।
ವಿಪ್ರಾದೀನ್ ಸೇವಕಾನ್ಮತ್ವಾ ಮನ್ಯಮಾನಾ ನಿಜಂ ಪ್ರಭುಂ ॥ ೨೯ ॥

ಸ್ವಧರ್ಮರಹಿತಾ ಮೂಢಾ ಸಂಕರಾಃ ಕ್ರೂರಬದ್ಧಯಃ ।
ಮಹಾಭಿಮಾನಿನೋ ನಿತ್ಯಂ ಚತುರ್ವರ್ಣವಿಲೋಪಕಾಃ ॥ ೩೦ ॥

ಸುಕುಲೀನಾನ್ನಿಜಾನ್ಮತ್ವಾ ಚತುರ್ವರ್ಣೈರ್ವಿವರ್ತನಾಃ ।
ಸರ್ವವರ್ಣಭ್ರಷ್ಟಕರಾ ಮೂಢಾಃ ಸತ್ಕರ್ಮಕಾರಿಣಃ ॥ ೩೧ ॥

ಸ್ತ್ರಿಯಶ್ಚ ಪ್ರಾಯಶೋ ಭ್ರಷ್ಟಾ ಭರ್ತ್ರವಜ್ಞಾನಕಾರಿಕಾಃ ।
ಶ್ವಶುರದ್ರೋಹಕಾರಿಣ್ಯೋ ನಿರ್ಭಯಾ ಮಲಿನಾಸನಾಃ ॥ ೩೨ ॥

---

೨೯. ರಾಜವೇಷದಲ್ಲಿರುವ ಕ್ಷತ್ರಿಯರು ಡಂಭಾಚಾರಯುಕ್ತರಾಗಿಯೂ ಮದದಿಂದ ಕೊಬ್ಬಿ, ಡಂಭಕ್ಕಾಗಿ ದಾನಮಾಡುವವರಾಗಿಯೂ, ಬ್ರಾಹ್ಮಣರೇ ಮೊದಲಾದವರು ತಮ್ಮ ಸೇವಕರೆಂದೂ ತಾವೇ ಪ್ರಭುಗಳೆಂದೂ ತಿಳಿದು ಅಹಂಕಾರದಿಂದ ಮೆರೆಯುತ್ತಿರುವರು.

೩೦. ಜನರು ಚಾತುರ್ವರ್ಣ್ಯ ಧರ್ಮಗಳನ್ನು ಬಿಟ್ಟು ಮೂಢಬುದ್ಧಿಯಿಂದ ಒಬ್ಬರ ಧರ್ಮಗಳನ್ನು ಮತ್ತೊಬ್ಬರು ಮಾಡುತ್ತಾ ಕ್ರೂರಬುದ್ಧಿಯುಳ್ಳವರಾಗಿಯೂ, ಮಹಾಗರ್ವದಿಂದ ಕೂಡಿದವರಾಗಿಯೂ ಇರುವರು.

೩೧. ತಾವೇ ಉತ್ತಮಕುಲದಲ್ಲಿ ಹುಟ್ಟಿದವರೆಂದು ಗರ್ವಪಡುತ್ತಾ ಚತುರ್ವರ್ಣಾಶ್ರಮ ಧರ್ಮಗಳನ್ನು ಬಿಟ್ಟು ಮೂಢಬುದ್ಧಿಯಿಂದ ಎಲ್ಲ ವರ್ಣಗಳ ಧರ್ಮಗಳನ್ನುಕೆಡಿಸುತ್ತಾ ಸತ್ಕರ್ಮಗಳನ್ನು ಮಾಡುವೆವೆಂದು ಭ್ರಾಂತಿಯಿಂದಿರುವರು.

೩೨. ಈ ಕಲಿಕಾಲದಲ್ಲಿ ಸ್ತ್ರೀಯರು ಸಾಧಾರಣವಾಗಿ ಭ್ರಷ್ಟರಾಗಿ ತಮ್ಮ ಪತಿಗೆ ಅವಮಾನಮಾಡುತ್ತ ಅವನನ್ನು ಹೀನದೃಷ್ಟಿಯಿಂದ ನೋಡುವರು. ಅತ್ತೆ ಮಾವಂದಿರಿಗೆ ದ್ರೋಹವನ್ನೆಣಿಸುವರು. ಲಜ್ಜಾಭಯವಿಹೀನರಾಗಿ ಯಾವಾಗಲೂ ಕೊಳಕಿನಿಂದ ಕೂಡಿರುವರು.

ಕುಹಾವಭಾವನಿರತಾಃ ಕುಶೀಲಾಃ ಸ್ಮರವಿಹ್ವಲಾಃ ।
ಜಾರಸಂಗರತಾ ನಿತ್ಯಂ ಸ್ವಸ್ವಾಮಿವಿಮುಖಾಸ್ತಥಾ ॥ ೩೩ ॥

ತನಯಾ ಮಾತೃಪಿತ್ರೋಶ್ಚ ಭಕ್ತಿಹೀನಾ ದುರಾಶಯಾಃ ।
ಅವಿದ್ಯಾಪಾಠಕಾ ನಿತ್ಯಂ ರೋಗಗ್ರಸಿತದೇಹಕಾಃ ॥ ೩೪ ॥

ಏತೇಷಾಂ ನಷ್ಟಬುದ್ಧೀನಾಂ ಸ್ವಧರ್ಮತ್ಯಾಗಶೀಲಿನಾಂ ।
ಪರಲೋಕೇಽಪೀಹ ಲೋಕೇ ಕಥಂ ಸೂತ ಗತಿರ್ಭವೇತ್ ॥ ೩೫ ॥

ಇತಿ ಚಿಂತಾಕುಲಂ ಚಿತ್ತಂ ಜಾಯತೇ ಸತತಂ ಹಿ ನಃ ।
ಪರೋಪಕಾರಸದೃಶೋ ನಾಸ್ತಿ ಧರ್ಮೋಽಪರಃ ಖಲು ॥ ೩೬ ॥

---

೩೩. ಮತ್ತು ಈ ಸ್ತ್ರೀಯರು ಹಾವಭಾವಾದಿ ದುಶ್ಚೇಷ್ಟೆಗಳಿಂದ ಕೂಡಿ ಕಾಮ ವಿಕಾರದಿಂದ ಕೆಟ್ಟ ನಡತೆಯುಳ್ಳವರಾಗಿರುವರು ; ನಿತ್ಯವೂ ಪರಪುರುಷರ ಸಂಗದಲ್ಲಿ ಆಸಕ್ತರಾಗಿ ತಮ್ಮ ಪತಿಯಲ್ಲಿ ಅನಾದರವುಳ್ಳವರಾಗಿರುವರು.

೩೪. ಮಕ್ಕಳು ತಮ್ಮ ತಂದೆತಾಯಿಗಳಲ್ಲಿ ಭಕ್ತಿಯಿಲ್ಲದೆ ಅವಿಧೇಯತೆಯಿಂದ ಕೂಡಿ ಕೆಟ್ಟ ಬುದ್ಧಿಯುಳ್ಳವರಾಗಿರುವರು ; ವಿದ್ಯಾಭ್ಯಾಸಾದಿಗಳಲ್ಲಿ ಮನಸ್ಸನ್ನಿಡದೆ ಯಾವಾಗಲೂ ರೋಗಾದಿಗಳಿಂದ ನರಳುತ್ತಿರುವರು.

೩೫. ಎಲೈ ಸೂತಮುನಿಯೇ, ಈ ವಿಧವಾಗಿರುವ, ಬುದ್ಧಿಯಿಲ್ಲದೆ ತಮ್ಮ ಧರ್ಮಗಳನ್ನು ಬಿಟ್ಟಿರುವ ಜನರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಉತ್ತಮಗತಿಯು ದೊರೆಯುವುದೆಂತು ?

೩೬. ಈ ವಿಧವಾದ ಚಿಂತೆಯಿಂದ ನಮ್ಮ ಮನಸ್ಸು ವ್ಯಾಕುಲವಾಗಿದೆ. ಪರೋಪಕಾರಕ್ಕೆ ಸಮಾನವಾದ ಧರ್ಮವು ಮತ್ತೊಂದಿಲ್ಲವಷ್ಟೆ ?

ಲಘೂಪಾಯೇನ ಯೇನೈಷಾಂ ಭವೇತ್ಸದ್ಯೋಽಘನಾಶನಂ ।
ಸರ್ವಸಿದ್ಧಾಂತವಿತ್ತ್ವಂ ಹಿ ಕೃಪಯಾ ತದ್ವದಾಧುನಾ ॥ ೩೭ ॥

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಮುನೀನಾಂ ಭಾವಿತಾತ್ಮನಾಂ ।
ಮನಸಾ ಶಂಕರಂ ಸ್ಮೃತ್ವಾ ಸೂತಃ ಪ್ರೋವಾಚ ತಾನ್ಮುನೀನ್ ॥ ೩೮ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ
ಸಂಹಿತಾಯಾಂ ಮುನಿಪ್ರಶ್ನವರ್ಣನೋ ನಾಮ
ಪ್ರಥಮೋಽಧ್ಯಾಯಃ.

---

೩೭. ಈ ಜನಗಳಿಗೆ ಯಾವ ಸುಲಭೋಪಾಯದಿಂದ ಪಾಪನಿವೃತ್ತಿಯಾಗಿ ಸದ್ಗತಿಯುಂಟಾಗುವುದು ? ನೀನು ಸಮಸ್ತ ಸಿದ್ಧಾಂತ ತತ್ತ್ವಗಳನ್ನೂ ಬಲ್ಲವನಾದುದರಿಂದ ಇದಕ್ಕೆ ಪರಿಹಾರೋಪಾಯವನ್ನೂ ದಯವಿಟ್ಟು ಈಗಲೇ ಹೇಳುವವನಾಗು.

೩೮. ವ್ಯಾಸಮಹರ್ಷಿಯು ಹೇಳಿದನು :—ಜಿತೇಂದ್ರಿಯರಾದ ಆ ಮುನಿಗಳು ಹೇಳಿದ ಈ ಮಾತನ್ನು ಕೇಳಿ ಸೂತಪೌರಾಣಿಕನು ಮನಸ್ಸಿನಲ್ಲಿ ಪರಮೇಶ್ವರನನ್ನು ಸ್ಮರಿಸಿ ಆ ಮುನಿಗಳನ್ನು ಕುರಿತು ಹೀಗೆ ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಮೊದಲನೆಯ ವಿದ್ಯೇಶ್ವರಸಂಹಿತೆಯಲ್ಲಿ
ಮುನಿಗಳು ಸೂತನನ್ನು ಪ್ರಶ್ನೆಮಾಡಿದರೆಂಬ ಮೊದಲನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

## ॥ ಅಥ ಶ್ರೀ ಶಿವ ಮ ಹಾ ಪು ರಾ ಣೇ ॥

### ವಿದ್ಯೇಶ್ವರಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

---

॥ ಸೂತ ಉವಾಚ ॥

ಸಾಧು ಪೃಷ್ಟಂ ಸಾಧವೋ ವಸ್ತ್ರೈಲೋಕ್ಯಹಿತಕಾರಕಂ ।
ಗುರುಂ ಸ್ಮೃತ್ವಾ ಭವತ್ಸ್ನೇಹಾದ್ವಕ್ಷ್ಯೇ ತಚ್ಛೃಣುತಾದರಾತ್ ॥ ೧ ॥

ವೇದಾಂತಸಾರಸರ್ವಸ್ವಂ ಪುರಾಣಂ ಶೈವಮುತ್ತಮಂ ।
ಸರ್ವಾಘೌಘೋದ್ಧಾರಕರಂ ಪರತ್ರ ಪರಮಾರ್ಥದಂ ॥ ೨ ॥

---

### ಎರಡನೆಯ ಅಧ್ಯಾಯವು.

೧. ಸೂತಮುನಿಯು ಹೇಳತೊಡಗಿದನು :—ಎಲೈ ಸಾಧುಗಳಾದ ಮುನಿಗಳೇ, ನೀವು ಕೇಳಿದ ಪ್ರಶ್ನೆಯು ಒಳ್ಳೆಯದು, ಮೂರು ಲೋಕಕ್ಕೂ ಹಿತವನ್ನುಂಟುಮಾಡುವುದಾಗಿರುವುದು. ಆದುದರಿಂದ ನಮ್ಮ ಮೇಲಿನ ಸ್ನೇಹದಿಂದ, ನನ್ನ ಗುರುವಾದ ವ್ಯಾಸಮಹರ್ಷಿಯನ್ನು ಸ್ಮರಣೆಮಾಡಿ ನೀವು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವೆನು. ವಿಶ್ವಾಸದಿಂದ ಕೇಳುವವರಾಗಿ.

೨-೩. ಸಮಸ್ತ ವೇದಾಂತ ಸಿದ್ಧಾಂತಗಳ ಸಾರಭೂತವಾಗಿಯೂ, ಸಮಸ್ತ ಪಾಪಗಳನ್ನು ನಾಶಮಾಡಿ ಪರಲೋಕದಲ್ಲಿ ಉತ್ತಮಗತಿಯನ್ನು ಕೊಡುವುದಾಗಿಯೂ, ಕಲಿಕಾಲಸಂಬಂಧವಾದ ಪಾಪಗಳನ್ನು ನಾಶಮಾಡುವುದಾಗಿಯೂ ಇರುವ ಅತ್ಯುತ್ತಮವಾದ ಶೈವಪುರಾಣವಿರುವುದು. ಅದರಲ್ಲಿ ವರ್ಣಿತವಾಗಿರುವ ಪರಮೇಶ್ವರನ

ಕಲಿಕಲ್ಮಷನಿಧ್ವಂಸಿ ಯಸ್ಮಿಂಚ್ಛಿವಯಶಃ ಪರಂ ।
ವಿಜೃಂಭತೇ ಸದಾ ವಿಪ್ರಶ್ಚತುರ್ವರ್ಗಫಲಪ್ರದಂ ॥ ೩ ॥

ತಸ್ಯಾಧ್ಯಯನಮಾತ್ರೇಣ ಪುರಾಣಸ್ಯ ದ್ವಿಜೋತ್ತಮಾಃ ।
ಸರ್ವೋತ್ತಮಸ್ಯ ಶೈವಸ್ಯ ತೇ ಯಾಸ್ಯಂತಿ ಸುಸದ್ಗತಿಂ ॥ ೪ ॥

ತಾವದ್ವಿಜೃಂಭತೇ ಪಾಪಂ ಬ್ರಹ್ಮಹತ್ಯಾಪುರಸ್ಸರಂ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೫ ॥

ತಾವತ್ಕಲಿಮಹೋತ್ಪಾತಾಃ ಸಂಚರಿಷ್ಯಂತಿ ನಿರ್ಭಯಾಃ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೬ ॥

---

ಮಾಹಾತ್ಮ್ಯವನ್ನು ಯಾವಾಗಲೂ ಸತ್ಪುರುಷರು ಮಹಾಭಕ್ತಿಯಿಂದ ಶ್ರವಣಮಾಡಿ ಉತ್ಕರ್ಷದಿಂದಿರುವರು. ಆ ಪುರಾಣಶ್ರವಣವು ಚತುರ್ವಿಧ ಪುರುಷಾರ್ಥಗಳನ್ನು ಕೊಡುವುದು. ಅಂತಹ ಶಿವಪುರಾಣವನ್ನು ನಿಮಗೆ ಹೇಳುವೆನು.

೪. ಎಲೈ ಬ್ರಾಹ್ಮಣೋತ್ತಮರೇ, ಆ ಉತ್ತಮವಾದ ಶಿವಪುರಾಣದ ಪಠನದಿಂದಲೇ ಜನರು ಸದ್ಗತಿಯನ್ನು ಪಡೆಯುವರು.

೫. ಈ ಜಗತ್ತಿನಲ್ಲಿ ಶಿವಪುರಾಣವು ಯಾವ ಕಾಲ ಪರ್ಯಂತರ ಪ್ರಚುರವಾಗಿರುವುದಿಲ್ಲವೋ ಅಥವಾ ಅಧ್ಯಯನಮಾಡಲ್ಪಡುವುದಿಲ್ಲವೋ ಅಲ್ಲಿಯವರಿಗೆ ಬ್ರಹ್ಮಹತ್ಯವೇ ಮೊದಲಾದ ಪಾಪಗಳು ಆತಂಕವಿಲ್ಲದೆ ಮೆರೆಯುತ್ತಿರುತ್ತವೆ. ಏಂದರೆ ಬ್ರಹ್ಮಹತ್ಯಾ ಮೊದಲಾದ ಮಹಾಪಾಪಗಳನ್ನು ನಾಶಮಾಡಲು ಶಕ್ತವಾದ ಸಾಧನವಿಲ್ಲದ್ದರಿಂದ ಅವುಗಳು ಪ್ರಪಂಚದಲ್ಲಿ ಇರುವವು. ಆದರೆ ಶಿವಪುರಾಣವು ಜಗತ್ತಿನಲ್ಲಿ ಉದಯಿಸಿ ಜನಗಳು ಅದನ್ನು ಪಠಿಸುವುದರಿಂದ, ಶಿವಪುರಾಣಪಠನವು ಬ್ರಹ್ಮಹತ್ಯಾದಿ ಮಹಾಪಾತಕಗಳನ್ನೂ ಹೋಗಲಾಡಿಸಿ ಜನರಿಗೆ ಸದ್ಗತಿಯನ್ನುಂಟುಮಾಡುವುದು.

೬. ಜಗತ್ತಿನಲ್ಲಿ ಶಿವಪುರಾಣವು ಉದಯಿಸುವವರಿಗೂ ಕಲಿಕಾಲಸಂಬಂಧವಾದ ಮಹೋತ್ಪಾತಗಳು ನಿರ್ಭಯವಾಗಿ ಸಂಭವಿಸುವವು.

ತಾವತ್ಸರ್ವಾಣಿ ಶಾಸ್ತ್ರಾಣಿ ವಿವದಂತೆ ಪರಸ್ಪರಂ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೭ ॥

ತಾವತ್ಸ್ವರೂಪಂ ದುರ್ಬೋಧಂ ಶಿವಸ್ಯ ಮಹತಾಮಪಿ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೮ ॥

ತಾವದ್ಯಮಭಟಾಃ ಕ್ರೂರಾಃ ಸಂಚರಿಷ್ಯಂತಿ ನಿರ್ಭಯಾಃ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೯ ॥

ತಾವತ್ಸರ್ವಪುರಾಣಾನಿ ಪ್ರಗರ್ಜಂತಿ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೧೦ ॥

---

೭. ಶಿವಪುರಾಣವು ಪ್ರಪಂಚದಲ್ಲಿ ಅವತರಿಸುವವರಿಗೂ ಸಮಸ್ತ ಶಾಸ್ತ್ರಗಳೂ ಒಂದಕ್ಕೊಂದು ವಿರುದ್ಧವಾಗಿ ವರ್ತಿಸುತ್ತಾ ಬ್ರಹ್ಮವಿದ್ಯೆಯನ್ನು ಯಥಾವತ್ತಾಗಿ ವಿವರಿಸಲಾರದೆ ಇರುವವು.

೮. ಹಾಗೆಯೇ ಶಿವಪುರಾಣವು ಪ್ರಪಂಚದಲ್ಲಿ ಇಲ್ಲದಿರುವವರಿಗೆ ದೊಡ್ಡ ಜ್ಞಾನಿಗಳಿಗೂ ಕೂಡ ಶಿವನ ಪರಸ್ವರೂಪು ತಿಳಿಯಲಶಕ್ಯನಾಗಿರುವುದು.

೯. ಮತ್ತು ಆ ಕಾಲದಲ್ಲ (ಶಿವಪುರಾಣವು ಇಲ್ಲದಿರುವವರೆಗೆ) ಯಮಭಟರು ನಿರ್ಭಯರಾಗಿ ಸಂಚರಿಸುತ್ತಿರುವರು. ಎಂದರೆ ಜನರು ಮುಕ್ತಿಮಾರ್ಗವನ್ನು ಕಾಣದೆ ಪಾಪಪ್ರವೃತ್ತಿಯುಳ್ಳವರಾಗುವುದರಿಂದ ಕ್ರೂರರಾದ ಯಮಕಿಂಕರರು ಈ ಪಾಪಿಷ್ಠರನ್ನು ಯಮಲೋಕಕ್ಕೆ ಒಯ್ಯಲು ನಿರ್ಭಯರಾಗಿ ಸಂಚರಿಸುವರೆಂದು ಅಭಿಪ್ರಾಯವು.

೧೦. ಶಿವಪುರಾಣವಿಲ್ಲದಿರುವವರಿಗೆ ಇತರ ಪುರಾಣಗಳು ತಾವೇ ತಾವಾಗಿ ವಿಜೃಂಭಿಸುತ್ತಿರುವವು. ಎಂದರೆ ಉತ್ತಮವಾದ ಶಿವಪುರಾಣವಿಲ್ಲದ್ದರಿಂದ ಇತರ ಪುರಾಣಗಳೇ ಉತ್ತಮವೆಂದು ಪರಿಗಣಿಸಲ್ಪಡುವವು. ಶಿವಪುರಾಣಪ್ರಕಾಶನಾನಂತರ ಉತ್ತಮಸ್ಥಾನವು. ಇತರ ಪುರಾಣಗಳಿಗೆ ಹೋಗಿ ಶಿವಪುರಾಣಕ್ಕೆ ಮಾತ್ರವೇ ಲಭಿಸುವುದು.

ತಾವತ್ಸರ್ವಾಣಿ ತೀರ್ಥಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥ ೧೧ ॥

ತಾವತ್ಸರ್ವೇ ಮುದಾ ಮಂತ್ರಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೨ ॥

ತಾವತ್ಸರ್ವಾಣಿ ಕ್ಷೇತ್ರಾಣಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೩ ॥

ತಾವತ್ಸರ್ವಾಣಿ ಪೀಠಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೪ ॥

ತಾವತ್ಸರ್ವಾಣಿ ದಾನಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೫ ॥

ತಾವತ್ಸರ್ವೇ ಚ ತೇ ದೇವಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೬ ॥

ತಾವತ್ಸರ್ವೇ ಚ ಸಿದ್ಧಾಂತಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥ ೧೭ ॥

---

೧೧-೧೭. ಶಿವಪುರಾಣವು ಪ್ರಪಂಚದಲ್ಲಿ ಉದಯಿಸದಿರುವವರೆಗೆ ಸಮಸ್ತ ತೀರ್ಥಗಳೂ, ನಾನು ಹೆಚ್ಚು ತಾನು ಹೆಚ್ಚೆಂದು ತಮ್ಮ ತಮ್ಮಲ್ಲಿ ವಾದವಿವಾದಗಳನ್ನು ಮಾಡುತ್ತಿರುವವು. ಅದರಂತೆಯೇ, ಸಮಸ್ತ ಮಂತ್ರಗಳೂ, ಕ್ಷೇತ್ರಗಳೂ, ಪೀಠಗಳೂ, ದಾನಗಳೂ, ದೇವತೆಗಳೂ, ಶಾಸ್ತ್ರಸಿದ್ಧಾಂತಗಳೂ ಇವುಗಳೆಲ್ಲವೂ ತಮ್ಮ ತಮ್ಮಲ್ಲೇ ಉತ್ತಮಸ್ಥಾನಕ್ಕಾಗಿ ವಾದವಿವಾದಗಳನ್ನು ಮಾಡುವವು. ಆದರೆ ಶಿವಪುರಾಣವು ಪ್ರಕಾಶವಾದ ಮೇಲೆ ಉತ್ತಮಸ್ಥಾನವು ಶಿವಪುರಾಣಕ್ಕೆ ಮಾತ್ರವೇ ಉಂಟಾಗಿ ಇವುಗಳ ವಾದಗಳು ನಿಂತುಹೋಗುವವು. (ತೀರ್ಥಾದಿಗಳು ಮನುಷ್ಯರಂತೆ ವಾದವಿವಾದಗಳನ್ನು ನಡೆಸುವುದು ಅಸಂಭವು. ಜನರು ತೀರ್ಥಗಳಲ್ಲಿ ಈ ತೀರ್ಥವು ಶ್ರೇಷ್ಠವಾದದ್ದು, ದಾನಗಳಲ್ಲಿ ಇಂತಹ ದಾನವು ಪುಣ್ಯಪ್ರದವಾದದ್ದು ಕ್ಷೇತ್ರಗಳಲ್ಲಿ ಇದು ಅತ್ಯುತ್ತಮವಾದುದ್ದು ಮುಂತಾದ ಭ್ರಾಂತಿಯಿಂದ ಕೂಡಿರುವರು.

ಅಸ್ಯ ಶೈವಪುರಾಣಸ್ಯ ಕೀರ್ತನಶ್ರವಣಾದ್ದ್ವಿಜಾಃ ।
ಫಲಂ ವಕ್ತುಂ ನ ಶಕ್ನೋಮಿ ಕಾರ್ತ್ಸ್ನ್ಯೇನ ಮುನಿಸತ್ತಮಾಃ ॥ ೧೮ ॥

ತಥಾಪಿ ತಸ್ಯ ಮಾಹಾತ್ಮ್ಯಂ ವಕ್ಷ್ಯೇ ಕಿಂಚಿತ್ತು ವೋಽನಘಾಃ ।
ಚಿತ್ತಮಾಧಾಯ ಶೃಣುತ ವ್ಯಾಸೇನೋಕ್ತಂ ಪುರಾ ಮಮ ॥ ೧೯ ॥

ಏತಚ್ಛಿವಪುರಾಣಂ ಹಿ ಶ್ಲೋಕಂ ಶ್ಲೋಕಾರ್ಧಮೇವ ವಾ ।
ಯಃ ಪಠೇದ್ಭಕ್ತಿಸಂಯುಕ್ತಃ ಸ ಪಾಪಾನ್ಮುಚ್ಯತೇ ಕ್ಷಣಾತ್ ॥ ೨೦ ॥

ಏತಚ್ಛಿವಪುರಾಣಂ ಹಿ ಯಃ ಪ್ರತ್ಯಹಮತಂದ್ರಿತಃ ।
ಯಥಾಶಕ್ತಿ ಪಠೇದ್ಭಕ್ತ್ಯಾ ಸ ಜೀವನ್ಮುಕ್ತ ಉಚ್ಯತೇ ॥ ೨೧ ॥

---

ಆದರೆ ಶಿವಪುರಾಣರಚನಾನಂತರದಲ್ಲಿ ಆದರಲ್ಲಿರುವ ಶಿವಮಾಹಾತ್ಮ್ಯದ ಶ್ರೇಷ್ಠತೆಯನ್ನು ತಿಳಿದು ಅದಕ್ಕೇ ಶ್ರೇಷ್ಠಸ್ಥಾನವನ್ನು ಕಲ್ಪಿಸಿರುವುದರಿಂದ ಶಿವಪುರಾಣವನ್ನು ಬಿಟ್ಟು ಇತರ ಶಾಸ್ತ್ರ, ದೇವತೆ, ತೀರ್ಥ ಮುಂತಾದವುಗಳಿಗೆ ಉತ್ತಮಸ್ಥಾನವಿಲ್ಲವೆಂದು ಅಭಿಪ್ರಾಯವು.

೧೮. ಎಲೈ ಮುನಿಶ್ರೇಷ್ಠರೇ, ಈ ಶಿವಪುರಾಣದ ಶ್ರವಣ ಪಠನಾದಿಗಳನ್ನು ಮಾಡುವುದರಿಂದ ಉಂಟಾಗುವ ಫಲವನ್ನು ಸಮಗ್ರವಾಗಿ ಹೇಳಲು ನಾನು ಶಕ್ತನಲ್ಲ.

೧೯. ಆದಾಗ್ಯೂ ಅದರ ಮಾಹಾತ್ಮ್ಯವನ್ನು ಸ್ವಲ್ಪಮಟ್ಟಿಗೆ ನಿಮಗೆ ಹೇಳುವೆನು. ಸ್ಥಿರಮನಸ್ಕರಾಗಿ ಅದನ್ನು ಕೇಳಿರಿ. ಆ ಪುರಾಣವು ನನಗೆ ಪೂರ್ವದಲ್ಲಿ ವ್ಯಾಸಋಷಿಯಿಂದ ಹೇಳಲ್ಪಟ್ಟಿರುವುದು.

೨೦. ಯಾವ ಮನುಷ್ಯನು ಈ ಶಿವಪುರಾಣವನ್ನಾಗಲಿ, ಅಥವಾ ಆದರಲ್ಲಿ ಒಂದು ಶ್ಲೋಕ, ಅದೂ ಇಲ್ಲದಿದ್ದರೆ ಅರ್ಧ ಶ್ಲೋಕ, ಇಷ್ಟನ್ನಾದರೂ ಭಕ್ತಿಯಿಂದ ಪಠಿಸುವನೋ ಅವನ ಪಾಪಗಳು ತಕ್ಷಣವೇ ನಾಶವನ್ನೈದುವವು.

೨೧. ಈ ಶಿವಪುರಾಣವನ್ನು ಪ್ರತಿದಿವಸವೂ ನಿಯಮದಿಂದಲೂ ಭಕ್ತಿಯಿಂದಲೂ ಯಥಾಶಕ್ತಿ ಪಠಿಸುವ ಪುರುಷನು ಜೀವನ್ಮುಕ್ತನೆನಿಸುವನು.

ಏತಚ್ಛಿವಪುರಾಣಂ ಹಿ ಯೋ ಭಕ್ತ್ಯಾರ್ಚಯತೇ ಸದಾ ।
ದಿನೇದಿನೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೨೨ ॥

ಏತಚ್ಛಿವಪುರಾಣಂ ಯಸ್ಸಾಧಾರಣಪದೇಚ್ಛಯಾ ।
ಅನ್ಯತಃ ಶೃಣುಯಾತ್ಸೋಽಪಿ ಮತ್ತೋ ಮುಚ್ಯೇತ ಪಾತಕಾತ್ ॥ ೨೩ ॥

ಏತಚ್ಛಿವಪುರಾಣಂ ಯೋ ನಮಸ್ಕುರ್ಯಾದದೂರತಃ ।
ಸರ್ವದೇವಾರ್ಚನಫಲಂ ಸ ಪ್ರಾಪ್ನೋತಿ ನ ಸಂಶಯಃ ॥ ೨೪ ॥

ಏತಚ್ಛಿವಪುರಾಣಂ ವೈ ಲಿಖಿತ್ವಾ ಪುಸ್ತಕಂ ಸ್ವಯಂ ।
ಯೋ ದದ್ಯಾಚ್ಛಿವಭಕ್ತೇಭ್ಯಸ್ತಸ್ಯ ಪುಣ್ಯಫಲಂ ಶೃಣು ॥ ೨೫ ॥

ಅಧೀತೇಷು ಚ ಶಾಸ್ತ್ರೇಷು ವೇದೇಷು ವ್ಯಾಕೃತೇಷು ಚ ।
ಯತ್ಫಲಂ ದುರ್ಲಭಂ ಲೋಕೇ ತತ್ಫಲಂ ತಸ್ಯ ಸಂಭವೇತ್ ॥ ೨೬ ॥

---

೨೨. ಈ ಶಿವಪುರಾಣವನ್ನು ಪ್ರತಿದಿನವೂ ಭಕ್ತಿಯಿಂದ ಪೂಜಿಸುವ ಮನುಷ್ಯನು ಅಶ್ವಮೇಧಯಾಗವನ್ನು ಮಾಡಿದ ಫಲವನ್ನು ಪಡೆವನು. ಇದರಲ್ಲಿ ಸಂಶಯವಿಲ್ಲ.

೨೩. ಸಾಧಾರಣವಾದ ಇಷ್ಟಾರ್ಥಪ್ರಾಪ್ತಿಗಾಗಿ ಈ ಪುರಾಣವನ್ನು ನನ್ನಿಂದಲಾಗಲೀ, ಇತರರಿಂದಲಾಗಲೀ ಕೇಳುವವನು ಪಾತಕಗಳಿಂದ ವಿಮುಕ್ತನಾಗುವನು.

೨೪. ಈ ಶಿವಪುರಾಣವನ್ನು ದೂರದಿಂದ ನಮಸ್ಕಾರಮಾಡಿದ ಪುರುಷನೂ ಸಹ ಸಮಸ್ತ ದೇವತೆಗಳನ್ನು ಪೂಜೆಮಾಡಿದ ಫಲವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ.

೨೫-೨೬. ಈ ಶಿವಪುರಾಣವನ್ನು ತಾನೇ ಬರೆದು ಆ ಪುಸ್ತಕವನ್ನು ಶಿವಭಕ್ತರಿಗೆ ಕೊಡುವ ಪುರುಷನ ಪುಣ್ಯಫಲವನ್ನು ಹೇಳುವೆನು ಕೇಳು. ಸಮಸ್ತ ಶಾಸ್ತ್ರಗಳನ್ನೂ ಅಧ್ಯಯನಮಾಡಿ, ವೇದಗಳಿಗೆ ವ್ಯಾಖ್ಯಾನವನ್ನು ರಚಿಸಿದರೆ ಯಾವ ಫಲವು ಲಭಿಸುವುದೋ ಅಂತಹ ದುರ್ಲಭವಾದ ಫಲವು ಶಿವಪುರಾಣವನ್ನು ಬರೆದ ಪುರುಷನಿಗೆ ಉಂಟಾಗುವುದು.

ಏತಚ್ಛಿವಪುರಾಣಂ ಹಿ ಚತುರ್ದಶ್ಯಾಮುಪೋಷಿತಃ ।
ಶಿವಭಕ್ತಸಭಾಯಾಂ ಯೋ ವ್ಯಾಕರೋತಿ ಸ ಉತ್ತಮಃ ॥ ೨೭ ॥

ಪ್ರತ್ಯಕ್ಷರಂ ತು ಗಾಯತ್ರೀಪುರಶ್ಚರ್ಯಾಫಲಂ ಲಭೇತ್ ।
ಇಹ ಭುಕ್ತ್ವಾಖಿಲಾನ್ಕಾಮಾನಂತೇ ನಿರ್ವಾಣತಾಂ ವ್ರಜೇತ್ ॥ ೨೮ ॥

ಉಪೋಷಿತಶ್ಚತುರ್ದಶ್ಯಾಂ ರಾತ್ರೌ ಜಾಗರಣಾನ್ವಿತಃ ।
ಯಃ ಪಠೇಚ್ಛೃಣುಯಾದ್ವಾಪಿ ತಸ್ಯ ಪುಣ್ಯಂ ವದಾಮ್ಯಹಂ ॥ ೨೯ ॥

ಕುರುಕ್ಷೇತ್ರಾದಿನಿಖಿಲಪುಣ್ಯತೀರ್ಥೇಷ್ವನೇಕಶಃ ।
ಆತ್ಮತುಲ್ಯಧನಂ ಸೂರ್ಯಗ್ರಹಣೇ ಸರ್ವತೋಮುಖೇ ॥ ೩೦ ॥

ವಿಪ್ರೇಭ್ಯೋ ವ್ಯಾಸಮುಖ್ಯೇಭ್ಯೋ ದತ್ವಾ ಯತ್ಫಲಮಶ್ನುತೇ ।
ತತ್ಫಲಂ ಸಂಭವೇತ್ತಸ್ಯ ಸತ್ಯಂ ಸತ್ಯಂ ನ ಸಂಶಯಃ ॥ ೩೧ ॥

---

೨೭. ಚತುರ್ದಶೀ ತಿಥಿಯಲ್ಲಿ ಉಪವಾಸವಿದ್ದು, ಶಿವಭಕ್ತರಿಂದ ಕೂಡಿದ ಸಭೆಯಲ್ಲಿ ಈ ಶಿವಪುರಾಣವನ್ನು ಶ್ರವಣಮಾಡಿಸುವವನು ಪುರುಷಶ್ರೇಷ್ಠನೆನಿಸುವನು.

೨೮. ಶಿವಪುರಾಣವನ್ನು ಬರೆದ ಆ ಪುರುಷನು ತಾನು ಬರೆದ ಪ್ರತಿ ಅಕ್ಷರಕ್ಕೂ ಗಾಯತ್ರೀಪುರಶ್ಚರಣ ಫಲವನ್ನು ಹೊಂದುವನು. ಅಲ್ಲದೆ, ಈ ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು, ಸುಖವನ್ನನುಭವಿಸಿ ದೇಹಾಂತ್ಯದಲ್ಲಿ ಮುಕ್ತಿಯನ್ನು ಪಡೆವನು.

೨೯. ಚತುರ್ದಶಿಯಲ್ಲಿ ಉಪವಾಸವನ್ನೂ, ರಾತ್ರೆ ಜಾಗರಣೆಯನ್ನೂ ಮಾಡಿ ಈ ಶಿವಪುರಾಣವನ್ನು ಯಾವನು ಪಠನಮಾಡುವನೋ ಅಥವಾ ಶ್ರವಣಮಾಡುವನೋ ಅವನಿಗೆ ಲಭಿಸುವ ಪುಣ್ಯವನ್ನು ಹೇಳುವೆನು.

೩೦-೩೧. ಕುರುಕ್ಷೇತ್ರಾದಿ ಸಮಸ್ತ ಪುಣ್ಯ ಕ್ಷೇತ್ರಗಳಲ್ಲಿಯೂ, ಅನೇಕ ತೀರ್ಥಗಳಲ್ಲಿಯೂ ಸೂರ್ಯಗ್ರಹಣ ಕಾಲದಲ್ಲಿ ಯಾವ ಮನುಷ್ಯನು ತನ್ನ ಶರೀರ ಪ್ರಮಾಣದಷ್ಟು ಧನವನ್ನು ವ್ಯಾಸಮಹರ್ಷಿ ಮುಂತಾದ ಸದ್ಬ್ರಾಹ್ಮಣರಿಗೆ ದಾನ ಮಾಡಿದರೆ ಯಾವ ಫಲವನ್ನು ಪಡೆವನೋ ಅಂತಹ ಫಲವನ್ನು ಚತುರ್ದಶ್ಯುಪವಾಸ ಜಾಗರಣಾದಿ ಪೂರ್ವಕವಾಗಿ ಶಿವಪುರಾಣ ಪಠನಶ್ರವಣಾದಿಗಳನ್ನು ಮಾಡುವ ಪುರುಷನು ಪಡೆವನು. ಇದು ಸತ್ಯವು. ಸಂಶಯಪಡಲು ಕಾರಣವಿಲ್ಲವು.

ಏತಚ್ಛಿವಪುರಾಣಂ ಹಿ ಗಾಯತೇ ಯೋಽಪ್ಯಹರ್ನಿಶಂ ।
ಆಜ್ಞಾಂ ತಸ್ಯ ಪ್ರತೀಕ್ಷೇರನ್ದೇವಾ ಇಂದ್ರಪುರೋಗಮಾಃ ॥ ೩೨ ॥

ಏತಚ್ಛಿವಪುರಾಣಂ ಯಃ ಪಠಂಚ್ಛೃಣ್ವನ್ಹಿ ನಿತ್ಯಶಃ ।
ಯದ್ಯತ್ಕರೋತಿ ಸತ್ಕರ್ಮ ತತ್ಕೋಟಿಗುಣಿತಂ ಭವೇತ್ ॥ ೩೩ ॥

ಸಮಾಹಿತಃ ಪಠೇದ್ಯಸ್ತು ತತ್ರ ಶ್ರೀರುದ್ರಸಂಹಿತಾಂ ।
ಸ ಬ್ರಹ್ಮಘ್ನೋಽಪಿ ಪೂತಾತ್ಮಾ ತ್ರಿಭಿರೇವ ದಿನೈರ್ಭವೇತ್ ॥ ೩೪ ॥

ತಾಂ ರುದ್ರಸಂಹಿತಾಂ ಯಸ್ತು ಭೈರವಪ್ರತಿಮಾಂತಿಕೇ ।
ತ್ರಿಃ ಪಠೇತ್ಪ್ರತ್ಯಹಂ ಮೌನೀ ಸ ಕಾಮಾನಖಿಲಾಂಲ್ಲಭೇತ್ ॥ ೩೫ ॥

---

೩೨. ಈ ಶಿವಪುರಾಣವನ್ನು ದಿವಾರಾತ್ರಿಯೂ ಯಾವ ಪುರುಷನು ಕೀರ್ತನ ಮಾಡುತ್ತಿರುವನೋ ಅವನ ಆಜ್ಞೆಯನ್ನು ಪಾಲಿಸಲು ಇಂದ್ರಾದಿದೇವತೆಗಳು ಸದಾ ಕಾದಿರುವರು.

೩೩. ಈ ಶಿವಪುರಾಣವನ್ನು ಪ್ರತಿನಿತ್ಯವೂ ಯಾವ ಮನುಷ್ಯನು ಪಠನ ಮಾಡುತ್ತಲೂ ಅಥವಾ ಶ್ರವಣಮಾಡುತ್ತಲೂ ಯಾವ ಒಳ್ಳೆಯ ಕೆಲಸಗಳನ್ನು ಮಾಡುವನೋ ಆ ಮನುಷ್ಯನು ಮಾಡಿದ ಆಯಾ ಕರ್ಮಗಳಿಗೆ ಕೋಟಿ ಪಾಲಿನಷ್ಟು ಫಲವು ಲಭಿಸುವುದು.

೩೪. ಈ ಶಿವಪುರಾಣದ ಒಂದು ಭಾಗವಾದ ರುದ್ರಸಂಹಿತೆಯೆಂಬ ಕಾಂಡ ವನ್ನು ನಿರ್ಮಲಚಿತ್ತದಿಂದ ಯಾವನು ಪಠಿಸುವನೋ ಅವನು ಬ್ರಹ್ಮಹತ್ಯೆಯನ್ನು ಮಾಡಿದವನಾದರೂ ಆ ಪಾಪದಿಂದ ಮೂರು ದಿನಗಳಲ್ಲೇ ವಿಮುಕ್ತನಾಗಿ ಪರಿಶುದ್ಧ ನಾಗುವನು.

೩೫. ಆ ರುದ್ರಸಂಹಿತೆಯನ್ನು ಭೈರವದೇವತೆಯ ಸಮೀಪದಲ್ಲಿ ಯಾವನು ಪ್ರತಿದಿವಸ ಮೂರು ವೇಳೆಯಲ್ಲಿಯೂ ನಿಯಮದಿಂದ ಪಠಿಸುವನೋ ಅವನು ಸಮಸ್ತ ಇಷ್ಟಾರ್ಥಗಳನ್ನೂ ಪಡೆವನು.

ತಾಂ ರುದ್ರಸಂಹಿತಾಂ ಯಸ್ತು ಸಂಪಠೇದ್ವಟಬಿಲ್ವಯೋಃ ।
ಪ್ರದಕ್ಷಿಣಾಂ ಪ್ರಕುರ್ವಾಣೋ ಬ್ರಹ್ಮಹತ್ಯಾ ನಿವರ್ತತೇ ॥ ೩೬ ॥

ಕೈಲಾಸಸಂಹಿತಾ ತತ್ರ ತತೋಽಪಿ ಪರಮಾ ಸ್ಮೃತಾ ।
ಬ್ರಹ್ಮಸ್ವರೂಪಿಣೀ ಸಾಕ್ಷಾತ್ಪ್ರಣವಾರ್ಥಪ್ರಕಾಶಿಕಾ ॥ ೩೭ ॥

ಕೈಲಾಸಸಂಹಿತಾಯಾಸ್ತು ಮಾಹಾತ್ಮ್ಯಂ ವೇತ್ತಿ ಶಂಕರಃ ।
ಕೃತ್ಸ್ನಂ ತದರ್ಧಂ ವ್ಯಾಸಶ್ಚ ತದರ್ಧಂ ವೇದ್ಮ್ಯಹಂ ದ್ವಿಜಾಃ ॥ ೩೮ ॥

ತತ್ರ ಕಿಂಚಿತ್ಪ್ರವಕ್ಷ್ಯಾಮಿ ಕೃತ್ಸ್ನಂ ವಕ್ತುಂ ನ ಶಕ್ಯತೇ ।
ಯಜ್ಜ್ಞಾತ್ವಾ ತತ್ಕ್ಷಣಾಲ್ಲೋಕಶ್ಚಿತ್ತಶುದ್ಧಿಮವಾಪ್ನುಯಾತ್ ॥ ೩೯ ॥

ನ ನಾಶಯತಿ ಯತ್ಪಾಪಂ ಸಾ ರೌದ್ರೀ ಸಂಹಿತಾ ದ್ವಿಜಾಃ ।
ತನ್ನ ಪಶ್ಯಾಮ್ಯಹಂ ಲೋಕೇ ಮಾರ್ಗಮಾಣೋಽಪಿ ಸರ್ವದಾ ॥ ೪೦ ॥

---

೩೬. ಆ ರುದ್ರಸಂಹಿತೆಯನ್ನು ವಟವೃಕ್ಷ ಬಿಲ್ವವೃಕ್ಷಗಳನ್ನು ಪ್ರದಕ್ಷಿಣೆ ಮಾಡುತ್ತಾ ಪಠಿಸುವ ಮನುಷ್ಯನು ಬ್ರಹ್ಮಹತ್ಯಾ ಪಾಪದಿಂದ ಮುಕ್ತನಾಗುತ್ತಾನೆ.

೩೭. ಶಿವಪುರಾಣದಲ್ಲಿರುವ ಕೈಲಾಸಸಂಹಿತೆಯೆಂಬುವುದು ಆ ರುದ್ರಸಂಹಿತೆಗಿಂತಲೂ ಅತ್ಯಂತ ಉತ್ಕೃಷ್ಟವೆನಿಸಿರುವುದು. ಅದು ಸರ್ವ ವೇದಗಳಿಗೂ ಮೂಲವಾದ ಪ್ರಣವದ ಅರ್ಥವನ್ನು ಪ್ರಕಾಶಪಡಿಸುವುದರಿಂದ ಸಾಕ್ಷಾದ್ಬ್ರಹ್ಮಸ್ವರೂಪವೇ ಆಗಿರುವುದು.

೩೮. ಈ ಪರಮಪವಿತ್ರವಾದ ಕೈಲಾಸಸಂಹಿತೆಯ ಮಾಹಾತ್ಮ್ಯವನ್ನು ಸಾಕ್ಷಾತ್ಪರಮೇಶ್ವರನೊಬ್ಬನು ಮಾತ್ರ ಸಂಪೂರ್ಣವಾಗಿ ಬಲ್ಲನು. ನನ್ನ ಗುರುವಾದ ವ್ಯಾಸ ಮಹರ್ಷಿಯು ಅರ್ಧವನ್ನೂ, ನಾನು ಅದರಲ್ಲರ್ಧವನ್ನೂ ಬಲ್ಲೆನು.

೩೯. ಆದುದರಿಂದ ಅದರ ಮಾಹಾತ್ಮ್ಯವನ್ನು ಸ್ವಲ್ಪಮಟ್ಟಿಗೆ ಹೇಳುವೆನು. ಸಂಪೂರ್ಣವಾಗಿ ಹೇಳಲು ನನಗೆ ಸಾಧ್ಯವಿಲ್ಲ. ಆ ಕೈಲಾಸಸಂಹಿತೆಯನ್ನು ತಿಳಿಯುವವನು ತಕ್ಷಣದಲ್ಲಿಯೇ ಚಿತ್ತಶುದ್ಧಿಯನ್ನು ಪಡೆವನು.

೪೦. ಎಲೈ ಬ್ರಾಹ್ಮಣರೇ, ಆ ರುದ್ರಸಂಹಿತೆಯು ನಾಶಮಾಡಲಾರದೆ ಇರುವ ಪಾಪವು ಯಾವುದಾದರೂ ಇರುವುದೇ ಎಂದು ಲೋಕದಲ್ಲಿ ಸದಾ ಹುಡಿಕಿದಾಗ್ಯೂ ನಾನು ಅದನ್ನು ಕಾಣದವನಾಗಿರುವೆನು.

ಶಿವೇನೋಪನಿಷತ್ಸಿಂಧುಮನ್ಥನೋತ್ಪಾದಿತಾಂ ಮುದಾ ।
ಕುಮಾರಾಯಾರ್ಪಿತಾಂ ತಾಂ ವೈ ಸುಧಾಂ ಪೀತ್ವಾಽಮರೋ ಭವೇತ್ ॥

ಬ್ರಹ್ಮಹತ್ಯಾದಿಪಾಪಾನಾಂ ನಿಷ್ಕೃತಿಂ ಕರ್ತುಮುದ್ಯತಃ ।
ಮಾಸಮಾತ್ರಂ ಸಂಹಿತಾಂ ತಾಂ ಪಠಿತ್ವಾ ಮುಚ್ಯತೇ ತತಃ ॥ ೪೨ ॥

ದುಷ್ಪ್ರತಿಗ್ರಹದುರ್ಭೋಜ್ಯದುರಾಲಾಪಾದಿಸಂಭವಂ ।
ಪಾಪಂ ಸಕೃತ್ಕೀರ್ತನೇನ ಸಂಹಿತಾ ಸಾ ವಿನಾಶಯೇತ್ ॥ ೪೩ ॥

ಶಿವಾಲಯೇ ಬಿಲ್ವವನೇ ಸಂಹಿತಾಂ ತಾಂ ಪಠೇತ್ತು ಯಃ ।
ಸ ಯತ್ಫಲಮವಾಪ್ನೋತಿ ತದ್ವಾಚೋಽಪಿ ನ ಗೋಚರೇ ॥ ೪೪ ॥

---

೪೧. ಸಮಸ್ತ ಉಪನಿಷತ್ತುಗಳನ್ನೂ ಪರಶಿವನು ಚನ್ನಾಗಿ ಕಡೆದು ಅವುಗಳ ಸಾರವನ್ನು ಸಂತೋಷದಿಂದ ಕುಮಾರನಿಗೆ ಕೊಟ್ಟನು. ಆ ಸಾರಭೂತವಾದ ಅಮೃತವನ್ನು ಪಾನಮಾಡಿ ಆತನು ಅಮರ (ಮರಣ ರಹಿತ) ನಾದನು.

೪೨. ಬ್ರಹ್ಮಹತ್ಯವೇ ಮೊದಲಾದ ಮಹಾಪಾತಕಗಳ ಪಾಪಗಳನ್ನು ನಿವೃತ್ತಿ ಮಾಡಿಕೊಳ್ಳಲು ಉಜ್ಜುಗಿಸಿ ಈ ಕೈಲಾಸಸಂಹಿತೆಯನ್ನು ಒಂದು ಮಾಸಪರ್ಯಂತರ ಪಠಿಸಿದ್ದೇ ಆದರೆ ಆ ಪಾಪಗಳಿಂದ ನಿವೃತ್ತಿಯನ್ನು ಪಡೆವನು.

೪೩. ದುರ್ದಾನಗಳನ್ನು ಪರಿಗ್ರಹಿಸುವುದು, ನಿಷಿದ್ಧಗಳಾದ ಮದ್ಯಮಾಂಸಾದಿ ಗಳನ್ನು ಸೇವನೆಮಾಡುವುದು, ಗುರುದೇವಾದಿಗಳನ್ನು ದೂಷಣೆಮಾಡುವುದು ಮೊದ ಲಾದ ದುಷ್ಕೃತ್ಯಗಳಿಂದ ಸಂಭವಿಸುವ ಪಾಪವು ಈ ಕೈಲಾಸಸಂಹಿತೆಯನ್ನು ಒಂದಾ ವರ್ತಿ ಪಠಿಸುವುದರಿಂದಲೇ ನಾಶವನ್ನೈದುವುದು.

೪೪. ಶಿವಾಲಯದಲ್ಲಾಗಲಿ, ಬಿಲ್ವವೃಕ್ಷಗಳ ನೆಲೆಯಲ್ಲಾಗಲಿ, ಈ ಸಂಹಿತೆ ಯನ್ನು ಯಾವನು ಪಠಿಸುವನೋ ಅವನು ಪಡೆವ ಫಲವನ್ನು ಬಾಯಿ ಮಾತಿನಿಂದ ಹೇಳಲು ಸಾಧ್ಯವಿಲ್ಲವು.

ಸಂಹಿತಾಂ ತಾಂ ಪಠನ್ಭಕ್ತ್ಯಾ ಯಃ ಶ್ರಾದ್ಧೇ ಭೋಜಯೇದ್ದ್ವಿಜಾನ್ ।
ತಸ್ಯ ಯೇ ಪಿತರಃ ಸರ್ವೇ ಯಾಂತಿ ಶಂಭೋಃ ಪರಂ ಪದಂ ॥ ೪೫ ॥

ಚತುರ್ದಶ್ಯಾಂ ನಿರಾಹಾರೋ ಯಃ ಪಠೇತ್ಸಂಹಿತಾಂ ಚ ತಾಂ ।
ಬಿಲ್ವಮೂಲೇ ಶಿವಃ ಸಾಕ್ಷಾತ್ಸ ದೇವೈಶ್ಚ ಪ್ರಪೂಜ್ಯತೇ ॥ ೪೬ ॥

ಅಪ್ಯನ್ಯಾಃ ಸಂಹಿತಾಸ್ತತ್ರ ಸರ್ವಕಾಮಫಲಪ್ರದಾಃ ।
ಉಭೇ ವಿಶಿಷ್ಟೇ ವಿಜ್ಞೇಯೇ ಲೀಲಾವಿಜ್ಞಾನಪೂರಿತೇ ॥ ೪೭ ॥

ತದಿದಂ ಶೈವಮಾಖ್ಯಾತಂ ಪುರಾಣಂ ವೇದಸಂಮಿತಂ ।
ನಿರ್ಮಿತಂ ತಚ್ಛಿವೇನೈವ ಪ್ರಥಮಂ ಬ್ರಹ್ಮಸಂಮಿತಂ ॥ ೪೮ ॥

ವಿದ್ಯೇಶಂ ಚ ತಥಾ ರೌದ್ರಂ ವೈನಾಯಕಮಥೌಮಿಕಂ ।
ಮಾತ್ರಂ ರುದ್ರೈಕಾದಶಕಂ ಕೈಲಾಸಂ ಶತರುದ್ರಕಂ ॥ ೪೯ ॥

---

೪೫. ಯಾವ ಮನುಷ್ಯನು ತನ್ನ ಪಿತೃಗಳ ಶ್ರಾದ್ಧಕಾಲದಲ್ಲಿ ಈ ಸಂಹಿತೆಯನ್ನು ಭಕ್ತಿಯಿಂದ ಪಠನಮಾಡುತ್ತಾ ಬ್ರಾಹ್ಮಣಭೋಜನವನ್ನು ಮಾಡಿಸುವನೋ ಆ ಪುರುಷನ ಪಿತೃಗಳೆಲ್ಲರೂ ಸಾಕ್ಷಾತ್ಪರಮೇಶ್ವರನ ಸ್ಥಾನವಾದ ಕೈಲಾಸವನ್ನು ಪಡೆವರು.

೪೬. ಬಿಲ್ವವೃಕ್ಷದ ಬುಡದಲ್ಲಿ ಚತುರ್ದಶೀ ದಿವಸ ನಿರಾಹಾರಿಯಾಗಿ (ಉಪವಾಸಮಾಡಿ) ಈ ಸಂಹಿತೆಯನ್ನು ಪಠಿಸುವ ಮನುಷ್ಯನು ಸಾಕ್ಷಾತ್ ಶಿವಸ್ವರೂಪನೇ ಆಗುವನು ಮತ್ತು ದೇವತೆಗಳಿಂದಲೂ ಪೂಜಿಸಲ್ಪಡುವನು.

೪೭. ಈ ಪುರಾಣದಲ್ಲಿ ಇನ್ನೂ ಇತರ ಸಂಹಿತೆಗಳಿರುವವು. ಅವೂ ಸಹ ಸರ್ವ ಇಷ್ಟಾರ್ಥಗಳನ್ನೂ ಕೊಡುವವು. ಆದರೆ ಹಿಂದೆ ಹೇಳಿದ ರುದ್ರ ಮತ್ತು ಕೈಲಾಸಸಂಹಿತೆಗಳು ಪರಮೇಶ್ವರನ ಲೀಲೆಗಳನ್ನೂ, ಬ್ರಹ್ಮಜ್ಞಾನವನ್ನೂ ಉಪದೇಶಿಸುವುದರಿಂದ ಈ ಎರಡು ಸಂಹಿತೆಗಳೇ ಉತ್ಕೃಷ್ಟವಾದುವುಗಳು.

೪೮. ಆದುದರಿಂದ ವೇದಕ್ಕೆ ಸಮಾನವಾದ ಮತ್ತು ಬ್ರಹ್ಮಜ್ಞಾನವನ್ನು ಬೋಧಿಸುವ ಈ ಶೈವಪುರಾಣವು ಪೂರ್ವದಲ್ಲಿ ಶಿವನಿಂದಲೇ ನಿರ್ಮಿತವಾಗಿರುವುದು.

೪೯-೫೦. ಈ ಪುರಾಣದಲ್ಲಿ ಹನ್ನೆರಡು ಸಂಹಿತೆಗಳಿರುವವು. ಅವುಗಳಾವವೆಂದರೆ ವಿದ್ಯೇಶ್ವರ, ರೌದ್ರ, ವಿನಾಯಕ, ಉಮಾ, ಮಾತೃ, ಏಕಾದಶರುದ್ರ, ಕೈಲಾಸ,

ಕೋಟಿರುದ್ರಸಹಸ್ರಾದ್ಯಂ ಕೋಟಿರುದ್ರಂ ತಥೈವ ಚ ।
ವಾಯವೀಯಂ ಧರ್ಮಸಂಜ್ಞಂ ಪುರಾಣಮಿತಿ ಭೇದತಃ ॥ ೫೦ ॥

ಸಂಹಿತಾ ದ್ವಾದಶಮಿತಾ ಮಹಾಪುಣ್ಯತರಾ ಮತಾಃ ।
ತಾಸಾಂ ಸಂಖ್ಯಾಂ ಬ್ರುವೇ ವಿಪ್ರಾಃ ಶೃಣುತಾದರತೋಽಖಿಲಂ ॥ ೫೧ ॥

ವಿದ್ಯೇಶಂ ದಶಸಾಹಸ್ರಂ ರುದ್ರಂ ವೈನಾಯಕಂ ತಥಾ ।
ಔಮಂ ಮಾತೃಪುರಾಣಾಖ್ಯಂ ಪ್ರತ್ಯೇಕಾಷ್ಟಸಹಸ್ರಕಂ ॥ ೫೨ ॥

ತ್ರಯೋದಶಸಹಸ್ರಂ ಹಿ ರುದ್ರೈಕಾದಶಕಂ ದ್ವಿಜಾಃ ।
ಷಟ್ಸಹಸ್ರಂ ಚ ಕೈಲಾಸಂ ಶತರುದ್ರಂ ತದರ್ಧಕಂ ॥ ೫೩ ॥

ಕೋಟಿರುದ್ರಂ ತ್ರಿಗುಣಿತಮೇಕಾದಶಸಹಸ್ರಕಂ ।
ಸಹಸ್ರಕೋಟಿರುದ್ರಾಖ್ಯಮುದಿತಂ ಗ್ರಂಥಸಂಖ್ಯಯಾ ॥ ೫೪ ॥

ವಾಯವೀಯಂ ಖಾಬ್ಧಿಶತಂ ಧರ್ಮಂ ರವಿಸಹಸ್ರಕಂ ।
ತದೇವಂ ಲಕ್ಷಸಂಖ್ಯಾಕಂ ಶೈವಸಂಖ್ಯಾವಿಭೇದತಃ ॥ ೫೫ ॥

---

ಶತರುದ್ರ, ಕೋಟಿರುದ್ರ, ಸಹಸ್ರ ಕೋಟಿ ರುದ್ರ, ವಾಯವೀಯ, ಧರ್ಮ ಎಂಬದಾಗಿ ಹನ್ನೆರಡು ಸಂಹಿತೆಗಳು.

೫೧. ಎಲೈ ದ್ವಿಜರೇ, ಈ ಹನ್ನೆರಡು ಸಂಹಿತೆಗಳೂ ಮಹಾಪುಣ್ಯಪ್ರದವಾದವುಗಳು. ಅವುಗಳ ಗ್ರಂಥಸಂಖ್ಯೆಯನ್ನು ಹೇಳುವೆನು. ಭಕ್ತಿಯಿಂದ ಕೇಳುವವರಾಗಿರಿ.

೫೨-೫೫. ವಿದ್ಯೇಶ್ವರಸಂಹಿತೆಯಲ್ಲಿ ಹತ್ತು ಸಹಸ್ರ ಗ್ರಂಥವೂ (ಶ್ಲೋಕವೂ) ವಿನಾಯಕ, ಉಮಾ, ಮಾತೃ ಈ ಸಂಹಿತೆಗಳಲ್ಲಿ ಪ್ರತಿಯೊಂದರಲ್ಲಿಯೂ ಎಂಟು ಸಹಸ್ರವೂ, ಏಕಾದಶರುದ್ರದಲ್ಲಿ ಹದಿಮೂರು ಸಹಸ್ರವೂ, ಕೈಲಾಸದಲ್ಲಿ ಆರು ಸಹಸ್ರವೂ, ಶತರುದ್ರದಲ್ಲಿ ಆದರಲ್ಲಿ ಅರ್ಧ ಎಂದರೆ ಮೂರು ಸಹಸ್ರವೂ ಕೋಟಿ ರುದ್ರದಲ್ಲಿ ಅದರ ಮೂರರಷ್ಟು ಎಂದರೆ ಒಂಭತ್ತು ಸಹಸ್ರವೂ, ಸಹಸ್ರ ಕೋಟಿ ರುದ್ರದಲ್ಲಿ ಹನ್ನೊಂದು ಸಹಸ್ರವೂ, ವಾಯವೀಯದಲ್ಲಿ ನಾಲ್ಕು ಸಹಸ್ರವೂ, ಧರ್ಮಸಂಹಿತೆಯಲ್ಲಿ ಹನ್ನೆರಡು ಸಹಸ್ರ ಗ್ರಂಥಗಳೂ ಒಟ್ಟು ಒಂದು ಲಕ್ಷ ಗ್ರಂಥಗಳು ಈ ಶಿವಪ್ರೋಕ್ತವಾದ ಪುರಾಣದಲ್ಲಿರುವವು.

ಸಂಹಿತಾಂ ತಾಂ ಪಠನ್ಭಕ್ತ್ಯಾ ಯಃ ಶ್ರಾದ್ಧೇ ಭೋಜಯೇದ್ದ್ವಿಜಾನ್ ।
ತಸ್ಯ ಯೇ ಪಿತರಃ ಸರ್ವೇ ಯಾಂತಿ ಶಂಭೋಃ ಪರಂ ಪದಂ ॥ ೪೫ ॥

ಚತುರ್ದಶ್ಯಾಂ ನಿರಾಹಾರೋ ಯಃ ಪಠೇತ್ಸಂಹಿತಾಂ ಚ ತಾಂ ।
ಬಿಲ್ವಮೂಲೇ ಶಿವಃ ಸಾಕ್ಷಾತ್ಸ ದೇವೈಶ್ಚ ಪ್ರಪೂಜ್ಯತೇ ॥ ೪೬ ॥

ಅನ್ಯಾಸ್ಯಾಃ ಸಂಹಿತಾಸ್ತತ್ರ ಸರ್ವಕಾಮಫಲಪ್ರದಾಃ ।
ಉಭೇ ವಿಶಿಷ್ಟೇ ವಿಜ್ಞೇಯೇ ಲೀಲಾವಿಜ್ಞಾನಪೂರಿತೇ ॥ ೪೭ ॥

ತದಿದಂ ಶೈವಮಾಖ್ಯಾತಂ ಪುರಾಣಂ ವೇದಸಂಮಿತಂ ।
ನಿರ್ಮಿತಂ ತಚ್ಛಿವೇನೈವ ಪ್ರಥಮಂ ಬ್ರಹ್ಮಸಂಮಿತಂ ॥ ೪೮ ॥

ವಿದ್ಯೇಶಂ ಚ ತಥಾ ರೌದ್ರಂ ವೈನಾಯಕಮಥೌಮಿಕಂ ।
ಮಾತ್ರಂ ರುದ್ರೈಕಾದಶಕಂ ಕೈಲಾಸಂ ಶತರುದ್ರಕಂ ॥ ೪೯ ॥

---

೪೫. ಯಾವ ಮನುಷ್ಯನು ತನ್ನ ಪಿತೃಗಳ ಶ್ರಾದ್ಧಕಾಲದಲ್ಲಿ ಈ ಸಂಹಿತೆಯನ್ನು ಭಕ್ತಿಯಿಂದ ಪಠನಮಾಡುತ್ತಾ ಬ್ರಾಹ್ಮಣಭೋಜನವನ್ನು ಮಾಡಿಸುವನೋ ಆ ಪುರುಷನ ಪಿತೃಗಳೆಲ್ಲರೂ ಸಾಕ್ಷಾತ್ಪರಮೇಶ್ವರನ ಸ್ಥಾನವಾದ ಕೈಲಾಸವನ್ನು ಪಡೆವರು.

೪೬. ಬಿಲ್ವವೃಕ್ಷದ ಬುಡದಲ್ಲಿ ಚತುರ್ದಶೀ ದಿವಸ ನಿರಾಹಾರಿಯಾಗಿ (ಉಪವಾಸಮಾಡಿ) ಈ ಸಂಹಿತೆಯನ್ನು ಪಠಿಸುವ ಮನುಷ್ಯನು ಸಾಕ್ಷಾತ್ ಶಿವಸ್ವರೂಪನೇ ಆಗುವನು ಮತ್ತು ದೇವತೆಗಳಿಂದಲೂ ಪೂಜಿಸಲ್ಪಡುವನು.

೪೭. ಈ ಪುರಾಣದಲ್ಲಿ ಇನ್ನೂ ಇತರ ಸಂಹಿತೆಗಳಿರುವವು. ಅವೂ ಸಹ ಸರ್ವ ಇಷ್ಟಾರ್ಥಗಳನ್ನೂ ಕೊಡುವವು. ಆದರೆ ಹಿಂದೆ ಹೇಳಿದ ರುದ್ರ ಮತ್ತು ಕೈಲಾಸಸಂಹಿತೆಗಳು ಪರಮೇಶ್ವರನ ಲೀಲೆಗಳನ್ನೂ, ಬ್ರಹ್ಮಜ್ಞಾನವನ್ನೂ ಉಪದೇಶಿಸುವುದರಿಂದ ಈ ಎರಡು ಸಂಹಿತೆಗಳೇ ಉತ್ಕೃಷ್ಟವಾದುವುಗಳು.

೪೮. ಆದುದರಿಂದ ವೇದಕ್ಕೆ ಸಮಾನವಾದ ಮತ್ತು ಬ್ರಹ್ಮಜ್ಞಾನವನ್ನು ಬೋಧಿಸುವ ಈ ಶೈವಪುರಾಣವು ಪೂರ್ವದಲ್ಲಿ ಶಿವನಿಂದಲೇ ನಿರ್ಮಿತವಾಗಿರುವುದು.

೪೯-೫೦. ಈ ಪುರಾಣದಲ್ಲಿ ಹನ್ನೆರಡು ಸಂಹಿತೆಗಳಿರುವವು. ಅವುಗಳಾವವೆಂದರೆ ವಿದ್ಯೇಶ್ವರ, ರೌದ್ರ, ವಿನಾಯಕ, ಉಮಾ, ಮಾತೃ, ಏಕಾದಶರುದ್ರ, ಕೈಲಾಸ,

ಕೋಟಿರುದ್ರಸಹಸ್ರಾದ್ಯಂ ಕೋಟಿರುದ್ರಂ ತಥೈವ ಚ ।
ವಾಯುವೀಯಂ ಧರ್ಮಸಂಜ್ಞಂ ಪುರಾಣಮಿತಿ ಭೇದತಃ ॥ ೫೦ ॥

ಸಂಹಿತಾ ದ್ವಾದಶಮಿತಾ ಮಹಾಪುಣ್ಯತರಾ ಮತಾಃ ।
ತಾಸಾಂ ಸಂಖ್ಯಾಂ ಬ್ರುವೇ ವಿಪ್ರಾಃ ಶೃಣುತಾದರತೋಽಖಿಲಂ ॥ ೫೧ ॥

ವಿದ್ಯೇಶಂ ದಶಸಾಹಸ್ರಂ ರುದ್ರಂ ವೈನಾಯಕಂ ತಥಾ ।
ಔಮಂ ಮಾತೃಪುರಾಣಾಖ್ಯಂ ಪ್ರತ್ಯೇಕಾಷ್ಟಸಹಸ್ರಕಂ ॥ ೫೨ ॥

ತ್ರಯೋದಶಸಹಸ್ರಂ ಹಿ ರುದ್ರೈಕಾದಶಕಂ ದ್ವಿಜಾಃ ।
ಷಟ್ಸಹಸ್ರಂ ಚ ಕೈಲಾಸಂ ಶತರುದ್ರಂ ತದರ್ಧಕಂ ॥ ೫೩ ॥

ಕೋಟಿರುದ್ರಂ ತ್ರಿಗುಣಿತಮೇಕಾದಶಸಹಸ್ರಕಂ ।
ಸಹಸ್ರಕೋಟಿರುದ್ರಾಖ್ಯಮುದಿತಂ ಗ್ರಂಥಸಂಖ್ಯಯಾ ॥ ೫೪ ॥

ವಾಯುವೀಯಂ ಖಾಬ್ಧಿಶತಂ ಧರ್ಮಂ ರವಿಸಹಸ್ರಕಂ ।
ತದೇವಂ ಲಕ್ಷಸಂಖ್ಯಾಕಂ ಶೈವಸಂಖ್ಯಾವಿಭೇದತಃ ॥ ೫೫ ॥

---

ಶತರುದ್ರ, ಕೋಟಿರುದ್ರ, ಸಹಸ್ರ ಕೋಟಿ ರುದ್ರ, ವಾಯುವೀಯ, ಧರ್ಮ ಎಂಬದಾಗಿ ಹನ್ನೆರಡು ಸಂಹಿತೆಗಳು.

೫೧. ಎಲೈ ದ್ವಿಜರೇ, ಈ ಹನ್ನೆರಡು ಸಂಹಿತೆಗಳೂ ಮಹಾಪುಣ್ಯಪ್ರದವಾದವುಗಳು. ಅವುಗಳ ಗ್ರಂಥಸಂಖ್ಯೆಯನ್ನು ಹೇಳುವೆನು. ಭಕ್ತಿಯಿಂದ ಕೇಳುವವರಾಗಿರಿ.

೫೨-೫೫. ವಿದ್ಯೇಶ್ವರಸಂಹಿತೆಯಲ್ಲಿ ಹತ್ತು ಸಹಸ್ರ ಗ್ರಂಥವೂ (ಶ್ಲೋಕವೂ) ವಿನಾಯಕ, ಉಮಾ, ಮಾತೃ ಈ ಸಂಹಿತೆಗಳಲ್ಲಿ ಪ್ರತಿಯೊಂದರಲ್ಲಿಯೂ ಎಂಟು ಸಹಸ್ರವೂ, ಏಕಾದಶರುದ್ರದಲ್ಲಿ ಹದಿಮೂರು ಸಹಸ್ರವೂ, ಕೈಲಾಸದಲ್ಲಿ ಆರು ಸಹಸ್ರವೂ, ಶತರುದ್ರದಲ್ಲಿ ಅದರಲ್ಲಿ ಅರ್ಧ ಎಂದರೆ ಮೂರು ಸಹಸ್ರವೂ ಕೋಟಿ ರುದ್ರದಲ್ಲಿ ಅದರ ಮೂರರಷ್ಟು ಎಂದರೆ ಒಂಭತ್ತು ಸಹಸ್ರವೂ, ಸಹಸ್ರ ಕೋಟಿ ರುದ್ರದಲ್ಲಿ ಹನ್ನೊಂದು ಸಹಸ್ರವೂ, ವಾಯುವೀಯದಲ್ಲಿ ನಾಲ್ಕು ಸಹಸ್ರವೂ, ಧರ್ಮಸಂಹಿತೆಯಲ್ಲಿ ಹನ್ನೆರಡು ಸಹಸ್ರ ಗ್ರಂಥಗಳೂ ಒಟ್ಟು ಒಂದು ಲಕ್ಷ ಗ್ರಂಥಗಳು ಈ ಶಿವಪ್ರೋಕ್ತವಾದ ಪುರಾಣದಲ್ಲಿರುವವು.

ವ್ಯಾಸೇನ ತತ್ತು ಸಂಕ್ಷಿಪ್ತಂ ಚತುರ್ವಿಂಶತ್ಸಹಸ್ರಕಂ ।
ಶೈವಂ ತತ್ರ ಚತುರ್ಥಂ ವೈ ಪುರಾಣಂ ಸಪ್ತಸಂಹಿತಂ ॥ ೫೬ ॥

ಶಿವೇ ಸಂಕಲ್ಪಿತಂ ಪೂರ್ವಂ ಪುರಾಣಂ ಗ್ರಂಥಸಂಖ್ಯಯಾ ।
ಶತಕೋಟಿಪ್ರಮಾಣಂ ಹಿ ಪುರಾ ಸೃಷ್ಟೌ ಸುವಿಸ್ತೃತಂ ॥ ೫೭ ॥

ವ್ಯಸ್ತೇಽಷ್ಟಾದಶಧಾ ಚೈವ ಪುರಾಣೇ ದ್ವಾಪರಾದಿಷು ।
ಚತುರ್ಲಕ್ಷೇಣ ಸಂಕ್ಷಿಪ್ತೇ ಕೃತೇ ದ್ವೈಪಾಯನಾದಿಭಿಃ ॥ ೫೮ ॥

ಪ್ರೋಕ್ತಂ ಶಿವಪುರಾಣಂ ಹಿ ಚತುರ್ವಿಂಶತ್ಸಹಸ್ರಕಂ ।
ಶ್ಲೋಕಾನಾಂ ಸಂಖ್ಯಯಾ ಸಪ್ತಸಂಹಿತಂ ಬ್ರಹ್ಮಸಂಮಿತಂ ॥ ೫೯ ॥

ವಿದ್ಯೇಶ್ವರಾಖ್ಯಾ ತತ್ರಾದ್ಯಾ ರೌದ್ರೀ ಜ್ಞೇಯಾ ದ್ವಿತೀಯಿಕಾ ।
ತೃತೀಯಾ ಶತರುದ್ರಾಖ್ಯಾ ಕೋಟಿರುದ್ರಾ ಚತುರ್ಥಿಕಾ ॥ ೬೦ ॥

---

೫೬. ಈ ಲಕ್ಷಗ್ರಂಥ ಪರಿಮಿತವಾದ ಶಿವಪುರಾಣವು ವ್ಯಾಸಮಹರ್ಷಿಯಿಂದ ಸಂಕ್ಷೇಪವಾಗಿ ಇಪ್ಪತ್ತು ನಾಲ್ಕು ಸಹಸ್ರ ಗ್ರಂಗಳಲ್ಲಿ ಏಳು ಸಂಹಿತೆಗಳಿಂದ ಕೂಡಿ ನಾಲ್ಕನೆಯ ಪುರಾಣವೆಂದು ಹೇಳಲ್ಪಟ್ಟಿರುವುದು.

೫೭. ಆದಿಸೃಷ್ಟಿಯಲ್ಲಿ ಈ ಶಿವಪುರಾಣವು ಒಂದು ನೂರು ಕೋಟಿ ಗ್ರಂಥಗಳುಳ್ಳದ್ದಾಗಿ ಶಿವನಿಂದ ನಿರ್ಮಿತವಾಗಿರುವುದು.

೫೮. ದ್ವಾಪರಾದಿಯುಗಗಳಲ್ಲಿ ಕೃಷ್ಣದ್ವೈಪಾಯನಾದಿ (ವ್ಯಾಸಾದಿ) ಗಳಿಂದ ನಾಲ್ಕು ಲಕ್ಷ ಗ್ರಂಥಗಳಲ್ಲಿ ಹದಿನೆಂಟು ಪುರಾಣಗಳು ಸಂಕ್ಷೇಪವಾಗಿ ರಚಿಸಲ್ಪಟ್ಟವು.

೫೯. ವೇದಕ್ಕೆ ಸಮಾನವಾದ ಈ ಶಿವಪುರಾಣವು ಆಗ ಇಪ್ಪತ್ತುನಾಲ್ಕು ಸಹಸ್ರ ಶ್ಲೋಕಗಳಿಂದಲೂ, ಏಳು ಸಂಹಿತೆಗಳಿಂದಲೂ ಕೂಡಿ ರಚಿಸಲ್ಪಟ್ಟಿತು.

೬೦-೬೧. ಆ ಪುರಾಣದಲ್ಲಿ ಮೊದಲನೆಯದು ವಿದ್ಯೇಶ್ವರಸಂಹಿತೆಯೂ, ಎರಡನೆಯದು ರುದ್ರಸಂಹಿತೆಯೂ, ಮೂರನೆಯದು ಶತರುದ್ರಸಂಹಿತೆಯೂ, ನಾಲ್ಕನೆಯದು ಕೋಟಿರುದ್ರಸಂಹಿತೆಯೂ, ಐದನೆಯದು ಉಮಾಸಂಹಿತೆಯೂ, ಆರನೆಯದು

ಪಂಚಮೀ ಚೈವಸೌಮ್ಯಾಖ್ಯಾ ಷಷ್ಠೀ ಕೈಲಾಸಸಂಜ್ಞಿಕಾ ।
ಸಪ್ತಮೀ ವಾಯವೀಯಾಖ್ಯಾ ಸಪ್ತೈವಂ ಸಂಹಿತಾ ಮತಾಃ ॥ ೬೧ ॥

ಸಸಪ್ತಸಂಹಿತಂ ದಿವ್ಯಂ ಪುರಾಣಂ ಶಿವಸಂಜ್ಞಕಂ ।
ವರೀವರ್ತಿ ಬ್ರಹ್ಮತುಲ್ಯಂ ಸರ್ವೋಪರಿ ಗತಿಪ್ರದಂ ॥ ೬೨ ॥

ಏತಚ್ಛಿವಪುರಾಣಂ ಹಿ ಸಪ್ತಸಂಹಿತಮಾದರಾತ್ ।
ಪರಿಪೂರ್ಣಂ ಪಠೇದ್ಯಸ್ತು ಸ ಜೀವನ್ಮುಕ್ತ ಉಚ್ಯತೇ ॥ ೬೩ ॥

ಶ್ರುತಿಸ್ಮೃತಿಪುರಾಣೇತಿಹಾಸಾಗಮಶತಾನಿ ಚ ।
ಏತಚ್ಛಿವಪುರಾಣಸ್ಯ ನಾರ್ಹಂತ್ಯಲ್ಪಾಂ ಕಲಾಮಪಿ ॥ ೬೪ ॥

ಶೈವಂ ಪುರಾಣಮಮಲಂ ಶಿವಕೀರ್ತಿತಂ ತ-
ದ್ವ್ಯಾಸೇನ ಶೈವಪ್ರವಣೇನ ಚ ಸಂಗೃಹೀತಂ ।
ಸಂಕ್ಷೇಪತಸ್ಸಕಲಜೀವಗುಣೋಪಕಾರಂ
ತಾಪತ್ರಯಘ್ನಮತುಲಂ ಶಿವದಂ ಸತಾಂ ಹಿ ॥ ೬೫ ॥

---

ಕೈಲಾಸಸಂಹಿತೆಯೂ, ಏಳನೆಯದು ವಾಯವೀಯ ಸಂಹಿತೆಯೂ ಎಂದು ಏಳು ಸಂಹಿತೆಗಳಿರುವವು.

೬೨. ಏಳು ಸಂಹಿತೆಗಳಿಂದ ಕೂಡಿದ ದಿವ್ಯವಾದ ಈ ಶಿವಪುರಾಣವು ಪರಬ್ರಹ್ಮಸ್ವರೂಪವಾಗಿಯೂ, ಉತ್ತಮಗತಿ ಪ್ರದವಾಗಿಯೂ ಇರುವುದು.

೬೩. ಸಪ್ತಸಂಹಿತಾತ್ಮಕವಾದ ಈ ಶಿವಪುರಾಣವನ್ನು ಸಂಪೂರ್ಣವಾಗಿ ಭಕ್ತಿಯಿಂದ ಪಠನಮಾಡುವ ಪುರುಷನು ಜೀವನ್ಮುಕ್ತನೆಂದು ಹೇಳಲ್ಪಡುವನು.

೬೪. ವೇದಗಳು, ಸ್ಮೃತಿಗಳು, ಪುರಾಣಗಳು, ಇತಿಹಾಸಗಳು ಆಗಮಗಳು, ಇನ್ನೂ ನೂರಾರು ಇತರ ಗ್ರಂಥಗಳೂ ಸಹ ಈ ಶಿವಪುರಾಣದ ಒಂದು ಸಣ್ಣ ಅಂಶವನ್ನೂ ಸಹ ಹೋಲಲಾರವು.

೬೫. ಸಾಕ್ಷಾತ್ಪರ ಶಿವನಿಂದ ಹೇಳಲ್ಪಟ್ಟಿರುವ ಉತ್ತಮವಾದ ಈ ಶಿವಪುರಾಣವನ್ನು ಶಿವಭಕ್ತನಾದ ವ್ಯಾಸಮಹಾಮುನಿಯು ಸಂಗ್ರಹಿಸಿ ಸಂಕ್ಷೇಪವಾಗಿ ಸಮಸ್ತ ಪ್ರಾಣಿಗಳಿಗೆ ಉಪಕಾರಮಾಡುವುದಕ್ಕೋಸ್ಕರ ರಚಿಸಿರುವನು. ಈ ಪುರಾಣವು ಸಜ್ಜನರಿಗೆ ಆಧ್ಯಾತ್ಮಿಕ ಆಧಿಭೌತಿಕ, ಆಧಿದೈವಿಕವೆಂಬ ತಾಪತ್ರಯಗಳನ್ನು ಪರಿಹರಿಸಿ ಸಮಸ್ತ ಸನ್ಮಂಗಳವನ್ನೂ ಉಂಟುಮಾಡುವುದು.

ನಿಕೈತವೋ ಧರ್ಮ ಇಹ ಪ್ರಗೀತೋ
ವೇದಾಂತವಿಜ್ಞಾನಮಯಃ ಪ್ರಧಾನಃ ।
ಅಮತ್ಸರಾಂತರ್ಬುಧವೇದ್ಯವಸ್ತು
ಸತ್ಕ್ಲೃಪ್ತಮಂತ್ರಾರ್ಥತ್ರಿವರ್ಗಯುಕ್ತಂ ॥ ೬೬ ॥

ಶೈವಂ ಪುರಾಣತಿಲಕಂ ಖಲು ಸತ್ಪುರಾಣಂ
ವೇದಾಂತವೇದವಿಲಸತ್ಪರವಸ್ತುಗೀತಂ ।
ಯೋ ವೈ ಪಠೇಚ್ಚ ಶೃಣುಯಾತ್ಪರಮಾದರೇಣ
ಶಂಭುಪ್ರಿಯಸ್ಸ ಹಿ ಲಭೇತ್ಪರಮಾಂ ಗತಿಂ ವೈ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ
ಸಂಹಿತಾಯಾಂ ದ್ವಿತೀಯೋಽಧ್ಯಾಯಃ.

---

೬೬. ಈ ಶಿವಪುರಾಣವನ್ನು ನಿರ್ವಂಚನೆಯಿಂದ ಭಕ್ತಿಯುಕ್ತನಾಗಿ ಪಠಿಸಿದಲ್ಲಿ ಆ ಪುರುಷನಿಗೆ ವೇದಾಂತತತ್ತ್ವಜ್ಞಾನವು ಲಭಿಸುವುದು. ನಿಷ್ಕಲ್ಮಷಚಿತ್ತನಾಗಿ ಯೋಗಿಗಳಿಂದ ಮಾತ್ರ ತಿಳಿಯಲ್ಪಡುವ ಪರಬ್ರಹ್ಮ ಸ್ವರೂಪವನ್ನು ತಿಳಿಯುವನು. ಸಮಸ್ತ ಮಂತ್ರಾರ್ಥಗಳ ಅರ್ಥವೂ ಅವನಿಗೆ ವಿಶದವಾಗುವವು ಕೊನೆಗೆ ಧರ್ಮಾರ್ಥ ಮೋಕ್ಷಗಳೆಂಬ ಮೂರು ಪುರುಷಾರ್ಥಗಳನ್ನು ಹೊಂದಿ ಸುಖಿಸುವನು.

೬೭. ಪುರಾಣಗಳಲ್ಲಿ ಈ ಶಿವಪುರಾಣವು ಅತಿ ಶ್ರೇಷ್ಠವಾಗಿಯೂ, ವೇದ ವೇದಾಂತಗಳಲ್ಲಿ ಪ್ರತಿಪಾದ್ಯವಾದ ಪರವಸ್ತುವನ್ನು ಕೀರ್ತನಮಾಡುವುದಾಗಿಯೂ ಇರುವುದು. ಇಂತಹ ಸತ್ಪುರಾಣವನ್ನು ಅತಿ ಭಕ್ತಿಯಿಂದ ಪಠಿಸುವ ಮನುಜನು ಪರಮೇಶ್ವರನಿಗೆ ಪ್ರಿಯವಾದ ಭಕ್ತನಾಗಿ ಉತ್ತಮವಾದ ಗತಿಯನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ತೃತೀಯೋಽಧ್ಯಾಯಃ

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ವಚಸ್ಸೌತಂ ಪ್ರೋಚುಸ್ತೇ ಪರಮರ್ಷಯಃ ।
ವೇದಾಂತಸಾರಸರ್ವಸ್ವಂ ಪುರಾಣಂ ಶ್ರಾವಯಾದ್ಭುತಂ ॥ ೧ ॥

ಇತಿ ಶ್ರುತ್ವಾ ಮುನೀನಾಂ ಸ ವಚನಂ ಸುಪ್ರಹರ್ಷಿತಃ ।
ಸಂಸ್ಮರಂಚ್ಛಂಕರಂ ಸೂತಃ ಪ್ರೋವಾಚ ಮುನಿಸತ್ತಮಾನ್ ॥ ೨ ॥

---

### ಮೂರನೆಯ ಅಧ್ಯಾಯವು.

೧. ವ್ಯಾಸಮುನಿಯು ಹೇಳಲುಪಕ್ರಮಿಸಿದನು :—ಸೂತಪೌರಾಣಿಕನು ಹೇಳಿದ ಶಿವಪುರಾಣ ಸಂಬಂಧವಾದ ಈ ಮಾತುಗಳನ್ನು ಕೇಳಿ, ಋಷಿಗಳು ವೇದಾಂತ ಸಾರಯುಕ್ತವಾಗಿಯೂ, ಆಶ್ಚರ್ಯಕರವಾಗಿಯೂ ಇರುವ ಶಿವಪುರಾಣವನ್ನು ತಮಗೆ ಶ್ರವಣಮಾಡಿಸಬೇಕೆಂದು ಸೂತಮುನಿಯನ್ನು ಕೇಳಿದರು.

೨. ಈ ರೀತಿ ಕೇಳಿದ ಮುನಿಗಳ ಮಾತನ್ನು ಕೇಳಿ, ಸೂತಮುನಿಯು ಹರ್ಷಗೊಂಡು ಶಂಕರನನ್ನು ಸ್ಮರಿಸಿ, ಆ ಮುನಿಗಳಿಗೆ ಈ ರೀತಿ ಹೇಳತೊಡಗಿದನು.

ಸೂತ ಉವಾಚ ॥

ಶೃಣ್ವಂತು ಋಷಯಃ ಸರ್ವೇ ಸ್ಮೃತ್ವಾ ಶಿವಮನಾಮಯಂ ।
ಪುರಾಣಪ್ರವಣಂ ಶೈವಂ ಪುರಾಣಂ ವೇದಸಾರಜಂ ॥ ೩ ॥

ಯತ್ರ ಗೀತಂ ತ್ರಿಕಂ ಪ್ರೀತ್ಯಾ ಭಕ್ತಿಜ್ಞಾನವಿರಾಗಕಂ । ॥ ೪ ॥

ವೇದಾಂತವೇದ್ಯಂ ಸದ್ವಸ್ತು ವಿಶೇಷೇಣ ಪ್ರವರ್ಣಿತಂ ॥ ೫ ॥

ಶೃಣ್ವಂತು ಋಷಯಃ ಸರ್ವೇ ಪುರಾಣಂ ವೇದಸಾರಜಂ ।
ಪುರಾ ಕಾಲೇನ ಮಹತಾ ಕಲ್ಪೇಽತೀತೇ ಪುನಃ ಪುನಃ ॥ ೬ ॥

ಅಸ್ಮಿನ್ನುಪಸ್ಥಿತೇ ಕಲ್ಪೇ ಪ್ರವೃತ್ತೇ ಸೃಷ್ಟಿಕರ್ಮಣಿ ।
ಮುನೀನಾಂ ಷಟ್ಕುಲೀನಾನಾಂ ಬ್ರುವತಾಮಿತರೇತರಂ ॥ ೭ ॥

---

೩. ಸೂತಮುನಿಯಿಂತೆಂದನು :—ಎಲೈ ಋಷಿಗಳೇ, ವಿಕಾರರಹಿತನಾದ ಸಾಕ್ಷಾತ್ಪರಮೇಶ್ವರನನ್ನು ಸ್ಮರಣೆಮಾಡಿ ವೇದಸಾರಗಳಿಂದ ಕೂಡಿರುವ ಈ ಉತ್ತಮವಾದ ಶಿವಪುರಾಣವನ್ನು ಹೇಳುವೆನು, ಕೇಳಿ.

೪-೫. ಈ ಪುರಾಣದಲ್ಲಿ ಭಕ್ತಿಜ್ಞಾನವೈರಾಗ್ಯಗಳೆಂಬ ಮೂರು ವಿಧವಾದ ಮುಕ್ತಿಸಾಧನಗಳು ವರ್ಣಿತವಾಗಿವೆ. ಅಲ್ಲದೆ ವೇದಾಂತಪ್ರತಿಪಾದ್ಯವಾದ ಪರಬ್ರಹ್ಮ ವಸ್ತುವು ವಿಶೇಷವಾಗಿ ವರ್ಣಿತವಾಗಿದೆ. ಮತ್ತು ವೇದಗಳ ಸಾರವೂ ಇದರಲ್ಲಿ ಅಡಕವಾಗಿದೆ. ಇಂತಹ ಪುರಾಣವನ್ನು ಕೇಳುವವರಾಗಿರಿ.

೬-೭. ಬಹು ಪೂರ್ವಕಾಲದಲ್ಲಿ ಅನೇಕ ಕಲ್ಪಗಳು ಒಂದಾಗುತ್ತಲೊಂದು ಕಳೆದು ಈ ಶ್ವೇತವರಾಹಕಲ್ಪವು ಪ್ರಾಪ್ತವಾಗಿ ಸೃಷ್ಟಿಕಾರ್ಯವು ನಡೆಯುತ್ತಿರಲು ತ್ರಿವೇಣೀ ಸಂಗಮವಾದ ಪ್ರಯಾಗಕ್ಷೇತ್ರದಲ್ಲಿರುವ (ಮೂರು ನದಿಗಳ ಉಭಯತೀರಗಳನ್ನೂ ಸೇರಿಸಿದರೆ ಆರು ತೀರಗಳಾಗುವವು. ಈ ಆರು ತೀರಗಳಲ್ಲಿಯೂ ವಾಸವಾಗಿರುವ ಋಷಿಗಳಿಗೆ ಷಟ್ಕುಲೀನರೆಂದು ಕರೆಯುವ ವಾಡಿಕೆಯುಂಟು.) ಋಷಿಗಳಲ್ಲಿ, ಈ ವಸ್ತುವು ಶ್ರೇಷ್ಠವು. ಇದು ಶ್ರೇಷ್ಠವಲ್ಲ ಎಂದು ಮುಂತಾಗಿ ಪರಸ್ಪರವಾಗಿ ದೊಡ್ಡ ವಿವಾದವು ವುಂಟಾಯಿತು.

ಇದಂ ಪರಮಿದಂ ನೇತಿ ವಿವಾದಃ ಸುಮಹಾನಭೂತ್ ।
ತೇಽಭಿಜಗ್ಮುರ್ವಿಧಾತಾರಂ ಬ್ರಹ್ಮಾಣಂ ಪ್ರಷ್ಟುಮವ್ಯಯಂ ॥ ೮ ॥

ವಾಗ್ಭಿರ್ವಿನಯಯುಗರ್ಭಾಭಿಃ ಸರ್ವೇ ಪ್ರಾಂಜಲಯೋಽಬ್ರುರ್ವ ।
ತ್ವಂ ಹಿ ಸರ್ವಜಗದ್ಧಾತಾ ಸರ್ವಕಾರಣಕಾರಣಂ ॥ ೯ ॥

ಕಃ ಪುಮಾರ್ನ್ ಸರ್ವತತ್ತ್ವೇಭ್ಯಃ ಪುರಾಣಃ ಪರತಃ ಪರಃ ।
॥ ಬ್ರಹ್ಮೋವಾಚ ॥
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥ ೧೦ ॥

ಯಸ್ಮಾತ್ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಪೂರ್ವಕಂ ।
ಸಹ ಭೂತೇಂದ್ರಿಯೈಃ ಸರ್ವೈಃ ಪ್ರಥಮಂ ಸಂಪ್ರಸೂಯತೇ ॥ ೧೧ ॥

---

೮. ಹೀಗೆ ವಿವಾದಂವುಟಾಗಲು ಆ ಮುನಿಗಳು ಸೃಷ್ಟಿಕರ್ತನಾದ ಬ್ರಹ್ಮನ ಬಳಿಗೆ ಹೋಗಿ ಕೈಮುಗಿದುಕೊಂಡು ವಿನಯಪೂರ್ವಕವಾಗಿ ಆ ಬ್ರಹ್ಮನನ್ನು ಕುರಿತು ಹೀಗೆ ಹೇಳಿದರು.

೯. ಎಲೈ ಬ್ರಹ್ಮನೇ ನೀನು ಜಗತ್ತಿಗೆಲ್ಲಾ ಒಡೆಯನು, ಸಮಸ್ತ ಪ್ರಪಂಚ ವನ್ನೂ ಸೃಷ್ಟಿಸತಕ್ಕವನು. ಆದುದರಿಂದ, ಸಮಸ್ತ ತತ್ತ್ವಗಳಿಗಿಂತಲೂ (ಎಂದರೆ ಪ್ರಕೃತಿಯಿಂದ ಉಂಟಾದ ಮಹದಾದಿತತ್ತ್ವಗಳು) ಪೂರ್ವದಲ್ಲಿದ್ದವನೂ, ಸಮಸ್ತ ವಸ್ತುಗಳಿಗೂ ಶ್ರೇಷ್ಠನಾದವನೂ ಆದ ಪುರುಷನು ಯಾರು? ಎಂದರೆ ಸೃಷ್ಟಿಗೂ ಪೂರ್ವದಲ್ಲಿ ಇದ್ದವನೂ, ದೃಶ್ಯಪ್ರಪಂಚಕ್ಕಿಂತಲೂ ಭಿನ್ನನಾದವನೂ ಯಾರು? ನೀನು ಇದನ್ನು ತಿಳಿದಿರುವುದರಿಂದ ನಮಗೆ ಹೇಳು ಎಂದರು..

೧೦-೧೧. ಬ್ರಹ್ಮನು ಹೀಗೆ ಹೇಳಿದನು:—ಯಾವ ಪರಬ್ರಹ್ಮವನ್ನು ಮಾತು ಗಳಿಂದ ವರ್ಣಿಸಲೂ ಮನಸ್ಸಿನಿಂದ ಧ್ಯಾನಿಸಲೂ ಸಹ ಅಸಾಧ್ಯವೋ ಮತ್ತು ಯಾವ ನಿತ್ಯವಸ್ತುವಾದ ಆ ಪರಬ್ರಹ್ಮದಿಂದ ಬ್ರಹ್ಮ, ವಿಷ್ಣು, ರುದ್ರ, ಇಂದ್ರನೇ ಮೊದಲಾದ ದೇವತೆಗಳೂ, ಪಂಚಮಹಾಭೂತಗಳೂ ಇಂದ್ರಿಯಗಳೂ ಇವೆಲ್ಲವೂ ಪ್ರಾರಂಭದೆಶೆ ಯಲ್ಲಿ (ಸೃಷ್ಟಿಕಾಲದಲ್ಲಿ) ಉತ್ಪನ್ನವಾದವೋ ಅಂತಹ ಜಗದೊಡೆಯನೂ, ಸರ್ವ ಜ್ಞನೂ, ಆದ, ದೇವದೇವನಾದ ಪರಮೇಶ್ವರನು ಒಬ್ಬನಿರುವನು.

ಇಲ್ಲಿ ನಿರ್ಗುಣಸ್ವರೂಪವಾದ ಪರಬ್ರಹ್ಮವು ನಿರ್ದೇಶಿಸಲ್ಪಟ್ಟಿರುವುದು. ಈ ನಿರ್ಗುಣಬ್ರಹ್ಮಸ್ವರೂಪವನ್ನು ಮಾತುಗಳಿಂದ ವರ್ಣಿಸುವುದಂತೂ ಇರಲಿ, ಮನಸ್ಸಿನಲ್ಲಿ ಸಹ ಹೀಗೆಯೇ ಇರುವುದೆಂದು ಧ್ಯಾನಮಾಡಲು ಸಹ ಸಾಧಾರಣ ಜನರಿಗೆ ಸಾಧ್ಯವಿಲ್ಲ. ತಪಸ್ವಿಗಳೂ ಸಹ ಪರಬ್ರಹ್ಮನನ್ನು ಸಾಕ್ಷಾತ್ಕರಿಸಲು ಬಹು ಶ್ರಮಪಡುವರು ಈಗ ನಮಗೆ ಕಾಣುತ್ತಿರುವ ಪ್ರಪಂಚವು ಸೃಷ್ಟಿಗೆ ಪೂರ್ವದಲ್ಲಿ ಈ ಸ್ಥಿತಿಯಲ್ಲಿ ಇರಲಿಲ್ಲ. "ನಾಸದಾಸೀನ್ನೋಸದಾಸೀತ್" "ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯ" ಮೊದಲಾದ ಶ್ರುತಿಗಳು ಸೃಷ್ಟಿಗೆ ಪೂರ್ವದಲ್ಲಿ ದೃಶ್ಯಪದಾರ್ಥಗಳು ಒಂದೂ ಇರಲಿಲ್ಲವೆಂದು ತಿಳಿಸುತ್ತವೆ. ಪರಬ್ರಹ್ಮವಸ್ತು ಒಂದೇ ತಾನೇ ತಾನಾಗಿ ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ನಿರ್ಗುಣಾತ್ಮಕನಾದ ಪರಬ್ರಹ್ಮನಲ್ಲಿ ಸೃಷ್ಟಿಮಾಡಬೇಕೆಂಬ ಇಚ್ಛೆಯು ತಲೆದೋರಿದೊಡನೆಯೇ ತನ್ನಲ್ಲಿಯೇ ಪ್ರಧಾನಪ್ರಕೃತಿಗಳೆಂಬ ರೂಪಾಂತರಗಳುಂಟಾಯಿತು. ಬಳಿಕ ಪ್ರಕೃತಿಯಿಂದ ಮಹದಾದಿ ತತ್ತ್ವಗಳೂ ಅವುಗಳಿಂದ ಪಂಚಭೂತಾದಿಗಳೂ ಉದ್ಭವಿಸಿ ಆ ಪಂಚಭೂತಗಳ ಪಂಚೀಕರಣಕ್ರಮದಿಂದ ಈ ದೃಶ್ಯಪ್ರಪಂಚವೇರ್ಪಟ್ಟಿತು. ಈ ವಿಚಾರವು ಮುಂದೆ ಸೃಷ್ಟಿಪ್ರಕರಣದಲ್ಲಿ ವಿಶದವಾಗಿ ವಿವರಿಸಲ್ಪಡುವುದು. ಮತ್ತು ಈ ವಿಚಾರದಲ್ಲಿ ಸಾಂಖ್ಯದರ್ಶನವು ಹೀಗೆ ಹೇಳುವುದು. ಸತ್ತ್ವರಜಸ್ತಮೋಗುಣಗಳ ಸಮಾವಸ್ಥೆಯಲ್ಲಿ ಇರುವ ವಸ್ತುವೇ ನಿರ್ಗುಣಾತ್ಮಕವಾದುದು ಎಂದರೆ ಈ ಮೂರುಗುಣಗಳಲ್ಲಿ ಯಾವುದೊಂದು ಗುಣವೂ ಹೆಚ್ಚುಕಡಿಮೆಯಿಲ್ಲದ ಸಮಾವಸ್ಥೆಯಲ್ಲಿ ಇರುವುದು. ಸೃಷ್ಟಿಕಾಲದಲ್ಲಿ ಈ ಗುಣಗಳು ವ್ಯತ್ಯಸ್ತವಾಗಿ ವಿಷಮಾವಸ್ಥೆಗೆ ಬರುವುದು ಎಂದರೆ ಯಾವುದಾದರೂ ಒಂದು ಗುಣವು ಹೆಚ್ಚಾಗಿಯೂ ಮತ್ತೊಂದು ಕಡಿಮೆಯಾಗಿಯೂ ಮಾರ್ಪಡುವುದು. ಅದೇ ಸೃಷ್ಟಿಯು. ಇಲ್ಲಿ ಜ್ಞಾಪಕಲ್ಲಿಡಬೇಕಾದ ವಿಷಯವೇನೆಂದರೆ, ಪ್ರತಿಯೊಂದು ವಸ್ತುವಿನಲ್ಲಿಯೂ ಸತ್ತ್ವರಜೋಸ್ತಮೋಗುಣಗಳು ಇದ್ದೇ ಇರುವುವು. ಕೆಲವು ವಸ್ತುವಿನಲ್ಲಿ ಸತ್ತ್ವಗುಣವು ಹೆಚ್ಚಾಗಿಯೂ, ಕೆಲವು ವಸ್ತುವಿನಲ್ಲಿ ರಜೋಗುಣವೂ ಮತ್ತೆ ಕೆಲವು ವಸ್ತುವಿನಲ್ಲಿ ತಮೋಗುಣವೂ ಹೆಚ್ಚಾಗಿರುವುವು. ಒಂದು ಗುಣವು ಹೆಚ್ಚಾಗಿದ್ದರೆ ಅದಕ್ಕನುಸಾರವಾಗಿ ಮತ್ತೊಂದು ಗುಣವು ಕಡಿಮೆಯಾಗಿರುವುದು. ಆದುದರಿಂದ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳು ಮತ್ತು ವಸ್ತುಗಳು ಈ ಮೂರು ಗುಣಗಳಲ್ಲಿ ಒಂದನ್ನು ಅಥವಾ ಎರಡನ್ನು ಹೆಚ್ಚಾಗಿಯೂ ಉಳಿದದ್ದನ್ನು ಕಡಿಮೆಯಾಗಿಯೂ ಹೊಂದಿರುವುವು. ಮತ್ತು ಪೂರ್ತಾ ಒಂದೇ ಗುಣವುಳ್ಳ ಎಂದರೆ ಬರೀ ಸತ್ತ್ವಗುಣವನ್ನಾಗಲಿ, ಅಥವಾ ರಜೋಗುಣವನ್ನಾಗಲಿ, ಅಥವಾ ತಮೋಗುಣವನ್ನಾಗಲಿ ಹೊಂದಿರುವ ವಸ್ತುವು ಇರುವುದೇ ಇಲ್ಲ. ಇರಲು ಸಾಧ್ಯವೂ ಇಲ್ಲ. ಪ್ರತಿಯೊಂದು ವಸ್ತುವಿನಲ್ಲಿಯೂ ಮೂರು ಗುಣಗಳೂ ಹೆಚ್ಚು ಕಡಿಮೆಯಾಗಿ ಇರಲೇ ಬೇಕೆಂದಾ

ಯಿತು. ಈ ರೀತಿ ಮೂರು ಗುಣಗಳೂ ಹೆಚ್ಚು ಕಡಿಮೆಯಾಗಿ ಇರುವ ವಸ್ತುಗಳೆಲ್ಲವೂ ಚರಾಚರಾತ್ಮಕವಾದ ದೃಶ್ಯಪ್ರಪಂಚವು. ಈ ಮೂರು ಗುಣಗಳಿಂದ ಕೂಡಿರುವ ವಸ್ತುಗಳಲ್ಲಿ ಬದಲಾವಣೆಯಾಗುತ್ತಲೇ ಇರುವುದು. ಎಂದರೆ ಒಂದು ವಸ್ತುವಿನಲ್ಲಿ ಈ ನಿಮಿಷದಲ್ಲಿ ಇರುವ ಆಕಾರಾದಿಗಳು ಮತ್ತೊಂದು ನಿಮಿಷದಲ್ಲಿ ಸ್ವಲ್ಪವುಟ್ಟಿಗಾದರೂ ಬದಲಾವಣೆಯನ್ನು ಹೊಂದುವುದು. ಈ ರೀತಿ ಪ್ರಪಂಚವು ಪ್ರತಿ ನಿಮಿಷದಲ್ಲಿಯೂ ಸತ್ತ್ವರಜಸ್ತಮೋಗುಣಗಳ ಹೆಚ್ಚು ಕಡಿಮೆಯಿಂದ ಬದಲಾವಣೆಯನ್ನು ಹೊಂದುತ್ತಲೇ ಇರುವುದು. ಈ ಬದಲಾವಣೆಯು ನಿಲ್ಲಬೇಕಾದರೆ ಸತ್ತ್ವರಜಸ್ತಮೋಗುಣಗಳು ಹೆಚ್ಚು ಕಡಿಮೆಯಿಲ್ಲದೆ ಸಾಮ್ಯಾವಸ್ಥೆಗೆ ಬಂದರೆ ಆಗ ಯಾವ ಬದಲಾವಣೆಯೂ ನಡೆಯದೆ ಒಂದೇ ಸಮನಾದ ಸ್ಥಿತಿಯಲ್ಲಿರುವುದು. ಅದೇ ಪ್ರಳಯವೆನಿಸುವುದು. ಆಗ ಆ ಸ್ಥಿತಿಯಲ್ಲಿರುವ ವಸ್ತುವಿಗೆ ನಾಮರೂಪಾದಿಭೇದಗಳೂ, ದೇಶಕಾಲಾದಿಪರಿಮಿತಿಯೂ ಇರುವುದಿಲ್ಲ. ಅಂತಹ ಸ್ಥಿತಿಯಲ್ಲಿರುವ ವಸ್ತುವೇ ನಿತ್ಯವಾದ ನಿರ್ಗುಣಬ್ರಹ್ಮವೆಂದು ಹೇಳಲ್ಪಡುವುದು. ಇದು ಕೇವಲ ಸಚ್ಚಿದಾನಂದರೂಪಾತ್ಮಕವಾಗಿರುವುದು. ಇದಕ್ಕೆ ಸದೃಶವಾದ ವಸ್ತುವು ಮತ್ತೊಂದಿರುವುದಿಲ್ಲ.

ಇನ್ನು ಸೃಷ್ಟಿಕಾಲದಲ್ಲಿ ಈ ಸಾಮ್ಯಾವಸ್ಥೆಯಲ್ಲಿರುವ ಪರಬ್ರಹ್ಮದಲ್ಲಿ ಸತ್ತ್ವರಜಸ್ತಮೋಗುಣಗಳು ಹೆಚ್ಚು ಕಡಿಮೆಯಾಗಿ ಬದಲಾವಣೆಯನ್ನು ಹೊಂದುವುದರಿಂದ ಪ್ರಪಂಚಸೃಷ್ಟಿಯು ಉಂಟಾಗುವುದು. ಈ ರೀತಿ ಪ್ರಪಂಚಸೃಷ್ಟಿಗೆ ಕಾರಣಭೂತವಾದ ಪರಬ್ರಹ್ಮವಸ್ತುವೇ ಪರಮೇಶ್ವರನೆಂದೂ ಎಲ್ಲರಿಗಿಂತಲೂ ಶ್ರೇಷ್ಠವೆಂತಲೂ ಜಗತ್ತಿಗೆಲ್ಲ ಒಡೆಯನೆಂತಲೂ ಶ್ರುತಿಯಲ್ಲಿಯೂ, ಉಪನಿಷತ್ತುಗಳಲ್ಲಿಯೂ, ವೇದಾಂತಗಳಲ್ಲಿಯೂ ಹೇಳಲ್ಪಟ್ಟಿರುವುದು.

ಈ ಶ್ಲೋಕದಲ್ಲಿ ಹೇಳಿರುವಂತೆ " ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ " ಎಂದಿರುವ ವೇದವಾಕ್ಯವು. ಪರಬ್ರಹ್ಮವನ್ನು ಕೇವಲ ಮಾತುಗಳಿಂದ ವಿಶದವಾಗಿ ತಿಳಿಸಲು ಅಸಾಧ್ಯವೆಂದು ಹೇಳಿರುವುದು ಯುಕ್ತವಾಗಿಯೇ ಇದೆ. ಕಣ್ಣಿನಿಂದ ನೋಡುವುದಕ್ಕಾಗದ ಮತ್ತು ಮನಸ್ಸಿನಿಂದ ಯೋಚಿಸುವುದಕ್ಕೂ ಆಗದ ವಸ್ತುವನ್ನು ಶಬ್ದಗಳಿಂದ ವರ್ಣಿಸುವುದೆಂತು ? ಆದುದರಿಂದ ಶ್ರುತಿಸ್ಮೃತಿ ವೇದಾಂತಗಳೇ ಇದನ್ನು ಸಂಪೂರ್ಣವಾಗಿ ವರ್ಣಿಸಲು ಆಗದೆಂದು ಹೇಳಿರುವಾಗ ಇಲ್ಲಿ ಇದನ್ನು ವಿವರಿಸುತ್ತೇನೆಂದು ಹೇಳುವುದು ಅಸಂಗತವು.

ಏಷ ದೇವೋ ಮಹಾದೇವಃ ಸರ್ವಜ್ಞೋ ಜಗದೀಶ್ವರಃ ।
ಅಯಂ ತು ಪರಯಾ ಭಕ್ತ್ಯಾ ದೃಶ್ಯತೇ ನಾನ್ಯಥಾ ಕ್ವಚಿತ್ ॥ ೧೨ ॥

ರುದ್ರೋ ಹರಿರ್ಹರಶ್ಚೈವ ತಥಾನ್ಯೇ ಚ ಸುರೇಶ್ವರಾಃ ।
ಭಕ್ತ್ಯಾ ಪರಮಯಾ ನಿತ್ಯಂ ತಸ್ಯ ದರ್ಶನಕಾಂಕ್ಷಿಣಃ ॥ ೧೩ ॥

ಬಹುನಾತ್ರ ಕಿಮುಕ್ತೇನ ಶಿವೇ ಭಕ್ತ್ಯಾ ವಿಮುಚ್ಯತೆ ।
ಪ್ರಸಾದಾದ್ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೇಹಾಂಕುರುತೋ ಬೀಜಂ ಬೀಜತೋ ವಾ ಯಥಾಂಕುರಃ ॥ ೧೪ ॥

ತಸ್ಮಾದೀಶಪ್ರಸಾದಾರ್ಥಂ ಯೂಯಂ ಗತ್ವಾ ಭುವಂ ದ್ವಿಜಾಃ ।
ದೀರ್ಘಸತ್ರಂ ಸಮಾಕೃಧ್ವಂ ಯೂಯಂ ವರ್ಷಸಹಸ್ರಕಂ ॥ ೧೫ ॥

---

೧೨. ಇಂತಹ ಈ ಪರಮೇಶ್ವರನನ್ನು ಅಸಾಧಾರಣವಾದ ಭಕ್ತಿಯಿಂದ ಮಾತ್ರ ನೋಡಬಹುದು. ಇನ್ನಾವ ರೀತಿಯಿಂದಲೂ ನೋಡಲು ಸಾಧ್ಯವಿಲ್ಲ.

೧೩. ರುದ್ರ, ವಿಷ್ಣು, ಹರ ಮತ್ತು ಮಿಕ್ಕ ದೇವತೆಗಳೂ ಸಹ ಅಸಾಧಾರಣ ವಾದ ಭಕ್ತಿಯಿಂದ ನಿತ್ಯವೂ ಸೇವಿಸುತ್ತಲಿದ್ದು ಆ ಪರಮೇಶ್ವರನ ದರ್ಶನವನ್ನೇ ನಿರೀಕ್ಷಿಸುತ್ತಲಿರುವರು. ಹೆಚ್ಚು ಹೇಳಿ ಪ್ರಯೋಜನವೇನು? ಈಶ್ವರನಲ್ಲಿ ಭಕ್ತಿ ಯುಳ್ಳವನೇ ಮುಕ್ತಿಯನ್ನು ಹೊಂದುವನು. ಈಶ್ವರನಲ್ಲಿ ಇಡುವ ಭಕ್ತಿಯಿಂದಲೇ ಮುಕ್ತಿಯು.

೧೪. ಬೀಜದಿಂದ ಮೊಳಕೆ, ಮುಂದೆ ಆ ಮೊಳಕೆಯಿಂದಲೇ ಬೀಜವು ಹೇಗೆ ಜನಿಸುವುದೋ ಅದರಂತೆ ದೇವತೆಗಳ ಅನುಗ್ರಹದಿಂದ ಭಕ್ತಿಯುಂಟಾಗುವುದು.

೧೫. ಆದ ಕಾರಣ ಎಲೈ ಬ್ರಾಹ್ಮಣೋತ್ತಮರೇ! ನೀವು ಭೂಲೋಕಕ್ಕೆ ಹೋಗಿ ಅಲ್ಲಿ ಈಶ್ವರನ ಅನುಗ್ರಹಪ್ರಾಪ್ತಿಗಾಗಿ ಸಾವಿರಾರು ವರ್ಷಗಳು ನಡೆಯು ವಂತಹ ಒಂದು ದೊಡ್ಡ ಯಜ್ಞವನ್ನು ನಡೆಯಿಸಿ.

೧೬. ಆಗ ಯಜ್ಞಗಳಿಗೆ ಫಲವನ್ನು ಕೊಡುವ ಶಂಕರನ ಅನುಗ್ರಹವುಂಟಾಗಿ ಮುಂದೆ ವೇದದಲ್ಲಿ ಪ್ರಧಾನತೆಯಿಂದ ನಿರೂಪಿಸಿರುವ ಸಾಧ್ಯ ಮತ್ತು ಸಾಧನಗಳು ಲಭಿಸುವುವು ಎನ್ನಲು,

ಅಮುಷ್ಯೈವಾಧ್ವರೇಶಸ್ಯ ಶಿವಸ್ಯೈವ ಪ್ರಸಾದತಃ ।
ವೇದೋಕ್ತವಿದ್ಯಾಸಾರಂ ತು ಜಾಯತೇ ಸಾಧ್ಯಸಾಧನಂ ॥ ೧೬ ॥

॥ ಮುನಯ ಊಚುಃ ॥

ಅಥ ಕಿಂ ಪರಮಂ ಸಾಧ್ಯಂ ಕಿಂ ವಾ ತತ್ಸಾಧನಂ ಪರಂ ।
ಸಾಧಕಃ ಕೀದೃಶಸ್ತತ್ರ ತದಿದಂ ಬ್ರೂಹಿ ತತ್ತ್ವತಃ ॥ ೧೭ ॥

॥ ಬ್ರಹ್ಮೋವಾಚ ॥

ಸಾಧ್ಯಂ ಶಿವಪದಪ್ರಾಪ್ತಿಃ ಸಾಧನಂ ತಸ್ಯ ಸೇವನಂ ।
ಸಾಧಕಸ್ತತ್ಪ್ರಸಾದಾದ್ಯೋಽನಿತ್ಯಾದಿಫಲನಿಸ್ಪೃಹಃ ॥ ೧೮ ॥

ಕರ್ಮ ಕೃತ್ವಾ ತು ವೇದೋಕ್ತಂ ತದರ್ಪಿತಮಹಾಫಲಂ ।
ಪರಮೇಶಪದಪ್ರಾಪ್ತಿಃ ಸಾಲೋಕ್ಯಾದಿಕ್ರಮಾತ್ತತಃ ॥ ೧೯ ॥

ತತ್ತದ್ಭಕ್ತ್ಯನುಸಾರೇಣ ಸರ್ವೇಷಾಂ ಪರಮಂ ಪದಂ ।
ತತ್ಸಾಧನಂ ಬಹುವಿಧಂ ಸಾಕ್ಷಾದೀಶೇನ ಬೋಧಿತಂ ॥ ೨೦ ॥

---

೧೭. ಮುನಿಗಳು ಹೀಗೆ ಪ್ರಶ್ನಿಸಿದರು :—ಓ ಪೂಜ್ಯನೇ, ವೇದದಲ್ಲಿ ಹೇಳಿರುವ ಶ್ರೇಷ್ಠವಾದ ಸಾಧ್ಯ ಎಂದರೆ ಸಾಧಿಸಬೇಕಾದುದು ಯಾವುದು? ಅದಕ್ಕೆ ಉತ್ಕೃಷ್ಟ ಸಾಧನವು ಯಾವುದು? ಅದನ್ನು ಸಾಧಿಸುವವನು ಎಂತಹವನು? ಎಂಬುದನ್ನು ನಮಗೆ ವಿಶದವಾಗಿ ತಿಳಿಯ ಹೇಳು ಎಂದರು.

೧೮. ಬ್ರಹ್ಮನು ಹೇಳಿದನು :—ಶಿವಲೋಕವನ್ನು ಪಡೆಯುವುದೇ ಸಾಧ್ಯವು. ಸಾಧಿಸಬೇಕಾದ ಫಲವು, ಶಿವನ ಸೇವೆಯೇ ಅದಕ್ಕೇ ಸಾಧನವು, ಆ ಈಶ್ವರನ ಅನುಗ್ರಹದಿಂದ ಅನಿತ್ಯ ವಸ್ತುಗಳಲ್ಲಿ ವೈರಾಗ್ಯವುಳ್ಳವನೇ ಸಾಧಕನು.

೧೯. ವೇದದಲ್ಲಿ ಹೇಳಿರುವ ಕರ್ಮವನ್ನು ಮಾಡಬೇಕು, ಅದರ ಫಲಗಳನ್ನು ಈಶ್ವರನಿಗೆ ಅರ್ಪಿಸಬೇಕು. ಹಾಗೆ ಮಾಡಿದರೆ ಮುಂದೆ ಸಾಲೋಕ್ಯ (ಶಿವಲೋಕ ವಾಸ) ಮೊದಲಾದ ಕ್ರಮದಿಂದ ಈಶ್ವರ ಪದವು ಲಭಿಸುವುದು.

೨೦. ಅವರವರ ಭಕ್ತಿಗೆ ಅನುಗುಣವಾಗಿ ಎಲ್ಲರಿಗೂ ಪರಮಪದ (ಶಿವಲೋಕ) ವು ಲಭಿಸುವುದು. ಅದಕ್ಕೆ ಅನೇಕ ಸಾಧನಗಳುಂಟು. ಅವುಗಳನ್ನು ಸಾಕ್ಷಾತ್ತಾಗಿ ಈಶ್ವರನೇ ಹೇಳಿರುವನು.

ಸಂಕ್ಷಿಪ್ಯ ತತ್ರ ವಃ ಸಾರಂ ಸಾಧನಂ ಪ್ರಬ್ರವೀಮ್ಯಹಂ ।
ಶ್ರೋತ್ರೇಣ ಶ್ರವಣಂ ತಸ್ಯ ವಚಸಾ ಕೀರ್ತನಂ ತಥಾ ॥ ೨೧ ॥

ಮನಸಾ ಮನನಂ ತಸ್ಯ ಮಹಾಸಾಧನಮುಚ್ಯತೇ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಮಂತವ್ಯಶ್ಚ ಮಹೇಶ್ವರಃ ॥ ೨೨ ॥

ಇತಿ ಶ್ರುತಿಃ ಪ್ರಮಾಣಂ ನ ಸಾಧನೇನಾಽಮುನಾ ಪರಂ ।
ಸಾಧ್ಯಂ ವ್ರಜತ ಸರ್ವಾರ್ಥಸಾಧನೈಕಪರಾಯಣಾಃ ॥ ೨೩ ॥

ಪ್ರತ್ಯಕ್ಷಂ ಚಕ್ಷುಷಾ ದೃಷ್ಟ್ವಾ ತತ್ರ ಲೋಕಃ ಪ್ರವರ್ತತೇ ।
ಅಪ್ರತ್ಯಕ್ಷಂ ಹಿ ಸರ್ವತ್ರ ಜ್ಞಾತ್ವಾ ಶ್ರೋತ್ರೇಣ ಚೇಷ್ಟತೇ ॥ ೨೪ ॥

---

೨೧. ಈಶ್ವರನು ಹೇಳಿರುವುದರ ಸಾರವನ್ನು ಸಂಗ್ರಹಿಸಿ ಸಾಧನವನ್ನು ನಿಮಗೆ ಈಗ ಹೇಳುವೆನು.

೨೨. ಕಿವಿಯಿಂದ ಆ ಶಿವನ ನಾಮವನ್ನು ಕೇಳುವುದು, ವಾಕ್ಕಿನಿಂದ ಶಿವನನ್ನೇ ಸ್ತುತಿಸುವುದು, ಮನಸ್ಸಿನಿಂದ ಆ ಪರಮೇಶ್ವರನನ್ನೇ ಧ್ಯಾನಿಸುವುದು, ಇವುಗಳು ಶ್ರೇಷ್ಠವಾದ ಸಾಧನಗಳು.

೨೩. ಈಶ್ವರನನ್ನೇ ವೇದಾಂತವಾಕ್ಯಗಳಿಂದ ವಿಮರ್ಶಿಸಿ ತಿಳಿಯಬೇಕು ಮತ್ತು ಕೇಳಬೇಕು, ಅವನನ್ನೇ ಸ್ತುತಿಸಬೇಕು, ಅವನನ್ನೇ ಧ್ಯಾನಿಸಬೇಕು, ಎಂದು ಹೇಳುವ ಶ್ರುತಿಯೇ ಈ ವಿಷಯದಲ್ಲಿ ನಮಗೆ ಪ್ರಮಾಣವು. ಆದಕಾರಣ ಸಕಲ ಇಷ್ಟಾರ್ಥಗಳನ್ನೂ ಸಾಧಿಸಲು ಹೊರಟಿರುವ ಎಲೈ ಬ್ರಾಹ್ಮಣೋತ್ತಮರೇ ? ನಾನು ಹೇಳಿದ ಆ ಸಾಧನಗಳಿಂದ ಸಾಧ್ಯವಾದ ಶಿವಪದವನ್ನು ಪಡೆಯಿರಿ.

೨೪. ಲೋಕದಲ್ಲಿ ಜನಗಳು ಪ್ರತ್ಯಕ್ಷವಾದ ಎಂದರೆ ಕಣ್ಣಿಗೆ ಕಾಣುವ ವಸ್ತುವನ್ನು ಕಣ್ಣಿನಿಂದ ನೋಡಿ ಪ್ರವರ್ತಿಸುವರು. ಆದರೆ ಪ್ರತ್ಯಕ್ಷವಲ್ಲದ ವಸ್ತುವನ್ನು ಕಿವಿಯಿಂದ ಕೇಳಿ ಪ್ರವರ್ತಿಸುವರು, , ಎಲ್ಲೆಲ್ಲಿಯೂ ಹೀಗೆಯೇ ಇರುವುದು.

ತಸ್ಮಾಚ್ಛ್ರವಣಮೇವಾದೌ ಶ್ರುತ್ವಾ ಗುರುಮುಖಾದ್ಬುಧಃ ।
ತತಃ ಸಂಸಾಧಯೇದನ್ಯತ್ಕೀರ್ತನಂ ಮನನಂ ಸುಧೀಃ ॥ ೨೫ ॥

ಕ್ರಮಾನ್ಮನನಪರ್ಯಂತೇ ಸಾಧನೇಽಸ್ಮಿನ್ ಸುಸಾಧಿತೇ ।
ಶಿವಯೋಗೋ ಭವೇತ್ತೇನ ಸಾಲೋಕ್ಯಾದಿಕ್ರಮಾಚ್ಛನೈಃ ॥ ೨೬ ॥

ಸರ್ವಾಂಗವ್ಯಾಧಯಃ ಪಶ್ಚಾತ್ಸರ್ವಾನಂದಶ್ಚ ಲೀಯತೇ ।
ಅಭ್ಯಾಸಾತ್ಕ್ಲೇಶಮೇತದ್ವೈ ಪಶ್ಚಾದಾದ್ಯಂತಮಂಗಲಂ ॥ ೨೭ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ
ಸಂಹಿತಾಯಾಂ ಸಾಧ್ಯಸಾಧನಖಂಡೇ
ತೃತೀಯೋಽಧ್ಯಾಯಃ.

---

೨೫. ಆದಕಾರಣ ವಿವೇಕಿಯು ಮೊದಲು ಗುರುಮುಖದಿಂದ ಈಶ್ವರನ ಸ್ವರೂಪವನ್ನು ಕೇಳಿ ಬಳಿಕ, ಮಿಕ್ಕ ಕೀರ್ತನ ಮನನ ಮುಂತಾದುವುಗಳನ್ನು ಮಾಡಬೇಕು.

೨೬. ಹೀಗೆ ಕ್ರಮವಾಗಿ ಮನನಪರ್ಯಂತವಾದ ಸಾಧನಗಳನ್ನು ಸಾಧಿಸಿದರೆ ಮುಂದೆ ಅದರಿಂದ ಸಾಲೋಕ್ಯ (ಶಿವಲೋಕ) ಮೊದಲಾದ ಕ್ರಮದಿಂದ ಕ್ರಮವಾಗಿ ಶಿವನೊಡನೆ ಐಕ್ಯವನ್ನು ಹೊಂದುವನು.

೨೭. ಈ ರೀತಿ ಶ್ರವಣಮನನಾದಿ ಸಾಧನಗಳಿಂದ ಈಶ್ವರೋಪಾಸನೆಯನ್ನು ಮಾಡಿದರೆ ಸಕಲ ರೋಗಗಳೂ, ಸಂಸಾರಕ್ಲೇಶಗಳೂ ಪರಿಹಾರವಾಗಿ ಸಕಲ ಸನ್ಮಂಗಲವೂ ಉಂಟಾಗಿ, ಕೊನೆಗೆ ಶಾಶ್ವತವೂ, ಆನಂದಮಯವೂ, ಆದ ಶಿವಸಾಯುಜ್ಯವೂ ಲಭಿಸುವುದು.

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ವೇಶ್ವರ ಸಂಹಿತೆಯಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಚತುರ್ಥೋಽಧ್ಯಾಯಃ

---

॥ ಮುನಯ ಊಚುಃ ॥

ಮನನಂ ಕೀದೃಶಂ ಬ್ರಹ್ಮನ್ ಶ್ರವಣಂ ಚಾಪಿ ಕೀದೃಶಂ ।
ಕೀರ್ತನಂ ವಾ ಕಥಂ ತಸ್ಯ ಕೀರ್ತಯೈತದ್ಯಥಾಯಥಂ ॥ ೧ ॥

॥ ಬ್ರಹ್ಮೋವಾಚ ॥

ಪೂಜಾಜಪೇಶಗುಣರೂಪವಿಲಾಸನಾಮ್ನಾಂ
ಯುಕ್ತಿಪ್ರಿಯೇಣ ಮನಸಾ ಪರಿಶೋಧನಂ ಯತ್ ।
ತತ್ಸಂತತಂ ಮನನಮೀಶ್ವರದೃಷ್ಟಿಲಭ್ಯಂ
ಸರ್ವೇಷು ಸಾಧನವರೇಷ್ವಪಿ ಮುಖ್ಯಮುಖ್ಯಂ ॥ ೨ ॥

---

### ನಾಲ್ಕನೆಯ ಅಧ್ಯಾಯವು.

೧. ಮುನಿಗಳು ಪ್ರಶ್ನಿಸಿದರು:—ಓ ಬ್ರಹ್ಮನೆ! ಆ ಈಶ್ವರನ ಮನನದ ಸ್ವರೂಪವೆಂತಹುದು ? ಶ್ರವಣದ ಸ್ವರೂಪವೇನು ? ಅವನನ್ನು ಹೇಗೆ ಕೀರ್ತಿಸಬೇಕು ? ಎಂಬುದನ್ನು ವಿಧಿವತ್ತಾಗಿ ನಮಗೆ ಹೇಳು ಎನ್ನಲು,

೨. ಬ್ರಹ್ಮನು ಹೇಳಿದನು:—ಈಶ್ವರನ ಪೂಜೆ, ಮಂತ್ರಜಪ, ಗುಣಗಳು, ಸ್ವರೂಪ, ಈಶ್ವರಲೀಲೆ, ಅವನ ಪವಿತ್ರ ನಾಮಗಳು ಇವುಗಳನ್ನು ಯುಕ್ತಿಪೂರ್ವಕವಾಗಿ ಮನಸ್ಸಿನಿಂದ ಪರಿಶೋಧಿಸಿ ನಿಶ್ಚಯಿಸುವುದೇ ಮನನವು, ಆ ಮನನವು ಈಶ್ವರ ಸಾಕ್ಷಾತ್ಕಾರದಲ್ಲಿ ಎಲ್ಲ ಸಾಧನಗಳಿಂತಲೂ ಬಹು ಮುಖ್ಯವಾದ ಸಾಧನವು.

ಗೀತಾತ್ಮನಾ ಶ್ರುತಿಪದೇನ ಚ ಭಾಷಯಾ ವಾ
ಶಂಭುಪ್ರತಾಪಗುಣರೂಪವಿಲಾಸನಾಮ್ನಾಂ ।
ವಾಚಾ ಸ್ಫುಟಂ ತು ರಸವತ್ ಸ್ತವನಂ ಯದಸ್ಯ
ತತ್ಕೀರ್ತನಂ ಭವತಿ ಸಾಧನಮತ್ರ ಮಧ್ಯಂ ॥ ೩ ॥

ಯೇನಾऽಪಿ ಕೇನ ಕರಣೇನ ಚ ಶಬ್ದಪುಂಜಂ
ಯತ್ರ ಕ್ವಚಿಚ್ಛಿವಪರಂ ಶ್ರವಣೇಂದ್ರಿಯೇಣ ।
ಸ್ತ್ರೀಕೇಲಿವದ್ದೃಢತರಂ ಪ್ರಣಿಧೀಯತೇ ಯತ್
ತದ್ವೈ ಬುಧಾಃ ಶ್ರವಣಮತ್ರ ಜಗತ್ಪ್ರಸಿದ್ಧಂ ॥ ೪ ॥

---

೩. ಶ್ರುತಿಯಲ್ಲಿ ಅಥವಾ ಬೇರೆ ಭಾಷೆಯಲ್ಲಿ ಹೇಳಿರುವ ಪರಮೇಶ್ವರನ ಪ್ರತಾಪ, ಗುಣ, ರೂಪ, ಲೀಲೆ, ನಾಮಗಳು ಇವುಗಳನ್ನು ಸ್ಫುಟವಾದ ವಾಕ್ಕಿನಿಂದ ಮಧುರವಾಗಿ ಗಾನಮಾಡಿ ಸ್ತುತಿಸುವುದೇ ಕೀರ್ತನವು, ಇದು ಮಧ್ಯಮವಾದ ಸಾಧನವು.

೪. ಕಾಮುಕನು ಸದಾ ಸ್ತ್ರೀವಿಲಾಸವನ್ನೇ ಭಾವಿಸುವಂತೆ ಕಿವಿಯಿಂದ ಯಾವ ಶಬ್ದವನ್ನು ಕೇಳಿದರೂ ಅದೆಲ್ಲವೂ ಶಿವಪರವೆಂದೇ ದೃಢವಾಗಿ ಭಾವಿಸಬೇಕು. ಈ ಭಾವನೆಯೇ ಶ್ರವಣವೆಂದು ಪಂಡಿತರು ಹೇಳಿರುವರು. ಎಂದರೆ ಕಾಮುಕನು ಯಾವ ಶಬ್ದವನ್ನು ಕೇಳಿದರೂ ಅದನ್ನು ಸ್ತ್ರೀ ವಿಷಯವಾಗಿಯೇ ಆಭಾಸವಾಗಿ ಮನನಮಾಡುವನು, ಭಾವಿಸುವನು, ಅದರಂತೆ ಶಿವಭಕ್ತನೂ ಸಹ ಯಾವ ಶಬ್ದವನ್ನು ಕೇಳಿದರೂ ಸಹ ಅದನ್ನು ಶಿವಪದವಾಗಿಯೇ ಭಾವಿಸಬೇಕು, ಸಕಲ ಶಬ್ದಗಳಿಗೂ ಈಶ್ವರನೇ ಅರ್ಥವೆಂದು ಶ್ರುತಿಗಳು ಸಾರಿರುವುವು, ಇದೇ ಶ್ರವಣವು, ಆದರೆ ಕಾಮುಕನ ಭಾವನೆಯು ಆಭಾಸವಾದುದು, ಅಸತ್ಯವಾದುದು. ಆದರೆ(ಶಬ್ದಗಳಲ್ಲಿನ) ಈಶ್ವರ ಭಾವನೆಯು ಸತ್ಯವಾದುದು. ಇದು ಕಾಮುಕ ಭಾವನೆಗೂ ಈಶ್ವರಭಾವನೆಗೂ ಇರುವ ವಿಶೇಷವು. ಕಾಮುಕನು ಶಬ್ದಗಳನ್ನು ಸ್ತ್ರೀಪರವಾಗಿ ಭಾವಿಸುವಂತೆ ಶಿವಭಕ್ತನು ಶಿವಪರವಾಗಿ ಭಾವಿಸಬೇಕು.

ಸತ್ಸಂಗಮೇನ ಭವತಿ ಶ್ರವಣಂ ಪುರಸ್ತಾತ್
ಸಂಕೀರ್ತನಂ ಪಶುಪತೇರಥ ತದ್ದೃಢಂ ಸ್ಯಾತ್ ।
ಸರ್ವೋತ್ತಮಂ ಭವತಿ ತನ್ಮನನಂ ತದಂತೇ
ಸರ್ವಂ ಹಿ ಸಂಭವತಿ ಶಂಕರದೃಷ್ಟಿಪಾತೇ ॥ ೫ ॥

॥ ಸೂತ ಉವಾಚ ॥

ಅಸ್ಮಿನ್ ಸಾಧನಮಾಹಾತ್ಮ್ಯೇ ಪುರಾವೃತ್ತಂ ಮುನೀಶ್ವರಾಃ ।
ಯುಷ್ಮದರ್ಥಂ ಪ್ರವಕ್ಷ್ಯಾಮಿ ಶೃಣುಧ್ವಮವಧಾನತಃ ॥ ೬ ॥

ಪುರಾ ಮಮ ಗುರುರ್ವ್ಯಾಸಃ ಪರಾಶರಮುನೇಃ ಸುತಃ ।
ತಪಶ್ಚಚಾರ ಸಂಭ್ರಾಂತಃ ಸರಸ್ವತ್ಯಾಃ ಶುಭೇ ತಟೇ ॥ ೭ ॥

ಗಚ್ಛನ್ ಯದೃಚ್ಛಯಾ ತತ್ರ ವಿಮಾನೇನಾರ್ಕರೋಚಿಷಾ ।
ಸನತ್ಕುಮಾರೋ ಭಗವಾನ್ ದದರ್ಶ ಮಮ ದೇಶಿಕಂ ॥ ೮ ॥

---

೫. ಆ ಶ್ರವಣವು ಮೊದಲು ಸತ್ಪುರುಷರ ಸಹವಾಸ (ಉಪದೇಶ) ದಿಂದ ಆಗುವುದು, ಬಳಿಕ ಆ ಪರಮೇಶ್ವರನ ಕೀರ್ತನೆಯಲ್ಲಿ ಮನಸ್ಸು ಆಸಕ್ತವಾಗುವುದು. ಮುಂದೆ ಕೊನೆಯಲ್ಲಿ ಮುಖ್ಯ ಸಾಧನವಾದ ಮನನವು ಸಿದ್ಧಿಸುವುದು. ಬಳಿಕ ಶಂಕರನ ಅನುಗ್ರಹದಿಂದ ಸಕಲವೂ ಸಿದ್ಧಿಸುವುದು.

೬. ಸೂತಮುನಿಯು ಹೇಳಿದನು:—ಎಲೈ ಮುನಿಶ್ರೇಷ್ಠರೇ! ಈ ಸಾಧನ ಮಾಹಾತ್ಮ್ಯದಲ್ಲಿ ಹಿಂದೆ ಏನೇನು ನಡೆದಿರುವುದೋ ಅದೆಲ್ಲವನ್ನೂ ನಿಮಗಾಗಿ ಹೇಳುವೆನು. ಸಾವಧಾನವಾಗಿ ಕೇಳಿರಿ.

೭. ಹಿಂದೆ ಪರಾಶರಮುನಿಯ ಪುತ್ರನೂ, ನನ್ನ ಗುರುವೂ ಆದ ವ್ಯಾಸ ಮುನಿಯು ಸಂಸಾರಕ್ಲೇಶದಿಂದ ಭ್ರಾಂತನಾಗಿ ಅದರ ನಿವೃತ್ತಿಗೋಸ್ಕರ ಸರಸ್ವತೀ ನದಿಯ ದಡದಲ್ಲಿ ತಪಸ್ಸನ್ನು ಆಚರಿಸಿದನು.

೮. ಅಲ್ಲಿ ಆಕಾಶದಲ್ಲಿ ಸೂರ್ಯನಂತೆ ತೇಜಸ್ವಿಯಾದ, ವಿಮಾನದಲ್ಲಿ ಸಂಚರಿಸುತ್ತಾ ಪೂಜ್ಯನಾದ ಸನತ್ಕುಮಾರನು ನನ್ನ ಗುರುವಾದ ವ್ಯಾಸಮುನಿಯನ್ನು ನೋಡಿದನು.

ಧ್ಯಾನಾರೂಢಃ ಪ್ರಬುದ್ಧೋಽಸೌ ದದರ್ಶ ತಮುಜಾತ್ಮಜಂ ।
ಪ್ರಣಿಪತ್ಯಾಹ ಸಂಭ್ರಾಂತಃ ಪರಂ ಕೌತೂಹಲಂ ಮುನಿಃ ॥ ೯ ॥

ದತ್ವಾರ್ಘ್ಯಮಸ್ಮೈ ಪ್ರದದೌ ದೇವಯೋಗ್ಯಂ ವಿಷ್ಟರಂ ।
ಪ್ರಸನ್ನಃ ಪ್ರಾಹ ತಂ ಪ್ರಹ್ವಂ ಪ್ರಭುರ್ಗಂಭೀರಯಾ ಗಿರಾ ॥ ೧೦ ॥

॥ ಸನತ್ಕುಮಾರ ಉವಾಚ ॥
ಸತ್ಯಂ ವಸ್ತು ಮುನೇ ದಧ್ಯಾಃ ಸಾಕ್ಷಾತ್ಕರಣಗೋಚರಃ ।
ಸ ಶಿವೋಽಥಾಸಹಾಯೋಽತ್ರ ತಪಶ್ಚರಸಿ ಕಿಂಕೃತೇ ॥ ೧೧ ॥

ಏವಮುಕ್ತಃ ಕುಮಾರೇಣ ಪ್ರೋವಾಚ ಸ್ವಾಶಯಂ ಮುನಿಃ ।
ಧರ್ಮಾರ್ಥಕಾಮಮೋಕ್ಷಾಶ್ಚ ವೇದಮಾರ್ಗೇ ಕೃತಾದರಾಃ ॥ ೧೨ ॥

---

೯. ಆಗ ಧ್ಯಾನಮಗ್ನನಾದ ವ್ಯಾಸಮುನಿಯು ಎಚ್ಚರಗೊಂಡು ಎದುರಿಗೆ ನಿಂತಿರುವ ಬ್ರಹ್ಮಮಾನಸಪುತ್ರನಾದ ಸನತ್ಕುಮಾರನನ್ನು ನೋಡಿ ತುಂಬಾ ಆಶ್ಚರ್ಯಗೊಂಡನು. ಬಳಿಕ ತ್ವರೆಯಿಂದ ಸನತ್ಕುಮಾರನಿಗೆ ನಮಸ್ಕರಿಸಿ ಕುಶಲಪ್ರಶ್ನೆಯನ್ನೂ ಸುಖಾಗಮನವನ್ನೂ ಕೇಳಿದನು.

೧೦. ಆಮೇಲೆ ಆ ಬ್ರಹ್ಮಪುತ್ರನಿಗೆ ಅರ್ಘ್ಯವನ್ನು ಕೊಟ್ಟು, ಕುಳಿತುಕೊಳ್ಳಲು ದೇವತೆಗಳಿಗೆ ಯೋಗ್ಯವಾದ ಆಸನವನ್ನು ಕೊಟ್ಟನು. ಆಗ ಪ್ರಭುವಾದ ಸನತ್ಕುಮಾರನು ಪ್ರಸನ್ನನಾಗಿ, ವಿನೀತನಾಗಿ ನಿಂತಿರುವ ವ್ಯಾಸಮುನಿಯನ್ನು ಕುರಿತುಗಂಭೀರವಾದ ವಾಕ್ಕಿನಿಂದ ಹೀಗೆ ಹೇಳಿದನು.

೧೧. ಸನತ್ಕುಮಾರನು ಹೇಳಿದನು:—ಎಲೈ ವ್ಯಾಸಮುನಿಯೇ! ಸಾಕ್ಷಾತ್ಕಾರಕ್ಕೆ ವಿಷಯವಾಗುವಂತಹ ಸತ್ಯವಾದ ವಸ್ತುವನ್ನು ಧ್ಯಾನಿಸು. ಆ ಸತ್ಯವಾದ ವಸ್ತು ಶಿವನೇ ಆಗಿರುವನು. ಇಲ್ಲಿ ಯಾವ ಸಹಾಯವೂ ಇಲ್ಲದೆ ಯಾವುದಕ್ಕಾಗಿ ತಪಸ್ಸನ್ನು ಆಚರಿಸುತ್ತಲಿರುವೆ?

೧೨. ಹೀಗೆ ಸನತ್ಕುಮಾರನು ಹೇಳಲು ಆಗ ವ್ಯಾಸಮುನಿಯು ತನ್ನ ಅಭಿಪ್ರಾಯವನ್ನು ಹೀಗೆ ಹೇಳಿದನು :—ಓ ಮುನಿಯೇ! ನಾನು ಲೋಕದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳು ಜನಗಳಿಗೆ ಲಭಿಸುವಂತೆ ಸ್ಥಾಪಿಸಿರುವೆನು. ಮತ್ತು ಜನಗಳು ವೇದಮಾರ್ಗದಲ್ಲಿ ನಡೆಯುವಂತೆಯೂ ಮಾಡಿರುವೆನು.

ಬಹುಧಾ ಸ್ಥಾಪಿತಾ ಲೋಕೇ ಮಯಾ ತ್ವತ್ಕೃಪಯಾ ತಥಾ ।
ಏವಂ ಭೂತಸ್ಯ ಮೇsಪ್ಯೇವಂ ಗುರುಭೂತಸ್ಯ ಸರ್ವತಃ ॥ ೧೩ ॥

ಮುಕ್ತಿಸಾಧನಕಂ ಜ್ಞಾನಂ ನೋದೇತಿ ಪರಮಾದ್ಭುತಂ ।
ತಪಶ್ಚರಾಮಿ ಮುಕ್ತ್ಯರ್ಥಂ ನ ಜಾನೇ ತತ್ರ ಕಾರಣಂ ॥ ೧೪ ॥

ಇತ್ಥಂ ಕುಮಾರೋ ಭಗವಾನ್ ವ್ಯಾಸೇನ ಮುನಿನಾರ್ಥಿತಃ ।
ಸಮರ್ಥಃ ಪ್ರಾಹ ವಿಪ್ರೇಂದ್ರಾ ನಿಶ್ಚಯಂ ಮುಕ್ತಿಕಾರಣಂ ॥ ೧೫ ॥

ಶ್ರವಣಂ ಕೀರ್ತನಂ ಶಂಭೋರ್ಮನನಂ ಚ ಮಹತ್ತರಂ ।
ತ್ರಯಂ ಸಾಧನಮುಕ್ತಂ ಚ ವಿದ್ಯತೇ ವೇದಸಮ್ಮತಂ ॥ ೧೬ ॥

ಪುರಾಹಮಥ ಸಂಭ್ರಾಂತೋ ಹ್ಯನ್ಯಸಾಧನಸಂಭ್ರಮಃ ।
ಅಚಲೇ ಮಂದರೇ ಶೈಲೆ ತಪಶ್ಚರಣಮಾಚರಂ ॥ ೧೭ ॥

---

೧೩-೧೪. ಈ ರೀತಿಯಾಗಿ ಮಾಡಿ ನಾನು ಎಲ್ಲರಿಗೂ ಗುರುವಾಗಿದ್ದರೂ ನನಗೆ ಸಂಸಾರ ಕ್ಲೇಶವನ್ನು ಹೋಗಲಾಡಿಸುವುದರಿಂದ ಅತಿ ಶ್ರೇಷ್ಠವಾದುದೂ, ಮುಕ್ತಿಗೆ ಸಾಧನವಾದುದೂ ಆದಂತಹ ಜ್ಞಾನವು ಇನ್ನೂ ಜನಿಸಿಲ್ಲ. ಮುಕ್ತಿಗಾಗಿ ತಪಸ್ಸನ್ನು ಆಚರಿಸುತ್ತಲಿರುವೆನು. ಆದರೆ ಆ ಮುಕ್ತಿಗೆ ಸಾಧನವಾವುದೆಂದು ನಾನು ತಿಳಿದಿಲ್ಲ.

೧೫. ಎಲೈ ಬ್ರಾಹ್ಮಣೋತ್ತಮರೇ! ಹೀಗೆ ವ್ಯಾಸಮುನಿಯು ಹೇಳಲು ಪೂಜ್ಯನಾದ ಮತ್ತು ಜ್ಞಾನಿಯಾದ ಸನತ್ಕುಮಾರನು ಮುಕ್ತಿಯ ಸಾಧನಗಳನ್ನು ನಿಶ್ಚಯಾತ್ಮಕವಾಗಿ ತಿಳಿಯುವಂತೆ ಹೀಗೆ ಹೇಳಿದನು.

೧೬. ಸನತ್ಕುಮಾರನು ಹೇಳಿದನು :—ಶಂಕರನ ನಾಮಶ್ರವಣ, ಕೀರ್ತನ, ಮನನ ಎಂಬ ಮೂರು ಮುಕ್ತಿ ಸಾಧನಗಳಿರುವುವು. ಇವು "ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಎಂದು ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವುವು.

೧೭. ಹಿಂದೆ ನಾನು ಸಹ ತುಂಬಾ ಭ್ರಾಂತನಾಗಿ ಮುಕ್ತಿಯನ್ನು ಪಡೆಯಲು ಯಾವುದೋ ಬೇರೆ ಸಾಧನಗಳನ್ನಾಶ್ರಯಿಸಿ ಮಂದರಪರ್ವತದುತಪ್ಪಲಲ್ಲಿ ತಪಸ್ಸನ್ನು ಆಚರಿಸಿದೆನು.

ಶಿವಾಜ್ಞಯಾ ತತಃ ಪ್ರಾಪ್ತೋ ಭಗವಾನ್ ನಂದಿಕೇಶ್ವರಃ ।
ಸ ಮೇ ದಯಾಲುರ್ಭಗವಾನ್ ಸರ್ವಸಾಕ್ಷೀ ಗಣೇಶ್ವರಃ ॥ ೧೮ ॥

ಉವಾಚ ಮಹ್ಯಂ ಸಸ್ನೇಹಂ ಮುಕ್ತಿಸಾಧನಮುತ್ತಮಂ ।
ಶ್ರವಣಂ ಕೀರ್ತನಂ ಶಂಭೋರ್ಮನನಂ ವೇದಸಮ್ಮತಂ ॥ ೧೯ ॥

ತ್ರಿಕಂ ಚ ಸಾಧನಂ ಮುಕ್ತೌ ಶಿವೇನ ಮಮ ಭಾಷಿತಂ ।
ಶ್ರವಣಾದಿತ್ರಿಕಂ ಬ್ರಹ್ಮನ್ ಕುರುಷ್ವೇತಿ ಮುಹುರ್ಮುಹುಃ ॥ ೨೦ ॥

ಏವಮುಕ್ತ್ವಾ ತತೋವ್ಯಾಸಂ ಸಾನುಗೋ ವಿಧಿನಂದನಃ ।
ಜಗಾಮ ಸ್ವವಿಮಾನೇನ ಪದಂ ಪರಮಶೋಭನಂ ॥ ೨೧ ॥

ಏವ ಮುಕ್ತಂ ಸಮಾಸೇನ ಪೂರ್ವವೃತ್ತಾಂತ ಮುತ್ತಮಂ ।
॥ ಋಷಯ ಊಚುಃ ॥
ಶ್ರವಣಾದಿತ್ರಯಂ ಸೂತ ಮುಕ್ತ್ಯುಪಾಯಸ್ತ್ವಯೇರಿತಃ ॥ ೨೨ ॥

---

೧೮. ಆಮೇಲೆ ಶಿವನ ಆಜ್ಞೆಯಿಂದ ಪೂಜ್ಯನಾದ ನಂದಿಕೇಶ್ವರನು ನನ್ನ ಬಳಿಗೆ ಬಂದನು. ದಯಾಳುವೂ, ಪೂಜ್ಯನೂ, ಪ್ರಮಥಗಣಗಳಿಗೆ ನಾಯಕನೂ, ಸರ್ವಜ್ಞನೂ ಆದ ಆ ನಂದಿಕೇಶ್ವರನು ನನಗೆ ಉತ್ತಮವಾದ ಮುಕ್ತಿಸಾಧನವನ್ನು ಸ್ನೇಹಪೂರ್ವಕವಾಗಿ ಹೇಳಿದನು.

೧೯-೨೦. ಎಲೈ ಬ್ರಾಹ್ಮಣೋತ್ತಮನಾದ ಸನತ್ಕುಮಾರನೇ! ಶಂಕರನ ಶ್ರವಣ, ಮನನ, ಕೀರ್ತನ ಇವುಗಳು ಮುಕ್ತಿಗೆ ಸಾಧನಗಳು ಎಂದು ವೇದದಲ್ಲಿ ಹೇಳಿರುವುದು ಎಂದು ಶಿವನು ಹೇಳಿರುವನು. ಆದಕಾರಣ ನೀನೂ ಸಹ ಶ್ರವಣ ಮುಂತಾದ ಮೂರು ಸಾಧನಗಳನ್ನು ಪುನಃ ಪುನಃ ಆಚರಿಸು ಎಂದು ನಂದಿಕೇಶ್ವರನು ನನಗೆ ಹೇಳಿದನು. ವ್ಯಾಸಮುನಿಯೇ! ಅದರಂತೆ ನೀನೂ ಶ್ರವಣಾದಿಗಳನ್ನು ಆಚರಿಸು.

೨೧. ಹೀಗೆ ಹೇಳಿ ಸನತ್ಕುಮಾರನು ತನ್ನ ಪರಿವಾರದೊಡನೆ ವಿಮಾನಾರೂಢನಾಗಿ ಪರಮಮಂಗಳವಾದ ಬ್ರಹ್ಮಲೋಕಕ್ಕೆ ತೆರಳಿದನು.

೨೨. ಸೂತನು ಹೇಳಿದನು :—ಎಲೈ ಮುನಿಗಳೇ, ಹೀಗೆ ಸಂಕ್ಷೇಪವಾಗಿ ಹಿಂದಿನ ವೃತ್ತಾಂತವನ್ನು ನಿಮಗೆ ಹೇಳಿರುವೆನು ಎಂದನು.

ಶ್ರವಣಾದಿತ್ರಿಕೇಽಶಕ್ತಃ ಕಿಂ ಕೃತ್ವಾ ಮುಚ್ಯತೇ ಜನಃ ।
ಅಯತ್ನೇನೈವ ಮುಕ್ತಿಃ ಸ್ಯಾತ್ಕರ್ಮಣಾ ಕೇನ ಹೇತುನಾ ॥ ೨೩ ॥

ಇತಿ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ
ಸಾಧ್ಯಸಾಧನಖಂಡೇ ಚತುರ್ಥೋಽಧ್ಯಾಯಃ.

---

೨೩. ಶೌನಕಾದಿಮುನಿಗಳು ಕೇಳಿದರು :—ಓ ಸೂತಮುನಿಯೇ! ಶ್ರವಣ, ಮನನ, ಕೀರ್ತನ ಇವುಗಳು ಮುಕ್ತಿಗೆ ಸಾಧನಗಳೆಂದು ನೀನು ಹೇಳಿದೆಯಷ್ಟೆ. ಆದರೆ ಆ ಶ್ರವಣಾದಿಗಳನ್ನು ಆಚರಿಸಲು ಅಶಕ್ತನಾದವನು ಹೇಗೆ, ಮುಕ್ತಿಯನ್ನು ಹೊಂದುವನು? ಅವನಿಗೆ ಹೆಚ್ಚಿನಶ್ರಮವಿಲ್ಲದೆ ಯಾವ ಕರ್ಮದಿಂದ ಮುಕ್ತಿಯು ಲಭಿಸುವುದು? ಎಂಬುದನ್ನು ಹೇಳು ಎಂದು ಕೇಳಿದರು.

ಇಲ್ಲಿಗೆ ಶ್ರೀ ಶಿವಪುರಾಣದ ವಿದ್ಯೇಶ್ವರ ಸಂಹಿತೆಯ ಸಾಧ್ಯಸಾಧನಖಂಡದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಪಂಚಮೋಽಧ್ಯಾಯಃ

---

॥ ಸೂತ ಉವಾಚ ॥

ಶ್ರವಣಾದಿತ್ರಿಕೇಽಶಕ್ತೋ ಲಿಂಗಂ ಬೇರಂ ಚ ಶಾಂಕರಂ ।
ಸಂಸ್ಥಾಪ್ಯ ನಿತ್ಯಮಭ್ಯರ್ಚ್ಯ ತರೇತ್ಸಂಸಾರಸಾಗರಂ ॥ ೧ ॥

ಅಪಿ ದ್ರವ್ಯಂ ವಹೇದೇವ ಯಥಾಬಲಮವಂಚಯನ್ ।
ಅರ್ಪಯೇಲ್ಲಿಂಗಬೇರಾರ್ಥಮರ್ಚಯೇದಪಿ ಸಂತತಂ ॥ ೨ ॥

---

## ಐದನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ಶ್ರವಣ ಮೊದಲಾದಲಾದ ಮೂರು ಮುಕ್ತಿ ಸಾಧನಗಳನ್ನು ಆಚರಿಚಲು ಅಸಮರ್ಥನಾದವನು, ಶಂಕರನ ಲಿಂಗ, ಮತ್ತು ಪ್ರತಿಮೆಗಳನ್ನು ಪ್ರತಿಷ್ಠಿಸಿ ಅದನ್ನು ನಿತ್ಯವೂ ಪೂಜಿಸಿದರೆ ಮುಂದೆ ಸಂಸಾರ ಸಾಗರವನ್ನು ದಾಟುವನು. ಈಶ್ವರನ ಅನುಗ್ರಹದಿಂದ ಮುಕ್ತಿಯನ್ನೈದುವನು.

೨. ವಂಚನೆಯಿಲ್ಲದೆ ಶಕ್ತಿಯಿದ್ದಷ್ಟು ಪೂಜಾದ್ರವ್ಯಗಳನ್ನು ಸಂಗ್ರಹಿಸಿ, ಲಿಂಗ ಮತ್ತು ಮೂರ್ತಿಗಳಿಗೆ ಅರ್ಪಿಸಬೇಕು.

ಮಂಡಪಂ ಗೋಪುರಂ ತೀರ್ಥಂ ಮಠಂ ಕ್ಷೇತ್ರಂ ತಥೋತ್ಸವಂ ।
ವಸ್ತ್ರಂ ಗಂಧಂ ಚ ಮಾಲ್ಯಂ ಚ ಧೂಪಂ ದೀಪಂ ಚ ಭಕ್ತಿತಃ ॥ ೩ ॥

ವಿವಿಧಾನ್ನಂ ಚ ನೈವೇದ್ಯಮಪೂಪವ್ಯಂಜನೈರ್ಯುತಂ ।
ಛತ್ರಂ ಧ್ವಜಂ ಚ ವ್ಯಜನಂ ಚಾಮರಂ ಚಾಪಿ ಸಾಂಗಕಂ ॥ ೪ ॥

ರಾಜೋಪಚಾರವತ್ಸರ್ವಂ ಧಾರಯೇಲ್ಲಿಂಗಬೇರಯೋಃ ।
ಪ್ರದಕ್ಷಿಣಾಂ ನಮಸ್ಕಾರಂ ಯಥಾಶಕ್ತಿ ಜಪಂ ತಥಾ ॥ ೫ ॥

ಆವಾಹನಾದಿಸರ್ಗಾಂತಂ ನಿತ್ಯಂ ಕುರ್ಯಾತ್ಸುಭಕ್ತಿತಃ ।
ಇತ್ಥಮಭ್ಯರ್ಚಯನ್ ದೇವಂ ಲಿಂಗೇ ಬೇರೇ ಚ ಶಾಂಕರೆ ॥ ೬ ॥

---

೩. ಮಂಟಪ, ಗೋಪುರ, ತೀರ್ಥ, ಮಠ, ಕ್ಷೇತ್ರ ಇವುಗಳನ್ನು ಶಿವಲಿಂಗ ಮತ್ತು ಮೂರ್ತಿಗಳ ಪೂಜೆಗಾಗಿ ವಿನಿಯೋಗಿಸಬೇಕು. ಮತ್ತು ವಸ್ತ್ರ, ಗಂಧ, ಹಾರ, ಧೂಪ, ದೀಪ, ಅನೇಕ ಬಗೆಯ ಅನ್ನಗಳುಳ್ಳ ಮತ್ತು ಹೋಳಿಗೆ ಮುಂತಾದ ಭಕ್ಷ್ಯ ಭೋಜ್ಯಗಳುಳ್ಳ ನೈವೇದ್ಯ ಇವುಗಳನ್ನು ಆ ಲಿಂಗಮೂರ್ತಿಗಳಿಗೆ ಪೂಜೆಯಲ್ಲಿ ಅರ್ಪಿಸಬೇಕು.

೪. ಶ್ವೇತಛತ್ರಿ, ಧ್ವಜ, ವ್ಯಜನ (ಬೀಸಣಿಗೆ) ಚಾಮರ ಇವೇ ಮೊದಲಾದ ಎಲ್ಲಾ ರಾಜೋಪಚಾರಗಳನ್ನೂ ಸಾಂಗವಾಗಿ ಆ ಶಂಕರನ ಲಿಂಗ ಮತ್ತು ಮೂರ್ತಿಗಳಿಗೆ ಮಾಡಬೇಕು.

೫. ಆಮೇಲೆ ಪ್ರದಕ್ಷಿಣೆ, ನಮಸ್ಕಾರ, ಯಥಾಶಕ್ತಿ ಶಿವಪಂಚಾಕ್ಷರೀ ಮಂತ್ರದ ಜಪ, ಮುಂತಾದ ಆವಾಹನ ಮೊದಲುಗೊಂಡು ವಿಸರ್ಜನೆಯವರೆಗಿನ ಎಲ್ಲಾ ಪೂಜಾಕ್ರಮವನ್ನೂ ಭಕ್ತಿಯಿಂದ ನಿತ್ಯವೂ ಆ ಲಿಂಗ ಮತ್ತು ಮೂರ್ತಿಗಳಿಗೆ ಮಾಡಬೇಕು.

೬. ಹೀಗೆ ನಿತ್ಯವೂ, ಶಿವಲಿಂಗ ಮತ್ತು ಮೂರ್ತಿಗಳನ್ನು ಪೂಜಿಸುವವನು, ಶ್ರವಣಾದಿಗಳಿಲ್ಲದೇನೆ ಶಿವನ ಅನುಗ್ರಹದಿಂದ ಸಿದ್ಧಿಯನ್ನೂ ಮುಕ್ತಿಯನ್ನೂ ಪಡೆಯುವನು.

ಸಿದ್ಧಿಮೇತಿ ಶಿವಪ್ರೀತ್ಯಾ ಹಿತ್ವಾಪಿ ಶ್ರವಣಾದಿಕಂ ।
ಲಿಂಗಬೇರಾರ್ಚನಾಮಾತ್ರಾನ್ಮುಕ್ತಾಃ ಪೂರ್ವೇ ಮಹಾಜನಾಃ ॥ ೭ ॥

॥ ಮುನಯ ಊಚುಃ ॥
ಬೇರಮಾತ್ರೇ ತು ಸರ್ವತ್ರ ಪೂಜ್ಯಂತೇ ದೇವತಾಗಣಾಃ ।
ಲಿಂಗೇ ಬೇರೇ ಚ ಸರ್ವತ್ರ ಕಥಂ ಸಂಪೂಜ್ಯತೇ ಶಿವಃ ॥ ೮ ॥

॥ ಸೂತ ಉವಾಚ ॥
ಅಹೋ ಮುನೀಶ್ವರಾಃ ಪುಣ್ಯಂ ಪ್ರಶ್ನಮೇತನ್ಮಹಾದ್ಭುತಂ ।
ಅತ್ರ ವಕ್ತಾ ಮಹಾದೇವೋ ನಾನ್ಯೋಽಸ್ತಿ ಪುರುಷಃ ಕ್ವಚಿತ್ ॥ ೯ ॥

ಶಿವೇನೋಕ್ತಂ ಪ್ರವಕ್ಷ್ಯಾಮಿ ಕ್ರಮಾದ್ಗುರುಮುಖಾಚ್ಛ್ರುತಂ ।
ಶಿವೈಕೋ ಬ್ರಹ್ಮರೂಪತ್ವಾನ್ನಿಷ್ಕಲಃ ಪರಿಕೀರ್ತಿತಃ ॥ ೧೦ ॥

---

೭. ಶಿವಲಿಂಗ ಮತ್ತು ಶಿವಮೂರ್ತಿಗಳನ್ನು ಪೂಜಿಸಿದುದರಿಂದಲೇ ಹಿಂದೆ ಬಹು ಜನಗಳು ಮುಕ್ತಿಯನ್ನೈದಿರುವರು.

೮. ಮುನಿಗಳು ಪ್ರಶ್ನಿಸಿದರು :—ಓ ಸೂತಮುನಿಯೇ! ಎಲ್ಲೆಡೆಯಲ್ಲಿಯೂ ಮೂರ್ತಿಯಲ್ಲಿಯೇ ದೇವತೆಗಳನ್ನು ಪೂಜಿಸುವರು. ಆದರೆ ಪರಮೇಶ್ವರನನ್ನು ಲಿಂಗದಲ್ಲಿಯೂ, ಮೂರ್ತಿಯಲ್ಲಿಯೂ ಪೂಜಿಸಲು ಕಾರಣವೇನು ?

೯. ಸೂತಮುನಿಯು ಹೇಳಿದನು :—ಎಲೈ ಮುನಿಶ್ರೇಷ್ಠರೇ! ನೀವು ಕೇಳಿದ ಪ್ರಶ್ನಿಸಿದ ವಿಷಯವು ತುಂಬಾ ಆಶ್ಚರ್ಯವಾದುದು, ಮತ್ತು ಪವಿತ್ರವಾದುದು, ಈ ಪ್ರಶ್ನೆಗೆ ಉತ್ತರವನ್ನು ಮಹಾದೇವನು ಹೊರತು ಇನ್ನಾವ ಪುರುಷನೂ ಹೇಳಲಾರನು. ಈ ವಿಷಯವನ್ನು ಶಿವನೇ ಹೇಳಿರುವನು. ಅದನ್ನು ಗುರುಗಳಾದ ವ್ಯಾಸರಿಂದ ಕೇಳಿರುವುದರಿಂದ ಅದನ್ನೇ ನಾನು ನಿಮಗೆ ಹೇಳುವೆನು.

೧೦. ಶಿವನೊಬ್ಬನೇ ಬ್ರಹ್ಮಸ್ವರೂಪನು. ಆಕಾಶದಂತೆ ಎಲ್ಲೆಲ್ಲಿಯೂ ಇರುವನು, ಆದಕಾರಣವೇ ಆ ಆಕಾಶದಂತೆ ಅವಯವಗಳಿಲ್ಲದವನು, ಆದರೆ ಮಾಯಾಮಯವಾದ ಬ್ರಹ್ಮ, ವಿಷ್ಣು ಮೊದಲಾದ ಜೀವರೂಪವುಳ್ಳವನಾದುದರಿಂದಲೂ, ಆಯಾಯ ರೂಪಕ್ಕನುಗುಣವಾಗಿ ಮಾಯಿಕವಾದ ಅವಯವಗಳುಳ್ಳವನಾದುದ

ರೂಪಿತ್ವಾತ್ಸಕಲಸ್ತದ್ವತ್ತಸ್ಮಾತ್ಸಕಲನಿಷ್ಕಲಃ ।
ಸಕಲತ್ವಾ ತ್ತಥಾ ಬೇರಂ ಸಾಕಾರಂ ತಸ್ಯ ಸಂಗತಂ ॥ ೧೧ ॥

ನಿಷ್ಕಲತ್ವಾನ್ನಿರಾಕಾರಂ ಲಿಂಗಂ ತಸ್ಯ ಸಮಾಗತಂ ।
ಸಕಲಾಕಲರೂಪತ್ವಾದ್ಬ್ರಹ್ಮಶಬ್ದಾಭಿಧಃ ಪರಃ ॥ ೧೨ ॥

ಅಪಿ ಲಿಂಗೇ ಚ ಬೇರೇ ಚ ನಿತ್ಯಮಭ್ಯರ್ಚ್ಯತೇ ಜನೈಃ ।
ಅಬ್ರಹ್ಮತ್ವಾತ್ತದನ್ಯೇಷಾಂ ನಿಷ್ಕಲತ್ವಂ ನ ಹಿ ಕ್ವಚಿತ್ ॥ ೧೩ ॥

ತಸ್ಮಾತ್ತೇ ನಿಷ್ಕಲೇ ಲಿಂಗೇ ನಾರಾಧ್ಯಂತೇ ಸುರೇಶ್ವರಾಃ ।
ಅಬ್ರಹ್ಮತ್ವಾ ಚ್ಚ ಜೀವತ್ವಾ ತ್ತಥಾನ್ಯೇ ದೇವತಾಗಣಾಃ ॥ ೧೪ ॥

---

ರಿಂದಲೂ ಅವನು ಸಕಲನೂ ಅಂದರೆ ಅವಯುವಗಳುಳ್ಳವನೂ ಆಗಿರುವನು, ಎಂದರೆ ಪಾರಮಾರ್ಥಿಕವಾಗಿ ಅವಯುವಗಳಿಲ್ಲದವನೂ (ನಿರಾಕಾರನೂ) ಮಾಯಾಮಯವಾದ ಅವಯುಗಳುಳ್ಳ ಸ್ವರೂಪವುಳ್ಳವನೂ (ಸಾಕಾರನೂ) ಆಗಿರುವನೆಂದು ಅಭಿಪ್ರಾಯವು.

೧೧. ಈಶ್ವರನು ನಿರಾಕಾರನಾದುದರಿಂದ ನಿರಾಕಾರವಾದ ಲಿಂಗವು ಅವನ ಪೂಜೆಗೆ ಯೋಗ್ಯವಾದುದುದು, ಹಾಗೇ ಮಾಯಾಮಯವಾಗಿ ಸಾಕಾರನಾದುದರಿಂದ ಈಶ್ವರನ ಪೂಜೆಗೆ ಸಾಕಾರವಾದ ಮೂರ್ತಿಯೂ ಯೋಗ್ಯವಾದುದು, ಈ ಕಾರಣದಿಂದ ಈಶ್ವರನು ಲಿಂಗಮೂರ್ತಿಗಳೆರಡರಲ್ಲಿಯೂ ಪೂಜಿಸಲ್ಪಡುವನು.

೧೨. ಬ್ರಹ್ಮಸ್ವರೂಪನಾದ ಶಿವನು ಹೀಗೆ ಸಾಕಾರ ಮತ್ತು ನಿರಾಕಾರರೂಪನಾದುದರಿಂದ ಲಿಂಗ ಮತ್ತು ಮೂರ್ತಿಗಳೆರಡರಲ್ಲಿಯೂ ಜನಗಳಿಂದ ನಿತ್ಯವೂ ಪೂಜಿಸಲ್ಪಡುವನು.

೧೩. ಮಿಕ್ಕ ದೇವತೆಗಳು ಬ್ರಹ್ಮರೂಪರಲ್ಲದುದರಿಂದ ನಿರಾಕಾರರಲ್ಲವು. ಆದುದರಿಂದ ಆ ದೇವತೆಗಳು ನಿರಾಕಾರವಾದ ಲಿಂಗದಲ್ಲಿ ಪೂಜಿಸಲ್ಪಡುವುದಿಲ್ಲ.

೧೪. ಬ್ರಹ್ಮಸ್ವರೂಪರಲ್ಲದುದರಿಂದಲೂ ಜೀವರಾದುದರಿಂದಲೂ ಸಾಕಾರ (ಸಾವಯವ) ವುಳ್ಳವರಾದುದರಿಂದಲೂ ಮಿಕ್ಕ ದೇವತೆಗಳು ಸಾಕಾರವಾದ ಮೂರ್ತಿಯಲ್ಲಿ ಮಾತ್ರ ಪೂಜಿಸಲ್ಪಡುವರು.

ತೂಷ್ಣೀಂ ಸಕಲಮಾತ್ರತ್ವಾದರ್ಚ್ಯಂತೇ ಬೇರಮಾತ್ರಕೇ ।
ಜೀವತ್ವಂ ಶಂಕರಾನ್ಯೇಷಾಂ ಬ್ರಹ್ಮತ್ವಂ ಶಂಕರಸ್ಯ ಚ ॥ ೧೫ ॥

ವೇದಾಂತಸಾರಸಂಸಿದ್ಧಂ ಪ್ರಣವಾರ್ಥೇ ಪ್ರಕಾಶನಾತ್ ।
ಏವಮೇವ ಪುರಾ ಪೃಷ್ಟೋ ಮಂದರೇ ನಂದಿಕೇಶ್ವರಃ ॥ ೧೬ ॥

ಸನತ್ಕುಮಾರಮುನಿನಾ ಬ್ರಹ್ಮಪುತ್ರೇಣ ಧೀಮತಾ ।
॥ ಸನತ್ಕುಮಾರ ಉವಾಚ ॥
ಶಿವಾನ್ಯದೇವವಶ್ಯಾನಾಂ ಸರ್ವೇಷಾಮಪಿ ಸರ್ವತಃ ॥ ೧೭ ॥

ಬೇರಮಾತ್ರಂ ಚ ಪೂಜಾರ್ಥಂ ಶ್ರುತಂ ದೃಷ್ಟಂ ಚ ಭೂರಿಶಃ ।
ಶಿವಮಾತ್ರಸ್ಯ ಪೂಜಾಯಾಂ ಲಿಂಗಂ ಬೇರಂ ಚ ದೃಶ್ಯತೇ ॥ ೧೮ ॥

ಅತಸ್ತದ್ಬ್ರೂಹಿ ಕಲ್ಯಾಣ ತತ್ತ್ವಂ ಮೇ ಸಾಧುಬೋಧನಂ ।
॥ ನಂದಿಕೇಶ್ವರ ಉವಾಚ ॥
ಅನುತ್ತರಮಿಮಂ ಪ್ರಶ್ನಂ ರಹಸ್ಯಂ ಬ್ರಹ್ಮಲಕ್ಷಣಂ ॥ ೧೯ ॥

---

೧೫. ಶಂಕರನು ಹೊರತು ಮಿಕ್ಕ ದೇವತೆಗಳು ಜೀವರು, ಶಂಕರನೋರ್ವನೇ ಬ್ರಹ್ಮಸ್ವರೂಪನು, ಎಂದು ವೇದಾಂತಗಳು ಓಂಕಾರಾರ್ಥದಲ್ಲಿ ಸಾರಿರುವುವು. ಎಂದರೆ ಓಂಕಾರಕ್ಕೆ ಅರ್ಥವು ಬ್ರಹ್ಮ. ವೇದಾಂತಗಳು ಆ ಓಂಕಾರ ಮೂಲಕವಾಗಿ ಶಂಕರನು ಬ್ರಹ್ಮವೆಂದು ಸಾರಿರುವುವು.

೧೬. ಎಲೈ ಮುನಿಗಳೆ! ನೀವು ಪ್ರಶ್ನಿಸಿದಂತೆಯೇ ಹಿಂದೆ ಮಂದರಪರ್ವತದಲ್ಲಿ ಬ್ರಹ್ಮಪುತ್ರನಾದ ಸನತ್ಕುಮಾರನು ನಂದಿಕೇಶ್ವರನನ್ನು ಕುರಿತು ಹೀಗೆ ಪ್ರಶ್ನಿಸಿದನು.

೧೭. ಸನತ್ಕುಮಾರನು ಹೇಳಿದನು :—ಓ ನಂದಿಕೇಶ್ವರ! ಶಿವನು ಹೊರತು ಮಿಕ್ಕ ಎಲ್ಲಾ ದೇವತೆಗಳನ್ನು ವಿಗ್ರಹದಲ್ಲಿ ಮಾತ್ರ ಪೂಜಿಸುವುದನ್ನು ಅನೇಕ ಕಡೆ ಕೇಳಿರುವೆವು. ನೋಡಿಯೂ ಇರುವೆವು.

೧೮. ಆದರೆ ಶಿವನಿಗೆ ಮಾತ್ರ ಲಿಂಗ ಮತ್ತು ವಿಗ್ರಹಗಳೆರಡರಲ್ಲಿಯೂ ಪೂಜೆಯು ಹೇಳಲ್ಪಟ್ಟಿರುವುದು. ಆದಕಾರಣ ಓ ಮಂಗಳರೂಪನೇ! ಇದರ ತತ್ತ್ವವೇನೆಂಬುದನ್ನು ನಿಜವಾಗಿ ನನಗೆ ತಿಳಿಸು ಎಂದನು.

೧೯. ನಂದೀಕೇಶ್ವರನು ಹೇಳಿದನು :—ಎಲೈ ಪುಣ್ಯಶಾಲಿಯೇ! ನೀನು ಕೇಳಿದ ಪ್ರಶ್ನೆಯು ಅತಿ ರಹಸ್ಯವಾದುದು. ಸಾಮಾನ್ಯರು ಬ್ರಹ್ಮವಿಷಯಕವಾದ ಈ

ಕಥಯಾಮಿ ಶಿವೇನೋಕ್ತಂ ಭಕ್ತಿಯುಕ್ತಸ್ಯ ತೇಽನಘ ।
ಶಿವಸ್ಯ ಬ್ರಹ್ಮರೂಪತ್ವಾನ್ನಿಷ್ಕಲತ್ವಾಚ್ಚ ನಿಷ್ಕಲಂ ॥ ೨೦ ॥

ಲಿಂಗಂ ತಸ್ಯೈವ ಪೂಜಾಯಾಂ ಸರ್ವವೇದೇಷು ಸಮ್ಮತಂ ।
ತಸ್ಯೈವ ಸಕಲತ್ವಾಚ್ಚ ತಥಾ ಸಕಲನಿಷ್ಕಲಂ ॥ ೨೧ ॥

ಸಕಲಂ ಚ ತಥಾ ಬೇರಂ ಪೂಜಾಯಾಂ ಲೋಕಸಮ್ಮತಂ ।
ಶಿವಾನ್ಯೇಷಾಂ ಚ ಜೀವತ್ವಾತ್ಸಕಲತ್ವಾಚ್ಚ ಸರ್ವತಃ ॥ ೨೨ ॥

ಬೇರಮಾತ್ರಂ ಚ ಪೂಜಾಯಾಂ ಸಮ್ಮತಂ ವೇದನಿರ್ಣಯೇ ।
ಸ್ವಾವಿರ್ಭಾವೇ ಚ ದೇವಾನಾಂ ಸಕಲಂ ರೂಪಮೇವ ಹಿ ॥ ೨೩ ॥

---

ಪ್ರಶ್ನೆಗೆ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಆದರೂ ಶಿವನು ನನಗೆ ಹೇಳಿರುವನು. ಅದನ್ನು ಭಕ್ತನಾದ ನಿನಗೆ ಈಗ ಹೇಳುವೆನು.

೨೦. ಶಿವನು ಬ್ರಹ್ಮರೂಪನು ಮತ್ತು ಆಕಾರವಿಲ್ಲದವನು. ಆದಕಾರಣ (ವಿಶೇಷವಾಗಿ) ಆಕಾರವಿಲ್ಲದ ಲಿಂಗವೇ ಶಿವಪೂಜೆಯಲ್ಲಿ ಪ್ರಶಸ್ತವಾದುದು. ವೇದಗಳಲ್ಲಿಯೂ ಹಾಗೆಯೇ ಹೇಳಿರುವುದು.

೨೧. ಅಲ್ಲದೆ ಆ ಶಂಕರನು ಮಾಯಿಕವಾದ ಆಕಾರವುಳ್ಳವನೂ ಆಗಿರವನು. ಹೀಗೆ ಈಶ್ವರನು ಸಾಕಾರ ಮತ್ತು ನಿರಾಕಾರ ಈ ಎರಡು ರೂಪಗಳುಳ್ಳವನೂ ಆಗಿರುವುದರಿಂದ ಸಾಕಾರವಾದ ವಿಗ್ರಹದಲ್ಲಿಯೂ ಶಂಕರನನ್ನು ಜನಗಳು ಪೂಜಿಸುವರು.

೨೨. ಶಿವನ ಹೊರತು ಮಿಕ್ಕ ದೇವತೆಗಳು ಜೀವರು ಮತ್ತು ಆಕಾರವುಳ್ಳವರು. ಆದಕಾರಣ ವೇದಗಳಲ್ಲಿ ವಿಗ್ರಹದಲ್ಲಿಯೇ ಮಿಕ್ಕ ದೇವತೆಗಳಿಗೆ ಪೂಜೆಯನ್ನು ಮಾಡಬೇಕೆಂದು ಹೇಳಿರುವುದು.

೨೩. ಆದಕಾರಣವೇ ದೇವತೆಗಳು ಸಾಕಾರವಾದಂತಹ ರೂಪದಿಂದಲೇ ಆವಿರ್ಭವಿಸುವರು. ಮತ್ತು ಪ್ರತ್ಯಕ್ಷರಾಗುವರು. ಆದರೆ ಶಿವನು ಸಾಕಾರನಾಗಿಯೂ ನಿರಾಕಾರನಾಗಿಯೂ ಗೋಚರನಾಗುವನು.

ಶಿವಸ್ಯ ಲಿಂಗಂ ಬೇರಂ ಚ ದರ್ಶನೇ ದೃಶ್ಯತೇ ಖಲು ।
॥ ಸನತ್ಕುಮಾರ ಉವಾಚ ॥
ಉಕ್ತಂ ತ್ವಯಾ ಮಹಾಭಾಗ ಲಿಂಗಬೇರಪ್ರಚಾರಣಂ ॥ ೨೪ ॥

ಶಿವಸ್ಯ ಚ ತದನ್ಯೇಷಾಂ ವಿಭಜ್ಯ ಪರಮಾರ್ಥತಃ ।
ತಸ್ಮಾತ್ತದೇವ ಪರಮಂ ಲಿಂಗಬೇರಾದಿಸಂಭವಂ ॥ ೨೫ ॥

ಶ್ರೋತುಮಿಚ್ಛಾಮಿ ಯೋಗೀಂದ್ರ ಲಿಂಗಾವಿರ್ಭಾವಲಕ್ಷಣಂ ।
॥ ನಂದಿಕೇಶ್ವರ ಉವಾಚ ॥
ಶೃಣು ವತ್ಸ ಭವತ್ಪ್ರೀತ್ಯಾ ವಕ್ಷ್ಯಾಮಿ ಪರಮಾರ್ಥತಃ ॥ ೨೬ ॥

ಪುರಾ ಕಲ್ಪೇ ಮಹಾಕಾಲೇ ಪ್ರಪನ್ನೇ ಲೋಕವಿಶ್ರುತೇ ।
ಅಯುಧ್ಯತಾಂ ಮಹಾತ್ಮಾನೌ ಬ್ರಹ್ಮವಿಷ್ಣೂ ಪರಸ್ಪರಂ ॥ ೨೭ ॥

ತಯೋರ್ಮಾನಂ ನಿರಾಕರ್ತುಂ ತನ್ಮಧ್ಯೇ ಪರಮೇಶ್ವರಃ ।
ನಿಷ್ಕಲಸ್ತಂಭರೂಪೇಣ ಸ್ವರೂಪಂ ಸಮದರ್ಶಯತ್ ॥ ೨೮ ॥

---

೨೪. ಸನತ್ಕುಮಾರನು ಹೇಳಿದನು:—ಓ ಭಗವಂತನೇ! ನೀನು ಶಿವ ಮತ್ತು ಮಿಕ್ಕ ದೇವತೆಗಳ ವಿಷಯದಲ್ಲಿ ಲಿಂಗಪೂಜೆ ಇವುಗಳ ನಿಜವಾದ ವಿಚಾರ ವನ್ನು ಪ್ರತ್ಯೇಕವಾಗಿ ತಿಳಿಸಿರುವೆ.

೨೫. ಓ ಯೋಗಿವರ್ಯನೆ! ಶ್ರೇಷ್ಠವಾದ ಆ ಲಿಂಗ ಮತ್ತು ವಿಗ್ರಹಗಳ ಉತ್ಪತ್ತಿಯನ್ನೂ, ಲಿಂಗವು ಆವಿರ್ಭವಿಸಿದ ಕ್ರಮವನ್ನೂ ಕೇಳಲಿಚ್ಛಿಸುವೆನು, ಹೇಳುವವನಾಗು.

೨೬. ನಂದಿಕೇಶ್ವರನು ಹೇಳಿದನು:—ಎಲೈ ವತ್ಸ, ನಿನ್ನಲ್ಲಿ ಪ್ರೀತಿಯಿಂದ ನಿಜವಾದ ವಿಚಾರವನ್ನು ಹೇಳುವೆನು, ಕೇಳು.

೨೭. ಹಿಂದಿನ ಕಲ್ಪದಲ್ಲಿ ಲೋಕಪ್ರಸಿದ್ಧವಾದ ಮಹಾಕಾಲೇಶ್ವರನು ಲೋಕ ದಲ್ಲಿ ಆವಿರ್ಭವಿಸಿದ ಕಾಲದಲ್ಲಿ ಮಹಾತ್ಮರಾದ ಬ್ರಹ್ಮ ಮತ್ತು ವಿಷ್ಣುಗಳು ಪರಸ್ಪರ ನಾನು ಮೇಲು ತಾನು ಮೇಲು ಎಂದು ಹೊಡೆದಾಡಿದರು.

೨೮. ಆ ಬ್ರಹ್ಮ ವಿಷ್ಣುಗಳ ಗರ್ವವನ್ನು ಹೋಗಲಾಡಿಸಲು ಪರಮೇಶ್ವರನು ಅವರ ಮಧ್ಯದಲ್ಲಿ ನಿರಾಕಾರವಾದ ದೊಡ್ಡ ಕಂಭದ ರೂಪನಾಗಿ ತನ್ನ ರೂಪವನ್ನು ತೋರಿಸಿದನು.

ತತಃ ಸ್ವಲಿಂಗಚಿಹ್ನತ್ವಾತ್ ಸ್ತಂಭತೋ ನಿಷ್ಕಲಂ ಶಿವಃ ।
ಸ್ವಲಿಂಗಂ ದರ್ಶಯಾಮಾಸ ಜಗತಾಂ ಹಿತಕಾಮ್ಯಯಾ ॥ ೨೯ ॥

ತದಾಪ್ರಭೃತಿ ಲೋಕೇಷು ನಿಷ್ಕಲಂ ಲಿಂಗಮೈಶ್ವರಂ ।
ಸಕಲಂ ಚ ತಥಾ ಬೇರಂ ಶಿವಸ್ಯೈವ ಪ್ರಕಲ್ಪಿತಂ ॥ ೩೦ ॥

ಶಿವಾನ್ಯೇಷಾಂ ತು ದೇವಾನಾಂ ಬೇರಮಾತ್ರಂ ಪ್ರಕಲ್ಪಿತಂ ।
ತತ್ತದ್ಬೇರಂ ತು ದೇವಾನಾಂ ತತ್ತದ್ಭೋಗಪ್ರದಂ ಶುಭಂ ।
ಶಿವಸ್ಯ ಲಿಂಗಬೇರತ್ವಂ ಭೋಗಮೋಕ್ಷಪ್ರದಂ ಶುಭಂ ॥ ೩೧ ॥

ಇತಿ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ
ಪಂಚಮೋಽಧ್ಯಾಯಃ.

---

೨೯. ಬಳಿಕ ತನ್ನ ಸ್ವರೂಪವನ್ನು ನಿರ್ದೇಶಿಸು (ಗುರುತಿಸು) ವಂತಹ ಆ ಕಂಭದಿಂದ ಶಿವನು ನಿರಾಕಾರವಾದ ತನ್ನ ಲಿಂಗವನ್ನು ಜಗತ್ತಿನ ಕ್ಷೇಮಕ್ಕಾಗಿ ಪ್ರಕಟಿಸಿದನು.

೩೦. ಅದು ಮೊದಲುಗೊಂಡು ಶಿವಪೂಜೆಗೆ ನಿರಾಕಾರವಾದ ಲಿಂಗವೂ, ವಿಗ್ರಹವೂ ಸಹ ಕಲ್ಪಿಸಲ್ಪಟ್ಟವು, ಲಿಂಗ ಮತ್ತು ಮೂರ್ತಿಗಳೆರಡರಲ್ಲಿಯೂ ಈಶ್ವರನನ್ನು ಪೂಜಿಸುವರು ಎಂದರ್ಥವು.

೩೧. ಇತರ ದೇವತೆಗಳಿಗೆ ಮೂರ್ತಿಪೂಜೆಯು ಮಾತ್ರ ವಿಹಿತವಾಗಿರುವುದು. ಏಕೆಂದರೆ, ಆ ದೇವತೆಗಳು ಭಕ್ತರಿಗೆ ಐಹಿಕ ಮತ್ತು ಸ್ವರ್ಗೀಯ ಭೋಗಗಳನ್ನು ಮಾತ್ರ ಕೊಡಲು ಸಮರ್ಥರಾಗಿರುವರು. ಮೋಕ್ಷಫಲವನ್ನು ಕೊಡಲು ಶಕ್ತರಲ್ಲ. ಆದರೆ ಈಶ್ವರನು ಭಕ್ತರಿಗೆ ಐಹಿಕಾದಿಭೋಗಗಳನ್ನೂ, ಮೋಕ್ಷವನ್ನೂ ಕೊಡಲು ಸಮರ್ಥನಾದುದರಿಂದ ಪರಮೇಶ್ವರನು ಲಿಂಗ ಮತ್ತು ಮೂರ್ತಿಗಳ ರೂಪದಲ್ಲಿ ಆರಾಧಿಸಲ್ಪಡುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಐದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಿದ್ಯೇಶ್ವರಸಂಹಿತಾಯಾಂ

## ಷಷ್ಠೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಪುರಾ ಕದಾಚಿದ್ಯೋಗೀಂದ್ರ ವಿಷ್ಣುರ್ವಿಷಧರಾಸನಃ ।
ಸುಷ್ವಾಪ ಪರಯಾ ಭೂತ್ಯಾ ಸ್ವಾನುಗೈರಪಿ ಸಂವೃತಃ ॥ ೧ ॥

ಯದೃಚ್ಛಯಾಗತಸ್ತತ್ರ ಬ್ರಹ್ಮಾ ಬ್ರಹ್ಮವಿದಾಂ ವರಃ ।
ಅಪೃಚ್ಛತ್ಪುಂಡರೀಕಾಕ್ಷಂ ಶಯಾನಂ ಸರ್ವಸುಂದರಂ ॥ ೨ ॥

---

### ಆರನೆಯ ಅಧ್ಯಾಯವು.

೧. ನಂದಿಕೇಶ್ವರನು ಹೇಳಿದನು:—ಎಲೈ ಯೋಗಿವರ್ಯ! ಹಿಂದೆ ಒಂದು ಕಾಲದಲ್ಲಿ ಸರ್ಪಶಯನನಾದ ವಿಷ್ಣುವು ತನ್ನ ಪರಿವಾರದೊಡನೆ ಸಹಿತನಾಗಿ ಆ ಶೇಷ ಶಯನದಲ್ಲಿ ಮಲಗಿದ್ದನು.

೨. ಆಗ ಅಕಸ್ಮಾತ್ತಾಗಿ ಬ್ರಹ್ಮವಿತ್ತುಗಳಲ್ಲಿ ಶ್ರೇಷ್ಠನೆನಿಸಿದ ಬ್ರಹ್ಮದೇವನು ಅಲ್ಲಿಗೆ ಬಂದು ಶೇಷಶಯನದಲ್ಲಿ ಮಲಗಿರುವ ಸರ್ವಸುಂದರನಾದ ವಿಷ್ಣುವನ್ನು ಕುರಿತು ಹೀಗೆ ಪ್ರಶ್ನಿಸಿದನು.

ಕಸ್ತ್ವಂ ಪುರುಷವಚ್ಛೇಷೇ ದೃಷ್ಟ್ವಾ ಮಾಮಪಿ ದೃಪ್ತವತ್ ।
ಉತ್ತಿಷ್ಠ ವತ್ಸ ಮಾಂ ಪಶ್ಯ ತವ ನಾಥಮಿಹಾಗತಂ ॥ ೩ ॥

ಆಗತಂ ಗುರುಮಾರಾಧ್ಯಂ ದೃಷ್ಟ್ವಾ ಯೋ ದೃಪ್ತವಚ್ಚರೇತ್ ।
ದ್ರೋಹಿಣಸ್ತಸ್ಯ ಮೂಢಸ್ಯ ಪ್ರಾಯಶ್ಚಿತ್ತಂ ವಿಧೀಯತೇ ॥ ೪ ॥

ಇತಿ ಶ್ರುತ್ವಾ ವಚಃ ಕ್ರುದ್ಧೋ ಬಹಿಃ ಶಾಂತವದಾಚರನ್ ।
ಸ್ವಸ್ತಿ ತೇ ಸ್ವಾಗತಂ ವತ್ಸ ತಿಷ್ಠ ಪೀಠಮಿತೋ ವಿಶ ॥ ೫ ॥

ಕಿಮು ತೇ ವ್ಯಗ್ರವದ್ವಕ್ತ್ರಂ ವಿಭಾತಿ ವಿಷಮೇಕ್ಷಣಂ ।
ಕಿಮುತೇ ವ್ಯಗ್ರವದ್ವಕ್ತ್ರಂ ವಿಭಾತಿ ವಿಷಮೇಕ್ಷಣಂ ।

॥ ಬ್ರಹ್ಮೋವಾಚ ॥

ವತ್ಸ ವಿಷ್ಣೋ ಮಹಾಮಾನಮಾಗತಂ ಕಾಲವೇಗತಃ ॥ ೬ ॥

ಪಿತಾಮಹಶ್ಚ ಜಗತಃ ಪಾತಾ ಚ ತವ ವತ್ಸಕೆ ।

---

೩. ಎಲೈ ಪುರುಷನೇ ನೀನು ಯಾರು ? ನನ್ನನ್ನು ನೋಡಿದರೂ ಗರ್ವಿಷ್ಠನಾಗಿ ಮಲಗಿರುವೆ? ಎಲೈ ವತ್ಸ ಏಳು. ಇಲ್ಲಿಗೆ ಬಂದಿರುವ ನಿನ್ನ ನಾಥನಾದ ನನ್ನನ್ನು ನೋಡುವವನಾಗು.

೪. ಆರಾಧಿಸಲು ಯೋಗ್ಯನಾದ ಗುರುವು ಬಂದಿರುವುದನ್ನು ನೋಡಿಯೂ ಯಾವನು ಗರ್ವಿಷ್ಠನಂತೆ ಆಚರಿಸುವನೋ ಗುರುದ್ರೋಹಿಯೂ, ಮೂಢನೂ ಆದ ಅವನಿಗೆ ಪ್ರಾಯಶ್ಚಿತ್ತವನ್ನು ಹೇಳಿರುವುದು ಎನ್ನಲು,

೫. ಈ ರೀತಿಯಾದ ಬ್ರಹ್ಮನ ಮಾತುಗಳನ್ನು ಕೇಳಿ ಕೋಪಗೊಂಡಿದ್ದರೂ ವಿಷ್ಣುವು ಹೊರಗೆ ತುಂಬಾ ಶಾಂತನಂತೆ ನಟಿಸುತ್ತಾ ಎಲೈ ವತ್ಸ! ನಿನಗೆ ಮಂಗಳ ವಾಗಲಿ, ಸುಖಾಗಮನವೇ! ಈ ಪೀಠದಲ್ಲಿ ಕುಳಿತುಕೊಳ್ಳುವವನಾಗು.

೬. ಅಲ್ಲದೆ ನಿನ್ನ ಮುಖವು ಚಿಂತಾಯುಕ್ತವಾಗಿಯೂ, ಚಂಚಲವಾದ ದೃಷ್ಟಿಯುಳ್ಳದ್ದಾಗಿಯೂ ಕಾಣಿಸುತ್ತಿರುವುದು. ಇದಕ್ಕೆ ಕಾರಣವೇನು ? ಎಂದು ಕೇಳಿದನು.

೭. ಬ್ರಹ್ಮನು ಹೇಳಿದನು :—ವತ್ಸನಾದ ಎಲೈ ವಿಷ್ಣು ! ಕಾಲಮಹಿಮೆಯಿಂದ ನಿನಗೆ ತುಂಬಾ ಗರ್ವವು ಬಂದಿರುವುದು. ಆದರೆ ನಾನು ಜಗತ್ತಿಗೆ ತಾತನು ನಿನ್ನನ್ನೂ ಜಗತ್ತನ್ನೂ ರಕ್ಷಿಸುವವನು ಇದನ್ನೆಲ್ಲಾ ನೀನು ಮರೆತಿರುವೆಯಲ್ಲ ಎಂದನು.

॥ ವಿಷ್ಣುರುವಾಚ ॥
ಮತ್ಸ್ಥಂ ಜಗದಿದಂ ವತ್ಸ ಮನುಷೇ ತ್ವಂ ಹಿ ಚೋರವತ್ ॥ ೭ ॥

ಮನ್ನಾಭಿಕಮಲಾಜ್ಜಾತಃ ಪುತ್ರಸ್ತ್ವಂ ಭಾಷಸೇ ವೃಥಾ ।
॥ ನಂದಿಕೇಶ್ವರ ಉವಾಚ ॥
ಏವಂ ಹಿ ವದತೋಸ್ತತ್ರ ಮುಗ್ಧಯೋರಜಯೋಸ್ತದಾ ॥ ೮ ॥

ಅಹಮೇವ ವರೋ ನ ತ್ವಮಹಂ ಪ್ರಭುರಹಂ ಪ್ರಭುಃ ।
ಪರಸ್ಪರಂ ಹಂತುಕಾಮೌ ಚಕ್ರತುಃ ಸಮರೋದ್ಯಮಂ ॥ ೯ ॥

ಯುಯುಧಾತೇಽಮರೌ ವೀರೌ ಹಂಸಪಕ್ಷೀಂದ್ರವಾಹನೌ ।
ವೈರಂಚ್ಯಾ ವೈಷ್ಣವಾಶ್ಚೈವಂಮಿಥೋ ಯುಯುಧಿರೇ ತದಾ ॥ ೧೦ ॥

ತಾವದ್ವಿಮಾನಗತಯಃ ಸರ್ವಾ ವೈ ದೇವಜಾತಯಃ ।
ದಿದೃಕ್ಷವಃ ಸಮಾಜಗ್ಮುಃ ಸಮರಂ ತಂ ಮಹಾದ್ಭುತಂ ॥ ೧೧ ॥

---

೮. ವಿಷ್ಣುವು ಹೇಳಿದನು :—ಎಲೈ ವತ್ಸನಾದ ಬ್ರಹ್ಮನೆ! ಜಗತ್ತೆಲ್ಲವೂ ನನ್ನಲ್ಲಿಯೇ ಇರುವುದು. ಹೀಗಿರಲು ನೀನು ಕಳ್ಳನಂತೆ ಸುಳ್ಳನ್ನಾಡುತ್ತಿರುವೆ ನನ್ನ ನಾಭಿಕಮಲದಿಂದ ಜನಿಸಿದ ಪುತ್ರನು ನೀನು. ವ್ಯರ್ಥವಾಗಿ ಮಾತನಾಡುತ್ತಿರುವೆಯಲ್ಲಾ?

೯. ನಂದೀಕೇಶ್ವರನು ಹೇಳಿದನು :—ಹೀಗೆ ಆ ಬ್ರಹ್ಮ ವಿಷ್ಣುಗಳು ನಾನೇ ಶ್ರೇಷ್ಠನು, ನಾನೇ ಪ್ರಭುವು, ಎಂದು ವಿವೇಕವಿಲ್ಲದೆ ವಿವಾದವಾಡುತ್ತಾ ಪರಸ್ಪರವಾಗಿ ಕೊಲ್ಲಲಿಚ್ಛೆಯಿಂದ ಯುದ್ಧಕ್ಕೆ ಸಿದ್ಧರಾದರು.

೧೦. ವೀರರೂ ಅಮರ (ಮರಣವಿಲ್ಲದವರು) ರೂ ಆದ ಆ ಬ್ರಹ್ಮ ವಿಷ್ಣುಗಳು ಹಂಸ ಮತ್ತು ಗರುಡ ಇವುಗಳನ್ನೇರಿ ಯುದ್ಧಮಾಡತೊಡಗಿದರು. ಆಗ ಬ್ರಹ್ಮನ ಕಡೆಯ ಗಣಗಳೂ ವೈಷ್ಣವ ಗಣಗಳೂ ಸಹ ಪರಸ್ಪರ ಯುದ್ಧಮಾಡಿದರು.

೧೧. ಮತ್ತು ಆಗ ದೇವತೆಗಳೆಲ್ಲರೂ ಆ ಅತ್ಯಾಶ್ಚರ್ಯಕರವಾದ ಯುದ್ಧವನ್ನು ನೋಡಲು ವಿಮಾನದಿಂದ ಅಲ್ಲಿಗೆ ಬಂದರು.

ಕ್ಷಿಪಂತಃ ಪುಷ್ಪವರ್ಷಾಣಿ ಪಶ್ಯಂತಃ ಸ್ವೈರಮಂಬರೆ ।
ಸುಪರ್ಣವಾಹನಸ್ತತ್ರ ಕ್ರುದ್ಧೋ ವೈ ಬ್ರಹ್ಮವಕ್ಷಸಿ ॥ ೧೨ ॥

ಮುಮೋಚ ಬಾಣಾನಸಹಾನಸ್ತ್ರಾಂಶ್ಚ ವಿವಿಧಾನ್ ಬಹೂನ್ ।
ಮುಮೋಚಾಥ ವಿಧಿಃ ಕ್ರುದ್ಧೋ ವಿಷ್ಣೋರುರಸಿ ದುಃಸಹಾನ್ ॥ ೧೩ ॥

ಬಾಣಾನನಲಸಂಕಾಶಾನಸ್ತ್ರಾಂಶ್ಚ ಬಹುಶಸ್ತದಾ ।
ತದಾಶ್ಚರ್ಯಮಿತಿ ಸ್ಪಷ್ಟಂ ತಯೋಃ ಸಮರಗೋಚರಂ ॥ ೧೪ ॥

ಸಮೀಕ್ಷ್ಯ ದೈವತಗಣಾಃ ಶಶಂಸುರ್ಭೃಶಮಾಕುಲಾಃ ।
ತತೋ ವಿಷ್ಣುಃ ಸುಸಂಕ್ರುದ್ಧಃ ಶ್ವಸನ್ ವ್ಯಸನಕರ್ಶಿತಃ ॥ ೧೫ ॥

ಮಾಹೇಶ್ವರಾಸ್ತ್ರಂ ಮತಿಮಾನ್ ಸಂದಧೇ ಬ್ರಹ್ಮಣೋಪರಿ ।
ತತೋ ಬ್ರಹ್ಮಾ ಭೃಶಂ ಕ್ರುದ್ಧಃ ಕಂಪಯನ್ ವಿಶ್ವಮೇವ ಹಿ ॥ ೧೬ ॥

---

೧೨. ಆ ದೇವತೆಗಳು ಬ್ರಹ್ಮವಿಷ್ಣುಗಳ ಯುದ್ಧವನ್ನು ಯಥೇಚ್ಛವಾಗಿ ಆಕಾಶದಿಂದ ನೋಡುತ್ತಾ ಅವರ ಮೇಲೆ ಹೂವಿನ ಸುರಿಮಳೆಯನ್ನು ಗೈಯ್ಯುತ್ತಿದ್ದರು. ಆಗ ವಿಷ್ಣುವು ಕೋಪಗೊಂಡವನಾಗಿ ಬ್ರಹ್ಮನ ಎದೆಗೆ ಸಹಿಸಲಸಾಧ್ಯವಾದ ಅನೇಕ ಬಾಣಗಳನ್ನೂ ಅನೇಕ ವಿಧವಾದ ಅಸ್ತ್ರಗಳನ್ನೂ ಪ್ರಯೋಗಿಸಿದನು.

೧೩. ಬಳಿಕ ಬ್ರಹ್ಮನೂ ಸಹ ಕೋಪಗೊಂಡು ಸಹಿಸಲಸಾಧ್ಯವಾದಂತಹ ಅನೇಕ ಬಗೆಯ ಬಾಣಗಳನ್ನೂ ಅಗ್ನಿಯಂತೆ ಉರಿಯುತ್ತಲಿರುವ ಅಸ್ತ್ರಗಳನ್ನೂ ವಿಷ್ಣುವಿನ ಎದೆಯಲ್ಲಿ ಬಹುವಾಗಿ ಪ್ರಯೋಗಿಸಿದನು.

೧೪. ಈ ರೀತಿಯಾದ ಆ ಬ್ರಹ್ಮನಾರಾಯಣರ ಸಮರ ವ್ಯಾಪಾರವನ್ನು ನೋಡಿ ದೇವತೆಗಳು ಇದು ಆಶ್ಚರ್ಯವು, ಅತ್ಯಾಶ್ಚರ್ಯಕರವಾಗಿರುವುದು ಎಂದು ಬಹುವಾಗಿ ಹೊಗಳಿದರು. ಮತ್ತು ಮುಂದೇನಾಗುವುದೋ? ಎಂದು ಭಯ ಸಂಭ್ರಾಂತರಾದರು

೧೫. ಬಳಿಕ ವಿಷ್ಣುವು ಬ್ರಹ್ಮನ ಬಾಣದ ಹೊಡೆತಗಳಿಂದ ದುಃಖಗೊಂಡು ನಿಟ್ಟುಸಿರನ್ನು ಬಿಡುತ್ತಾ ಕೋಪಗೊಂಡು ಮಾಹೇಶ್ವರಾಸ್ತ್ರವನ್ನು ಬ್ರಹ್ಮನ ಮೇಲೆ ಪ್ರಯೋಗಿಸಿದರು.

೧೬. ಆಗ ಬ್ರಹ್ಮನೂ ಸಹ ಕೋಪಗೊಂಡು ಜಗತ್ತನ್ನೇ ಕಂಪಿಸುವಂತಹ ಘೋರವಾದ ಪಾಶುಪತವೆಂಬ ಅಸ್ತ್ರವನ್ನು ವಿಷ್ಣುವಿನ ಎದೆಗೆ ಪ್ರಯೋಗಿಸಿದನು.

ಅಸ್ತ್ರಂ ಪಾಶುಪತಂ ಘೋರಂ ಸಂದಧೇ ವಿಷ್ಣುವಕ್ಷಸಿ ।
ತತಸ್ತದುತ್ಥಿತಂ ವ್ಯೋಮ್ನಿ ತಪನಾಯುತಸನ್ನಿಭಂ ॥ ೧೭ ॥

ಸಹಸ್ರಮುಖಮತ್ಯುಗ್ರಂ ಚಂಡವಾತಭಯಂಕರಂ ।
ಅಸ್ತ್ರದ್ವಯಮಿದಂ ತತ್ರ ಬ್ರಹ್ಮವಿಷ್ಣೋರ್ಭಯಂಕರಂ ॥ ೧೮ ॥

ಇತ್ಥಂ ಬಭೂವ ಸಮರಂ ಬ್ರಹ್ಮವಿಷ್ಣ್ವೋಃ ಪರಸ್ಪರಂ ।
ತತೋ ದೇವಗಣಾಃ ಸರ್ವೇ ವಿಷಣ್ಣಾ ಭೃಶಮಾಕುಲಾಃ ॥ ೧೯ ॥

ಊಚುಃ ಪರಸ್ಪರಂ ತಾತ ರಾಜಕ್ಷೋಭೇ ಯಥಾ ದ್ವಿಜಾಃ ।
ಸೃಷ್ಟಿಃ ಸ್ಥಿತಿಶ್ಚ ಸಂಹಾರಸ್ತಿರೋಭಾವೋऽಪ್ಯನುಗ್ರಹಃ ॥ ೨೦ ॥

ಯಸ್ಮಾತ್ಪ್ರವರ್ತತೇ ತಸ್ಮೈ ಬ್ರಹ್ಮಣೇ ಚ ತ್ರಿಶೂಲಿನೇ ।
ಅಶಕ್ಯಮನ್ಯೈರ್ಯದನುಗ್ರಹಂ ವಿನಾ
ತೃಣಕ್ಷಯೋऽಪ್ಯತ್ರ ಯದೃಚ್ಛಯಾ ಕ್ವಚಿತ್ ॥ ೨೧ ॥

---

೧೭-೧೮. ಆಗ ಬ್ರಹ್ಮವಿಷ್ಣುಗಳು ಪ್ರಯೋಗಿಸಿದ ಆ ಮಾಹೇಶ್ವರಾಸ್ತ್ರ ಮತ್ತು ಪಾಶುಪತಾಸ್ತ್ರ ಇವುಗಳು ಆಕಾಶದಲ್ಲಿ ಹತ್ತು ಸಾವಿರ ಸೂರ್ಯರಂತೆ ತೇಜಸ್ಸುಗಳುಳ್ಳವುಗಳಾಗಿಯೂ ಸಾವಿರಾರು ಮುಖಗಳುಳ್ಳವುಗಳಾಗಿಯೂ ಸಹಿಸಲಸಾಧ್ಯವಾದ ಗಾಳಿಯುಳ್ಳವುಗಳಾಗಿಯೂ ಉಜ್ಜೃಂಭಿಸಿದುವು. ಆಕಾಶವನ್ನೆಲ್ಲಾ ವ್ಯಾಪಿಸಿದುವು. ಈ ರೀತಿಯಾಗಿ ಬ್ರಹ್ಮನಾರಾಯಣರಿಗೆ ಪರಸ್ಪರವಾಗಿ ಯುದ್ಧವಾಯಿತು.

೧೯. ಬಳಿಕ ದೇವತೆಗಳೆಲ್ಲರೂ ಭಯದಿಂದ ಸಂಭ್ರಾಂತರೂ, ದುಃಖಿತರೂ ಆಗಿ ರಾಜರಿಗೆ ಪರಸ್ಪರ ಕ್ಷೋಭ (ಯುದ್ಧಾದಿಗಳು) ಗಳು ಆದರೆ ಪ್ರಜೆಗಳು ಆಡಿಕೊಳ್ಳುವಂತೆ ಪರಸ್ಪರ ಹೀಗೆ ಆಡಿಕೊಂಡರು.

೨೦. ಸೃಷ್ಟಿ, ಪಾಲನೆ ಮತ್ತು ಸಂಹಾರ ಇವುಗಳೂ ನಿಗ್ರಹ ಮತ್ತು ಅನುಗ್ರಹ ಇವಗಳೂ ಸಹ ಯಾವನಿಂದ ಆಗುವುವೋ ಆ ಬ್ರಹ್ಮಸ್ವರೂಪಿಯಾದ ಶಿವನಿಗೆ ನಮಸ್ಕಾರವು.

೨೧. ಆ ಶಿವನು ಹೊರತು ಮಿಕ್ಕವರು ತಮ್ಮ ಸ್ವಾತಂತ್ರ್ಯದಿಂದ ಒಂದು ಹುಲ್ಲುಕಡ್ಡಿಯನ್ನೂ ಸಹ ನಾಶಮಾಡಲಾರರು.

ಇತಿ ದೇವಾ ಭಯಂ ಕೃತ್ವಾ ವಿಚಿನ್ವಂತಃ ಶಿವಕ್ಷಯಂ ।
ಜಗ್ಮುಃ ಕೈಲಾಸಶಿಖರಂ ಯತ್ರಾಸ್ತೇ ಚಂದ್ರಶೇಖರಃ ॥ ೨೨ ॥

ದೃಷ್ಟ್ವೈವಮುಮುರಾ ಹೃಷ್ಟಾಃ ಪದಂ ತತ್ಪಾರಮೇಶ್ವರಂ ।
ಪ್ರಣೇಮುಃ ಪ್ರಣವಾಕಾರಂ ಪ್ರವಿಷ್ಟಾಸ್ತತ್ರ ಸದ್ಮನಿ ॥ ೨೩ ॥

ತೇಽಪಿ ತತ್ರ ಸಭಾಮಧ್ಯೇ ಮಂಟಪೇ ಮಣಿವಿಷ್ಟರೇ ।
ವಿರಾಜಮಾನಮುಮಯಾ ದದೃಶುರ್ದೇವಪುಂಗವಂ ॥ ೨೪ ॥

ಸವ್ಯೋತ್ತರೇತರಪದಂ ತದರ್ಪಿತಕರಾಂಬುಜಂ ।
ಸ್ವಗಣೈಃ ಸರ್ವತೋ ಜುಷ್ಟಂ ಸರ್ವಲಕ್ಷಣಲಕ್ಷಿತಂ ॥ ೨೫ ॥

ವೀಜ್ಯಮಾನಂ ವಿಶೇಷಜ್ಞೈಃ ಸ್ತ್ರೀಜನೈಸ್ತ್ರೀವ್ರಭಾವನೈಃ ।
ಶಸ್ಯಮಾನಂ ಸದಾ ವೇದೈರನುಗೃಹ್ಣಂತಮೀಶ್ವರಂ ॥ ೨೬ ॥

---

೨೨. ಹೀಗೆ ಯೋಚಿಸಿ ಭಯಸಂಭ್ರಾಂತರಾದ ದೇವತೆಗಳು ಶಿವನನ್ನು ನೋಡಲಪೇಕ್ಷೆಯಿಂದ ಶಿವನು ವಾಸವಾಗಿರುವ ಕೈಲಾಸಶಿಖರಕ್ಕೆ ತೆರಳಿದರು.

೨೩. ಪರಮೇಶ್ವರಸ್ಥಾನವಾದ ಆ ಕೈಲಾಸಶಿಖರವನ್ನು ನೋಡಿಯೇ ಸಂತೋಷಗೊಂಡವರಾಗಿ ದೇವತೆಗಳು ಮುಂದೆ ಶಿವನ ಮನೆಯನ್ನು ಪ್ರವೇಶಿಸಿ ಅಲ್ಲಿ ಓಂಕಾರಸ್ವರೂಪನಾದ ಶಿವನನ್ನು ನಮಸ್ಕರಿಸಿದರು.

೨೪. ಆ ಶಿವಗೃಹದಲ್ಲಿ ಶಿವನು ಸಭೆಯ ಮಧ್ಯದಲ್ಲಿ ಮಣಿಮಯವಾದ ಆಸನವುಳ್ಳ ಮಂಟಪದಲ್ಲಿ ಪಾರ್ವತಿಯೊಡನೆ ಪ್ರಕಾಶಿಸುತ್ತಲಿದ್ದನು. ಇಂತಹ ದೇವೋತ್ತಮನಾದ ಶಂಕರನನ್ನು ದೇವತೆಗಳು ನೋಡಿದರು.

೨೫. ಆ ಶಿವನು ಬಲಕಾಲಿನ (ತೊಡೆಯ) ಮೇಲೆ ಎಡಕಾಲನ್ನು ಸೇರಿಸಿ ಅದರಲ್ಲಿ ಕೈಗಳನ್ನಿಟ್ಟುಕೊಂಡು ಕುಳಿತ್ತಿದ್ದನು. ಮತ್ತು ಸಕಲ ಲಕ್ಷಣಗಳಿಂದಲೂ ಆ ಶಿವನು ಶೋಭಿಸುತ್ತಲಿದ್ದನು. ಅವನ ಸುತ್ತಲೂ ಪ್ರಮಥಗಣಗಳು ನೆರೆದು ಓಲೈಸುತ್ತಿದ್ದರು.

೨೬. ವಿಶೇಷವಾದ ಜ್ಞಾನವುಳ್ಳ ಸ್ತ್ರೀಯರು ತುಂಬಾ ಭಕ್ತಿಯಿಂದ ಶಿವನಿಗೆ ಬೀಸಣಿಗೆಯಿಂದ ಗಾಳಿಯನ್ನು ಬೀಸುತ್ತಿದ್ದರು. ವೇದ ಪುರುಷರು ಸದಾ ಸ್ತುತಿಸುತ್ತಿದ್ದರು. ಭಕ್ತರನ್ನು ಅವನು ಅನುಗ್ರಹಿಸುತ್ತಲಿದ್ದನು.

ದೃಷ್ಟ್ವೈವಮೀಶಮಮರಾಃ ಸಂತೋಷಸಲಿಲೇಕ್ಷಣಾಃ ।
ದಂಡವದ್ದೂರತೋ ವತ್ಸ ನಮಶ್ಚಕ್ರುರ್ಮಹಾಗಣಾಃ ॥ ೨೭ ॥

ತಾನವೇಕ್ಷ್ಯ ಪತಿರ್ದೇವಾನ್ ಸಮೀಪೇ ಚಾಹ್ವಯದ್ಗಣೈಃ ।
ಅಥ ಸಂಹ್ಲಾದಯನ್ ದೇವಾನ್ ದೇವೋ ದೇವಶಿಖಾಮಣಿಃ ।
ಅವೋಚದರ್ಥಗಂಭೀರಂ ವಚನಂ ಮಧುಮಂಗಲಂ ॥ ೨೮ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ
ಷಷ್ಠೋಽಧ್ಯಾಯಃ.

---

೨೭. ಈ ರೀತಿಯಾಗಿರುವ ಈಶ್ವರನನ್ನು ನೋಡಿ ದೇವತೆಗಳು ಸಂತೋಷದಿಂದ ಆನಂದಬಾಷ್ಪವನ್ನು ಸುರಿಸುತ್ತಾ ದೂರದಲ್ಲಿಯೇ ದಂಡಾಕಾರವಾಗಿ ಶಿವನನ್ನು ನಮಸ್ಕರಿಸಿದರು.

೨೮. ದೂರದಲ್ಲಿಯೇ ನಮಸ್ಕರಿಸಿ ನಿಂತಿರುವ ದೇವತೆಗಳನ್ನು ನೋಡಿ ಶಂಕರನು ಅವರನ್ನು ಗಣಗಳ ಮೂಲಕ ತನ್ನ ಸಮೀಪಕ್ಕೆ ಕರೆಸಿಕೊಂಡು ದೇವತೆಗಳನ್ನು ಸಂತೋಷಗೊಳಿಸಲು ಅರ್ಥಯುಕ್ತವೂ ಮಂಗಲವೂ ಆದಂತಹ ಮಾತನ್ನು ಮಧುರವಾಗಿ ಹೀಗೆ ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಸಪ್ತಮೋಽಧ್ಯಾಯಃ

॥ ಈಶ್ವರ ಉವಾಚ ॥

ವತ್ಸಕಾಃ ಸ್ವಸ್ತಿ ವಃ ಕಚ್ಚಿದ್ವರ್ತತೇ ಮಮ ಶಾಸನಾತ್ ।
ಜಗಚ್ಚ ದೇವತಾವಂಶಃ ಸ್ವಸ್ವಕರ್ಮಣಿ ಕಿಂ ನ ವಾ ॥ ೧ ॥

ಪ್ರಾಗೇವ ವಿದಿತಂ ಯುದ್ಧಂ ಬ್ರಹ್ಮವಿಷ್ಣ್ವೋರ್ಮಯಾ ಸುರಾಃ ।
ಭವತಾಮಭಿತಾಪೇನ ಪೌನರುಕ್ತ್ಯೇನ ಭಾಷಿತಂ ॥ ೨ ॥

---

## ಏಳನೆಯ ಅಧ್ಯಾಯವು.

೧. ಈಶ್ವರನು ಹೇಳಿದನು :—ಎಲೈ ವತ್ಸ (ಪುತ್ರ) ರಾದ ದೇವತೆಗಳೆ! ನೀವುಗಳೂ ಜಗತ್ತು ಸಹ ನನ್ನ ನಿಯಮದಂತೆ ಸುಖವಾಗಿರುವಿರಾ? ದೇವ ಕುಲವೂ ಸಹ ತನ್ನ ಕರ್ಮವನ್ನು ಮಾಡುತ್ತಾ ಕ್ಷೇಮದಿಂದಿರುವುದೇ ?

೨. ಬ್ರಹ್ಮ ವಿಷ್ಣುಗಳು ಯುದ್ಧಮಾಡುತ್ತಲಿರುವುದು ನನಗೆ ಮೊದಲೇ ತಿಳಿದಿರುವುದು. ನಿಮ್ಮ ವ್ಯಾಕುಲತೆಯಿಂದ ತಿರುಗಿ ಇನ್ನೊಮ್ಮೆ ಹೇಳಿದಂತಾಯಿತು.

ಇತಿ ಸಸ್ಮಿತಯಾ ಮಾಧ್ವ್ಯಾ ಕುಮಾರಪರಿಭಾಷಯಾ ।
ಸಮತೋಷಯದಂಬಾಯಾಃ ಸ ಪತಿಸ್ತತ್ಸುರವ್ರಜಂ ॥ ೩ ॥

ಅಥ ಯುದ್ಧಾಂಗಣಂ ಗಂತುಂ ಹರಿಧಾತ್ರೋರಧೀಶ್ವರಃ ।
ಆಜ್ಞಾಪಯದ್ಗಣೇಶಾನಾಂ ಶತಂ ತತ್ರೈವ ಸಂಸದಿ ॥ ೪ ॥

ತತೋ ವಾದ್ಯಂ ಬಹುವಿಧಂ ಪ್ರಯಾಣಾಯ ಪರೇಶಿತುಃ ।
ಗಣೇಶ್ವರಾಶ್ಚ ಸನ್ನದ್ಧಾ ನಾನಾವಾಹನಭೂಷಣಾಃ ॥ ೫ ॥

ಪ್ರಣವಾಕಾರಮಾದ್ಯಂತಂ ಪಂಚಮಂಡಲಮಂಡಿತಂ ।
ಆರುರೋಹ ರಥಂ ಭದ್ರಮಂಬಿಕಾಪತಿರೀಶ್ವರಃ
ಸಸೂನುಗಣಮಿಂದ್ರಾದ್ಯಾಃ ಸರ್ವೇಽಪ್ಯನುಯಯುಃ ಸುರಾಃ । ॥ ೬ ॥

ಚಿತ್ರಧ್ವಜವ್ಯಜನಚಾಮರಪುಷ್ಪವರ್ಷ-
ಸಂಗೀತನೃತ್ಯನಿವಹೈರಪಿ ವಾದ್ಯವರ್ಗೈಃ

---

೩. ಹೀಗೆ ಜಗನ್ಮಾತೆ(ಪಾರ್ವತಿ)ಯ ಪತಿಯಾದ ಪರಮೇಶ್ವರನು, ಚಿಕ ಮಕ್ಕಳಿಗೆ ಹೇಳುವಂತಹ ಮಧುರವೂ, ಮಂದಹಾಸ ಪೂರ್ವಕವೂ, ಆದ ಮಾತುಗಳಿಂದ ಆ ದೇವತೆಗಳನ್ನು ಸಂತೋಷಗೊಳಿಸಿದನು.

೪. ಬಳಿಕ ಈಶ್ವರನು, ವಿಷ್ಣು ಬ್ರಹ್ಮರು ಯುದ್ಧಮಾಡುತ್ತಲಿರುವಲ್ಲಿಗೆ (ತಾನು) ಹೋಗಲು ಅಲ್ಲಿ ಸೇರಿರುವ ತನ್ನ ನೂರು ಗಣಗಳಿಗೆ ಅಪ್ಪಣೆಮಾಡಿದನು.

೫. ಆ ಪ್ರಮಥಗಣಗಳು ಪರಮೇಶ್ವರನ ಪ್ರಯಾಣಕ್ಕೆ ಮಂಗಳವಾದ್ಯಗಳನ್ನು ಬಾರಿಸುತ್ತಾ ಅನೇಕ ವಾಹನ ಮತ್ತು ಅಲಂಕಾರಗಳನ್ನು ಧರಿಸಿ ಸಿದ್ಧರಾದರು.

೬. ಆಗ ಪಾರ್ವತೀಪತಿಯಾದ ಈಶ್ವರನು ಮೊದಲಿನಿಂದ ಕೊನೆಯವರೆವಿಗೂ ಓಂಕಾರದ ಆಕಾರವುಳ್ಳ ಮತ್ತು ಐದು ಮಂಡಲಗಳಿಂದ ಕೂಡಿದುದೂ ಓಂಕಾರದ ಆಕಾರವುಳ್ಳ ಮತ್ತು ಐದು ಮಂಗಳಸ್ವರೂಪವೂ ಆದಂತಹ ರಥವನ್ನೇರಿದನು. ಪುತ್ರ ಮತ್ತು ಗಣಗಳೊಡನೆ ಹೊರಟಿರುವ ಈಶ್ವರನನ್ನು ಇಂದ್ರನೇ ಮೊದಲಾದ ದೇವತೆಗಳೂ ಸಹ ಹಿಂಬಾಲಿಸಿ ಹೊರಟರು.

೭. ನಾನಾವರ್ಣವುಳ್ಳ ಧ್ವಜ ವ್ಯಜನ ( ಬೀಸಣಿಗೆ) ಚಾಮರ ಪುಷ್ಪ ವೃಷ್ಟಿ, ಸಂಗೀತ, ನರ್ತನ, ಮತ್ತು ಅನೇಕ ವಿಧವಾದ ವಾದ್ಯಗಳು ಇವುಗಳಿಂದ

ಸಂಮಾನಿತಃ ಪಶುಪತಿಃ ಪರಯಾ ಚ ದೇವ್ಯಾ
ಸಾಕಂ ತಯೋಃ ಸಮರಭೂಮಿಮಗಾತ್ಸಸೈನ್ಯಃ ॥ ೭ ॥

ಸಮಿಾಕ್ಷ್ಯ ತು ತಯೋರ್ಯುದ್ಧಂ ನಿಗೂಢೋಽಭ್ರಂ ಸಮಾಸ್ಥಿತಃ ।
ಸಮಾಪ್ತವಾದ್ಯನಿರ್ಘೋಷಃ ಶಾಂತೋರುಗಣನಿಃಸ್ವನಃ । ॥ ೮ ॥

ಅಥ ಬ್ರಹ್ಮಾಚ್ಯುತೌ ವೀರೌ ಹಂತುಕಾಮೌ ಪರಸ್ಪರಂ
ಮಾಹೇಶ್ವರೇಣ ಚಾಸ್ತ್ರೇಣ ತಥಾ ಪಾಶುಪತೇನ ಚ । ॥ ೯ ॥

ಅಸ್ತ್ರಜ್ವಾಲೈರಥೋ ದಗ್ಧಂ ಬ್ರಹ್ಮವಿಷ್ಣ್ವೋರ್ಜಗತ್ತ್ರಯಂ
ಈಶೋಽಪಿ ತಂ ನಿರೀಕ್ಷ್ಯಾಥ ಹ್ಯಕಾಲಪ್ರಳಯಂ ಭೃಶಂ । ॥ ೧೦ ॥

ಮಹಾನಲಸ್ತಂಭವಿಭೀಷಣಾಕೃತಿ-
ರ್ಬಭೂವ ತನ್ಮಧ್ಯತಲೇ ಸ ನಿಷ್ಕಲಃ ॥ ೧೧ ॥

---

ಸಂತುಷ್ಟನಾಗಿ ಪರಮೇಶ್ವರನು ಗಣಗಳೊಡನೆಯೂ ಪರಾಶಕ್ತಿಯಾದ ಪಾರ್ವತಿಯೊಡನೆಯೂ ಆ ಬ್ರಹ್ಮವಿಷ್ಣುಗಳು ಯುದ್ಧಮಾಡುತ್ತಲಿರುವ ಸ್ಥಳಕ್ಕೆ ತೆರಳಿದನು.

೮. ಆ ಯುದ್ಧಭೂಮಿಗೆ ಬಂದು ಈಶ್ವರನು ವಾದ್ಯಧ್ವನಿಯನ್ನು ನಿಲ್ಲಿಸಿ ಪ್ರಮಥಗಣಗಳನ್ನೂ ನಿಶ್ಶಬ್ದವಾಗಿರಿಸಿ ಗೂಢವಾಗಿ ಆಕಾಶದಲ್ಲಿ ಆ ಬ್ರಹ್ಮ ವಿಷ್ಣುಗಳ ಯುದ್ಧವನ್ನು ನೋಡುತ್ತ ಸ್ವಲ್ಪಕಾಲ ನಿಂತನು.

೯. ಆ ಸಮಯಕ್ಕೆ ಸರಿಯಾಗಿ ವೀರರಾದ ಬ್ರಹ್ಮ ಮತ್ತು ವಿಷ್ಣುಗಳು ಒಬ್ಬರನ್ನೊಬ್ಬರು ಕೊಲ್ಲಲಿಚ್ಛೆಯಿಂದ ಮಾಹೇಶ್ವರಾಸ್ತ್ರ ಮತ್ತು ಪಾಶುಪತಾಸ್ತ್ರಗಳನ್ನು ಪರಸ್ಪರ ಪ್ರಯೋಗಿಸಿದರು.

೧೦. ಆಗ ಬ್ರಹ್ಮ ವಿಷ್ಣುಗಳು ಪ್ರಯೋಗಿಸಿದ ಅಸ್ತ್ರಗಳ ಜ್ವಾಲೆಯಿಂದ ಮೂರು ಲೋಕಗಳೂ ದಹಿಸಲು ಪ್ರಾರಂಭವಾಯಿತು,

೧೧. ಹೀಗೆ ಅಕಾಲದಲ್ಲಿ ಜಗತ್ತು ನಾಶವಾಗುತ್ತಿರುವುದನ್ನು ನೋಡಿ ನಿರಾಕಾರನಾದ ಈಶ್ವರನು ಮಹಾ ಅಗ್ನಿರೂಪವಾದ ಸ್ತಂಭ (ಕಂಭ) ರೂಪನಾಗಿ ಬ್ರಹ್ಮ ವಿಷ್ಣುಗಳ ಮಧ್ಯದಲ್ಲಿ ಆವಿರ್ಭವಿಸಿದನು.

ಶೇ ಅಸ್ತ್ರೇ ಚಾಪಿ ಸಜ್ವಾಲೇ ಲೋಕಸಂಹರಣಕ್ಷಮೇ ।
ನಿಪೇತತುಃ ಕ್ಷಣೇನೈವ ಹ್ಯಾವಿರ್ಭೂತೇ ಮಹಾನಲೇ ॥ ೧೨ ॥

ದೃಷ್ಟ್ವಾ ತದದ್ಭುತಂ ಚಿತ್ರಮಸ್ತ್ರಶಾಂತಿಕರಂ ಶುಭಂ ।
ಕಿಮೇತದದ್ಭುತಾಕಾರಮಿತ್ಯೂಚುಶ್ಚ ಪರಸ್ಪರಂ ॥ ೧೩ ॥

ಅತೀಂದ್ರಿಯಮಿದಂ ಸ್ತಂಭಮಗ್ನಿರೂಪಂ ಕಿಮುತ್ಥಿತಂ
ಅಸ್ಯೋರ್ಧ್ವಮಪಿ ಚಾಧಶ್ಚ ಆವಯೋರ್ಲಕ್ಷ್ಯಮೇವ ಹಿ ॥ ೧೪ ॥

ಇತಿ ವ್ಯವಸ್ಥಿತೌ ವೀರೌ ಮಿಲಿತೌ ವೀರಮಾನಿನೌ ।
ತತ್ಪರೌ ತತ್ಪರೀಕ್ಷಾರ್ಥಂ ಪ್ರತಸ್ಥಾತೇಽಥ ಸತ್ವರಂ ॥ ೧೫ ॥

ಆವಯೋರ್ಮಿಶ್ರಯೋಸ್ತತ್ರ ಕಾರ್ಯಮೇಕಂ ನ ಸಂಭವೇತ್ ।
ಇತ್ಯುಕ್ತ್ವಾ ಸೂಕರತನುರ್ವಿಷ್ಣುಸ್ತಸ್ಯಾದಿಮಾಯಿವಾನ್ ॥ ೧೬ ॥

---

೧೨. ಆ ಕೂಡಲೇ ಭಯಂಕಾರವಾದ ಜ್ವಾಲೆಯಿಂದ ಲೋಕವನ್ನು ದಹಿಸುತ್ತ ಆ ಮಾಹೇಶ್ವರಾಸ್ತ್ರ ಮತ್ತು ಪಾಶುಪತಾಸ್ತ್ರಗಳು ಮಹಾಗ್ನಿರೂಪವಾದ ಆ ಸ್ತಂಭದಲ್ಲಿ ಶಾಂತವಾಗಿ ಬಿದ್ದವು.

೧೩. ಈ ರೀತಿಯಾಗಿ ಅಸ್ತ್ರಗಳನ್ನು ಶಾಂತಗೊಳಿಸಿದ ಅತ್ಯಾಶ್ಚರ್ಯವಾದ ಸ್ತಂಭವನ್ನು ನೋಡಿ ಬ್ರಹ್ಮ ವಿಷ್ಣುಗಳು ಅದ್ಭುತವಾದ ಆಕಾರವುಳ್ಳ ಈ ಸ್ತಂಭ ವಾವುದು? ಇದು ಇಲ್ಲಿಗೆ ಹೇಗೆ ಬಂದಿತು? ಎಂದು ಪರಸ್ಪರ ಮಾತಾಡಿಕೊಂಡರು.

೧೪. ಅಗ್ನಿಸ್ವರೂಪವಾದ ಈ ಕಂಭವು ತಿಳಿವಳಿಕೆಗೆ ನಿಲುಕದಂತಹ ಸ್ವರೂಪ ವುಳ್ಳದಾಗಿದೆ, ಇದು ಇಲ್ಲಿ ಆವಿರ್ಭವಿಸಿದುದೇತಕ್ಕೆ? ಈ ಕಂಭದ ತಲೆಯಾಗಲಿ ಕೆಳ ಭಾಗವಾಗಲಿ (ಬುಡ) ನಮಗೆ ಕಾಣಿಸುತ್ತಲೇ ಇಲ್ಲವಲ್ಲಾ.

೧೫. ಈ ರೀತಿ ಆಲೋಚಿಸಿ ವೀರರಾದ ಆ ಬ್ರಹ್ಮ ವಿಷ್ಣುಗಳು ತಮ್ಮ ಬಲದ ಗರ್ವದಿಂದ ಆ ಸ್ತಂಭದ ಆದಿ ಮತ್ತು ಅಂತ್ಯಗಳನ್ನು (ಬುಡ ಮತ್ತು ಕೊನೆಯನ್ನು) ಪರೀಕ್ಷಿಸಲೋಸುಗ ಆ ಕೂಡಲೇ ಹೊರಟರು.

೧೬. ನಾವು ಈರ್ವರೂ ಸೇರಿ ಹೊರಟರೆ ಒಂದು ಕಾರ್ಯವೂ ಸಿದ್ಧಿಸಲಾರದು. ಆದುದರಿಂದ ಬೇರೆ ಬೇರೆ ಕಡೆಗೆ ಹೋಗೋಣವೆಂದು ವಿಷ್ಣುವು ವರಾಹಸ್ವರೂಪವನ್ನು

ತಥಾ ಬ್ರಹ್ಮಾ ಹಂಸತನುಸ್ತದಂತಂ ವೀಕ್ಷಿತುಂ ಯಯೌ ।
ಭಿತ್ವಾ ಪಾತಾಳನಿಲಯಂ ಗತ್ವಾ ದೂರತರಂ ಹರಿಃ ॥ ೧೭ ॥

ನಾಪಶ್ಯತ್ತಸ್ಯ ಸಂಸ್ಥಾನಂ ಸ್ತಂಭಸ್ಯಾನಲವರ್ಚಸಃ ।
ಶ್ರಾಂತಃ ಸ ಸೂಕರಹರಿಃ ಪ್ರಾಪ ಪೂರ್ವಂ ರಣಾಂಗಣಂ ॥ ೧೮ ॥

ಅಥ ಗಚ್ಛಂಸ್ತು ವ್ಯೋಮ್ನಾ ಚ ವಿಧಿಸ್ತಾತ ಪಿತಾ ತವ ।
ದದರ್ಶ ಕೇತಕೀಪುಷ್ಪಂ ಕಿಂಚಿದ್ವಿಚ್ಯುತಮದ್ಭುತಂ ॥ ೧೯ ॥

ಅತಿಸೌರಭ್ಯಮಮ್ಲಾನಂ ಬಹುವರ್ಷಚ್ಯುತಂ ತಥಾ ।
ಅನ್ವೀಕ್ಷ್ಯ ಚ ತಯೋಃ ಕೃತ್ಯಂ ಭಗವಾನ್ ಪರಮೇಶ್ವರಃ ॥ ೨೦ ॥

---

ಧರಿಸಿ ಆ ಸ್ತಂಭದ ಬುಡವನ್ನು ನೋಡಲು ಹೊರಟನು. ಬ್ರಹ್ಮನು ಹಂಸರೂಪವನ್ನು ಧರಿಸಿ ಆ ಕಂಭದ ಮೇಲಿನತುದಿಯನ್ನು ನೋಡಲು ತೆರಳಿದನು.

೧೭-೧೮. ಇತ್ತಲಾಗಿ ವರಾಹರೂಪವನ್ನು ಧರಿಸಿ ಹೊರಟ ಹರಿಯು ಪಾತಾಳಲೋಕವನ್ನು ಭೇದಿಸಿ ಬಹಳ ದೂರ ಹೋದನು. ಆದರೂ ಅಗ್ನಿಯಂತೆ ತೇಜೋರೂಪಿಯಾದ ಆ ಸ್ತಂಭದ ನೆಲೆಯೇ ಅವನಿಗೆ ಕಾಣಿಸಲಿಲ್ಲ. ಆದುದರಿಂದ ತುಂಬಾ ಬಳಲಿಬೆಂಡಾಗಿ ವರಾಹರೂಪಿಯಾದ ಆ ವಿಷ್ಣುವು ತಾವು ಯುದ್ಧಮಾಡಿದ ಭೂಮಿಗೆ ಹಿಂತಿರುಗಿ ಬಂದನು.

೧೯. ಅತ್ತಲಾಗಿ ನಿನ್ನ (ಸನತ್ಕುಮಾರನ) ತಂದೆಯಾದ ಬ್ರಹ್ಮನು ಹಂಸ ರೂಪದಿಂದ ಆಕಾಶಮಾರ್ಗದಲ್ಲಿ ಹೋಗುತ್ತಾ ಅಲ್ಲಿ ಮೇಲಿನಿಂದ ಕೆಳಗೆ ಬೀಳುತ್ತ ಲಿರುವ ಅದ್ಭುತವಾದ ಕೇದಗೆ ಹೂವೊಂದನ್ನು ನೋಡಿದನು. ಆ ಪುಷ್ಪವು ಸ್ವಲ್ಪವೂ ಬಾಡದೆಯೂ ತುಂಬಾ ಸುವಾಸನೆಯುಳ್ಳದುದೂ ಆಗಿದ್ದುದಲ್ಲದೆ ಅನೇಕವರ್ಷಗಳಿಂದ ಬೀಳುತ್ತಲಿತ್ತು.

೨೦. ಆ ಬ್ರಹ್ಮವಿಷ್ಣುಗಳು ತನ್ನ ಬುಡ ಮತ್ತು ಕೊನೆಗಳನ್ನು ನೋಡಲು ಹೊರಟಿರುವುದನ್ನು ನೋಡಿ ಭಗವಂತನಾದ ಸ್ತಂಭರೂಪೀ ಪರಮೇಶ್ವರನು ತನ್ನಲ್ಲಿಯೇ ನಕ್ಕನು. ಆಗ ಅವನ ಶಿರಸ್ಸು ಸ್ವಲ್ಪ ಅಲುಗಿತು.

ಪರಿಹಾಸಂ ತು ಕೃತವಾ೯ ಕಂಪನಾಚ್ಚಲಿತಂ ಶಿರಃ ।
ತಸ್ಮಾತ್ತಾವನುಗೃಹ್ಣಾತುಂ ಚ್ಯುತಂ ಕೇತಕಮುತ್ತಮಂ ॥ ೨೧ ॥

ಕಿಂ ತ್ವಂ ಪತಸಿ ಪುಷ್ಪೇಶ ಪುಷ್ಪರಾಟ್ ಕೇನ ವಾ ಧೃತಃ ।
ಆದಿಮಸ್ಯಾಪ್ರಮೇಯಸ್ಯ ಸ್ತಂಭಮಧ್ಯಾಚ್ಚ್ಯುತಶ್ಚಿರಂ ॥ ೨೨ ॥

ನ ಸಂಪಶ್ಯಾಮಿ ತಸ್ಮಾತ್ತ್ವಂ ಜಹ್ಯಾಶಾಮಂತದರ್ಶನೆ ।
ಅಸ್ಯಾಂತಸ್ಯ ಚ ಸೇವಾರ್ಥಂ ಹಂಸಮೂರ್ತಿರಿಹಾಗತಃ ॥ ೨೩ ॥

ಇತಃ ಪರಂ ಸಖೇ ಮೇsದ್ಯ ತ್ವಯಾ ಕರ್ತವ್ಯಮೀಪ್ಸಿತಂ ।
ಮಯಾ ಸಹ ತ್ವಯಾ ವಾಚ್ಯಮೇತದ್ವಿಷ್ಣೋಃಶ್ಚ ಸನ್ನಿಧೌ ॥ ೨೪ ॥

---

೨೧. ಆಗ ಅವನ ಶಿರಸ್ಸಿನಲ್ಲಿದ್ದ ಉತ್ತಮವಾದ ಕೇದಗೆ ಪುಷ್ಪವು ಬ್ರಹ್ಮ ವಿಷ್ಣುಗಳ ಅನುಗ್ರಹಕ್ಕಾಗಿ ಕೆಳಗೆ ಬಿದ್ದಿತು.

೨೨. ಬ್ರಹ್ಮನು ಆ ಕೇದಗೆಯನ್ನು ಕುರಿತು ಹೀಗೆ ಹೇಳಿದನು :—ಪುಷ್ಪರಾಜ ನಾದ ಕೇದಗೆಯೆ! ನೀನು ಎಲ್ಲಿಂದ ಬೀಳುತ್ತಲಿರುವೇ? ಇದುವರೆಗೆ ನಿನ್ನನ್ನು ಯಾರು ಧರಿಸಿದ್ದರು ?ಎನ್ನಲು ಅದಕ್ಕೆ ಕೇದಗೆಯು ಚಕ್ಷುಸ್ಸೇ ಮೊದಲಾದ ಪ್ರಮಾಣಗಳಿಂದ ತಿಳಿಯಲಸಾಧ್ಯವಾದ ಈ ಕಂಬದ ಮಧ್ಯದಿಂದ ಬಹಳ ಕಾಲದಿಂದ ಬೀಳುತ್ತಲಿರು ವೆನು. ಇದರ ನೆಲೆಯು ಇದುವರೆಗೂ ನನಗೇ ಕಾಣಿಸಲಿಲ್ಲ. ಆದುದರಿಂದ ನೀನೂ (ಬ್ರಹ್ಮನೂ) ಸಹ ಈ ಸ್ತಂಭದ ಕೊನೆಯನ್ನು ನೋಡುವ ಆಶೆಯನ್ನು ಬಿಡು ಎಂದು ಹೇಳಿತು.

೨೩. ಆಗ ಬ್ರಹ್ಮನು ಕೇದಗೆಯನ್ನು ಕುರಿತು :—ನಾನು ಹಂಸರೂಪವನ್ನು ಧರಿಸಿ ಶಿವನ ಶಿರಸ್ಸಿನಲ್ಲಿ ಶಿವನನ್ನು ಪೂಜಿಸಲು ಹೊರಟಿರುವನು. ಎಲೈ ಕೇದಗೆ! ಇನ್ನು ಮುಂದೆ ನೀನು ನನ್ನ ಸ್ನೇಹಿತನು. ಈ ಸ್ನೇಹಿತನಿಗಾಗಿ ನನಗೆ ಬೇಕಾದ ಒಂದು ಕಾರ್ಯವನ್ನು ನೀನು ನಡೆಯಿಸಿ ಕೊಡಬೇಕು.

೨೪. ಬಂದು ನನ್ನೊಂದಿಗೆ ನೀನು ವಿಷ್ಣುವನ್ನು ಕುರಿತು ಹೀಗೆಹೇಳಬೇಕು. ಓ ವಿಷ್ಣುವೇ! ಬ್ರಹ್ಮನು ಈ ಸ್ತಂಭದ ಕೊನೆಯನ್ನು ನೋಡಿರುವನು. ಇದಕ್ಕೇ ನಾನೇ ಸಾಕ್ಷಿಯು ಎಂದು ಹೇಳಬೇಕು ಎಂದು ಪ್ರಾರ್ಥಿಸಿ,

ಸ್ತಂಭಾಂತೋ ವೀಕ್ಷಿತೋ ಧಾತ್ರಾ ತತ್ರ ಸಾಕ್ಷ್ಯಪಮುಚ್ಯತ ।
ಇತ್ಯುಕ್ತ್ವಾ ಕೇತಕಂ ತತ್ರ ಪ್ರಣನಾಮ ಪುನಃ ಪುನಃ
ಅಸತ್ಯ ಮಪಿ ಶಸ್ತಂ ಸ್ಯಾದಾಪದೀತ್ಯನುಶಾಸನಂ ॥ ೨೫ ॥

ಸಮೀಕ್ಷ್ಯ ತತ್ರಾಚ್ಯುತ ಮಾಯತಶ್ರಮಂ
ಪ್ರಣಷ್ಟಹರ್ಷಂ ತು ನನರ್ತ ಹರ್ಷಾತ್
ಉವಾಚ ಚೈನಂ ಪರಮಾರ್ಥಮಚ್ಯುತಂ
ಷಂಡಾತ್ತವಾದಃ ಸ ವಿಧಿಸ್ತತೋಽಚ್ಯುತಂ ॥ ೨೬ ॥

ಸ್ತಂಭಾಗ್ರಮೇತತ್ಸಮುದೀಕ್ಷಿತಂ ಹರೇ
ತತ್ರೈವ ಸಾಕ್ಷೀ ನನು ಕೇತಕಂ ತ್ವಿದಂ
ತತೋಽವದತ್ತತ್ರ ಹಿ ಕೇತಕಂ ಮೃಷಾ
ತಥೇತಿ ತದ್ಧಾತೃವಚಸ್ತದಂತಿಕೇ
ಹರಿಶ್ಚ ತತ್ಸತ್ಯ ಮಿತೀವ ಚಿಂತಯಂ-
ಶ್ಚಕಾರ ತಸ್ಮೈ ವಿಧಯೇ ನಮಃ ಸ್ವಯಂ ॥ ೨೭ ॥

ಷೋಡಶೈರುಪಚಾರೈಶ್ಚ ಪೂಜಯಾಮಾಸ ತಂ ವಿಧಿಂ ॥ ೨೮ ॥

---

೨೫. ಆ ಕೇದಗೆಯನ್ನು ಪುನಃ ಪುನಃ ನಮಸ್ಕರಿಸಿದನು. ಕೇದಗೆಯೂ ಸಹ ಅತ್ಯಂತ ಆಪತ್ತಿನಲ್ಲಿ ಸುಳ್ಳನ್ನಾದರೂ ಹೇಳಬಹುದು ಎಂದು ಶಾಸ್ತ್ರವಿರುವುದು ಎಂದುಕೊಂಡು ಬ್ರಹ್ಮನ ಮಾತನ್ನು ಅಂಗೀಕರಿಸಿತು.

೨೬. ಇಷ್ಟರದಲ್ಲಿ ಅಲ್ಲಿಗೆ ಸ್ತಂಭದ ನೆಲೆಯನ್ನು ತಿಳಿಯದೆ ಬಳಲಿ ಬೆಂಡಾಗಿ ವಿಷ್ಣುವು ಬಂದನು. ಅಂತಹ ವಿಷ್ಣುವನ್ನು ನೋಡಿ ಬ್ರಹ್ಮನು ಸಂತೋಷದಿಂದ ಹಿಗ್ಗಿದನು. ಅಲ್ಲದೆ ಸತ್ಯವಂತನಾದ ಅವನನ್ನು ಕುರಿತು ಷಂಡರಂತೆ (ಕೆಲಸಕ್ಕೆ ಬಾರದವರು ಷಂಡರು) ಸುಳ್ಳನ್ನು ಹೀಗೆ ಹೇಳಿದನು.

೨೭. ಎಲೈ ಹರಿಯೇ ! ಸ್ತಂಭದ ಕೊನೆಯನ್ನು ನಾನು ನೋಡಿಬಂದೆನು. ಇದಕ್ಕೆ ಈ ಕೇದಗೆಯೇ ಸಾಕ್ಷಿಯುಎನ್ನಲು ಆಗ ಕೇದಗೆಯೂ ಬ್ರಹ್ಮನು ನೋಡಿದುದು ನಿಜವೆಂದು ಸುಳ್ಳನ್ನೇ ವಿಷ್ಣುವಿಗೆ ಹೇಳಿತು.

೨೮. ಆಗ ಹರಿಯು ಬ್ರಹ್ಮ ಮತ್ತು ಕೇದಗೆಗಳ ಮಾತು ನಿಜವೆಂದು ನಂಬಿ ಆ ಬ್ರಹ್ಮನಿಗೆ ತಾನೇ ನಮಸ್ಕಾರವನ್ನು ಮಾಡಿದನು. ಮತ್ತು ಧ್ಯಾನವೇ ಮೊದಲಾದ ಹದಿನಾರು ಉಪಚಾರಗಳಿಂದ ಆ ಬ್ರಹ್ಮನನ್ನು ಪೂಜಿಸಿದನು.

ನಿಧಿಂ ಪ್ರಹರ್ತುರ್ಗಂ ಶಠಮಗ್ನಿಲಿಂಗತಃ ।
ಸ ಈಶ್ವರಸ್ತತ್ರ ಬಭೂವ ಸಾಕೃತಿಃ
ಸಮುತ್ಥಿತಃ ಸ್ವಾಮಿವಿಲೋಕನಾತ್ಸ್ವನಃ
ಪ್ರಕಂಪಪಾಣಿಃ ಪರಿಗೃಹ್ಯ ತತ್ಪದಂ । ॥ ೨೯ ॥

ಆದ್ಯಂತಹೀನವಪುಷಿ ತ್ವಯಿ ಮೋಹಬುದ್ಧ್ಯಾ
ಭೂಯಾನ್ ವಿಮರ್ಶ ಇಹ ನಾವತಿ ಕಾಮನೋತ್ಥಃ
ಸ ತ್ವಂ ಪ್ರಸೀದ ಕರುಣಾಕರ ಕಶ್ಮಲಂ ನೌ
ಮೃಷ್ಟಂ ಕ್ಷಮಸ್ವ ವಿಹಿತಂ ಭವತೈವ ಕೇಲ್ಯಾ । ॥ ೩೦

॥ ಈಶ್ವರ ಉವಾಚ ॥

ವತ್ಸ ಪ್ರಸನ್ನೋಽಸ್ಮಿ ಹರೇ ಯತಸ್ತ್ವ-
ಮೀಶತ್ವಮಿಚ್ಛನ್ನಪಿ ಸತ್ಯವಾಕ್ಯಂ

---

೨೯. ಆಗ ಅಲ್ಲಿ ಈ ರೀತಿಯಾಗಿ ಮೋಸಗಾರನಾದ ಬ್ರಹ್ಮನನ್ನು ಶಿಕ್ಷಿಸಲು ಶಿವನು ಶರೀರವನ್ನು ಧರಿಸಿ ಆ ಅಗ್ನಿಮಯವಾದ ಕಂಭದಿಂದ ಆವಿರ್ಭವಿಸಿದನು. ಹೀಗೆ ಪ್ರತ್ಯಕ್ಷನಾದ ಈಶ್ವರನನ್ನು ನೋಡಿ ವಿಷ್ಣುವು ಆ ಕೂಡಲೇ ಅವನ ಪಾದಗಳನ್ನು ಭಯದಿಂದ ನಡುಗುತ್ತಲಿರುವ ಕೈಗಳಿಂದ ಹಿಡಿದು ನಮಸ್ಕರಿಸಿ ಈ ರೀತಿಯಾಗಿ ಹೇಳಿದನು.

೩೦. ವಿಷ್ಣುವು ಹೇಳಿದನು :—ಓ ಪ್ರಭುವೇ! ನೀನು ಕೊನೆ ಮೊದಲಿಲ್ಲದಂತಹ ಸ್ವರೂಪವುಳ್ಳವನು, ಇಂತಹ ನಿನ್ನ ವಿಷಯದಲ್ಲಿ ನಾವು ನಾನೇ ಈಶ್ವರನೆಂಬ ದುರಹಂಕಾರಕ್ಕೆ ಒಳಗಾಗಿ ನ್ಯಾಯವಲ್ಲದ ಅಧಿಕ ವಿಮರ್ಶೆಯನ್ನು ಮಾಡಿದೆವು. ಓ ದಯಾಳುವೇ! ಈ ನನ್ನ ತಪ್ಪನ್ನು ಕ್ಷಮಿಸು, ಈ ತಪ್ಪನ್ನು ವಿನೋದಕ್ಕಾಗಿ ನೀನೇ ನಮ್ಮ ಮೂಲಕ ಮಾಡಿಸಿರುವೆ. ಇಲ್ಲದಿದ್ದರೆ ಅಸ್ವತಂತ್ರರೂ ಅಶಕ್ತರೂ ಆದ ನಾವು ಏನನ್ನೂ ಮಾಡಲಾರೆವು.

೩೧. ಈಶ್ವರನು ಹೇಳಿದನು :—ವತ್ಸನಾದ ಎಲೈ ಹರಿಯೆ! ನೀನು ನಾನೇ ಈಶ್ವರನಾಗಬೇಕೆಂಬ ದುರಾಸೆಯುಳ್ಳವನಾದರೂ ಅಗ್ನಿಸ್ತಂಭದ ನೆಲೆಯ ವಿಷಯದಲ್ಲಿ ನಿಜವನ್ನೇ ಆಡಿರುವೆ ಆದ ಕಾರಣ ನಿನಗೆ ನಾನು ಪ್ರಸನ್ನನಾಗಿರುವೆನು, ಇನ್ನು ಮುಂದೆ ಜನಗಳಲ್ಲಿ ನಿನಗೆ ನನ್ನಂತೆ ಗೌರವವೂ, ಪೂಜೆಯು ಲಭಿಸುವುದು.

ಬ್ರೂಯಾಸ್ತತಸ್ತೇ ಭವಿತಾ ಜನೇಷು
ಸಾಮ್ಯಂ ಮಯಾ ಸತ್ಕೃತಿರಪ್ಯಲಪ್ಸಿ । ॥ ೩೦ ॥

ಇತಃ ಪರಂ ತೇ ಪೃಥಗಾತ್ಮನಶ್ಚ
ಕ್ಷೇತ್ರಪ್ರತಿಷ್ಠೋತ್ಸವಪೂಜನಂ ಚ ॥ ೩೨ ॥

ಇತಿ ದೇವಃ ಪುರಾ ಪ್ರೀತಃ ಸತ್ಯೇನ ಹರಯೇ ಪರಂ ।
ದದೌ ಸ್ವಸಾಮ್ಯಮತ್ಯರ್ಥಂ ದೇವಸಂಘೇ ಚ ಪಶ್ಯತಿ ॥ ೩೩ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ
ಸಂಹಿತಾಯಾಂ ಸಪ್ತಮೋಽಧ್ಯಾಯಃ.

---

೩೨. ಅಲ್ಲದೆ ಇನ್ನು ಮುಂದೆ ನನ್ನಂತೆಯೇ ನಿನಗೂ ಕ್ಷೇತ್ರಗಳಲ್ಲಿ ಮೂರ್ತಿ ಪ್ರತಿಷ್ಠೆ, ಉತ್ಸವ, ಪೂಜೆ ಮುಂತಾದುವು ನಡೆಯುವುವು.

೩೩. ಈ ರೀತಿಯಾಗಿ ಹಿಂದೆ ಮಹಾದೇವನು ಹರಿಗೆ ಅವನ ಸತ್ಯವಾಕ್ಯದಿಂದ ಸಂತುಷ್ಟನಾಗಿ ಜನಗಳಲ್ಲಿ ತನ್ನ ಸಮಾನತೆಯನ್ನು ಅಂದರೆ ಈಶ್ವರನಂತೆ ಪೂಜೆ ಮತ್ತು ಉತ್ಸವ ಮೊದಲಾದುವುಗಳಾಗುವಂತೆ ದೇವತೆಗಳ ಎದುರಿಗೆ ಅನುಗ್ರಹಿಸಿದನು.

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಅಷ್ಟಮೋಽಧ್ಯಾಯಃ

---

|| ನಂದಿಕೇಶ್ವರ ಉವಾಚ ||

ಸಸರ್ಜಾಽಥ ಮಹಾದೇವಃ ಪುರುಷಂ ಕಂಚಿದದ್ಭುತಂ ।
ಭೈರವಾಖ್ಯಂ ಭ್ರುವೋರ್ಮಧ್ಯಾದ್ಬ್ರಹ್ಮದರ್ಪಜಿಘಾಂಸಯಾ || ೧ ||

ಸ ವೈ ತದಾ ತತ್ರ ಪತಿಂ ಪ್ರಣಮ್ಯ ಶಿವಮಂಗಣೇ ।
ಕಿಂ ಕಾರ್ಯಂ ಕರವಾಣ್ಯತ್ರ ಶೀಘ್ರಮಾಜ್ಞಾಪಯ ಪ್ರಭೋ‌ಃ || ೨ ||

---

## ಎಂಟನೆಯ ಅಧ್ಯಾಯವು.

೧. ನಂದಿಕೇಶ್ವನು ಹೇಳಿದನು :—ಬಳಿಕ ಮಹಾದೇವನು ಬ್ರಹ್ಮನ ದರ್ಪವನ್ನು ಇಳಿಸಲು ತನ್ನ ಹುಬ್ಬುಗಳ ನಡುವಿನಿಂ (ಲಲಾಟದಿಂ) ದ ಭೈರವನೆಂಬ ಅದ್ಭುತಾಕಾರವುಳ್ಳ ಪುರುಷನೊಬ್ಬನನ್ನು ಸೃಜಿಸಿದನು.

೨. ಆ ಭೈರವನು ಆ ಕೂಡಲೇ ಅಲ್ಲಿ ಜಗತ್ಪತಿಯಾದ ಶಿವನನ್ನು ನಮಸ್ಕರಿಸಿ ಓ ಪ್ರಭುವೇ ! ಇಲ್ಲಿ ನಾನು ಮಾಡಬೇಕಾದ ಕಾರ್ಯವೇನು ? ಈ ಕೂಡಲೇ ನನಗೆ ಆಜ್ಞೆಮಾಡು ಎಂದು ಬೇಡಿಕೊಂಡನು.

ವತ್ಸಯೋಽಯಂ ವಿಧಿಃ ಸಾಕ್ಷಾಜ್ಜಗತಾಮಾದ್ಯದೈವತಂ ।
ನೂನ ಮರ್ಚಯ ಖಡ್ಗೇನ ತಿಗ್ಮೇನ ಜವಸಾ ಪರಂ ॥ ೩ ॥

ಸ ವೈ ಗೃಹೀತ್ವೈಕಕರೇಣ ಕೇಶಂ
ತತ್ಪಂಚಮಂ ದೃಪ್ತಮಸತ್ಯಭಾಷಣಂ ।
ಛಿತ್ವಾ ಶಿರೋಽಹಸ್ಯ ನಿಹಂತುಮುದ್ಯತಃ
ಪ್ರಕಂಪಯರ್ನ್ ಖಡ್ಗಮತಿಸ್ಫುಟಂ ಕರೈಃ ॥ ೪ ॥

ಪಿತಾ ತವೋತ್ಸೃಷ್ಟವಿಭೂಷಣಾಂಬರ-
ಸ್ರಗುತ್ತರೀಯಾಮಲಕೇಶಸಂಹತಿಃ ।
ಪ್ರವಾತರಂಭೇವ ಲತೇವ ಚಂಚಲಃ
ಪಪಾತ ವೈ ಭೈರವಪಾದಪಂಕಜೇ ॥ ೫ ॥

ತಾವದ್ವಿಧಿಂ ತಾತ ದಿದೃಕ್ಷುರಚ್ಯುತಃ
ಕೃಪಾಲುರಸ್ಮತ್ಪ್ರತಿಪಾದಪಲ್ಲವಂ ।
ನಿಷಿಚ್ಯ ಬಾಷ್ಪೈರವದತ್ಕೃತಾಂಜಲಿ-
ರ್ಯಥಾ ಶಿಶುಃ ಸ್ವಂ ಪಿತರಂ ಕಲಾಕ್ಷರಂ ॥ ೬ ॥

---

೩. ಆಗ ಈಶ್ವರನು ಅವನನ್ನು ಕುರಿತು :—ಎಲೈ ವತ್ಸ! ನಿನ್ನೆದುರಿಗೆ ಇರುವ ಈ ಬ್ರಹ್ಮನು ಜಗತ್ತಿಗೇ ಮೊದಲನೆಯ ದೇವನು, ಈ ದೇವನನ್ನು ಹರಿತ ವಾದ ಕತ್ತಿಯಿಂದ ಈ ಕೂಡಲೇ ಪೂಜಿಸುವವನಾಗು? ಎಂದರೆ ಕತ್ತರಿಸು ಎಂದು ಹೇಳಿದನು

೪. ಆ ಮೇಲಾ ಭೈರವನು ಬ್ರಹ್ಮನ ಜುಟ್ಟನ್ನು ಒಂದು ಕೈನಲ್ಲಿ ಹಿಡಿದು ಕೊಂಡು ಇನ್ನೊಂದರಿಂದ ಅವನ ಸುಳ್ಳನ್ನು ಹೇಳಿದುದೂ ಗರ್ವಿಷ್ಠವೂ ಆದಂತಹ ಐದನೆಯ ಶಿರಸ್ಸನ್ನು ಕತ್ತರಿಸಿ ಮಿಕ್ಕ ಶಿರಸ್ಸುಗಳನ್ನೂ ಕತ್ತರಿಸಲೋಸುಗ ಹರಿತವಾದ ಕತ್ತಿಯನ್ನು ಕೈನಲ್ಲಿ ಝಳಪಿಸಿದನು.

೫. ಎಲೈ ಸನತ್ಕುಮಾರನೇ! ನಿನ್ನ ತಂದೆಯ (ಬ್ರಹ್ಮನ) ಅಲಂಕಾರ ಬಟ್ಟೆ, ಹಾರ, ಮುಂತಾದುವುಗಳೆಲ್ಲವೂ ಕಳಚಿಬಿದ್ದುವು. ಭೈರವನ ಹಿಡಿತದಿಂದ ತಲೆ ಗೂದಲು ಬಿಚ್ಚಿ ಕೆದರಿಹೋಯಿತು. ಆಗ ಆ ಬ್ರಹ್ಮನು ಬಿರುಗಾಳಿಗೆ ಸಿಕ್ಕಿದ ಬಾಳೆಯ ಮರದಂತೆ (ತರತರನೆ) ನಡುಗುತ್ತಾ ಭೈರವನ ಕಾಲುಗಳ ಮೇಲೆ ಬಿದ್ದನು.

೬. ಆಗ ವಿಷ್ಣುವು ಆರೀತಿಯಾದ ಬ್ರಹ್ಮನನ್ನು ನೋಡಿ ಕನಿಕರವುಳ್ಳವನಾಗಿ

॥ ಅಚ್ಯುತ ಉವಾಚ ॥

ತ್ವಯಾ ಪ್ರಯತ್ನೇನ ಪುರಾ ಹಿ ದತ್ತಂ
ಯದಸ್ಯ ಪಂಚಾನನವಿಾಶಚಿಹ್ನಂ ।
ತಸ್ಮಾತ್ಕ್ಷಮಸ್ವಾದ್ಯಮನುಗ್ರಹಾರ್ಹಂ
ಕುರು ಪ್ರಸಾದಂ ವಿಧಯೇ ಹ್ಯಮುಷ್ಮೈ ॥ ೭ ॥

ಇತ್ಯರ್ಥಿತೋಽಚ್ಯುತೇನೇಶಸ್ತುಷ್ಟಃ ಸುರಗಣಾಂಗಣೆ ।
ನಿವರ್ತಯಾಮಾಸ ತದಾ ಭೈರವಂ ಬ್ರಹ್ಮದಂಡತಃ ॥ ೮ ॥

ಅಥಾಽಹ ದೇವಃ ಕಿತವಂ ವಿಧಿಂ ವಿಗತಕಂಧರಂ ।
ಬ್ರಹ್ಮಂಸ್ತ್ವಮರ್ಹಣಾಕಾಂಕ್ಷೀ ಶಠೇಶತ್ವಂ ಸಮಾಸ್ಥಿತಃ ॥ ೯ ॥

---

ನಮ್ಮೊಡೆಯನಾದ ಶಂಕರನ ಕಾಲುಗಳನ್ನು ಕಣ್ಣೀರುಗಳಿಂದ ತೊಳೆದು (ನಮಸ್ಕರಿಸಿ) ಅಂಜಲಿಬದ್ಧನಾಗಿ ಮಗುವು ತಂದೆಯನ್ನು ಕುರಿತು ಹೇಳುವಂತೆ ತೊದಲುನುಡಿಯಿಂದ ಈಶ್ವರನನ್ನು ಕುರಿತು ಹೀಗೆ ಹೇಳಿದನು.

೭. ವಿಷ್ಣುವು ಹೇಳಿದನು :—ಓ ಈಶ್ವರನೇ! ಈ ಬ್ರಹ್ಮನಿಗೆ ಹಿಂದೆ ನೀನೇ ಜಗತ್ತಿನ ಒಡೆತನಕ್ಕೆ ಗುರುತಾಗಿ ಐದು ಮುಖಗಳನ್ನು ಅನುಗ್ರಹಿಸಿರುವೆಯಲ್ಲವೇ ? ಆದ ಕಾರಣ ಈ ವಿಧಿಯ ತಪ್ಪನ್ನು ಮನ್ನಿಸು. ಇವನಿಗೆ ಅನುಗ್ರಹವನ್ನು ಮಾಡುವವನಾಗು. ಎಂದು ಹೇಳಿ

೮. ವಿಷ್ಣುವು ದೇವತೆಗಳೆದುರಿಗೆ ಸ್ತುತಿಸಲು ಈಶ್ವರನು ಸಂತುಷ್ಟನಾಗಿ ಬ್ರಹ್ಮನನ್ನು ಶಿಕ್ಷಿಸುತ್ತಿರುವ ಭೈರವನನ್ನು ಬೇಡವೆಂದು ತಡೆದನು.

೯. ಆಮೇಲೆ ಮಹಾದೇವನು, ಐದನೆಯ ಶಿರಸ್ಸನ್ನು ಕಳೆದುಕೊಂಡ ಸುಳ್ಳುಗಾರನಾದ ಬ್ರಹ್ಮನನ್ನು ಕುರಿತು ಎಲೈ ವಿಧಿ! ನೀನು ನಾನೇ ಈಶ್ವರನಾಗಬೇಕೆಂಬ ದುರಾಸೆಯಿಂದ ಮೋಸವನ್ನು ಆಚರಿಸಿರುವೆ, ಆದಕಾರಣ ಲೋಕದಲ್ಲಿ ನಿನ್ನನ್ನು ಯಾರೂ ಪೂಜಿಸಲಾರರು. ಮತ್ತು ನಿನಗೆ ಪ್ರತಿಷ್ಠೆ ಉತ್ಸವ ಮುಂತಾದುವುಗಳೂ ನಡೆಯದಿರಲಿ ಎಂದು ಶಾಪವನ್ನಿತ್ತನು.

ನ್ಯಾತಸ್ತೇ ಸತ್ಕೃತಿರ್ಲೋಕೇ ಭೂಯಾತ್ಸ್ಥಾನೋತ್ಸವಾದಿಕಂ ।

॥ ಬ್ರಹ್ಮೋವಾಚ ॥

ಸ್ವಾಮಿನ್ ಪ್ರಸೀದಾದ್ಯ ಮಹಾವಿಭೂತೇ ।
ಮನ್ಯೇ ವರಂ ಮೇ ಶಿರಸಃ ಪ್ರಮೋಕ್ಷಂ ॥ ೧೦ ॥

ನಮಸ್ತುಭ್ಯಂ ಭಗವತೇ ಬಂಧವೇ ವಿಶ್ವಯೋನಯೇ ।
ಸಹಿಷ್ಣವೇ ಚ ದೋಷಾಣಾಂ ಶಂಭವೇ ಶೈಲಧನ್ವನೇ । ॥ ೧೧ ॥

॥ ಈಶ್ವರ ಉವಾಚ ॥

ಅರಾಜಭಯಮೇತದ್ವೈ ಜಗತ್ಸರ್ವಂ ನಶಿಷ್ಯತಿ ।
ತತಸ್ತ್ವಂ ಜಹಿ ದಂಡಾರ್ಹಂ ವಹ ಲೋಕಧುರಂ ಶಿಶೋ ॥ ೧೨ ॥

ವರಂ ದದಾಮಿ ತೇ ತತ್ರ ಗೃಹಾಣ ದುರ್ಲಭಂ ಪರಂ ।
ವೈತಾನಿಕೇಷು ಗೃಹ್ಯೇಷು ಯಜ್ಞೇಷು ಚ ಭವಾನ್ ಗುರುಃ ॥ ೧೩ ॥

---

೧೦. ಬ್ರಹ್ಮನು ಹೇಳಿದನು :—ಸಕಲೈಶ್ವರ್ಯ ಸಂಪನ್ನನಾದ ಓ ಸ್ವಾಮಿಯೇ! ಅಪರಾಧಿಯಾದ ನನ್ನಲ್ಲಿ ಪ್ರಸನ್ನನಾಗು. ಅಲ್ಲದೆ ನಾನು ಸುಳ್ಳನ್ನು ಹೇಳಿರುವ ಐದನೆಯ ನನ್ನ ಶಿರಸ್ಸನ್ನು ಕತ್ತರಿಸಿದುದು ಒಳ್ಳೆಯದೇ ಆಯಿತೆಂದು ತಿಳಿದಿರುವೆನು.

೧೧. ಭಗವಂತನೂ ಜಗತ್ತಿಗೆ ಬಂಧುವೂ, ಜಗತ್ತಿಗೆ ಕಾರಣನೂ ಆದ ನಿನಗೆ ನಮಿಸುವೆವು. ಮತ್ತು ಎಲ್ಲಾ ತಪ್ಪುಗಳನ್ನು ಮನ್ನಿಸುವವನೂ ಸುಖವನ್ನೂ ಕೊಡುವವನೂ (ತ್ರಿಪುರನಾಶಕಾಲದಲ್ಲಿ) ಮೇರುಪರ್ವತವೇ ಧನುಸ್ಸಾಗಿ ಉಳ್ಳವನೂ ಆದ ನಿನ್ನನ್ನು ನಮಸ್ಕರಿಸುವೆವು.

೧೨. ಈಶ್ವರನು ಹೇಳಿದನು :—ಎಲೈ ವತ್ಸ! (ಬ್ರಹ್ಮನೇ) ರಾಜಭಯವಿಲ್ಲದಿದ್ದರೆ ಈ ಲೋಕವೆಲ್ಲವೂ ನಷ್ಟವಾಗುವುದು. (ಅಂದರೆ ಸಮರ್ಥರಾದ ರಾಜರು ಆಳದಿದ್ದರೆ ಲೋಕವು ದುರ್ಮಾರ್ಗಕ್ಕೆ ಇಳಿದು ನಷ್ಟವಾಗುವುದು ಎಂದು ಅಭಿಪ್ರಾಯವು.) ಆದಕಾರಣ ಎಲೈ ಬ್ರಹ್ಮನೇ! ನೀನು ಅಪರಾಧಿಯನ್ನು ಶಿಕ್ಷಿಸುತ್ತಾ ಲೋಕವನ್ನು ರಕ್ಷಿಸುವವನಾಗು.

೧೩. ಅಲ್ಲದೆ ದುರ್ಲಭವಾದ ವರವೊಂದನ್ನು ನಿನಗೆ ಕೊಡುವೆನು. ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ ಕರ್ಮಗಳಲ್ಲಿ ನೀನೇ ಗುರುವು. ನೀನಿಲ್ಲದ ಕರ್ಮವು ಸಂಪೂರ್ಣವಾಗಿ ಯೋಗ್ಯವಾದ ದಕ್ಷಿಣೆಯಿಂದ ಮಾಡಲ್ಪಟ್ಟಿದ್ದರೂ ಅದಕ್ಕೆ ಫಲವಿಲ್ಲವು ಎಂದು ಹೇಳಿ,

ನಿಷ್ಫಲಸ್ತ್ವದ್ಯತೇ ಯಜ್ಞಃ ಸಾಂಗಶ್ಚ ಸಹದಕ್ಷಿಣಃ ।
ಅಥಾಹ ದೇವಃ ಕಿತವಂ ಕೇತಕಂ ಕೂಟಸಾಕ್ಷಿಣಂ ॥ ೧೪ ॥

ರೇ ರೇ ಕೇತಕೆ ದುಷ್ಟಸ್ತ್ವಂ ಶಠ ದೂರಮಿತೋ ವ್ರಜ ।
ಮಮಾಪಿ ಪ್ರೇಮ ತೇ ಪುಷ್ಪೇ ಮಾ ಭೂತ್ಪೂಜಾಸ್ವಿತಃ ಪರಂ ॥ ೧೫ ॥

ಇತ್ಯುಕ್ತೇ ತತ್ರ ದೇವೇನ ಕೇತಕಂ ದೇವಜಾತಯಃ ।
ಸರ್ವಾ ನಿವಾರಯಾಮಾಸುಸ್ತತ್ಪಾರ್ಶ್ವಾದನ್ಯತಸ್ತದಾ ॥ ೧೬ ॥

॥ ಕೇತಕ ಉವಾಚ ॥

ನಮಸ್ತೇ ನಾಥ ಮೇ ಜನ್ಮ ನಿಷ್ಫಲಂ ಭವದಾಜ್ಞಯಾ ।
ಸಫಲಂ ಕ್ರಿಯತಾಂ ತಾತ ಕ್ಷಮ್ಯತಾಂ ಮಮ ಕಿಲ್ಬಿಷಂ ॥ ೧೭ ॥

ಜ್ಞಾನಾಜ್ಞಾನಕೃತಂ ಪಾಪಂ ನಾಶಯತ್ಯೇವ ತೇ ಸ್ಮೃತಿಃ ।
ತಾದೃಶೇ ತ್ವಯಿ ದೃಷ್ಟೇ ಮೇ ಮಿಥ್ಯಾದೋಷಃ ಕುತೋ ಭವೇತ್ ॥ ೧೮ ॥

---

೧೪. ಆಮೇಲೆ ಮಹಾದೇವನು ಸುಳ್ಳು ಸಾಕ್ಷಿಯನ್ನು ಹೇಳಿದ ಕಪಟಿಯಾದ ಕೇದಗೆಪುಷ್ಪವನ್ನು ಕುರಿತು ಎಲೈ ಕೇತಕವೇ! ನೀನುದುಷ್ಟನು, ಮತ್ತು ಕಪಟಿಯು. ಆದಕಾರಣ ಇಲ್ಲಿ ನಿಲ್ಲದೆ ನೀನು ದೂರ ಹೊರಟುಹೋಗು.

೧೫. ಇನ್ನು ಮುಂದೆ ಪೂಜೆಗಳಲ್ಲಿ ನನಗೆ ನಿನ್ನ ಹೂವು ಬೇಕಾಗಿಲ್ಲ. ಅದರಲ್ಲಿ ನನಗೆ ಪ್ರೀತಿಯುಂಟಾಗುವುದಿಲ್ಲ ಎಂದನು.

೧೬. ಹೀಗೆ ಮಹಾದೇವನು ಹೇಳಲು ಅಲ್ಲಿಯೇ ಎಲ್ಲಾ ದೇವತೆಗಳೂ ಸಹ ಕೇದಗೆಯನ್ನು ಅಲ್ಲಿಂದ ಬೇರೆಡೆಗೆ ಹೊರದೂಡಿದರು.

೧೭. ಕೇದಗೆಯು ಹೇಳಿತು :—ಓ ಪ್ರಭುವೇ! ನಿನಗೆ ನಮಿಸುವೆನು. ನಿನ್ನ ಆಜ್ಞೆ (ಶಾಸ) ಯಿಂದ ನನ್ನ ಜನ್ಮವೇ ವ್ಯರ್ಥವಾಯಿತು. ಓ ತಂದೆಯೇ! ನನ್ನ ಜನ್ಮವನ್ನು ಸಾರ್ಥಕಗೊಳಿಸು. ನನ್ನ ತಪ್ಪನ್ನು ಮನ್ನಿಸು.

೧೮. ನಿನ್ನನ್ನು ಸ್ಮರಿಸಿದ ಮಾತ್ರದಿಂದ ಬುದ್ಧಿಪೂರ್ವಕವಾಗಿ ಮತ್ತು ತಿಳಿಯದೆ ಮಾಡಿದ ಪಾಪಗಳೆಲ್ಲವೂ ನಾಶವಾಗುವುವು. ಇಂತಹ ನಿನ್ನನ್ನು ನೋಡಿದ ಮೇಲೆ

ತಥಾ ಸ್ತುತಸ್ತು ಭಗವಾನ್ ಕೇತಕೀನ ಸಭಾತಲೆ ।
ನ ಮೇ ತ್ವದ್ಧಾರಣಂ ಯೋಗ್ಯಂ ಸತ್ಯವಾಗಹಮೀಶ್ವರಃ ॥ ೧೯ ॥

ಮದೀಯಾಸ್ತ್ವಾಂ ಧರಿಷ್ಯಂತಿ ಜನ್ಮ ತೇ ಸಫಲಂ ತತಃ ।
ತ್ವಂ ವೈ ವಿತಾನವ್ಯಾಜೇನ ಮಮೋಪರಿ ಭವಿಷ್ಯಸಿ ॥ ೨೦ ॥

ಇತ್ಯನುಗೃಹ್ಯ ಭಗವಾನ್ ಕೇತಕಂ ವಿಧಿಮಾಧವೌ ।
ವಿರರಾಜ ಸಭಾಮಧ್ಯೇ ಸರ್ವದೇವೈರಭಿಷ್ಟುತಃ ॥ ೨೧ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ
ಸಂಹಿತಾಯಾಮಷ್ಟಮೋಽಧ್ಯಾಯಃ.

---

ನಾನು ಸುಳ್ಳು ಹೇಳಿದ ದೋಷವು ಹೋಗಲಾರದೆ ?

೧೯. ಹೀಗೆ ಕೇದಕೆಯು ದೇವಸಭೆಯ ಎದುರಿಗೆ ಭಗವಂತನನ್ನು ಸ್ತುತಿಸಲು ಆಗ ಅವನು ಎಲೈ ಕೇದಗೆ! ನಾನು ನಿನ್ನನ್ನು ಧರಿಸುವುದು ಯೋಗ್ಯವಲ್ಲ. ನನ್ನ ಶಾಪವನ್ನು ವ್ಯರ್ಥಮಾಡುವಂತಿಲ್ಲ. ಈಶ್ವರನಾದ ನಾನು ಸತ್ಯವನ್ನೇ ಆಡುವವನು, ನನ್ನ ಮಾತು ಸುಳ್ಳಾಗಲಾರದು.

೨೦. ಆದರೆ ನನ್ನ ಭಕ್ತರು ನಿನ್ನನ್ನು ಧರಿಸುವರು. ಇದರಿಂದ ನಿನ್ನ ಜನ್ಮವು ಸಫಲವಾಗುವುದು. ಮತ್ತು ನೀನು ಧ್ವಜದ ಆಕಾರದಿಂದ ನನ್ನ ಸೇವೆಗೂ ಉಪಯುಕ್ತನಾಗುವೆ ಎಂದನು.

೨೧. ಹೀಗೆ ಭಗವಂತನಾದ ಶಿವನು ಕೇದಗೆ, ಬ್ರಹ್ಮ ಮತ್ತು ವಿಷ್ಣು ಇವರನ್ನು ಅನುಗ್ರಹಿಸಿ ಆ ದೇವಸಭೆಯಲ್ಲಿ ದೇವತೆಗಳಿಂದ ಸ್ತುತಿಸಲ್ಪಡುತ್ತಾ ವಿರಾಜಿಸಿದನು.

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ವೇಶ್ವರ ಸಂಹಿತೆಯಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ವಿದ್ಯೇಶ್ವರಸಂಹಿತಾಯಾಂ
## ನವಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ತತ್ರಾಂತರೇ ತೌ ಚ ನಾಥಂ ಪ್ರಣಮ್ಯ ವಿಧಿಮಾಧವೌ ।
ಬದ್ಧಾಂಜಲಿಪುಟೌ ತೂಷ್ಣೀಂ ತಸ್ಥತುರ್ದಕ್ಷವಾಮಗೌ ॥ ೧ ॥

ತತ್ರ ಸಂಸ್ಥಾಪ್ಯ ತೌ ದೇವಂ ಸಕುಟುಂಬಂ ವರಾಸನೇ ।
ಪೂಜಯಾಮಾಸತುಃ ಪೂಜ್ಯಂ ಪುಣ್ಯೈಃ ಪುರುಷವಸ್ತುಭಿಃ ॥ ೨ ॥

ಪೌರುಷಂ ಪ್ರಾಕೃತಂ ವಸ್ತು ಜ್ಞೇಯಂ ದೀರ್ಘಾಲ್ಪಕಾಲಿಕಂ ।
ಹಾರನೂಪುರಕೇಯೂರಕಿರೀಟಮಣಿಕುಂಡಲೈಃ ॥ ೩ ॥

---

### ಒಂಭತ್ತನೆಯ ಅಧ್ಯಾಯವು.

೧-೨. ನಂದಿಕೇಶ್ವರನು ಹೇಳಿದನು:—ಈ ಸಮಯದಲ್ಲಿ ಬ್ರಹ್ಮವಿಷ್ಣುಗಳು ಈಶ್ವರನನ್ನು ನಮಸ್ಕರಿಸಿ ಅಂಜಲಿಬದ್ಧರಾಗಿ ಅವನ ಎಡಬಲ ಭಾಗಗಳಲ್ಲಿ ಕ್ರಮವಾಗಿ ನಿಂತುಕೊಂಡು ಮಹಾದೇವನನ್ನು ಉತ್ತಮವಾದ ಆಸನದಲ್ಲಿ ಉಮೆಯೊಡನೆ ಕುಳ್ಳಿರಿಸಿ, ಪರಿವಾರ ಸಮೇತನಾದ ಅವನನ್ನು ಪವಿತ್ರವಾದ (ಪುರುಷರು ಧರಿಸುವಂತಹ) ಅಲಂಕಾರಾದಿ ವಸ್ತುಗಳಿಂದ ಪೂಜಿಸಿದರು.

೩-೫. ಪುರುಷವಸ್ತುಗಳೆಂದರೆ! ಬಹಳ ಕಾಲವಾಗಲಿ ಸ್ವಲ್ಪ ಕಾಲವಾಗಲಿ ಉಪಯೋಗಿಸುವಂತಹ ಭೂಮಿಯಲ್ಲಿ ಜನಿಸಿದ ವಸ್ತುಗಳಿಗೆಲ್ಲ

ಯಜ್ಞಸೂತ್ರೋತ್ತರೀಯಸ್ರಕ್ಕ್ಷೌಮನಾಲ್ಯಾಂಗುಲೀಯಕೈಃ ।
ಪುಷ್ಪತಾಂಬೂಲಕರ್ಪೂರಚಂದನಾಗರುಲೇಪನೈಃ ॥ ೪ ॥

ಧೂಪದೀಪಸಿತಚ್ಛತ್ರವ್ಯಜನಧ್ವಜಚಾಮರೈಃ ।
ಅನ್ಯೈರ್ದಿವ್ಯೋಽಪಹಾರೈಶ್ಚ ವಾಙ್ಮನೋತೀತವೈಭವೈಃ ॥ ೫ ॥

ಪತಿಯೋಗ್ಯೈಃ ಪಶ್ವಲಭ್ಯೈಸ್ತೌ ಸಮಾರ್ಚಯತಾಂ ಪತಿಂ ।
ಯದ್ಯಚ್ಛ್ರೇಷ್ಠತಮಂ ವಸ್ತು ಪತಿಯೋಗ್ಯಂ ಹಿತಧ್ವಜ ॥ ೬ ॥

ತದ್ವಸ್ತ್ವಖಿಲಮೀಶೋಽಪಿ ಪಾರಂಪರ್ಯಚಿಕೀರ್ಷಯಾ ।
ಸಭ್ಯಾನಾಂ ಪ್ರದದೌ ಹೃಷ್ಟಃ ಪೃಥಕ್ತತ್ರ ಯಥಾಕ್ರಮಂ ॥ ೭ ॥

ಕೋಲಾಹಲೋ ಮಹಾನಾಸೀತ್ತತ್ರ ತದ್ವಸ್ತು ಗೃಹ್ಣತಾಂ ।
ತತ್ರೈವ ಬ್ರಹ್ಮವಿಷ್ಣುಭ್ಯಾಂ ಚಾರ್ಚಿತಃ ಶಂಕರಃ ಪುರಾ ॥ ೮ ॥

---

ಹೆಸರು. ಮತ್ತು ಹಾರ, ಕಡಗ, ಭುಜಕೀರ್ತಿ, ಕಿರೀಟ, ರತ್ನಮಯವಾದ ಕುಂಡಲ ಇವುಗಳಿಂದಲೂ ಯಜ್ಞೋಪವೀತ, ವಸ್ತ್ರ, ಹಾರ, ಉಡುವಬಟ್ಟೆ, ಉಂಗುರ ಇವುಗಳಿಂದಲೂ, ಹೂವು, ತಾಂಬೂಲ, ಪಚ್ಚಕರ್ಪೂರ, ಚಂದನ, ಅಗರು ಧೂಪ, ದೀಪ, ಬಿಳಿಯ ಛತ್ರಿ, ಬೀಸಣಿಗೆ, ಧ್ವಜ, ಚಾಮರ ಇವುಗಳಿಂದಲೂ ಇನ್ನೂ ಬೇರೆ ದಿವ್ಯವಾದಂತಹ ನೈವೇದ್ಯಗಳಿಂದಲೂ ಜಗತ್ಪತಿಯಾದ ಶಿವನಿಗೆ ಯೋಗ್ಯವಾದುವುಗಳೂ ಮನುಷ್ಯರಿಗೆ ದುರ್ಲಭವಾದವುಗಳೂ ಆದಂತಹ ವಸ್ತುಗಳಿಂದಲೂ, ವಾಙ್ಮನಸ್ಸುಗಳಿಗೆ ಸಿಲುಕದಂತಹ ವೈಭವದಿಂದಲೂ ಪಶುಪತಿಯನ್ನು ಬ್ರಹ್ಮವಿಷ್ಣುಗಳು ಅರ್ಚಿಸಿದರು.

೬-೭. ಎಲ್ಲರಿಗೂ ಹಿತವನ್ನು ಬಯಸುವ ಎಲೈ ಸನತ್ಕುಮಾರನೆ ! ಈಶ್ವರನು ಧರಿಸುವಂತ ಯಾವಾವ ಅತ್ಯುತ್ತಮವಾದ ವಸ್ತುಗಳಿರುವುವೋ ಅವೆಲ್ಲವನ್ನೂ ಸಂತುಷ್ಟನಾದ ಈಶ್ವರನು ಸಂಪ್ರದಾಯವನ್ನು ಬೆಳೆಸಲೋಸುಗ, ಅಲ್ಲಿರುವ ಸೇರಿರುವ ದೇವತೆಗಳಿಗೆ ಕ್ರಮವಾಗಿಯೂ ಬೇರೆ ಬೇರೆಯಾಗಿಯೂ ಕೊಟ್ಟನು.

೮. ಆಗ ಅಲ್ಲಿ ಈಶ್ವರನು ಕೊಟ್ಟ ವಸ್ತುಗಳನ್ನು ದೇವತೆಗಳು ತೆಗೆದುಕೊಳ್ಳುವಾಗ ತುಂಬಾ ಕೋಲಾಹಲವಾಯಿತು.

ಪ್ರಸನ್ನಃ ಪ್ರಾಹ ತೌ ನವೌ ಸಸ್ಮಿತಂ ಭಕ್ತಿವರ್ಧನಃ ।
॥ ಈಶ್ವರ ಉವಾಚ ॥
ತುಷ್ಟೋಽಹಮದ್ಯ ವಾಂ ವತ್ಸೌ ಪೂಜಯಾಸ್ಮಿನ್ ಮಹಾದಿನೇ ॥ ೯ ॥

ದಿನಮೇತತ್ತತಃ ಪುಣ್ಯಂ ಭವಿಷ್ಯತಿ ಮಹತ್ತರಂ ।
ಶಿವರಾತ್ರಿರಿತಿ ಖ್ಯಾತಾ ತಿಥಿರೇಷಾ ಮಮ ಪ್ರಿಯಾ ॥ ೧೦ ॥

ಏತತ್ಕಾಲೇತು ಯಃ ಕುರ್ಯಾತ್ಪೂಜಾಂ ಮಲ್ಲಿಂಗಬೇರಯೋಃ ।
ಕುರ್ಯಾತ್ಸ ಜಗತಃ ಕೃತ್ಯಂ ಸ್ಥಿತಿಸರ್ಗಾದಿಕಂ ಪುಮಾನ್ ॥ ೧೧ ॥

ಶಿವರಾತ್ರಾವಹೋರಾತ್ರಂ ನಿರಾಹಾರೋ ಜಿತೇಂದ್ರಿಯಃ ।
ಅರ್ಚಯೇದ್ವಾ ಯಥಾನ್ಯಾಯಂ ಯಥಾಬಲಮವಂಚಕಃ ॥ ೧೨ ॥

---

೯. ಹಿಂದೆ ಹೇಳಿದಂತೆ ಅಲ್ಲಿಯೇ ಬ್ರಹ್ಮವಿಷ್ಣುಗಳಿಂದ ಅರ್ಚಿಸಲ್ಪಟ್ಟಮೇಲೆ ಶಂಕರನು ಪ್ರಸನ್ನನಾಗಿ ವಿನಯದಿಂದ ಬಗ್ಗಿ ನಿಂತಿರುವ ಆ ವಿಷ್ಣು ಬ್ರಹ್ಮರನ್ನು ಕುರಿತು ಮಂದಹಾಸವನ್ನು ಬೀರುತ್ತಾ ಅವರಿಗೆ ಭಕ್ತಿಯನ್ನು ಹೆಚ್ಚಿಸುತ್ತಾ ಹೀಗೆ ಹೇಳಿದನು.

೧೦. ಈಶ್ವರನು ಹೇಳಿದನು :—ಎಲೈ ವತ್ಸರೆ! ಈ ಮಹಾದಿನದಲ್ಲಿ ನೀವು ಮಾಡಿದ ಪೂಜೆಯಿಂದ ನಾನು ಸಂತೋಷಗೊಂಡಿರುವೆನು, ಈ ದಿನವು ಇನ್ನು ಮುಂದೆ ಪುಣ್ಯವಾದ ಮಹಾದಿನವಾಗುವುದು.

೧೧. ಈ ತಿಥಿಯು ಶಿವರಾತ್ರಿಯೆಂದು ಪ್ರಸಿದ್ಧವಾಗುವುದು. ಇದು ನನಗೆ ತುಂಬಾ ಪ್ರಿಯವಾದುದು. ಈ ಕಾಲದಲ್ಲಿ ಎಂದರೆ ಶಿವರಾತ್ರಿ ದಿನದ ರಾತ್ರಿಕಾಲದಲ್ಲಿ ಯಾವನು, ಲಿಂಗ ಅಥವಾ ವಿಗ್ರಹಗಳಲ್ಲಿ ನನ್ನನ್ನು ಪೂಜಿಸುವನೋ ಅವನು ಜಗತ್ತಿನ ಪಾಲನೆ, ಸೃಷ್ಟಿ, ಸಂಹಾರ ಮುಂತಾದುವುಗಳನ್ನು ಮಾಡುವನು, ಅಂದರೆ ಈಶ್ವರ ಸ್ವರೂಪವನ್ನು ಹೊಂದುವನು.

೧೨. ಶಿವರಾತ್ರಿಯಲ್ಲಿ ರಾತ್ರಿ ಮತ್ತು ಹಗಲೂ ಸಹ ಆಹಾರವನ್ನು ಸೇವಿಸದೆ ಜಿತೇಂದ್ರಿಯನಾಗಿದ್ದು ವಂಚನೆಯಿಲ್ಲದೆ ಶಕ್ತಿಯಿದ್ದಷ್ಟು ವೈಭವದಿಂದ ನನ್ನನ್ನು ವಿಧಿವತ್ತಾಗಿ ಅರ್ಚಿಸಬೇಕು.

ಯತ್ಫಲಂ ಮಮ ಪೂಜಾಯಾಂ ವರ್ಷಮೇಕಂ ನಿರಂತರಂ ।
ತತ್ಫಲಂ ಲಭತೇ ಸದ್ಯಃ ಶಿವರಾತ್ರೌ ಮದರ್ಚನಾತ್ ॥ ೧೩ ॥

ಮದ್ಧರ್ಮವೃದ್ಧಿಕಾಲೋಽಯಂ ಚಂದ್ರೋದಯ ಇವಾಂಬುಧೇಃ ।
ಪ್ರತಿಷ್ಠಾದ್ಯುತ್ಸವೋ ಯತ್ರ ಮಾಮಕೋ ಮಂಗಲಾಯನಃ ॥ ೧೪ ॥

ಯತ್ಪುನಃ ಸ್ತಂಭರೂಪೇಣ ಸ್ವಾವಿರಾಸಮಹಂ ಪುರಾ ।
ಸ ಕಾಲೋ ಮಾರ್ಗಶೀರ್ಷೇ ತು ಸ್ಯಾದಾದ್ರ್ರಾಋಕ್ಷಮರ್ಭಕೌ ॥ ೧೫ ॥

ಆದ್ರ್ರಾಯಾಂ ಮಾರ್ಗಶೀರ್ಷೇ ತು ಯಃ ಪಶ್ಯೇನ್ಮಾಮುಮಾಸಖಂ ।
ಮದ್ಬೇರಮಪಿ ವಾ ಲಿಂಗಂ ಸ ಗುಹಾದಪಿ ಮೇ ಪ್ರಿಯಃ ॥ ೧೬ ॥

ಅಲಂ ದರ್ಶನಮಾತ್ರೇಣ ಫಲಂ ತಸ್ಮಿನ್ ಶುಭೇ ದಿನೇ ।
ಅಭ್ಯರ್ಚನಂ ಚೇದಧಿಕಂ ಫಲಂ ವಾಚಾಮಗೋಚರಂ ॥ ೧೭ ॥

---

೧೩. ವರ್ಷವೆಲ್ಲವೂ ನಿರಂತರವಾಗಿ ನನ್ನನ್ನು ಪೂಜಿಸಿದರೆ ಯಾವ ಫಲವು ಲಭಿಸುವುದೋ ಆ ಫಲವು ಶಿವರಾತ್ರಿಯೊಂದು ದಿನ ಪೂಜಿಸುವುದರಿಂದಲೇ ತಕ್ಷಣ ಲಭಿಸುವುದು.

೧೪. ಎಲೈ ವತ್ಸರೆ! ಚಂದ್ರೋದಯಕಾಲವು ಸಮುದ್ರಕ್ಕೆ ಅಭಿವೃದ್ಧಿಯನ್ನು ಹೇಗೆ ಉಂಟುಮಾಡುವುದೋ ಅದರಂತೆ ಈ ಶಿವರಾತ್ರಿಯು ನನ್ನ ಧರ್ಮವನ್ನು ಅಭಿವೃದ್ಧಿಗೊಳಿಸುವ ಕಾಲವು.

೧೫. ಮಾರ್ಗಶೀರ್ಷಮಾಸದಲ್ಲಿ ಆದ್ರ್ರಾನಕ್ಷತ್ರವಿರುವ ದಿನದಲ್ಲಿ ನಾನು ನಿಮ್ಮ ಮಧ್ಯದಲ್ಲಿ ಸ್ತಂಭರೂಪದಿಂದ ಹಿಂದೆ ಆವಿರ್ಭವಿಸಿರುವೆನು. ಮಂಗಳಕರವಾದ ಆ ದಿನದಲ್ಲಿಯೇ ನನಗೆ ಪ್ರತಿಷ್ಠೆ ಮುಂತಾದ ಉತ್ಸವಗಳನ್ನು ಮಾಡಬೇಕು.

೧೬. ಮಾರ್ಗಶೀರ್ಷಮಾಸದ ಆದ್ರ್ರಾನಕ್ಷತ್ರವಿರುವ ದಿನದಲ್ಲಿ ಯಾವನು ಪಾರ್ವತಿಯೊಡನಿರುವ ನನ್ನನ್ನು ಅಥವಾ ನನ್ನ ವಿಗ್ರಹ, ಲಿಂಗ ಇವುಗಳನ್ನು ದರ್ಶನ ಮಾಡುವನೋ ಅವನು ನನಗೆ ಷಣ್ಮುಖನಿಗಿಂತಲೂ ಪ್ರಿಯನಾಗುವನು.

೧೭. ಆ ಶುಭದಿನದಲ್ಲಿ ನನ್ನ ದರ್ಶನವನ್ನು ಮಾತ್ರ ಮಾಡಿದರೂ ಸಾಕು. ತಕ್ಕ ಫಲವು ಲಭಿಸುವುದು. ಇನ್ನು ಪೂಜಿಸಿದರೆ ಹೇಳಬೇಕಾದುದೇ ಇಲ್ಲ. ಬಾಯಿಮಾತಿನಿಂದ ಹೇಳಲಸಾಧ್ಯವಾದಂತಹ ಫಲವು ಪ್ರಾಪ್ತವಾಗುವುದು.

ರಣರಂಗತಲೇऽಸ್ಮಿನ್ಯಸ್ಮಾದ್ಯುವಯೋ ಲಿಂಗಸ್ವರೂಪಿಣಾ
ಜೃಂಭಿತೋ ಲಿಂಗವತ್ತಸ್ಮಾಲ್ಲಿಂಗಸ್ಥಾನಮಿದಂ ಭವೇತ್ ॥ ೧೮ ॥

ಅನಾದ್ಯಂತಮಿದಂ ಸ್ತಂಭಮಣುಮಾತ್ರಂ ಭವಿಷ್ಯತಿ ।
ದರ್ಶನಾರ್ಥಂ ಹಿ ಜಗತಾಂ ಪೂಜನಾರ್ಥಂ ಹಿ ಪುತ್ರಕೌ ॥ ೧೯ ॥

ಭೋಗಾವಹಮಿದಂ ಲಿಂಗಂ ಭುಕ್ತಿಮುಕ್ತ್ಯೇಕಸಾಧನಂ ।
ದರ್ಶನಸ್ಪರ್ಶನಧ್ಯಾನಾಜ್ಜಂತೂನಾಂ ಜನ್ಮಮೋಚನಂ ॥ ೨೦ ॥

ಅನಲಾಚಲಸಂಕಾಶಂ ಯದಿದಂ ಲಿಂಗಮುತ್ಥಿತಂ ।
ಅರುಣಾಚಲಮಿತ್ಯೇವ ತದಿದಂ ಖ್ಯಾತಿಮೇಷ್ಯತಿ ॥ ೨೧ ॥

---

೧೮. ಈ ಬ್ರಹ್ಮ ವಿಷ್ಣುಗಳ ಯುದ್ಧಭೂಮಿಯಲ್ಲಿ ನಾನು ಲಿಂಗಸ್ವರೂಪವನ್ನು ಧರಿಸಿ ಲಿಂಗದಂತೆ ವಿರಾಜಿಸಿರುವ ಈ ಭೂಮಿಯು ಲಿಂಗಸ್ಥಾನವೆಂದು ವಂತೆ ಹೆಸರುಳ್ಳದ್ದಾಗಲಿ.

೧೯. ಎಲೈ ಪುತ್ರರೇ! ಆದಿಯೂ ಕೊನೆಯೂ ಇಲ್ಲದ ಈ ಸ್ತಂಭವು ಇನ್ನು ಮುಂದೆ ಜನಗಳು ದರ್ಶನಮಾಡುವುದಕ್ಕೂ, ಪೂಜಿಸುವುದಕ್ಕೂ ಅನುಕೂಲವಾಗುವಂತೆ ಚಿಕ್ಕದಾದ ಸ್ವರೂಪವುಳ್ಳದ್ದಾಗುವುದು.

೨೦. ಸುಖವನ್ನುಂಟುಮಾಡುವ ಈ ಲಿಂಗವು ಭೋಗ ಮತ್ತು ಮೋಕ್ಷ ಇವೆರಡಕ್ಕೂ ಮುಖ್ಯವಾದ ಸಾಧನವು. ಈ ಲಿಂಗದ ದರ್ಶನ ಮತ್ತು ಸ್ಪರ್ಶನ, ಧ್ಯಾನ ಇವುಗಳಿಂದ ಪ್ರಾಣಿಗಳಿಗೆ ಸಂಸಾರ ಬಂಧನದಿಂದ ಬಿಡುಗಡೆಯಾಗಿ ಮುಕ್ತಿಯು ಲಭಿಸುವುದು.

೨೧. ಅಗ್ನಿಪರ್ವತದಂತೆ ತೇಜಸ್ವಿಯಾದ ಈ ಲಿಂಗವು ಇಲ್ಲಿ ಜನಿಸಿದುದರಿಂದ ಇದು ಇನ್ನು ಮುಂದೆ "ಅರುಣಾಚಲ" ವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದುವುದು. ಈ ಸ್ಥಾನಕ್ಕೂ ಸಹ ಅರುಣಾಚಲವೆಂಬ ಹೆಸರು ಬರುವುದು.

ಅತ್ರ ತೀರ್ಥಂ ಚ ಬಹುಧಾ ಭವಿಷ್ಯತಿ ಮಹತ್ತರಂ ।
ಮುಕ್ತಿರಸ್ಯತ್ರ ಜಂತೂನಾಂ ವಾಸೇನ ಮರಣೇನ ಚ ॥ ೨೨ ॥

ರಥೋತ್ಸವಾದಿಕಲ್ಯಾಣಂ ಜನಾವಾಸಂ ತು ಸರ್ವತಃ ।
ಅತ್ರ ದತ್ತಂ ಹುತಂ ಜಪ್ತಂ ಸರ್ವಂ ಕೋಟಿಗುಣಂ ಭವೇತ್ ॥ ೨೩ ॥

ಮತ್ಕ್ಷೇತ್ರಾದಪಿ ಸರ್ವಸ್ಮಾತ್ ಕ್ಷೇತ್ರಮೇತನ್ಮಹತ್ತರಂ ।
ಅತ್ರ ಸಂಸ್ಮೃತಿಮಾತ್ರೇಣ ಮುಕ್ತಿರ್ಭವತಿ ದೇಹಿನಾಂ ॥ ೨೪ ॥

ತಸ್ಮಾನ್ಮಹತ್ತರಮಿದಂ ಕ್ಷೇತ್ರಮತ್ಯಂತಶೋಭನಂ ।
ಸರ್ವಕಲ್ಯಾಣಸಂಪೂರ್ಣಂ ಸರ್ವಮುಕ್ತಿಕರಂ ಶುಭಂ ॥ ೨೫ ॥

ಅರ್ಚಯಿತ್ವಾತ್ರ ಮಾಮೇವ ಲಿಂಗೇ ಲಿಂಗಿನಮೀಶ್ವರಂ ।
ಸಾಲೋಕ್ಯಂ ಚೈವ ಸಾಮೀಪ್ಯಂ ಸಾರೂಪ್ಯಂ ಸಾರ್ಷ್ಟಿರೇವ ಚ ॥ ೨೬ ॥

---

೨೨. ಈ ಸ್ಥಳದಲ್ಲಿ ಅನೇಕ ತೀರ್ಥಗಳು ಉದ್ಭವಿಸುವುವು. ಇಲ್ಲಿ ವಾಸ ಮಾಡಿದವರಿಗೂ ಮರಣವನ್ನು ಹೊಂದುವವರಿಗೂ ಮುಕ್ತಿಯು ಲಭಿಸುವುದು.

೨೩. ಇಲ್ಲಿ ಹೆಚ್ಚಾಗಿ ಜನಗಳ ವಾಸವೂ, ರಥೋತ್ಸವ ಮುಂತಾದ ಮಂಗಳ ಕಾರ್ಯಗಳೂ ವಿಶೇಷವಾಗಿ ನಡೆಯುವುವು. ಇಲ್ಲಿ ದಾನ ಹೋಮ, ಇವೆಲ್ಲವನ್ನೂ ಮಾಡಿದರೆ ಒಂದಕ್ಕೆ ಕೋಟಿಯಷ್ಟು ಫಲವು ಲಭಿಸುವುದು.

೨೪. ನನ್ನ ಎಲ್ಲಾ ಕ್ಷೇತ್ರಗಳಿಗಿಂತಲೂ ಈ ಕ್ಷೇತ್ರವು ಶ್ರೇಷ್ಠವಾದುದು, ಇಲ್ಲಿ ನನ್ನನ್ನು ಸ್ಮರಣೆಮಾಡಿದ ಮಾತ್ರದಿಂದಲೇ ಮಾನವನು ಮುಕ್ತಿಯನ್ನೈದುವನು.

೨೫. ಆದುದರಿಂದ ಈ ಕ್ಷೇತ್ರವು ಅತಿ ಶ್ರೇಷ್ಠವಾದುದು. ಅತಿ ಮನೋಹರ ವಾದುದು. ಸಕಲ ಕಲ್ಯಾಣಗಳೂ ಈ ಕ್ಷೇತ್ರದಲ್ಲಿ ನೆಲಸಿರುವುವು. ಎಲ್ಲರಿಗೂ ಮುಕ್ತಿಯು ಇಲ್ಲಿ ಲಭಿಸುವುದು.

೨೬. ಈ ಲಿಂಗದಲ್ಲಿ ಲಿಂಗಾಭಿಮಾನಿದೇವತೆಯಾದ ನನ್ನನ್ನು, ನಾನೇ (ಶಿವನೇ) ಈಶ್ವರನೆಂದೂ, ಸೃಷ್ಟಿಯೇ ಮೊದಲಾದ ಐದು ಕ್ರಿಯೆಗಳನ್ನು ಮಾಡುವವ ನೆಂದೂ ಧ್ಯಾನಿಸಿ ಅರ್ಚಿಸಿದರೆ ಆ ಐದು ಕ್ರಿಯೆಗಳಿಗೆ ಅನುಸಾರವಾಗಿ ಸಾಲೋಕ್ಯ (ಶಿವ

ಸಾಯುಜ್ಯಮಿತಿ ಪಂಚೈತೇ ಕ್ರಿಯಾದೀನಾಂ ಫಲಂ ಮತಂ ।
ಸರ್ವೇऽಪಿ ಯೂಯಂ ಸಕಲಂ ಪ್ರಾಪ್ಸ್ಯಥಾऽಶು ಮನೋರಥಂ ॥ ೨೭ ॥

॥ ನಂದಿಕೇಶ್ವರ ಉವಾಚ ॥

ಇತ್ಯನುಗೃಹ್ಯ ಭಗವಾನ್ ವಿನೀತೌ ವಿಧಿಮಾಧವೌ ।
ಯತ್ಪೂರ್ವಂ ಪ್ರಹತಂ ಯುದ್ಧೇ ತಯೋಃ ಸೈನ್ಯಂ ಪರಸ್ಪರಂ ॥ ೨೮ ॥

ತದುತ್ಥಾಪಯದತ್ಯರ್ಥಂ ಸ್ವಶಕ್ತ್ಯಾऽಮೃತಧಾರಯಾ ।
ತಯೋರ್ಮೌಢ್ಯಂ ಚ ವೈರಂ ಚ ವ್ಯಪನೇತುಮುವಾಚ ತೌ ॥ ೨೯ ॥

ಸಕಲಂ ನಿಷ್ಕಲಂ ಚೇತಿ ಸ್ವರೂಪದ್ವಯಮಸ್ತಿ ಮೇ ।
ನಾನ್ಯಸ್ಯ ಕಸ್ಯಚಿತ್ತಸ್ಮಾದನ್ಯಃ ಸರ್ವೋऽಪ್ಯನೀಶ್ವರಃ ॥ ೩೦ ॥

---

ಲೋಕದಲ್ಲಿ ವಾಸ) ಸಾಮೀಪ್ಯ (ಶಿವನ ಸಮೀಪದಲ್ಲಿಯೇ ವಾಸ) ಸಾರೂಪ್ಯ (ಶಿವನಿಗೆ ಸಮಾನವಾದ ಸ್ವರೂಪವನ್ನು ಹೊಂದುವುದು.) ಸಾರ್ಷ್ಟಿ (ಶಿವನಿಗೆ ಸಮಾನವಾದ ವೈಭವ) ಸಾಯುಜ್ಯ) (ಶಿವನೊಡನೆ ಐಕ್ಯ) ಈ ಐದು ವಿಧವಾದ ಮೋಕ್ಷಗಳು ಸಿಗುವುವು. ಒಂದೊಂದು ಕ್ರಿಯೆಯಿಂದ ಒಂದೊಂದು ಮುಕ್ತಿಯು ಲಭಿಸುವುದು. ಐದು ವಿಧವಾದ ಮುಕ್ತಿಗಳೂ ಲಭಿಸುವುವು. ಎಲೈ ದೇವತೆಗಳಿರಾ ! ನೀವೂ ಸಹ ಎಲ್ಲರೂ ಈ ಲಿಂಗದಲ್ಲಿ ನನ್ನನ್ನು ಪೂಜಿಸಿ ಸಕಲ ಇಷ್ಟಾರ್ಥಗಳನ್ನೂ ಪಡೆಯಿರಿ. ಎಂದನು

೨೮. ನಂದೀಕೇಶ್ವರನು ಹೇಳಿದನು :—ಹೀಗೆ ಭಗವಂತನಾದ ಪರಮೇಶ್ವರನು ವಿನೀತರಾದ ಬ್ರಹ್ಮ ವಿಷ್ಣುಗಳನ್ನು ಅನುಗ್ರಹಿಸಿ ಬಳಿಕ ಆ ಬ್ರಹ್ಮವಿಷ್ಣುಗಳ ಯುದ್ಧ ದಲ್ಲಿ ಮಡಿದಿರುವಂತಹ ಸೈನ್ಯವನ್ನು ತನ್ನ ಶಕ್ತಿಯೆಂಬ ಅಮೃತಧಾರೆಯಿಂದ ಬದುಕಿಸಿದನು.

೨೯-೩೦. ಬಳಿಕ ಆ ಈಶ್ವರನು ಬ್ರಹ್ಮವಿಷ್ಣುಗಳ ಅವಿವೇಕವನ್ನೂ ಪರಸ್ಪರ ವೈರವನ್ನೂ ಹೋಗಲಾಡಿಸಲು ಅವರನ್ನು ಕುರಿತು ಹೀಗೆ ಹೇಳಿದನು. ಎಲೈ ವಿಷ್ಣು ಬ್ರಹ್ಮರೆ, ಕೇಳಿ ನನಗೆ ಸಾಕಾರವೂ ನಿರಾಕಾರವೂ ಆದ ಎರಡು ರೂಪಗಳು ಇರುವುವು. ಇನ್ನಾರಿಗೂ ಈ ಎರಡು ರೂಪಗಳಿಲ್ಲ. ಆದಕಾರಣ ನನ್ನ ಹೊರತು ಮಿಕ್ಕವರೆಲ್ಲರೂ ಅನೀಶ್ವರರು. ಈಶ್ವರರಲ್ಲ.

ಪುರಸ್ತಾತ್ಸ್ತಂಭರೂಪೇಣ ಪಶ್ಚಾದ್ರೂಪೇಣ ಚಾರ್ಭಕೌ ।
ಬ್ರಹ್ಮತ್ವಂ ನಿಷ್ಕಲಂ ಪ್ರೋಕ್ತಮೀಶತ್ವಂ ಸಕಲಂ ತಥಾ ॥ ೩೧ ॥

ದ್ವಯಂ ಮಮೈವ ಸಂಸಿದ್ಧಂ ನ ಮದನ್ಯಸ್ಯ ಕಸ್ಯಚಿತ್ ।
ತಸ್ಮಾದೀಶತ್ವಮನ್ಯೇಷಾಂ ಯುವಯೋರಪಿ ನ ಕ್ವಚಿತ್ ॥ ೩೨ ॥

ತದಜ್ಞಾನೇನ ವಾಂ ವೃತ್ತಮೀಶಮಾನಂ ಮಹಾದ್ಭುತಂ ।
ತನ್ನಿರಾಕರ್ತುಮತ್ರೈವಮುತ್ಥಿತೋಽಹಂ ರಣಕ್ಷಿತೌ ॥ ೩೩ ॥

ತ್ಯಜ ತಂ ಮಾನಮಾತ್ಮೀಯಂ ಮಯೀಶೇ ಕುರು ತಂ ಮತಿಂ ।
ಮತ್ಪ್ರಸಾದೇನ ಲೋಕೇಷು ಸರ್ವೋಽಪ್ಯರ್ಥಃ ಪ್ರಕಾಶತೇ ॥ ೩೪ ॥

---

೩೧. ಮೊದಲು ನಿರಾಕಾರವಾದ ಸ್ತಂಭರೂಪದಿಂದ ನನ್ನ ನಿರಾಕಾರವಾದ ಬ್ರಹ್ಮಸ್ವರೂಪವು ಪ್ರಕಟಿಸಲ್ಪಟ್ಟಿರುವುದು. ಎರಡನೆಯದಾಗಿ ಈ ನನ್ನ ಪ್ರತ್ಯಕ್ಷ ವಾಗಿರುವ ರೂಪದಿಂದ ಈಶ್ವರರೂಪವಾದ ಎರಡನೆಯ ಸಾಕಾರಸ್ವರೂಪವು ನಿಮಗೆ ಗೋಚರವಾಗಿರುವುದು.

೩೨. ಹೀಗೆ ಸಾಕಾರ ಮತ್ತು ನಿರಾಕಾರಗಳೆಂಬ ಎರಡು ಸ್ವರೂಪಗಳು ನನ ಗೊಬ್ಬನಿಗೆ ಮಾತ್ರ ಇರುವುವು. ಇನ್ನಾರಿಗೂ ಇಲ್ಲ. ಆದಕಾರಣ ಈಶ್ವರತ್ವವು ನಿಮಗಾಗಲಿ ಇತರ ದೇವತೆಗಳಿಗಾಗಲಿ ಇಲ್ಲ.

೩೩. ಈ ತತ್ತ್ವವನ್ನು ತಿಳಿಯದೆ ನೀವು "ನಾನೇ ಈಶ್ವರನು ನಾನೇ ಈಶ್ವರನು" ಎಂಬ ದುರಹಂಕಾರದಿಂದ ವಿಜೃಂಭಿಸಿದಿರಿ. ಈ ನಿಮ್ಮ ಅಹಂಕಾರ ವನ್ನು ಹೋಗಲಾಡಿಸಲು ನಾನು ಈ ರಣಭೂಮಿಯಲ್ಲಿ ನಿರಾಕಾರವಾದ ಸ್ತಂಭರೂಪ ದಿಂದ ಆವಿರ್ಭವಿಸಿದೆನು.

೩೪. ಆದುದರಿಂದ ಈ ನಿಮ್ಮ ಅಹಂಕಾರವನ್ನು ತ್ಯಜಿಸಿ ಶಿವನಾದ ನಾನೇ ಈಶ್ವರನೆಂದು ತಿಳಿಯಿರಿ. ಈಶ್ವರನಾದ ನನ್ನ ಅನುಗ್ರಹದಿಂದಲೇ ಲೋಕದಲ್ಲಿ ಸಕಲ ವಸ್ತುಗಳೂ ಪ್ರಕಾಶಿಸುತ್ತಲಿರುವುವು. ನನ್ನ ಅನುಗ್ರಹವಿಲ್ಲದಿದ್ದರೆ ಯಾವ ವಸ್ತು ಗಳೂ ಇರಲಾರವು.

ಗುರೂಕ್ತಿರ್ವ್ಯಂಜಕಂ ತತ್ರ ಪ್ರಮಾಣಂ ವಾ ಪುನಃ ಪುನಃ ।
ಬ್ರಹ್ಮತತ್ತ್ವಮಿದಂ ಗೂಢಂ ಭವತ್ಪ್ರೀತ್ಯಾ ಭಣಾಮ್ಯಹಂ ॥ ೩೫ ॥

ಅಹಮೇವ ಪರ ಬ್ರಹ್ಮ ಮತ್ಸ್ವರೂಪಂ ಕಲಾಕಲಂ ।
ಬ್ರಹ್ಮತ್ವಾದೀಶ್ವರಶ್ಚಾಹಂ ಕೃತ್ಯಂ ಮೇಽನುಗ್ರಹಾದಿಕಂ ॥ ೩೬ ॥

ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಾಹಂ ಬ್ರಹ್ಮಕೇಶವೌ ।
ಸಮತ್ವಾದ್ವ್ಯಾಪಕತ್ವಾಚ್ಚ ತಥೈವಾತ್ಮಾಹಮರ್ಭಕೌ ॥ ೩೭ ॥

ಅನಾತ್ಮಾನಃ ಪರೇ ಸರ್ವೇ ಜೀವಾ ಏವ ನ ಸಂಶಯಃ ।
ಅನುಗ್ರಹಾದ್ಯಂ ಸರ್ಗಾಂತಂ ಜಗತ್ಕೃತ್ಯಂ ಚ ಪಂಚಕಂ ॥ ೩೮

ಈಶತ್ವಾದೇವ ಮೇ ನಿತ್ಯಂ ನ ಮದನ್ಯಸ್ಯ ಕಸ್ಯಚಿತ್ ।
ಆದೌ ಬ್ರಹ್ಮತ್ವಬುದ್ಧ್ಯರ್ಥಂ ನಿಷ್ಕಲಂ ಲಿಂಗಮುತ್ಥಿತಂ ॥ ೩೯ ॥

---

೩೫. ಗುರೂಪದೇಶವು ನನ್ನ ಬ್ರಹ್ಮಸ್ವರೂಪವನ್ನು ವಿಶದಪಡಿಸುವುದು. ಗುರೂಪದೇಶವೇ ಪ್ರಮಾಣವು. ಗುರುಮುಖದಿಂದಲೇ ಬ್ರಹ್ಮತತ್ತ್ವವನ್ನು ತಿಳಿಯಬೇಕು. ಬ್ರಹ್ಮತತ್ತ್ವವು ತುಂಬಾ ರಹಸ್ಯವಾದುದು. ಆದರೆ ನಿಮ್ಮ ಮೇಲಿನ ಪ್ರೀತಿಯಿಂದ ನಿಮಗೆ ಹೇಳುವೆನು.

೩೬. ನಾನೇ ಪರಬ್ರಹ್ಮನು, ನನ್ನ ಸ್ವರೂಪವು ಹಿಂದೆ ಹೇಳಿದಂತೆ ಸಾಕಾರವೂ ನಿರಾಕಾರವೂ ಆಗಿರುವುದು. ಆದುದರಿಂದ ನಿರಾಕಾರವಾದ ಬ್ರಹ್ಮಸ್ವರೂಪನೂ, ಸಾಕಾರವಾದ ಈಶ್ವರಸ್ವರೂಪನೂ ನಾನೇ ಆಗಿರುವೆನು. ಈಶ್ವರರೂಪನಾದ ನಾನೇ ಅನುಗ್ರಹ ಮೊದಲಾದ ಐದು ಕ್ರಿಯೆಗಳನ್ನು ಮಾಡುವೆನು.

೩೭-೩೮. ವಿಷ್ಣು ಬ್ರಹ್ಮರೇ ! ನಿರಾಕಾರವಾದ ದೊಡ್ಡ ಸ್ವರೂಪವುಳ್ಳವನಾದುದರಿಂದಲೂ ಮನುಷ್ಯಾದಿ ಶರೀರಗಳಲ್ಲಿ ಜೀವರೂಪದಿಂದ ಆವಿರ್ಭವಿಸುವುದರಿಂದಲೂ ನಾನೇ ಬ್ರಹ್ಮನು, ಮತ್ತು ಸರ್ವಸಮನಾದುದರಿಂದಲೂ, ವ್ಯಾಪಕನಾದುದರಿಂದಲೂ ನಾನೇ ಆತ್ಮನು, ಮಿಕ್ಕವರೆಲ್ಲರೂ ಅನಾತ್ಮರು. ಪರಮಾತ್ಮರಲ್ಲ, ಜೀವರು. ಇದರಲ್ಲಿ ಸಂಶಯವಿಲ್ಲ.

೩೯. ಅನುಗ್ರಹ ಮೊದಲುಗೊಂಡು ಸೃಷ್ಟಿಯ ಪರ್ಯಂತವಾದ ಐದು

ತಸ್ಮಾದಜ್ಞಾತಮೀಶತ್ವಂ ವ್ಯಕ್ತಂ ದ್ಯೋತಯಿತುಂ ಹಿ ವಾಂ ।
ಸಕಲೋಽಹಮತೋ ಜಾತಃ ಸಾಕ್ಷಾದೀಶಸ್ತು ತತ್‌ಕ್ಷಣಾತ್ ॥ ೪೦ ॥

ಸಕಲತ್ವಮತೋ ಜ್ಞೇಯಮೀಶತ್ವಂ ಮಯಿ ಸತ್ವರಂ ।
ಯದಿದಂ ನಿಷ್ಕಲಂ ಸ್ತಂಭಂ ಮಮ ಬ್ರಹ್ಮತ್ವಬೋಧಕಂ ॥ ೪೧ ॥

ಲಿಂಗಲಕ್ಷಣಯುಕ್ತತ್ವಾನ್ಮಮ ಲಿಂಗಂ ಭವೇದಿದಂ ।
ತದಿದಂ ನಿತ್ಯಮಭ್ಯರ್ಚ್ಯ ಯುವಾಭ್ಯಾಮತ್ರ ಪುತ್ರಕೌ ॥ ೪೨ ॥

ಮದಾತ್ಮಕಮಿದಂ ನಿತ್ಯಂ ಮಮ ಸಾನ್ನಿಧ್ಯಕಾರಣಂ ।
ಮಹತ್ಪೂಜ್ಯಮಿದಂ ನಿತ್ಯಮಭೇದಾಲ್ಲಿಂಗಲಿಂಗಿನೋಃ ॥ ೪೩ ॥

---

ಜಗತ್ಕೃತ್ಯಗಳು ಈಶ್ವರನಾನುದುದರಿಂದ ನನ್ನಲ್ಲಿಯೇ ಇರುವುವು. ಇನ್ನಾರಿಗೂ ಇರುವುದಿಲ್ಲ.

೪೦-೪೧. ಮೊದಲು ನಾನೇ ಬ್ರಹ್ಮನೆಂಬುದನ್ನು ತಿಳಿಸಲು ನಿರಾಕಾರವಾದ ಲಿಂಗರೂಪದಿಂದ ಆವಿರ್ಭವಿಸಿದೆನು. ಆಮೇಲೆ ಯಾರಿಗೂ ತಿಳಿಯದ ನನ್ನ ಈಶ್ವರ ಭಾವವನ್ನು ನಿಮಗೆ ತೋರಿಸಲು ಸಾಕಾರವಾದ ಈ ಈಶ್ವರಸ್ವರೂಪದಿಂದ ನಿಮ್ಮೆದುರಿಗೆ ಆವಿರ್ಭವಿಸಿರುವೆನು. ಆದುದರಿಂದ ಸಾಕಾರವಾದ ಈಶ್ವರಸ್ವರೂಪವು ನನ್ನಲ್ಲಿಯೇ ಇರುವುದೆಂದು ತಿಳಿಯಬೇಕು.

೪೨. ನನ್ನ ಬ್ರಹ್ಮತ್ವವನ್ನು ಸೂಚಿಸುವ ಈ ನಿರಾಕಾರವಾದ ಸ್ತಂಭವು ಲಿಂಗಲಕ್ಷಣಗಳುಳ್ಳದಾದುದರಿಂದ ಇದು ನನ್ನ ಶಿವಲಿಂಗವಾಗಲಿ. ಎಲೈ ವತ್ಸರಾದ ಬ್ರಹ್ಮವಿಷ್ಣುಗಳೇ! ಆದುದರಿಂದ ಇಲ್ಲಿ ಈ ಲಿಂಗವನ್ನು ನೀವೀರ್ವರೂ ನಿತ್ಯವೂ ಪೂಜಿಸಬೇಕು.

೪೩. ಈ ಲಿಂಗವು ಸದಾ ನನ್ನ ಸ್ವರೂಪವಾದುದು, ಇದು ನನ್ನ ಸಾಕ್ಷಾತ್ಕಾರ ವನ್ನು ದೊರಕಿಸಿ ಕೊಡುವುದು. ಈ ಲಿಂಗವು ಲಿಂಗಾಭಿಮಾನಿದೇವತೆಯಾದ ನಾನೇ ಈಶ್ವರನು ಎಂಬ ಅಭೇದ ದೃಷ್ಟಿಯಿಂದ ಈ ಮಹಾಲಿಂಗವನ್ನು ಪೂಜಿಸ ಬೇಕು.

ಯತ್ರ ಪ್ರತಿಷ್ಠಿತಂ ಯೇನ ಮದೀಯಂ ಲಿಂಗಮೀದೃಶಂ ।
ತತ್ರ ಪ್ರತಿಷ್ಠಿತಃ ಸೋಽಹಮಪ್ರತಿಷ್ಠೋಽಪಿ ವತ್ಸಕೌ ॥ ೪೪ ॥

ಮತ್ಸಾಮ್ಯಮೇಕಲಿಂಗಸ್ಯ ಸ್ಥಾಪನೇ ಫಲಮೀರಿತಂ ।
ದ್ವಿತೀಯೇ ಸ್ಥಾಪಿತೇ ಲಿಂಗೇ ಮದೈಕ್ಯಂ ಫಲಮೇವ ಹಿ ॥ ೪೫ ॥

ಲಿಂಗಂ ಪ್ರಾಧಾನ್ಯತಃ ಸ್ಥಾಪ್ಯಂ ತಥಾ ಬೇರಂ ತು ಗೌಣಕಂ ।
ಲಿಂಗಾಭಾವೇನ ತತ್ಕ್ಷೇತ್ರಂ ಸಬೇರಮಪಿ ಸರ್ವತಃ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ
ನವಮೋಽಧ್ಯಾಯಃ.

---

೪೪. ಅಲ್ಲದೆ, ಈ ವಿಧವಾದ ಲಿಂಗವನ್ನು ಯಾರು ಎಲ್ಲೆಲ್ಲಿ ಪ್ರತಿಷ್ಠಿಸಿದರೂ ಅಲ್ಲೆಲ್ಲಾ ನಾನೂ ಪ್ರತಿಷ್ಠಿತನಾಗಿ ಇರುವೆನು. ಪಾರಮಾರ್ಥಿಕವಾಗಿ ವ್ಯಾಪಕನಾದ ನಾನು ಒಂಡೆಡೆಯಲ್ಲಿಯೇ ಇರುವವನಲ್ಲವಾದರೂ ಮಾಯಿಕವಾದ ಅಂತರ್ಯಾಮಿ ರೂಪದಿಂದಿರುವೆನು. ಎಂದರೆ ಈಶ್ವರನು ವ್ಯಾಪಕನು, ಆಕಾಶದಂತೆ ಎಲ್ಲೆಡೆಯಲ್ಲಿಯೂ ಇರುವವನು, ಇಂಥವನು ಕೆಲವೆಡೆ ಮಾತ್ರ ಲಿಂಗಗಳಲ್ಲಿ ಇರುವುದು ಅಸಂಭವವು. ವ್ಯಾಪಕವಲ್ಲದ ಚಿಕ್ಕವಸ್ತುವು ಹಾಗಿರಬಲ್ಲದು, ಅಲ್ಲದೆ, ಎಲ್ಲೆಡೆಯಲ್ಲಿಯೂ ಸಮವಾಗಿ ರುವ ವಸ್ತುವನ್ನು ಇಲ್ಲಿ ಮಾತ್ರ ಇರುವುದೆನ್ನುವುದು ಸರಿಯಲ್ಲ. ಆದುದರಿಂದ ಮಾಯಿಕವಾದ ಅಂತರ್ಯಾಮಿರೂಪದಿಂದ ಇರುವನು ಎಂದು ಅಭಿಪ್ರಾಯವು.

೪೫. ಒಂದು ಲಿಂಗವನ್ನು ಪ್ರತಿಷ್ಠೆಮಾಡುವ ಪುರುಷನಿಗೆ ನನ್ನ ಸಾಮ್ಯವು (ಶಿವಸಮಾನತೆಯು) ಲಭಿಸುವುದು. ಎರಡು ಲಿಂಗವನ್ನು ಪ್ರತಿಷ್ಠಿಸಿದವನು ನನ್ನೊಡನೆ ಐಕ್ಯವನ್ನೇ ಹೊಂದುವನು.

೪೬. ಲಿಂಗವನ್ನೇ ಪ್ರಧಾನವಾಗಿ ಪ್ರತಿಷ್ಠಿಸಬೇಕು- ವಿಗ್ರಹ ಪ್ರತಿಷ್ಠೆಯು ಗೌಣವು ಎಂದರೆ ಪ್ರಧಾನವಲ್ಲ. ಅಷ್ಟು ಉತ್ತಮವಾದುದೂ ಅಲ್ಲ. ವಿಗ್ರಹವನ್ನು ಪ್ರತಿಷ್ಠಿಸಿದ ಕ್ಷೇತ್ರವು ಲಿಂಗವಿಲ್ಲದುದರಿಂದ ಅಷ್ಟೊಂದು ಶ್ರೇಷ್ಠವಾದುದಲ್ಲ. ಲಿಂಗ ಪ್ರತಿಷ್ಠೆಯುಳ್ಳ ಕ್ಷೇತ್ರವೇ ಶ್ರೇಷ್ಠವಾದುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಿದ್ಯೇಶ್ವರಸಂಹಿತಾಯಾಂ

## ದಶಮೋಽಧ್ಯಾಯಃ

---

॥ ಬ್ರಹ್ಮವಿಷ್ಣೂ ಊಚತುಃ ॥

ಸರ್ಗಾದಿಪಂಚಕೃತ್ಯಸ್ಯ ಲಕ್ಷಣಂ ಬ್ರೂಹಿ ನೋ ಪ್ರಭೋ ।

॥ ಶಿವ ಉವಾಚ ॥

ಮತ್ಕೃತ್ಯಬೋಧನಂ ಗುಹ್ಯಂ ಕೃಪಯಾ ಪ್ರಬ್ರವೀಮಿ ವಾಂ ॥ ೧ ॥

ಸೃಷ್ಟಿಃ ಸ್ಥಿತಿಶ್ಚ ಸಂಹಾರಸ್ತಿರೋಭಾವೋಽಪ್ಯನುಗ್ರಹಃ ।
ಪಂಚೈವ ಮೇ ಜಗತ್ಕೃತ್ಯಂ ನಿತ್ಯಸಿದ್ಧಮಜಾಚ್ಯುತೌ ॥ ೨ ॥

---

## ಹತ್ತನೆಯ ಅಧ್ಯಾಯವು.

೧. ಬ್ರಹ್ಮ ಮತ್ತು ವಿಷ್ಣುಗಳು ಕೇಳಿದರು :—ಓ ಪ್ರಭುವೇ ! ಸೃಷ್ಟಿ ಮೊದಲಾದ ನಿನ್ನ ಐದು ಕೃತ್ಯಗಳ ಲಕ್ಷಣವನ್ನು ನಮಗೆ ಹೇಳು ಎನ್ನಲು, ಶಿವನು ಹೇಳಿದನು :—ನನ್ನ ಪಂಚಕೃತ್ಯಗಳನ್ನು ತಿಳಿಯುವುದು ತುಂಬಾ ಕಷ್ಟವಾದುದು, ನಿಮ್ಮ ಮೇಲಿನ ಅನುಗ್ರಹದಿಂದ ನಿಮಗೆ ಹೇಳುವೆನು.

೨. ಎಲೈ ಬ್ರಹ್ಮವಿಷ್ಣುಗಳೇ ! ಸೃಷ್ಟಿ, ಸ್ಥಿತಿ (ಪಾಲನೆ) ಸಂಹಾರ, ನಿಗ್ರಹ, ಅನುಗ್ರಹ, ಇವುಗಳೇ ನನ್ನಲ್ಲಿ ನಿತ್ಯಸಿದ್ಧವಾಗಿರುವ ಐದು ಜಗತ್ಕೃತ್ಯಗಳು.

ಸರ್ಗಃ ಸಂಸಾರಸಂರಂಭಸ್ತತ್ಪ್ರತಿಷ್ಠಾ ಸ್ಥಿತಿರ್ಮತಾ ।
ಸಂಹಾರೋ ಮರ್ದನಂ ತಸ್ಯ ತಿರೋಭಾವಸ್ತದುತ್ಕ್ರಮಃ ॥ ೩ ॥

ತನ್ಮೋಕ್ಷೋಽನುಗ್ರಹಸ್ತನ್ಮೇ ಕೃತ್ಯಮೇವಂ ಹಿ ಪಂಚಕಂ ।
ಕೃತ್ಯಮೇತದ್ವಹತ್ಯನ್ಯಸ್ತೂಷ್ಣೀಂ ಗೋಪುರಬಿಂಬವತ್ ॥ ೪ ॥

ಸರ್ಗಾದಿಯಚ್ಚತುಷ್ಕೃತ್ಯಂ ಸಂಸಾರಪರಿಜೃಂಭಣಂ ।
ಪಂಚಮಂ ಮುಕ್ತಿಹೇತುರ್ವೈ ನಿತ್ಯಂ ಮಯಿ ಚ ಸುಸ್ಥಿರಂ ॥ ೫ ॥

ತದಿದಂ ಪಂಚಭೂತೇಷು ದೃಶ್ಯತೇ ಮಾಮಕೈರ್ಜನೈಃ ।
ಸೃಷ್ಟಿರ್ಭೂಮೌ ಸ್ಥಿತಿಸ್ತೋಯೇ ಸಂಹಾರಃ ಪಾವಕೇ ತಥಾ ॥ ೬ ॥

---

೩-೪. ಸಂಸಾರವನ್ನು (ಜಗತ್ತು) ಪ್ರವರ್ತಿಸುವಂತೆ ಮಾಡುವುದೇ ಮೊದಲನೆಯದಾದ ಸೃಷ್ಟಿ ಕೃತ್ಯವು. ಪ್ರವರ್ತಿಸಿದ (ಜನಿಸಿದ) ಆ ಸಂಸಾರವನ್ನು ಕೆಲವು ದಿನ ಸ್ಥಿರವಾಗಿರುವಂತೆ ಪಾಲಿಸುವುದೇ ಸ್ಥಿತಿಯು. ಕೊನೆಯಲ್ಲಿ ಆ ಸಂಸಾರ (ಜಗತ್ತು) ವನ್ನು ನಾಶಗೊಳಿಸುವುದಕ್ಕೇ ಸಂಹಾರ (ಪ್ರಳಯ) ವೆಂದು ಹೆಸರು. ದುಷ್ಟ ಮಾರ್ಗಕ್ಕೆ ಹೋಗುವ ಜಗತ್ತಿನ ಪ್ರಾಣಿಯನ್ನು ನಿಗ್ರಹಿಸುವುದಕ್ಕೆ "ತಿರೋಭಾವ" ವೆಂದು ಹೆಸರು. ಜನಗಳಿಗೆ ಆ ಸಂಸಾರದಿಂದ ಆಗುವ ಬಿಡುಗಡೆ (ಮುಕ್ತಿ) ಯೇ ಐದನೆಯ ಕೃತವಾದ ಅನುಗ್ರಹವು. ಹೀಗೆ ನನ್ನಿಂದ ಐದು ಕೃತ್ಯಗಳು ನಡೆಯುವುವು. ಮಿಕ್ಕವರೂ ಸಹ ಈ ಕೃತ್ಯಗಳನ್ನು ಗೋಪುರ ಬಿಂಬ (ಮೂರ್ತಿ) ಯಂತೆ ಧರಿಸಿರುವರು. ಎಂದರೆ ಗೋಪುರದಲ್ಲಿರುವ ಬಿಂಬಕ್ಕೆ ಐದು ಕೃತ್ಯಗಳನ್ನು ಪ್ರಯೋಗಿಸುವುದಕ್ಕೆ ಸಾಧ್ಯವಿಲ್ಲವು. ಅದರಂತೆ ನನ್ನ ಹೊರತು ಮಿಕ್ಕವರಿಗೆ ಈ ಕೃತ್ಯಗಳನ್ನು ಪ್ರಯೋಗಿಸಲು ಸಾಧ್ಯವಲ್ಲವು.

೫. ಸೃಷ್ಟಿ ಮೊದಲಾದ ನಾಲ್ಕು ಕೃತ್ಯಗಳು ಜಗತ್ತಿಗೇ ಸಂಬಂಧಿಸಿದುವು, ಅವುಗಳು ಸಂಸಾರಪರಿವರ್ತನೆಯ ರೂಪಗಳು, ಸಂಸಾರದಲ್ಲಿ ಇರುವುವು. ಐದನೆಯದಾದ ಅನುಗ್ರಹ ಕೃತ್ಯವು ಮುಕ್ತಿಗೆ ಸಾಧನವಾದುದು, ಅದು ನನ್ನಲ್ಲಿ ಸದಾ ಸ್ಥಿರವಾಗಿರುವುದು.

೬. ಈ ನನ್ನ ಐದು ಕೃತ್ಯಗಳು ಪಂಚಭೂತಗಳಲ್ಲಿ ಇರುವುವು. ಅದ ನನ್ನ ಭಕ್ತರಿಗೆ ಮಾತ್ರ ತಿಳಿಯುವುದು. ಅದು ಹೇಗೆಂದರೆ-ಸೃಷ್ಟಿಯು ಭೂಮಿಯಲ್ಲಿರುವುದು, ಜಲ

ಶಿರೋಭಾವೋಽನಿಲೇ ತದ್ವದನುಗ್ರಹ ಇಹಾಂಬರೇ ।
ಸೃಜ್ಯತೇ ಧರಯಾ ಸರ್ವಮದ್ಭಿಃ ಸರ್ವಂ ಪ್ರವರ್ಧತೇ ॥ ೭ ॥

---

ದಲ್ಲಿ ಸ್ಥಿತಿಯು ಇರುವುದು, ಅಗ್ನಿಯಲ್ಲಿ ಸಂಹಾರಕೃತ್ಯವಿರುವುದು, ವಾಯುವಿನಲ್ಲಿ ನಿಗ್ರಹವು ಇರುವುದು, ಅನುಗ್ರಹವು ಆಕಾಶದಲ್ಲಿ ಇರುವುದು.

ಪರಮೇಶ್ವರನ ಪಂಚಕೃತ್ಯಗಳ ಸ್ವರೂಪವನ್ನು ಈ ಶ್ಲೋಕದಲ್ಲಿ ಉಪಮಾನ ಪೂರ್ವಕವಾಗಿ ಹೇಳಿರುವುದು. ಸೃಷ್ಟಿಯೆಂದರೆ, ಅವ್ಯಕ್ತವಾದ ಪರಬ್ರಹ್ಮವು ವ್ಯಕ್ತ ರೂಪವನ್ನು ಹೊಂದಿ ದೃಶ್ಯಾದೃಶ್ಯ ಪ್ರಪಂಚವಾಗಿ ಮಾರ್ಪಡುವುದು. ಎಂದರೆ ಒಂದು ವಸ್ತುವಿನ ರೂಪವು ಬದಲಾಯಿಸಿ ಬೇರೆ ರೂಪಾಂತರವಾಗುವುದು. ಈ ವಿಧವಾದ ಕಾರ್ಯವು ಪೃಥಿವೀತತ್ತ್ವದಲ್ಲಿ ಎಂದರೆ ಭೂಮಿಯಲ್ಲಿ ಕಂಡುಬರುವುದು. ವನಸ್ಪತಿಗಳೂ, ಪ್ರಾಣಿಗಳೂ, ಹುಟ್ಟುತ್ತಲೂ, ನಾಶವಾಗುತ್ತಲೂ ಇರುವುವು. ಮತ್ತು ನದೀ ಪ್ರರ್ವತಾದಿಗಳೂ ಸಹ ಕಾಲಕ್ರಮದಲ್ಲಿ ರೂಪಾಂತರವನ್ನು ಹೊಂದುತ್ತಲಿರುವುದು. ಆದುದರಿಂದ ಪೃಥಿವಿಯಲ್ಲಿ ಸೃಷ್ಟಿತತ್ತ್ವವು ಅಡಗಿರುವುದೆಂದು ತಿಳಿಯಬೇಕು. ಇದರಂತೆ ಜಲವು, ವಾಯು ಮುಂತಾದವುಗಳ ಸಂಪರ್ಕವಿಲ್ಲದಿರುವಾಗ ನಿಶ್ಚಲವಾದ ಸ್ಥಿತಿಯಲ್ಲಿರುವುದರಿಂದ ಸ್ಥಿತಿತತ್ತ್ವವು ಜಲದಲ್ಲಿದ್ದಂತಾಯಿತು. ಸಮಸ್ತ ಪದಾರ್ಥವನ್ನೂ ದಹಿಸುವ ಸ್ವಭಾವವು ಅಗ್ನಿಗಿರುವುದರಿಂದ ಅಗ್ನಿಯಲ್ಲಿ ಸಂಹಾರ ತತ್ತ್ವವು ನೆಲಸಿರುವುದು. ಈ ಮೂರು ಅವಸ್ಥೆಗಳೂ ಸಮಸ್ತ ದೃಶ್ಯಾದೃಶ್ಯ ಪ್ರಪಂಚಕ್ಕೆ ಆಯಾ ಕಾಲದಲ್ಲಿ ಸಂಭವಿಸುವವು. ನಿಗ್ರಹವೆಂದರೆ ಮಾಡಿದ ಪಾಪಾದಿ ಕರ್ಮಗಳಿಗೆ ಶಿಕ್ಷೆಯು. ಇದು ಕೆಲವರಿಗೆ ಮಾತ್ರ ಅನ್ವಯಿಸುವುದರಿಂದ, ನಿಯಮಿತವಾದ ಚಲನವಿಲ್ಲದಿರುವ ವಾಯುವಿನಲ್ಲಿ ಇರುವುದೆಂದು ತಿಳಿಯಬೇಕು. ಅನುಗ್ರಹವೆನ್ನುವುದು ಸಂಸಾರಬಂಧನಗಳಿಂದ ಬಿಡುಗಡೆಯಾತ ಮೋಕ್ಷಪ್ರಾಪ್ತಿಯೆನಿಸುವುದು. ಮೋಕ್ಷವಂದರೆ ಪರಮಾತ್ಮನಲ್ಲಿ ಐಕ್ಯವಾಗುವುದು. ಆಕಾಶವು ರೂಪಾದಿ ಭೇದವಿಲ್ಲದೆ ಸರ್ವ ವ್ಯಾಪಿಯಾಗಿ ಪರಬ್ರಹ್ಮನನ್ನು ಹೋಲುವುದರಿಂದಲೂ ಅನುಗ್ರವನ್ನು ಪರಮೇಶ್ವರನೊಬ್ಬನೇ ಕೊಡಲು ಸಮರ್ಥನಾಗಿರುವುದರಿಂದಲೂ ಈ ಅನುಗ್ರಹವು ಆಕಾಶತತ್ತ್ವದಲ್ಲಿ ನೆಲಸಿರುವುದೆಂದು ಪರಮೇಶ್ವರನು ವಿವರಿಸಿರುವನು.

೭-೮. ಭೂಮಿಯಿಂದ ಎಲ್ಲಾ ವಸ್ತುಗಳೂ ಸೃಷ್ಟಿಸಲ್ಪಡುವುವು. ಜಲದಿಂದ ಆ ವಸ್ತುಗಳು ಅಭಿವೃದ್ಧಿಯನ್ನು (ಸ್ಥಿತಿ) ಹೊಂದುವುವು. ತೇಜಸ್ಸು ಎಲ್ಲವನ್ನೂ ನಾಶಮಾಡುವುದು (ಒಣಗಿಸುವುದು) ವಾಯುವು ಕಿತ್ತು ಹಾಕು

ಅರ್ದ್ಯತೇ ತೇಜಸಾ ಸರ್ವಂ ವಾಯುನಾ ಚಾಪನೀಯತೇ ।
ವ್ಯೋಮ್ನಾನುಗೃಹ್ಯತೇ ಸರ್ವಂ ಜ್ಞೇಯಮೇವಂ ಹಿ ಸೂರಿಭಿಃ ॥ ೮ ॥

ಪಂಚಕೃತ್ಯಮಿದಂ ವೋಢುಂ ಮಮಾಸ್ತಿ ಮುಖಪಂಚಕಂ ।
ಚತುರ್ದಿಕ್ಷು ಚತುರ್ವಕ್ತ್ರಂ ತನ್ಮಧ್ಯೇ ಪಂಚಮಂ ಮುಖಂ ॥ ೯ ॥

ಯುವಾಭ್ಯಾಂ ತಪಸಾ ಲಬ್ಧಮೇತತ್ಕೃತ್ಯದ್ವಯಂ ಸುತೌ ।
ಸೃಷ್ಟಿಸ್ಥಿತ್ಯಭಿಧಂ ಭಾಗ್ಯಂ ಮತ್ತಃ ಪ್ರೀತಾದತಿಪ್ರಿಯಂ ॥೧೦ ॥

ತಥಾ ರುದ್ರಮಹೇಶಾಭ್ಯಾಮನ್ಯತ್ಕೃತ್ಯದ್ವಯಂ ಪರಂ ।
ಅನುಗ್ರಹಾಖ್ಯಂ ಕೇನಾಪಿ ಲಬ್ಧಂ ನೈವ ಹಿ ಶಕ್ಯತೇ ॥ ೧೧ ॥

ತತ್ಸರ್ವಂ ಪೌರ್ವಿಕಂ ಕರ್ಮ ಯುವಾಭ್ಯಾಂ ಕಾಲವಿಸ್ಮೃತಂ ।
ನ ತದ್ರುದ್ರಮಹೇಶಾಭ್ಯಾಂ ವಿಸ್ಮೃತಂ ಕರ್ಮ ತಾದೃಶಂ ॥ ೧೨ ॥

---

ವುದು (ನಿಗ್ರಹ) ಆಕಾಶವು ಎಲ್ಲ ವಸ್ತುವಿಗೂ ಅವಕಾಶ ಕೊಟ್ಟು ಅನುಗ್ರಹಿಸುವುದು. ಹೀಗೆ ಐದು ಭೂತಗಳಲ್ಲಿ ಬೇರೆಯಾಗಿ ನನ್ನ ಐದು ಕೃತ್ಯಗಳು ಇರುವುದು ಎಂದು ತಿಳಿಯಬೇಕು.

೯. ಈ ಐದು ಕೃತ್ಯಗಳನ್ನು ಧರಿಸಲು ನನಗೆ ಐದು ಮುಖಗಳಿರುವುವು ಅವುಗಳಲ್ಲಿ ನಾಲ್ಕು ಮುಖಗಳು ನಾಲ್ಕು ದಿಕ್ಕಿಗಳಲ್ಲಿರುವುವು. ಐದನೆಯದು ಅವುಗಳ ಮಧ್ಯದಲ್ಲಿ ಇರುವುದು.

೧೦. ಎಲೈ ವತ್ಸರಾದ ಬ್ರಹ್ಮವಿಷ್ಣುಗಳೇ! ತಪಸ್ಸನ್ನು ಮಾಡಿ ಸೃಷ್ಟಿ ಸ್ಥಿತಿ ಎಂಬ ಕೃತ್ಯಗಳನ್ನು ಮಾಡಲು ಸಾಮರ್ಥ್ಯವನ್ನು ನೀವು ಪಡೆದಿರುವಿರಿ, ನಿಮ್ಮ ತಪಸ್ಸಿಗೆ ಸಂತುಷ್ಟನಾದ ನಾನು ಅತಿ ಪ್ರಿಯವಾದ ಸೃಷ್ಟಿ ಸ್ಥಿತಿಗಳೆಂಬ ಎರಡು ಭಾಗ್ಯಗಳನ್ನು ನಿಮಗೆ ಅನುಗ್ರಹಿಸಿರುವೆನು.

೧೧. ಹಾಗೆಯೇ ರುದ್ರ ಮತ್ತು ಮಹೇಶ್ವರರು ಸಂಹಾರ ಮತ್ತು ನಿಗ್ರಹಗಳನ್ನು ತಪಸ್ಸಿನಿಂದ ಪಡೆದಿರುವರು. ಅನುಗ್ರಹವೆಂಬ ಐದನೆಯ ನನ್ನ ಕೃತ್ಯವನ್ನು ಯಾವನಿಗೂ ಪಡೆಯಲು ಸಾಧ್ಯವಿಲ್ಲ.

೧೨. ಈ ನಿಮ್ಮ ನಿಮ್ಮ ಕರ್ಮಗಳೆಲ್ಲವೂ ಹಿಂದಿನಿಂದಲೂ ಬಂದುವು. ಅವುಗಳನ್ನು ನೀವು ಈಗ ಮರೆತುಬಿಟ್ಟಿರುವಿರಿ; ಆದರೆ ರುದ್ರ ಮತ್ತು ಮಹೇಶ್ವರರು ಆ ಕರ್ಮಗಳನ್ನು ಮರೆತಿಲ್ಲ.

ರೂಪೇ ವೇಷೇ ಚ ಕೃತ್ಯೇ ಚ ವಾಹನೇ ಚಾಸನೇ ತಥಾ ।
ಆಯುಧಾದೌ ಮತ್ಸಾಮ್ಯಮಸ್ಮಾಭಿಸ್ತತ್ಕೃತೇ ಕೃತಂ ॥ ೧೩ ॥

ಮದ್ಧ್ಯಾನವಿರಹಾದ್ವತ್ಸೌ ಮೌಢ್ಯಂ ವಾಮೇವಮಾಗತಂ ।
ಮಜ್ಜ್ಞಾನೇ ಸತಿ ನೈವಂ ಸ್ಯಾನ್ಮಾನಂ ರೂಪಂ ಮಹೇಶವತ್ ॥ ೧೪ ॥

ತಸ್ಮಾನ್ಮಜ್ಜ್ಞಾನಸಿದ್ಧ್ಯರ್ಥಂ ಮಂತ್ರಮೋಂಕಾರನಾಮಕಂ ।
ಇತಃ ಪರಂ ಪ್ರಜಪತಂ ಮಾಮಕಂ ಮಾನಭಂಜನಂ ॥ ೧೫ ॥

ಉಪಾದಿಶಂ ನಿಜಂ ಮಂತ್ರಮೋಂಕಾರಮುರುಮಂಗಲಂ ।
ಓಂಕಾರೋ ಮನ್ಮುಖಾಜ್ಜಜ್ಞೇ ಪ್ರಥಮಂ ಮತ್ಪ್ರಬೋಧಕಃ ॥ ೧೬ ॥

---

೧೩. ಆದುದರಿಂದಲೇ ಆ ರುದ್ರಮಹೇಶ್ವರರಿಗೆ ನನ್ನಂತೆ ರೂಪ, ವೇಷ, ಕೃತ್ಯ, ವಾಹನ, ಆಸನ, ಆಯುಧ ಮುಂತಾದುವುಗಳನ್ನು ಕಲ್ಪಿಸಿ (ಶಿವನ) ಸಾಮ್ಯವನ್ನು ಅನುಗ್ರಹಿಸಿರುವೆನು.

೧೪. ನನ್ನ ಧ್ಯಾನವಿಲ್ಲದಿರುವುದರಿಂದ ನಿಮಗೆ ಈ ರೀತಿಯಾಗಿ ಅವಿವೇಕ ವುಂಟಾಯಿತು. ಎಲೈ ವತ್ಸರೇ ! ನನ್ನ ಸ್ವರೂಪಜ್ಞಾನವು ನಿಮಗಿದ್ದಿದ್ದರೆ ನಿಮಗೆ "ನಾನೇ ಈಶ್ವರ" ನೆಂಬ ಅಹಂಕಾರವು ಉಂಟಾಗುತ್ತಿರಲಿಲ್ಲ. ಅಲ್ಲದೆ ನನ್ನ ಸಮಾನವಾದ ರೂಪವೂ ನಿಮಗೆ ಲಭಿಸುತ್ತಿದ್ದಿತು.

೧೫. ಆದುದರಿಂದ ಇನ್ನು ಮುಂದೆ ನೀವು ನನ್ನ ಸ್ವರೂಪಜ್ಞಾನಕ್ಕಾಗಿ ಓಂಕಾರವೆಂಬ ಮಂತ್ರವನ್ನು ಜಪಿಸಿರಿ. ಅದು ನನ್ನ ಸ್ವರೂಪವಾದುದು. ಅದನ್ನು ಜಪಿಸಿದರೆ ನಿಮ್ಮ ಅಹಂಕಾರವೂ ತೊಲಗಿ ವಿವೇಕಜ್ಞಾನವುಂಟಾಗುವುದು. *

೧೬. ಈ ರೀತಿಯಾಗಿ ನನ್ನ ಮೂಲಮಂತ್ರವಾದ ಮತ್ತು ಮಂಗಳಕರವಾದ

---

* ಓಂಕಾರಮಂತ್ರ ಅಥವಾ ಪ್ರಣವಸ್ವರೂಪವು ಈಪುರಾಣದ ಕೈಲಾಸಸಂಹಿತೆಯಲ್ಲಿ ವಿಶದವಾಗಿ ವಿವರಿಸಲ್ಪಟ್ಟಿರುವುದು.

ವಾಚಕೋಽಯಮಹಂ ವಾಚ್ಯೋ ಮಂತ್ರೋಽಯಂ ಹಿ ಮದಾತ್ಮಕಃ ।
ತದನುಸ್ಮರಣಂ ನಿತ್ಯಂ ಮಮಾನುಸ್ಮರಣಂ ಭವೇತ್ ॥ ೧೭ ॥

ಅಕಾರ ಉತ್ತರಾತ್ಪೂರ್ವಮುಕಾರಃ ಪಶ್ಚಿಮಾನನಾತ್ ।
ಮಕಾರೋ ದಕ್ಷಿಣಮುಖಾದ್ಬಿಂದುಃ ಪ್ರಾಙ್ಮುಖತಸ್ತಥಾ ॥ ೧೮ ॥

ನಾದೋ ಮಧ್ಯಮುಖಾದೇವಂ ಪಂಚಧಾಸೌ ವಿಜೃಂಭಿತಃ ।
ಏಕೀಭೂತಃ ಪುನಸ್ತದ್ವದೋಮಿತ್ಯೇಕಾಕ್ಷರೋ ಭವೇತ್ ॥ ೧೯ ॥

ನಾಮರೂಪಾತ್ಮಕಂ ಸರ್ವಂ ವೇದಭೂತಕುಲದ್ವಯಂ ।
ವ್ಯಾಪ್ತಮೇತೇನ ಮಂತ್ರೇಣ ಶಿವಶಕ್ತ್ಯೋಶ್ಚ ಬೋಧಕಃ ॥ ೨೦ ॥

---

ಓಂಕಾರವನ್ನು ನಿಮಗೆ ಉಪದೇಶಿಸಿರುವೆನು. ನನ್ನ ಸ್ವರೂಪವನ್ನು ಬೋಧಿಸುವ ಈ ಓಂಕಾರವು ಮೊದಲು ನನ್ನ ಮುಖದಿಂದಲೇ ಜನಿಸಿರುವುದು.

೧೭. ಓಂಕಾರವು ನನಗೆ ವಾಚಕವು (ನನ್ನನ್ನು ಹೇಳುವುದು) ಅದರಿಂದ ಬೋಧಿಸಲ್ಪಡುವ ವಸ್ತುವೂ ನಾನೇ. ಮತ್ತು ಈ ಓಂಕಾರಮಂತ್ರವು ನನ್ನ ಸ್ವರೂಪ ವಾದುದು. ಆದುದರಿಂದ ಓಂಕಾರವನ್ನು ಸ್ಮರಿಸಿದರೆ ನನ್ನನ್ನು ಸ್ಮರಣೆ ಮಾಡಿ ದಂತೆಯೇ ಆಗುವುದು.

೧೮. ಓಂಕಾರದಲ್ಲಿನ ಮೊದಲನೆಯ ಅಕಾರವು ನನ್ನ ಉತ್ತರಮುಖದಿಂದ ಜನಿಸಿತು. ಉಕಾರವು ಪಶ್ಚಿಮಮುಖದಿಂದ ಜನಿಸಿತು. ಮಕಾರವು ದಕ್ಷಿಣ ಮುಖ ದಿಂದ ಜನಿಸಿತು. ಕೊನೆಯದಾದ ಅನುಸ್ವಾರವು (ಸೊನ್ನೆಯು) ಪೂರ್ವಮುಖದಿಂದ ಜನಿಸಿತು.

೧೯. ಓಂಕಾರದ ನಾದವು ನನ್ನ ಮಧ್ಯ ಮುಖದಿಂದ ಜನಿಸಿತು. ಹೀಗೆ ಐದು ಮುಖಗಳಿಂದ ಐದು ವಿಧವಾದ ಓಂಕಾರವು ಜನಿಸಿರುವುದು. ಅದೆಲ್ಲವೂ ಒಟ್ಟು ಸೇರಿ 'ಓಂ' ಎಂಬ ಅಕ್ಷರವಾಗಿರುವುದು.

೨೦. ನಾಮರೂಪಮಯವಾದ ಎಲ್ಲಾ ಪ್ರಪಂಚವೂ, ವೇದಗಳು, ಪಂಚ ಭೂತಗಳು ಇವೆಲ್ಲವೂ ಈ ಓಂಕಾರದಿಂದಲೇ ವ್ಯಾಪಿಸಲ್ಪಟ್ಟಿರುವುವು. ಈ ಓಂಕಾರವು ಶಿವಶಕ್ತಿಯರನ್ನೂ ಬೋಧಿಸುವುದು.

ಅಸ್ಮಾತ್ಪಂಚಾಕ್ಷರಂ ಜಜ್ಞೇ ಬೋಧಕಂ ಸಕಲಸ್ಯ ಯತ್ ।
ಅಕಾರಾದಿಕ್ರಮೇಣೈವ ನಕಾರಾದಿಯಥಾಕ್ರಮಂ ॥ ೨೧ ॥

ಅಸ್ಮಾತ್ಪಂಚಾಕ್ಷರಾಜ್ಜಾತಾ ಮಾತೃಕಾಃ ಪಂಚಭೇದತಃ ।
ತಸ್ಮಾಚ್ಛಿರಶ್ಚತುರ್ವಕ್ತ್ರಾತ್ರಿಪಾದ್ಗಾಯತ್ರಿರೇವ ಚ ॥ ೨೨ ॥

ವೇದಃ ಸರ್ವಸ್ತತೋ ಜಜ್ಞೇ ತತೋ ವೈ ಮಂತ್ರಕೋಟಿಯಃ ।
ತತ್ತನ್ಮಂತ್ರೇಣ ತತ್ಸಿದ್ಧಿಃ ಸರ್ವಸಿದ್ಧಿರಿತೋ ಭವೇತ್ ॥ ೨೩ ॥

ಅನೇನ ಮಂತ್ರಕಂದೇನ ಭೋಗೋ ಮೋಕ್ಷಶ್ಚ ಸಿಧ್ಯತಿ ।
ಸಕಲಾ ಮಂತ್ರರಾಜಾನಃ ಸಾಕ್ಷಾದ್ಭೋಗಪ್ರದಾಃ ಶುಭಾಃ ॥ ೨೪ ॥

---

೨೧. ಈ ಓಂಕಾರದಿಂದ ಸಕಲ ಸ್ವರೂಪವನ್ನು ಬೋಧಿಸುವ ಪಂಚಾಕ್ಷರೀ ಮಂತ್ರವು ಅಕಾರಾದಿಯಾದ ಕ್ರಮದಿಂದಲೇ ನಕಾರ ಮೊದಲುಗೊಂಡು ಕ್ರಮವಾಗಿ ಜನಿಸಿತು. ಎಂದರೆ ಅಕಾರದಿಂದ ನಕಾರವು ಜನಿಸಿತು, ಉಕಾರದಿಂದ ಮಕಾರವೂ, ಮಕಾರದಿಂದ ಶಿಕಾರವೂ, ಸೊನ್ನೆಯಿಂದ ವಕಾರವೂ, ಕೊನೆಯದಾದ ನಾದದಿಂದ ಯಕಾರವೂ ಜನಿಸಿತು ಎಂದು ಅಭಿಪ್ರಾಯವು "ನಮಃ ಶಿವಾಯ" ಎಂಬುದೇ ಪಂಚಾಕ್ಷರೀ ಮಂತ್ರವು.

೨೨. ಈ ಪಂಚಾಕ್ಷರೀ ಮಂತ್ರದಿಂದ ಐದು ಮಾತೃಕೆಗಳು ಜನಿಸಿದುವು. ಆ ಪಂಚಾಕ್ಷರೀ ಮಂತ್ರದಿಂದಲೇ ನಾಲ್ಕು ಮುಖಗಳುಳ್ಳದುದೂ, ಮೂರು ಪಾದಗಳುಳ್ಳದುದೂ ಆದ ಗಾಯತ್ರಿಯು ಶಿರಸ್ಸಿನೊಡನೆ ಜನಿಸಿತು.

೨೩. ಮತ್ತು ಆ ಪಂಚಾಕ್ಷರೀ ಮಂತ್ರದಿಂದ ವೇದಗಳೆಲ್ಲವೂ ಜನಿಸಿದುವು. ಬಳಿಕ ಕೋಟ್ಯಂತರ ಮಂತ್ರಗಳು ಉಂಟಾದುವು, ಆಯಾಯ ದೇವತೆಗಳ ಮಂತ್ರ ದಿಂದ ಆಯಾಯ ಫಲವೇ ಸಿದ್ಧಿಸುವುದು. ಈ ಪಂಚಾಕ್ಷರೀ ಮಂತ್ರದಿಂದ ಸಕಲವೂ ಸಿದ್ಧಿಸುವುದು.

೨೪. ಈ ನನ್ನ ಪಂಚಾಕ್ಷರೀ ಮೂಲಮಂತ್ರದಿಂದ ಭೋಗವೂ, ಮೋಕ್ಷವೂ ಲಭಿಸುವುದು. ಮಿಕ್ಕ ಮಂತ್ರೋತ್ತಮಗಳೆಲ್ಲವೂ ಸಾಕ್ಷಾತ್ತಾಗಿ ಭೋಗವನ್ನು ಮಾತ್ರ ಕೊಡಬಲ್ಲವು. ಮೋಕ್ಷವನ್ನು ಕೊಡಲು ಸಮರ್ಥವಲ್ಲ ಎಂದು ವಿಷ್ಣು ಬ್ರಹ್ಮರಿಗೆ ಶಿವನು ಪಂಚಕೃತ್ಯದ ಲಕ್ಷಣಗಳನ್ನು ವಿವರಿಸಿದನು.

॥ ನಂದಿಕೇಶ್ವರ ಉವಾಚ ॥

ಪುನಸ್ತಯೋಸ್ತತ್ರ ತಿರಃ ಪಟಂ ಗುರುಃ
ಪ್ರಕಲ್ಪ್ಯ ಮಂತ್ರಂ ಚ ಸಮಾದಿಶತ್ಪರಂ ।
ನಿಧಾಯ ತಚ್ಛೀರ್ಷ್ಣಿ ಕರಾಂಬುಜಂ ಶನೈ-
ರುದಙ್ಮುಖಂ ಸಂಸ್ಥಿತಯೋಃ ಸಹಾಂಬಿಕಃ ॥ ೨೫ ॥

ತ್ರಿರುಚ್ಚಾರ್ಯಾಗ್ರಹೀನ್ಮಂತ್ರಂ ಯಂತ್ರತಂತ್ರೋಕ್ತಿಪೂರ್ವಕಂ ।
ಶಿಷ್ಯೌ ಚ ತೌ ದಕ್ಷಿಣಾಯಾಮಾತ್ಮಾನಂ ಚ ಸಮಾರ್ಪಯತ್ ॥ ೨೬ ॥

ಪ್ರಬದ್ಧಹಸ್ತೌ ಕಿಲ ತೌ ತದಂತಿಕೇ ।
ತಮೂಚತುರ್ದೇವವರಂ ಜಗದ್ಗುರುಂ ॥ ೨೭ ॥

---

೨೫. ನಂದಿಕೇಶ್ವರನು ಹೇಳಿದನು :—ಆಮೇಲೆ ಜಗದ್ಗುರುವಾದ ಪಾರ್ವತೀ ಸಹಿತನಾದ ಶಿವನು ಆ ಬ್ರಹ್ಮ ವಿಷ್ಣುಗಳನ್ನು ಉತ್ತರಮುಖವಾಗಿ ನಿಲ್ಲಿಸಿ, ಯಾರಿಗೂ ಕಾಣದಿರುವಂತೆ ಅವರ ಮೇಲೆ ಬಟ್ಟೆಗಳನ್ನು ಹೊದ್ದಿಸಿದನು. ಬಳಿಕ ಆ ಬ್ರಹ್ಮ ವಿಷ್ಣುಗಳ ಶಿರಸ್ಸಿನ ಮೇಲೆ ತನ್ನ ಕಮಲದಂತಿರುವ ಕೈಯನ್ನಿಟ್ಟು ಅವರಿಗೆ ತನ್ನ ಪಂಚಾಕ್ಷರೀಮಂತ್ರವನ್ನು ಉಪದೇಶಿಸಿದನು.

ಇಲ್ಲಿ "ಆಚಾರ್ಯಃ ಪೂರ್ವರೂಪಂ । ಅಂತೇವಾಸ್ಯುತ್ತರರೂಪಂ" ತೈ. ಉ. ಅ ೧-೨ ಎಂಬ ಶ್ರುತಿವಾಕ್ಯವನ್ನನುಸರಿಸಿ ಗುರುವಾದ ಪರಮೇಶ್ವರನು ಪೂರ್ವಮುಖವಾಗಿ ಕುಳಿತು, ಶಿಷ್ಯರಾದ ಬ್ರಹ್ಮವಿಷ್ಣುಗಳನ್ನು ಉತ್ತರಾಭಿಮುಖವಾಗಿ ಕುಳ್ಳಿರಿಸಿ ಅವರಿಗೆ ಶಿವಪಂಚಾಕ್ಷರೀ ಮಂತ್ರೋಪದೇಶವನ್ನು ಮಾಡಿದನೆಂದು ಅಭಿಪ್ರಾಯವು.

೨೬. ಮಂತ್ರ ಯಂತ್ರಗಳೊಡನೆ ಅವರಿಗೆ ಬಾಯಿಪಾಠಮಾಡಿಸಿದನು. ಬಳಿಕ ತನ್ನ ಶಿಷ್ಯರಾದ ಆ ಬ್ರಹ್ಮವಿಷ್ಣುಗಳನ್ನು ತನ್ನ ಬಲಭಾಗದಲ್ಲಿರಿಸಿಕೊಂಡನು.

೨೭. ಆ ಮೇಲೆ ಬ್ರಹ್ಮವಿಷ್ಣುಗಳು ಶಿವನ ಬಳಿಯಲ್ಲಿ ಕೈಕಟ್ಟಿಕೊಂಡು ನಿಂತು ದೇವೋತ್ತಮನೂ ಜಗದ್ಗುರುವೂ ಆದ ಅವನನ್ನು ಈ ರೀತಿಯಾಗಿ ಸ್ತುತಿಸಿದರು.

॥ ಬ್ರಹ್ಮಾಚ್ಯುತಾವೂಚತುಃ ॥

ನಮೋ ನಿಷ್ಕಲರೂಪಾಯ ನಮೋ ನಿಷ್ಕಲತೇಜಸೇ ।
ನಮಃ ಸಕಲನಾಥಾಯ ನಮಸ್ತೇ ಸಕಲಾತ್ಮನೇ ॥ ೨೮ ॥

ನಮಃ ಪ್ರಣವವಾಚ್ಯಾಯ ನಮಃ ಪ್ರಣವಲಿಂಗಿನೇ ।
ನಮಃ ಸೃಷ್ಟ್ಯಾದಿಕರ್ತ್ರೇ ಚ ನಮಃ ಪಂಚಮುಖಾಯ ತೇ ॥ ೨೯ ॥

ಪಂಚಬ್ರಹ್ಮಸ್ವರೂಪಾಯ ಪಂಚಕೃತ್ಯಾಯ ತೇ ನಮಃ ।
ಆತ್ಮನೇ ಬ್ರಹ್ಮಣೇ ತುಭ್ಯಮನಂತಗುಣಶಕ್ತಯೇ ॥ ೩೦ ॥

---

೨೮. ನಿರಾಕಾರವಾದ ರೂಪವುಳ್ಳ ಓ ಶಿವನೆ! ನಿನಗೆ ನಮಸ್ಕಾರವು. ನಿರಾಕಾರಪ್ರಕಾಶಸ್ವರೂಪನಾದ ನಿನಗೆ ನಮಿಸುವೆವು. ಜಗತ್ತಿಗೆಲ್ಲಾ ಒಡೆಯನೂ ಸಾಕಾರವಾದ ಈಶ್ವರಸ್ವರೂಪನೂ ಆದ ನಿನಗೆ ನಮಸ್ಕಾರವು.

೨೯. ಓಂಕಾರಾರ್ಥಸ್ವರೂಪನಾದ ನಿನಗೆ ನಮಸ್ಕಾರವು. ಓಂಕಾರಾಭಿಮಾನಿ ದೇವನಾದ ನಿನಗೆ ನಮಿಸುವೆವು. ಸೃಷ್ಟಿ, ಸ್ಥಿತಿ. ಸಂಹಾರಗಳನ್ನು ಮಾಡುವವನೂ ಐದು ಮುಖಗಳುಳ್ಳವನೂ ಆದ ನಿನಗೆ ನಮಸ್ಕಾರವು.

೩೦. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ, ಎಂಬ ಈ ಐದು ವಿಧವಾದ ಬ್ರಹ್ಮಸ್ವರೂಪನೂ, ಅಥವಾ ಬ್ರಹ್ಮನಂತೆ ಸೃಷ್ಟಿಯನ್ನು ಪ್ರವರ್ತಿಸುವ ಪಂಚಭೂತ ಸ್ವರೂಪನೂ, ಸರ್ಗ, ಸ್ಥಿತಿ, ಸಂಹಾರ, ನಿಗ್ರಹ, ಅನುಗ್ರಹ ಈ ಐದು ಕೃತ್ಯಗಳುಳ್ಳವನೂ ಆದಂತಹ ನಿನಗೆ ನಮಸ್ಕಾರವು. ಮತ್ತು ಆತ್ಮಸ್ವರೂಪನೂ, ಬ್ರಹ್ಮನೂ ಎಂದರೆ ಜೀವಾತ್ಮಾಭಿನ್ನನಾದ ಬ್ರಹ್ಮಸ್ವರೂಪನೂ ಆದಂತಹ ಮತ್ತು ಅನಂತವಾದ ಸತ್ಯಕಾಮತ್ವ, ಸರ್ವಜ್ಞತ್ವ ಮೊದಲಾದ ಮಂಗಳಕರವಾದ ಗುಣಗಳುಳ್ಳ ಈಶ್ವರಸ್ವರೂಪನಾದ ನಿನಗೆ ನಮಸ್ಕಾರವು.

ಪಂಚಬ್ರಹ್ಮಸ್ವರೂಪವನ್ನು ಯಜುರ್ವೇದದ ತೈತ್ತಿರೀಯ ಉಪನಿಷತ್ತು (ತೈ. ಉ. ಅ. ೩.) ಈ ರೀತಿ ವರ್ಣಿಸಿರುವುದು. ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿಸಂವಿಶಂತೀತಿ । ಪ್ರಾಣೋಬ್ರಹ್ಮೇತಿ ವ್ಯಜಾನಾತ್........॥ ಮನೋ

ಸಕಲಾಕಲರೂಪಾಯ ಶಂಭವೇ ಗುರವೇ ನಮಃ ।
ಇತಿ ಸ್ತುತ್ವಾ ಗುರುಂ ಪದ್ಯೈರ್ಬ್ರಹ್ಮಾ ವಿಷ್ಣುಶ್ಚ ನೇಮತುಃ ॥ ೩೧ ॥

॥ ಈಶ್ವರ ಉವಾಚ ॥
ವತ್ಸಕೌ ಸರ್ವತತ್ತ್ವಂ ಚ ಕಥಿತಂ ದರ್ಶಿತಂ ಚ ವಾಂ ।
ಜಪತಂ ಪ್ರಣವಂ ಮಂತ್ರಂ ದೇವೀದಿಷ್ಟಂ ಮದಾತ್ಮಕಂ ॥ ೩೨ ॥

ಜ್ಞಾನಂ ಚ ಸುಸ್ಥಿರಂ ಭಾಗ್ಯಂ ಸರ್ವಂ ಭವತಿ ಶಾಶ್ವತಂ ।
ಆರ್ದ್ರಾಯಾಂ ಚ ಚತುರ್ದಶ್ಯಾಂ ತಜ್ಜಾಪ್ಯಂ ತ್ವಕ್ಷಯಂ ಭವೇತ್ ॥ ೩೩ ॥

---

ಬ್ರಹ್ಮೇತಿ ವ್ಯಜಾನಾತ್........|| ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್.... || ಆನಂದೋ ಬ್ರಹ್ಮೇತಿ ವ್ಯಜಾನಾತ್ ....|| ಪ್ರಾಣಿಗಳಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಕೋಶಗಳೂ ಬ್ರಹ್ಮಸ್ವರೂಪವೆಂದೇ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು.

೩೧. ಸಾಕಾರ ಮತ್ತು ನಿರಾಕಾರ ಸ್ವರೂಪನೂ, ಸುಖವನ್ನು ಕೊಡುವವನೂ ಜಗದ್ಗುರುವೂ ಆದಂತಹ ನಿನಗೆ ನಮಸ್ಕಾರವು. ಹೀಗೆಂದು ಪದ್ಯಗಳಿಂದ ಸ್ತುತಿಸಿ ಬ್ರಹ್ಮವಿಷ್ಣುಗಳು ತಮ್ಮ ಗುರುವಾದ ಆ ಶಿವನನ್ನು ನಮಸ್ಕರಿಸಿದರು.

೩೨. ಈಶ್ವರನು ಹೇಳಿದನು :—ಎಲೈ ವತ್ಸರೆ! ನಿಮಗೆ ಸಕಲ ತತ್ತ್ವವನ್ನೂ ಹೇಳಿರುವೆನು. ತೋರಿಸಿಯೂ ಇರುವೆನು. ದೇವಿಯು (ಪಾರ್ವತಿಯು) ಅನುಗ್ರಹಿಸಿದ ನನ್ನ ಸ್ವರೂಪವಾದ ಓಂಕಾರವನ್ನೂ, ಪಂಚಾಕ್ಷರೀ ಮಂತ್ರವನ್ನೂ ಜಪಿಸಿರಿ, (ಇಲ್ಲಿ ಮಂತ್ರಗಳನ್ನು ಪರಮೇಶ್ವರನೇ ಉಪದೇಶಿಸಿದ್ದರೂ ಆ ಉಪದೇಶದಲ್ಲಿ ದೇವಿಯೂ ಸಹಾಯವಾಗಿದ್ದಳೆಂಬುದನ್ನು ತೋರಿಸುವುದರ ಮೂಲಕ ಬ್ರಹ್ಮ ವಿಷ್ಣುಗಳಿಗೆ ದೇವಿಯಲ್ಲಿ ಭಕ್ತಿಯನ್ನುಂಟುಮಾಡುವುದಕ್ಕಾಗಿ ದೇವಿಯು " ಅನುಗ್ರಹಿಸಿದ " ಎಂದು ಹೇಳಿರುವುದು.)

೩೩. ಹಾಗೆ ಜಪಿಸಿದರೆ, ಸ್ಥಿರವಾದ ಜ್ಞಾನವೂ, ಭಾಗ್ಯವೂ ಎಲ್ಲವೂ ಲಭಿಸುವುದು, ಚತುರ್ದಶಿಯಲ್ಲಿ ಆರ್ದ್ರಾನಕ್ಷತ್ರದಲ್ಲಿ ಜಪಿಸಿದರೆ ಅಕ್ಷಯವಾದ ಎಂದರೆ ಎಂದಿಗೂ ನಾಶವಾಗದಂತಹ ಫಲವು ಸಿಗುವುದು, ಮುಕ್ತಿಯೂ ಲಭಿಸುವುದು.

ಸೂರ್ಯಗತ್ಯಾ ಮಹಾರ್ದ್ರಾಯಾಮೇಕಂ ಕೋಟಿಗುಣಂ ಭವೇತ್ ।
ಮೃಗಶೀರ್ಷಾಂತಿಮೋ ಭಾಗಃ ಪುನರ್ವಸ್ವಾದಿಮಸ್ತಥಾ ॥ ೩೪ ॥

ಆರ್ದ್ರಾಸಮಂ ಸದಾ ಜ್ಞೇಯಂ ಪೂಜಾಹೋಮಾದಿತರ್ಪಣೇ ।
ದರ್ಶನಂ ತು ಪ್ರಭಾತೇ ಚ ಪ್ರಾತಃಸಂಗವಕಾಲಯೋಃ ॥ ೩೫ ॥

ಚತುರ್ದಶೀ ತಥಾ ಗ್ರಾಹ್ಯಾ ನಿಶೀಥವ್ಯಾಪಿನೀ ಭವೇತ್ ।
ಪ್ರದೋಷವ್ಯಾಪಿನೀ ಚೈವ ಪರಯುಕ್ತಾ ಪ್ರಶಸ್ಯತೇ ॥ ೩೬ ॥

ಲಿಂಗಂ ಬೇರಂ ಚ ಮೇ ತುಲ್ಯಂ ಯಜತಾಂ ಲಿಂಗಮುತ್ತಮಂ ।
ತಸ್ಮಾಲ್ಲಿಂಗಂ ಪರಂ ಪೂಜ್ಯಂ ಬೇರಾದಪಿ ಮುಮುಕ್ಷುಭಿಃ ॥ ೩೭ ॥

---

೩೪. ಸೂರ್ಯನು ಆರ್ದ್ರಾನಕ್ಷತ್ರದಲ್ಲಿರುವಾಗ ಈ ಮಂತ್ರಗಳನ್ನು ಜಪಿಸಿದರೆ ಒಂದು ಜಪವು ಕೋಟಿ ಫಲವನ್ನು ಕೊಡುವುದು. ಮೃಗಶಿರ್ಷಾನಕ್ಷತ್ರದ ಕೊನೆಯ ಭಾಗವೂ ಪುನರ್ವಸುವಿನ ಆದಿಭಾಗವೂ ಸಹ ಆರ್ದ್ರಾನಕ್ಷತ್ರದಂತೆ ಶಿವನ ಪೂಜಾ, ಹೋಮ, ತರ್ಪಣ ಮುಂತಾದುವುಗಳಿಗೆ ಯೋಗ್ಯವಾದುದು.

೩೫. ನನ್ನ ಲಿಂಗ ಮತ್ತು ವಿಗ್ರಹಗಳ ದರ್ಶನವನ್ನು ಉದಯಕಾಲ ಪ್ರಾತಃಕಾಲ ಮತ್ತು ಸಂಗಮಕಾಲ (ಪ್ರಾತಃಕಾಲಕ್ಕೂ ಮಧ್ಯಾಹ್ನ ಕಾಲಕ್ಕೂ ಮಧ್ಯೆ ಇರುವ ಐದು ಗಳಿಗೆಗಳು) ಗಳಲ್ಲಿ ಮಾಡಬೇಕು. ಅರ್ಧ ರಾತ್ರಿಯವರೆಗೆ ವ್ಯಾಪಿಸಿರುವ ಚತುರ್ದಶೀ ತಿಥಿಯು ನನ್ನ ಪೂಜೆಗೆ ಉತ್ತಮವಾದುದು.

೩೬. ಪ್ರದೋಷಕಾಲವನ್ನು ವ್ಯಾಪಿಸಿದ್ದು ಮುಂದಿನ ತಿಥಿ ಸಂಪರ್ಕವುಳ್ಳ ಚತುರ್ದಶಿಯು ಅತ್ಯುತ್ತಮವಾದುದು.

೩೭. ಲಿಂಗವೂ, ಮೂರ್ತಿಯೂ ನನಗೆ ಸಮವಾದುವು, ಆದರೂ ಪೂಜಿಸುವವರಿಗೆ ಲಿಂಗವೇ ಉತ್ತಮವಾದುದು. ಆದುದರಿಂದ ಮುಕ್ತಿಯನ್ನು ಅಪೇಕ್ಷಿಸುವವರು ಮೂರ್ತಿಗಿಂತಲೂ ಲಿಂಗವನ್ನೇ ಮುಖ್ಯವಾಗಿ ಪೂಜಿಸಬೇಕು.

ಲಿಂಗಮೋಂಕಾರಮಂತ್ರೇಣ ಬೇರಂ ಪಂಚಾಕ್ಷರೇಣ ತು ।
ಸ್ವಯಮೇವ ಹಿ ಸದ್ದ್ರವ್ಯೈಃ ಪ್ರತಿಷ್ಠಾಪ್ಯಂ ಪರೈರಪಿ　　॥ ೩೮ ॥

ಪೂಜಯೇದುಪಚಾರೈಶ್ಚ ಮತ್ಪದಂ ಸುಲಭಂ ಭವೇತ್ ।
ಇತಿ ಶಾಸ್ಯ ತಥಾ ಶಿಷ್ಯೌ ತತ್ರೈವಾಂತರ್ಹಿತಃ ಶಿವಃ　　॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ದಶಮೋಽಧ್ಯಾಯಃ.

---

೩೮-೩೯. ಲಿಂಗವನ್ನು ಓಂಕಾರದಿಂದಲೂ ವಿಗ್ರಹವನ್ನು ಪಂಚಾಕ್ಷರಮಂತ್ರ ದಿಂದಲೂ ಸಹ ತಾನೇ ಉತ್ತಮ ದ್ರವ್ಯಗಳಿಂದ ಪ್ರತಿಷ್ಠಿಸಬೇಕು. (ಪುರೋಹಿತರೇ ಮೊದಲಾದ) ಬೇರೆಯವರ ಮೂಲಕವೂ ಪ್ರತಿಷ್ಠೆಮಾಡಬಹುದು, ಬಳಿಕ ಸಕಲೋಪ ಚಾರಗಳಿಂದಲೂ ಪೂಜಿಸಬೇಕು. ಹಾಗೆ ಮಾಡಿದರೆ ನನ್ನ ಸ್ಥಾನವು ಸುಲಭವಾಗಿ ಲಭಿಸುವುದು ಎಂದು ಶಿಷ್ಯರಾದ ಬ್ರಹ್ಮವಿಷ್ಣುಗಳಿಗೆ ಉಪದೇಶಿಸಿ ಶಿವನು ಅಲ್ಲಿಯೇ ಅಂತರ್ಧಾನವನ್ನೈದಿದನು.

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಏಕಾದಶೋಽಧ್ಯಾಯಃ

|| ಋಷಯ ಊಚುಃ ||

ಕಥಂ ಲಿಂಗಂ ಪ್ರತಿಷ್ಠಾಪ್ಯಂ ಕಥಂ ವಾ ತಸ್ಯ ಲಕ್ಷಣಂ |
ಕಥಂ ವಾ ತತ್ಸಮಭ್ಯರ್ಚ್ಯಂ ದೇಶೇ ಕಾಲೇ ಚ ಕೇನ ಹಿ || ೧ ||

|| ಸೂತ ಉವಾಚ ||

ಯುಷ್ಮದರ್ಥಂ ಪ್ರವಕ್ಷ್ಯಾಮಿ ಬುದ್ಧ್ಯತಾಮವಧಾನತಃ |
ಅನುಕೂಲೇ ಶುಭೇ ಕಾಲೇ ಪುಣ್ಯೇ ತೀರ್ಥೇ ತಟೇ ತಥಾ || ೨ ||

---

## ಹನ್ನೊಂದನೆಯ ಅಧ್ಯಾಯವು.

೧. ಋಷಿಗಳು ಸೂತಮುನಿಯನ್ನು ಕುರಿತು ಪ್ರಶ್ನಿಸಿದರು. ಓ ಸೂತಮಹರ್ಷಿ, ಶಿವಲಿಂಗವನ್ನು ಹೇಗೆ ಪ್ರತಿಷ್ಠಿಸಬೇಕು? ಅದರ ಲಕ್ಷಣವೇನು? ಅದನ್ನು ಪೂಜಿಸುವ ಕ್ರಮವೇನು? ಯಾವ ದೇಶದಲ್ಲಿ ಎಂತಹ ಕಾಲದಲ್ಲಿ ಯಾವ ಸಾಧನಗಳಿಂದ ಆ ಲಿಂಗವನ್ನು ಅರ್ಚಿಸಬೇಕು? ಎಂದು ಕೇಳಲು,

೨. ಸೂತಮುನಿಯು ಹೇಳಿದನು–ಎಲೈ ಋಷಿಗಳಿರಾ! ನಿಮಗಾಗಿ ಈ ವಿಷಯವನ್ನು ಹೇಳುವೆನು, ಸಾವಧಾನದಿಂದ ಕೇಳಿ. ಅನುಕೂಲವೂ ಶುಭವೂ ಆದಂತಹ ಕಾಲದಲ್ಲಿ ಪವಿತ್ರವಾದ ತೀರ್ಥ, ಕ್ಷೇತ್ರ, ನದಿಯ ದಡ, ಇವುಗಳಲ್ಲಿ ತನ್ನಿಷ್ಟದಂತೆ

ಯಥೇಷ್ಟಂ ಲಿಂಗಮಾರೋಪ್ಯಂ ಯತ್ರ ಸ್ಯಾನ್ನಿತ್ಯಮರ್ಚನಂ ।
ಪಾರ್ಥಿವೇನ ತಥಾಪ್ಯೇನಂ ತೈಜಸೇನ ಯಥಾರುಚಿ ॥ ೩ ॥

ಕಲ್ಪಲಕ್ಷಣಸಂಯುಕ್ತಂ ಲಿಂಗಂ ಪೂಜಾಫಲಂ ಲಭೇತ್ ।
ಸರ್ವಲಕ್ಷಣಸಂಯುಕ್ತಂ ಸದ್ಯಃ ಪೂಜಾಫಲಪ್ರದಂ ॥ ೪ ॥

ಚರೇ ವಿಶಿಷ್ಯತೇ ಸೂಕ್ಷ್ಮಂ ಸ್ಥಾವರೇ ಸ್ಥೂಲಮೇವ ಹಿ ।
ಸಲಕ್ಷಣಂ ಸಪೀಠಂ ಚ ಸ್ಥಾಪಯೇಚ್ಛಿವನಿರ್ಮಿತಂ ॥ ೫ ॥

ಮಂಡಲಂ ಚತುರಸ್ರಂ ವಾ ತ್ರಿಕೋಣಮಥವಾ ತಥಾ ।
ಖಟ್ವಾಂಗವನ್ಮಧ್ಯಸೂಕ್ಷ್ಮಂ ಲಿಂಗಪೀಠಂ ಮಹಾಫಲಂ ॥ ೬ ॥

ಪ್ರಥಮಂ ಮೃಚ್ಛಿಲಾದಿಭ್ಯೋ ಲಿಂಗಂ ಲೋಹಾದಿಭಿಃ ಕೃತಂ ।
ಯೇನ ಲಿಂಗಂ ತೇನ ಪೀಠಂ ಸ್ಥಾವರೇ ಹಿ ವಿಶಿಷ್ಯತೇ ॥ ೭ ॥

---

ಲಿಂಗವನ್ನು ಪ್ರತಿಷ್ಠಿಸಬಹುದು, ಆದರೆ ಆ ಲಿಂಗಕ್ಕೆ ನಿತ್ಯವೂ ಪೂಜೆಯು ನಡೆಯುವಂತಿರಬೇಕು.

೩. ಕಲ್ಪದಲ್ಲಿ ಹೇಳಿರುವ ಲಕ್ಷಣಗಳೊಡನೆ ಮಣ್ಣಿನ ಅಥವಾ ಬೆಳ್ಳಿ, ಚಿನ್ನ ಮುಂತಾದುವುಗಳಿಂದ ಲಿಂಗವನ್ನು ನಿರ್ಮಿಸಿ ಪೂಜಿಸಬೇಕು. ಆದರಿಂದ ಇಷ್ಟ ಫಲವು ಲಭಿಸುವುದು.

೪-೫. ಕಲ್ಪದಲ್ಲಿ ಹೇಳಿರುವ ಎಲ್ಲಾ ಲಕ್ಷಣಗಳಿಂದಲೂ ಕೂಡಿರುವ ಲಿಂಗವು ತಕ್ಷಣವೇ ಪೂಜೆಯ ಫಲವನ್ನುಂಟುಮಾಡುವುದು. ಚರವಾದ ಸ್ಥಳದಲ್ಲಿ, ಚಿಕ್ಕದಾದ ಲಿಂಗವನ್ನುಪಯೋಗಿಸಬೇಕು. ಸ್ಥಿರವಾದ ಶಿಲೆ ಮೊದಲಾದ ಸ್ಥಳದಲ್ಲಿಯೂ ಅಥವಾ ದೇವಾಲಯಗಳಲ್ಲಿಯೂ ದೊಡ್ಡದಾದ ಲಿಂಗವನ್ನು ಸಕಲ ಲಕ್ಷಣಗಳೊಡನೆಯೂ, ಪೀಠದೊಡನೆಯೂ ಪ್ರತಿಷ್ಠಿಸಬೇಕು.

೬. ಚಚ್ಚೌಕವಾದ ಅಥವಾ ಮೂರು ಮೂಲೆಗಳುಳ್ಳಂತಹ ಮಂಡಲವನ್ನು ನಿರ್ಮಿಸಬೇಕು, ಲಿಂಗದ ಪೀಠವು ಮಂಚದ ಕಾಲಿನಂತೆ ಮಧ್ಯದಲ್ಲಿ ಸೂಕ್ಷ್ಮವಾಗಿರಬೇಕು, ಅಂತಹ ಪೀಠವು ಮಹಾ ಫಲವನ್ನು ಕೊಡುವುದು.

೭. ಸ್ಥಿರವಾದ ಸ್ಥಳದಲ್ಲಿ ಮೊದಲು ಲಿಂಗವನ್ನು ಮಣ್ಣು, ಶಿಲೆ ಮುಂತಾದ ಯಾವ ವಸ್ತುವಿನಿಂದ ನಿರ್ಮಿಸಿರುವುದೋ ಅದೇ ವಸ್ತುವಿನಿಂದ ಆ ಲಿಂಗಕ್ಕೆ ಪೀಠವನ್ನು ನಿರ್ಮಿಸಬೇಕು.

ಲಿಂಗಂ ಪೀಠಂ ಚರೇ ತ್ವೇಕಂ ಲಿಂಗಂ ಬಾಣಕೃತಂ ವಿನಾ ।
ಲಿಂಗಪ್ರಮಾಣಂ ಕರ್ತೂರ್ಣಾಂ ದ್ವಾದಶಾಂಗುಲಮುತ್ತಮಂ ॥ ೮ ॥

ನ್ಯೂನಂ ಚೇತ್ಫಲಮಲ್ಪಂ ಸ್ಯಾದಧಿಕಂ ನೈವ ದುಷ್ಯತೇ ।
ಕರ್ತುರೇಕಾಂಗುಲನ್ಯೂನಂ ಚರೇsಪಿ ಚ ತಥೈವ ಹಿ ॥ ೯ ॥

ಆದೌ ವಿಮಾನಂ ಶಿಲ್ಪೇನ ಕಾರ್ಯಂ ದೇವಗಣೈರ್ಯುತಂ ।
ತತ್ರ ಗರ್ಭಗೃಹೇ ರಮ್ಯೇ ದೃಢೇ ದರ್ಪಣಸನ್ನಿಭೇ ॥ ೧೦ ॥

ಭೂಷಿತೇ ನವರತ್ನೈಶ್ಚ ದಿಗ್ದ್ವಾರೇ ಚ ಪ್ರಧಾನಕೇ ।
ನೀಲಂ ರಕ್ತಂ ಚ ವೈಢೂರ್ಯಂ ಶ್ಯಾಮಂ ಮರಕತಂ ತಥಾ ॥ ೧೧ ॥

ಮುಕ್ತಾಪ್ರವಾಳಗೋಮೇದವಜ್ರಾಣಿ ನವರತ್ನಕಂ ।
ಮಧ್ಯೇ ಲಿಂಗಂ ಮಹದ್ದ್ರವ್ಯಂ ನಿಃಕ್ಷಿಪೇತ್ಸಹವೈದಿಕೇ ॥ ೧೨ ॥

---

೮. ಚರವಾದ ಸ್ಥಳದಲ್ಲಿ ಬಾಣದಿಂದ ನಿರ್ಮಿಸಿರುವ ಲಿಂಗವನ್ನು ಹೊರತು ಮಿಕ್ಕಲ್ಲಿ ಲಿಂಗವೂ, ಪೀಠವೂ ಸೇರಿಕೊಂಡಿರಬೇಕು. ಹನ್ನೆರಡು ಅಂಗುಲ ಪ್ರಮಾಣ ವುಳ್ಳ ಲಿಂಗವು ಉತ್ತಮವಾದುದು.

೯. ಲಿಂಗವು ಚಿಕ್ಕದಾದರೆ ಫಲವು ಸ್ವಲ್ಪವೇ ಲಭಿಸುವುದು, ದೊಡ್ಡದಾದರೆ ಉತ್ತಮವು. ಚರವಾದ ಸ್ಥಳದಲ್ಲಿ ಒಂದಂಗುಲದಷ್ಟು ಚಿಕ್ಕದಾದ ಲಿಂಗವು ಉತ್ತಮವು.

೧೦. ಮೊದಲು ಅಲ್ಲಿ ದೃಢವೂ, ಕನ್ನಡಿಯಂತೆ ನಿರ್ಮಲವೂ, ನವರತ್ನ ಗಳಿಂದ ಅಲಂಕರಿಸಲ್ಪಟ್ಟು ಮನೋಹರವೂ, ಆದಂತಹ ಗರ್ಭಗೃಹದ ಪ್ರಧಾನ ವಾದ ಬಾಗಲಿನ ಮೇಲ್ಭಾಗದಲ್ಲಿ ದೇವತೆಗಳಿಂದ ಕೂಡಿರುವಂತಹ ವಿಮಾನವನ್ನು ಕಟ್ಟಬೇಕು.

೧೧. ನೀಲ,ಕೆಂಪು , ವೈಡೂರ್ಯ, ಶ್ಯಾಮ, ಮರಕತ, ಮುತ್ತು ಹವಳ, ಗೋಮೇದ, ವಜ್ರ ಇವು ಒಂಭತ್ತು ನವರತ್ನಗಳು.

೧೨-೧೩, ಇಂತಹ ಗರ್ಭಗೃಹದ ಮಧ್ಯದಲ್ಲಿ ಪೀಠದಲ್ಲಿ ದೊಡ್ಡ ಲಿಂಗವನ್ನು ಪ್ರತಿಷ್ಠಿಸಬೇಕು. ನಂತರ ಆ ಲಿಂಗವನ್ನು "ಸದ್ಯೋಜಾತಾದಿ" ಐದು ಮಂತ್ರ

ಸಂಪೂಜ್ಯ ಲಿಂಗಂ ಸದ್ಯಾದ್ಯೈಃ ಪಂಚಸ್ಥಾನೇ ಯಥಾಕ್ರಮಂ ।
ಅಗ್ನೌ ಚ ಹುತ್ವಾ ಬಹುಧಾ ಹವಿಷಾ ಸಕುಲಂ ಚ ಮಾಂ ॥ ೧೩ ॥

ಅಭ್ಯರ್ಚ್ಯ ಗುರುಮಾಚಾರ್ಯಮರ್ಥೈಃ ಕಾಮೈಶ್ಚ ಬಾಂಧವಂ ।
ದದ್ಯಾದೈಶ್ವರ್ಯಮರ್ಥಿಭ್ಯೋ ಜಡಮಪ್ಯಜಡಂ ತಥಾ ॥ ೧೪ ॥

ಸ್ಥಾವರಂ ಜಂಗಮಂ ಜೀವಂ ಸರ್ವಂ ಸಂತೋಷ್ಯ ಯತ್ನತಃ ।
ಸುವರ್ಣಪೂರಿತೇ ಶ್ವಭ್ರೇ ನವರತ್ನೈಶ್ಚ ಪೂರಿತೇ ॥ ೧೫ ॥

ಸದ್ಯಾದಿ ಬ್ರಹ್ಮ ಚೋಚ್ಚಾರ್ಯ ಧ್ಯಾತ್ವಾ ದೇವಂ ಪರಂ ಶುಭಂ ।
ಉದೀರ್ಯ ಚ ಮಹಾಮಂತ್ರಮೋಂಕಾರಂ ನಾದಘೋಷಿತಂ ॥ ೧೬ ॥

ಲಿಂಗಂ ತತ್ರ ಪ್ರತಿಷ್ಠಾಪ್ಯ ಲಿಂಗಂ ಪೀಠೇನ ಯೋಜಯೇತ್ ।
ಲಿಂಗಂ ಸಪೀಠಂ ನಿಕ್ಷಿಪ್ಯ ನಿತ್ಯಲೇಪೇನ ಬಂಧಯೇತ್ ॥ ೧೭ ॥

---

ಗಳಿಂದ ಐದು ಸ್ಥಾನಗಳಲ್ಲಿ ಕ್ರಮವಾಗಿ ಅರ್ಚಿಸಿ, ಅಗ್ನಿಯಲ್ಲಿ ಹವಿಸ್ಸಿನಿಂದ ವಿಧಿವತ್ತಾಗಿ ಹೋಮಮಾಡಿ, ನನ್ನನ್ನು (ಶಿವನನ್ನು) ನನ್ನ ಪರಿವಾರದೊಡನೆ ಪೂಜಿಸಬೇಕು. ಸದ್ಯೋಜಾತಾದಿ ಐದು ಮಂತ್ರಗಳು—ಸದ್ಯೋಜಾತಂ ಪ್ರಪದ್ಯಾಮಿ...............। ವಾಮದೇವಾಯನಮೋ...........। ಅಘೋರೇಭ್ಯೋ...........। ತತ್ಪುರುಷಾಯ ವಿದ್ಮಹೇ...........। ಈಶಾನಸ್ಸರ್ವವಿದ್ಯಾನಾಂ...........। (ತೈ. ಉ.)

೧೪. ಆಚಾರ್ಯನನ್ನೂ ಶಿಲ್ಪಿಯನ್ನೂ ಗುರುವನ್ನೂ ಸಹ ಪೂಜಿಸಿ ಬಂಧುಗಳ ಇಷ್ಟಾರ್ಥವನ್ನು ಸಲ್ಲಿಸಬೇಕು. ಯಾಚಕರಿಗೆ ಚೇತನ ರೂಪವಾದ ಗೋವುಗಳನ್ನೂ ಅಚೇತನರೂಪವಾದ ದ್ರವ್ಯ ಮುಂತಾದ ವಸ್ತುಗಳನ್ನೂ ದಾನಮಾಡಬೇಕು.

೧೫-೧೬. ಸ್ಥಿರ ಮತ್ತು ಚರವಾದ ಸಕಲ ಪ್ರಾಣಿಗಳನ್ನೂ ಯತ್ನಪೂರ್ವಕವಾಗಿ ಸಂತೋಷಗೊಳಿಸಿ, ಚಿನ್ನ ಮತ್ತು ನವರತ್ನಗಳನ್ನು ತುಂಬಿರುವಂತಹ ಗರ್ತದಲ್ಲಿ ಲಿಂಗವನ್ನು "ಸದ್ಯೋಜಾತಂ" ಮೊದಲಾದ ಮಂತ್ರಗಳನ್ನು ಉಚ್ಚರಿಸಿ, ಮಂಗಳಕರನಾದ ಮಹಾದೇವನನ್ನು ಧ್ಯಾನಿಸಿ, ಬಳಿಕ ಮಹಾಮಂತ್ರವಾದ ಓಂಕಾರವನ್ನು ನಾದಪೂರ್ವಕವಾಗಿ ಪಠಿಸಿ, ಶಿವಲಿಂಗವನ್ನು ಪ್ರತಿಷ್ಠಿಸಿ, ಪೀಠದೊಡನೆ ಅದನ್ನು ಸೇರಿಸಿ ಪೀಠದಲ್ಲಿ ಪ್ರತಿಷ್ಠಿಸಬೇಕು.

೧೭. ಹೀಗೆ ಪೀಠದೊಡನೆ ಲಿಂಗವನ್ನು ಪ್ರತಿಷ್ಠಿಸಿ ದೃಢವಾದ ಅಷ್ಟಬಂಧವೆಂಬ ಲೇಪದಿಂದ ಗಟ್ಟಿಯಾಗಿ ಆ ಲಿಂಗವನ್ನು ಬಂಧಿಸಬೇಕು.

ಏವಂ ಬೇರಂ ಚ ಸಂಸ್ಥಾಪ್ಯಂ ತತ್ರೈವ ಪರಮಂ ಶುಭಂ ।
ಪಂಚಾಕ್ಷರೇಣ ಬೇರಂ ತು ಉತ್ಸವಾರ್ಥಂ ಬಹಿಸ್ತಥಾ ॥ ೧೮ ॥

ಬೇರಂ ಗುರುಭ್ಯೋ ಗೃಹ್ಣೀಯಾತ್ಸಾಧುಭಿಃ ಪೂಜಿತಂ ತು ವಾ ।
ಏವಂ ಲಿಂಗೇ ಚ ಬೇರೇ ಚ ಪೂಜಾ ಶಿವಪದಪ್ರದಾ ॥ ೧೯ ॥

ಪುನಶ್ಚ ದ್ವಿವಿಧಂ ಪ್ರೋಕ್ತಂ ಸ್ಥಾವರಂ ಜಂಗಮಂ ತಥಾ ।
ಸ್ಥಾವರಂ ಲಿಂಗಮಿತ್ಯಾಹುಸ್ತರುಗುಲ್ಮಾದಿಕಂ ತಥಾ ॥ ೨೦ ॥

ಜಂಗಮಂ ಲಿಂಗಮಿತ್ಯಾಹುಃ ಕೃಮಿಕೀಟಾದಿಕಂ ತಥಾ ।
ಸ್ಥಾವರಸ್ಯ ಶುಶ್ರೂಷಾ ಜಂಗಮಸ್ಯ ಚ ತರ್ಪಣಂ ॥ ೨೧ ॥

ತತ್ತತ್ಸುಖಾನುರಾಗೇಣ ಶಿವಪೂಜಾಂ ವಿದುರ್ಬುಧಾಃ ।
ಪೀಠಮಂಬಾಮಯಂ ಸರ್ವಂ ಶಿವಲಿಂಗಂ ಚ ಚಿನ್ಮಯಂ ॥ ೨೨ ॥

---

೧೮. ಈ ಪ್ರಕಾರ ಪ್ರತಿಷ್ಠಿಸಿ ಅಲ್ಲಿ ಹೊರಗಿನ ಉತ್ಸವಕ್ಕಾಗಿ ಶ್ರೇಷ್ಠವಾದ ಉತ್ಸವಮೂರ್ತಿಯೊಂದನ್ನು ಪಂಚಾಕ್ಷರೀ ಮಂತ್ರದಿಂದ ಪ್ರತಿಷ್ಠಿಸಬೇಕು.

೧೯. ವಿಗ್ರಹವನ್ನು ಗುರುಗಳಿಂದ ತೆಗೆದುಕೊಳ್ಳಬೇಕು. ಅಥವಾ ಸಾಧುಗಳು ಪೂಜಿಸಿದಂತಹ ವಿಗ್ರಹವನ್ನು ಪರಿಗ್ರಹಿಸಬೇಕು, ಈ ರೀತಿಯಾಗಿ ಲಿಂಗದಲ್ಲಿಯೂ, ವಿಗ್ರಹದಲ್ಲಿಯೂ ಶಿವಪೂಜೆಯನ್ನು ಮಾಡಿದರೆ ಶಿವಲೋಕವು ಲಭಿಸುವುದು.

೨೦. ತಿರುಗಿ ಶಿವಲಿಂಗವು ಸ್ಥಾವರ ಮತ್ತು ಜಂಗಮವೆಂದು ಎರಡು ವಿಧವಾಗಿರುವುದು. ಮರ, ಮತ್ತು ಪೊದರು ಮುಂತಾದುವುಗಳು ಸ್ಥಾವರಲಿಂಗವು.

೨೧. ಕೃಮಿ, ಕೀಟ, ಮುಂತಾದುವುಗಳು ಜಂಗಮವಾದ ಲಿಂಗವು. ಸ್ಥಾವರ ಲಿಂಗವನ್ನು ಸೇವಿಸಬೇಕು. ಜಂಗಮಲಿಂಗವನ್ನು ಆಯಾಯ ಸುಖದ ಅನುರಾಗದಿಂದ ತೃಪ್ತಿಗೊಳಿಸಬೇಕು. ಇದೂ ಶಿವಪೂಜೆಯೆಂದು ಪಂಡಿತರು ತಿಳಿಯುವರು.

೨೨. ಪೀಠವು ಪಾರ್ವತೀಸ್ವರೂಪವಾದುದು. ಶಿವಲಿಂಗವು ಜ್ಞಾನಸ್ವರೂಪನಾದ ಈಶ್ವರಸ್ವರೂಪವಾದುದು.

ಯಥಾ ದೇವೀಮುಮಾಮಂಕೇ ಧೃತ್ವಾ ತಿಷ್ಠತಿ ಶಂಕರಃ ।
ತಥಾ ಲಿಂಗಮಿದಂ ಪೀಠಂ ಧೃತ್ವಾ ತಿಷ್ಠತಿ ಸಂತತಂ ॥ ೨೩ ॥

ಏವಂ ಸ್ಥಾಪ್ಯ ಮಹಾಲಿಂಗಂ ಪೂಜಯೇದುಪಚಾರಕೈಃ ।
ನಿತ್ಯಪೂಜಾ ಯಥಾಶಕ್ತಿ ಧ್ವಜಾದಿಕರಣಂ ತಥಾ ॥ ೨೪ ॥

ಇತಿ ಸಂಸ್ಥಾಪಯೇಲ್ಲಿಂಗಂ ಸಾಕ್ಷಾಚ್ಛಿವಪದಪ್ರದಂ ।
ಅಥ ವಾ ಚರಲಿಂಗೇ ತು ಷೋಡಶೈರುಪಚಾರಕೈಃ ॥ ೨೫ ॥

ಪೂಜಯೇಚ್ಚ ಯಥಾನ್ಯಾಯಂ ಕ್ರಮಾಚ್ಛಿವಪದಪ್ರದಂ ।
ಆವಾಹನಂ ಚಾಸನಂ ಚ ಅರ್ಘ್ಯಂ ಪಾದ್ಯಂ ತಥೈವ ಚ ॥ ೨೬ ॥

ತದಂಗಾಚಮನಂ ಚೈವ ಸ್ನಾನಮಭ್ಯಂಗಪೂರ್ವಕಂ ।
ವಸ್ತ್ರಂ ಗಂಧಂ ತಥಾ ಪುಷ್ಪಂ ಧೂಪಂ ದೀಪಂ ನಿವೇದನಂ ॥ ೨೭ ॥

---

೨೩. ಶಂಕರನು ಪಾರ್ವತೀದೇವಿಯನ್ನು ತನ್ನ ತೊಡೆಯಲ್ಲಿ ಸದಾ ಧರಿಸಿರುವಂತೆ ಈ ಶಿವಲಿಂಗವೂ ಸಹ ಪೀಠವನ್ನು ಸದಾ ಧರಿಸಿಯೇ ಇರುವುದು, ಎಂದರೆ ಲಿಂಗವು ಪೀಠ ಸಹಿತವಾಗಿಯೇ ಇರಬೇಕು.

೨೪. ಈ ರೀತಿಯಾಗಿ ಮಹಾಲಿಂಗವನ್ನು ಪ್ರತಿಷ್ಠಿಸಿ ಹದಿನಾರು ಉಪಚಾರಗಳಿಂದ ನಿತ್ಯವೂ ಯಥಾಶಕ್ತಿ ಪೂಜಿಸಬೇಕು. ಧ್ವಜ ಮುಂತಾದುವುಗಳನ್ನೂ ಮಾಡಬೇಕು.

೨೫. ಈ ವಿಧಿಯಂತೆ ಸಾಕ್ಷಾತ್ ಶಿವಲೋಕವನ್ನುಂಟುಮಾಡುವಂತಹ ಲಿಂಗವನ್ನು ಪ್ರತಿಷ್ಠಿಸಬೇಕು. ಅಥವಾ ಹಿಂದೆ ಹೇಳಿದ ಚರಲಿಂಗದಲ್ಲಿ ಹದಿನಾರು ಉಪಚಾರಗಳಿಂದ ಶಿವಪದವನ್ನುಂಟುಮಾಡುವ ಲಿಂಗವನ್ನು ಕ್ರಮವಾಗಿ ಪೂಜಿಸಬೇಕು.

೨೬-೨೭. ಆವಾಹನ, ಆಸನ, ಅರ್ಘ್ಯ, ಪಾದ್ಯ, ಅದಕ್ಕೆ ಅಂಗವಾದ ಆಚಮನ, ಸ್ನಾನ, ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನೀರಾಜನ, ತಾಂಬೂಲ, ನಮಸ್ಕಾರ, ವಿಸರ್ಜನ, ಇವು ಹದಿನಾರು ಉಪಚಾರಗಳು.

ನೀರಾಜನಂ ಚ ತಾಂಬೂಲಂ ನಮಸ್ಕಾರೋ ವಿಸರ್ಜನಂ ।
ಅಥವಾಘ್ಯಾರ್ದಿಕಂ ಕೃತ್ವಾ ನೈವೇದ್ಯಾಂತಂ ಯಥಾವಿಧಿ ॥ ೨೮ ॥

ಅಥಾಭಿಷೇಕಂ ನೈವೇದ್ಯಂ ನಮಸ್ಕಾರಂ ಚ ತರ್ಪಣಂ ।
ಯಥಾಶಕ್ತಿ ಸದಾ ಕುರ್ಯಾತ್ಕ್ರಮಾಚ್ಛಿವಪದಪ್ರದಂ ॥ ೨೯ ॥

ಅಥವಾ ಮಾನುಷೇ ಲಿಂಗೇಽಪ್ಯಾರ್ಷೇ ದೈವೇ ಸ್ವಯಂಭುವಿ ।
ಸ್ಥಾಪಿತೇಽಪೂರ್ವಕೇ ಲಿಂಗೇ ಸೋಪಚಾರಂ ಯಥಾ ತಥಾ ॥ ೩೦ ॥

ಪೂಜೋಪಕರಣೇ ದತ್ತೇ ಯತ್ಕಿಂಚಿತ್ಫಲಮಶ್ನುತೇ ।
ಪ್ರದಕ್ಷಿಣನಮಸ್ಕಾರೈಃ ಕ್ರಮಾಚ್ಛಿವಪದಪ್ರದಂ ॥ ೩೧ ॥

ಲಿಂಗದರ್ಶನಮಾತ್ರಂ ವಾ ನಿಯಮೇನ ಶಿವಪ್ರದಂ ।
ಮೃತ್ಪಿಷ್ಟಗೋಶಕೃತ್ಪುಷ್ಪೈಃ ಕರವೀರೇಣ ವಾ ಫಲೈಃ ॥ ೩೨ ॥

ಗುಡೇನ ನವನೀತೇನ ಭಸ್ಮನಾನ್ನೈರ್ಯಥಾರುಚಿ ।
ಲಿಂಗಂ ಯತ್ನೇನ ಕೃತ್ವಾಂತೇ ಯಜೇತ್ತದನುಸಾರತಃ ॥ ೩೩ ॥

---

೨೮-೨೯. ಅಥವಾ, ಅರ್ಘ್ಯ ಮೊದಲಾಗಿ ನೈವೇದ್ಯದವರೆಗೆ ವಿಧಿವತ್ತಾಗಿ ಮಾಡಿ ಅಭಿಷೇಕ, ನೈವೇದ್ಯ. ನಮಸ್ಕಾರ ತರ್ಪಣ ಇವುಗಳನ್ನು ಯಥಾಶಕ್ತಿಯಾಗಿ ಎಂದರೆ ಹೆಚ್ಚಾಗಿಯೇ ಸದಾ ಮಾಡಬೇಕು. ಹಾಗೆ ಮಾಡಿದರೆ ಶಿವಪದವು ಲಭಿಸುವುದು.

೩೦-೩೧. ಮತ್ತು ಮನುಷ್ಯರು ಋಷಿಗಳು, ದೇವತೆಗಳು ಇವರು ಪ್ರತಿಷ್ಠಿಸಿರುವ ಮತ್ತು ತಾನಾಗಿಯೇ ಉದ್ಭವಿಸಿದಂತಹ ಲಿಂಗದಲ್ಲಿ ಸಕಲ ಉಪಚಾರಗಳೊಡನೆ ಪೂಜಾಸಾಮಗ್ರಿಯನ್ನರ್ಪಿಸಿ ಪ್ರದಕ್ಷಿಣ ಮತ್ತು ನಮಸ್ಕಾರಗಳನ್ನು ಮಾಡಿದರೆ ಕ್ರಮವಾಗಿ ಶಿವಪದವು ಲಭಿಸುವುದು. ಅಥವಾ ನಿತ್ಯವೂ ನಿಯಮದಿಂದ ಶಿವಲಿಂಗವನ್ನು ದರ್ಶನಮಾಡಿದರೂ ಸಹ ಕ್ರಮೇಣ ಶಿವಪದವು ಲಭಿಸುವುದು.

೩೨-೩೩. ಮಣ್ಣು, ಹಿಟ್ಟು, ಗೋಮಯ ಮತ್ತು ಪುಷ್ಪ ಇವುಗಳಿಂದ, ಅಥವಾ ಕರವೀರ ಗನ್ನೇರಳೆ, ಪುಷ್ಪ, ಫಲಗಳು, ಬೆಲ್ಲ, ಬೆಣ್ಣೆ, ಭಸ್ಮ, ಅನ್ನ ಇವುಗಳಿಂದ ತನ್ನಿಷ್ಟದಂತೆ ಶಿವಲಿಂಗವನ್ನು ಮಾಡಿ ಕೊನೆಯಲ್ಲಿ ಆಯಾಯ ಲಿಂಗಕ್ಕನುಸಾರವಾಗಿ ಪೂಜೆಯನ್ನು ಮಾಡಬೇಕು.

ಅಂಗುಷ್ಠಾದಾವಪಿ ತಥಾ ಪೂಜಾಮಿಚ್ಛಂತಿ ಕೇಚನ ।
ಲಿಂಗಕರ್ಮಣಿ ಸರ್ವತ್ರ ನಿಷೇಧೋಽಸ್ತಿ ನ ಕರ್ಹಿಚಿತ್ ॥ ೩೪ ॥

ಸರ್ವತ್ರ ಫಲದಾತಾ ಹಿ ಪ್ರಯಾಸಾನುಗುಣಂ ಶಿವಃ ।
ಅಥವಾ ಲಿಂಗದಾನಂ ವಾ ಲಿಂಗಮೌಲ್ಯಮಥಾಪಿ ವಾ ॥ ೩೫ ॥

ಶ್ರದ್ಧಯಾ ಶಿವಭಕ್ತಾಯ ದತ್ತಂ ಶಿವಪದಪ್ರದಂ ।
ಅಥವಾ ಪ್ರಣವಂ ನಿತ್ಯಂ ಜಪೇದ್ದಶಸಹಸ್ರಕಂ ॥ ೩೬ ॥

ಸಂಧ್ಯಯೋಶ್ಚ ಸಹಸ್ರಂ ವಾ ಜ್ಞೇಯಂ ಶಿವಪದಪ್ರದಂ ।
ಜಪಕಾಲೇ ಮಕಾರಾಂತಂ ಮನಶ್ಶುದ್ಧಿಕರಂ ಭವೇತ್ ॥ ೩೭ ॥

ಸಮಾಧೌ ಮಾನಸಂ ಪ್ರೋಕ್ತಮುಪಾಂಶು ಸಾರ್ವಕಾಲಿಕಂ ।
ಸಮಾನಪ್ರಣವಂ ಚೇದಂ ಬಿಂದುನಾದಯುತಂ ವಿದುಃ ॥ ೩೮ ॥

---

೩೪. ಕೆಲವರು ಅಂಗುಷ್ಠ (ಹೆಬ್ಬೆರಳು) ಮುಂತಾದುವುಗಳಲ್ಲಿಯೂ ಸಹ ಶಿವ ಪೂಜೆಯನ್ನು ಮಾಡಬಹುದು ಎಂದಿರುವರು. ಲಿಂಗವನ್ನು ಮಾಡಲು ಯಾವ ವಸ್ತುವಿಗೂ ನಿಷೇಧವಿಲ್ಲವು. ಎಲ್ಲಾ ವಸ್ತುಗಳಲ್ಲಿಯೂ ಲಿಂಗವನ್ನು ಮಾಡಬಹುದು.

೩೫. ಎಲ್ಲೆಡೆಯಲ್ಲಿಯೂ ಆದರ ಪ್ರಯಾಸಕ್ಕೆ ಅನುಸಾರವಾಗಿ ಶಿವಪೂಜೆಗೆ ಫಲವನ್ನು ಶಿವನೇ ಕೊಡುವನು. ಅಥವಾ ಶಿವಲಿಂಗವನ್ನಾಗಲೀ, ಅದರ ಬೆಲೆ ಯನ್ನಾಗಲೀ ಶಿವಭಕ್ತನಿಗೆ ಶ್ರದ್ಧೆಯಿಂದ ದಾನಮಾಡಿದರೆ ಶಿವಪದವು ಲಭಿಸುವುದು.

೩೬. ಇಲ್ಲದಿದ್ದರೆ ನಿತ್ಯವೂ ಓಂಕಾರವನ್ನು ಹತ್ತು ಸಾವಿರ ಬಾರಿ ಜಪಿಸ ಬೇಕು. ಅಥವಾ ಎರಡು ಸಂಧ್ಯಾಕಾಲಗಳಲ್ಲಿಯೂ ಸಾವಿರ ಸಾವಿರ ಬಾರಿ ಜಪಿಸ ಬೇಕು. ಹಾಗೆ ಮಾಡಿದರೆ ಶಿವಪದವು ಲಭಿಸುವುದು.

೩೭-೩೮. ಜಪಕಾಲದಲ್ಲಿ ಓಂಕಾರವನ್ನುಚ್ಚರಿಸಿದರೆ ಮನಶ್ಶುದ್ಧಿಯು ಆಗು ವುದು. ಸಮಾಧಿಯಲ್ಲಿ ಮನಸ್ಸಿನಲ್ಲಿಯೇ ಓಂಕಾರವನ್ನು ಪಠಿಸಬೇಕು, ಮಿಕ್ಕ ಕಾಲ ಗಳಲ್ಲಿ ಇನ್ನೊಬ್ಬರಿಗೆ ಕೇಳಿಸದಂತೆ ಮೆಲ್ಲಗೆ ಉಚ್ಚರಿಸಬೇಕು. ಬಿಂದು ಮತ್ತು ನಾದ ಗಳೊಡನೆ ಗಟ್ಟಿಯಾಗಿ ಓಂಕಾರವನ್ನುಚ್ಚರಿಸಿದಂತೆಯೇ ಫಲವು ಲಭಿಸುವುದು.

ಅಥ ಪಂಚಾಕ್ಷರಂ ನಿತ್ಯಂ ಜಪೇದಯುತಮಾದರಾತ್ ।
ಸಂಧ್ಯಯೋಶ್ಚ ಸಹಸ್ರಂ ವಾ ಜ್ಞೇಯಂ ಶಿವಪದಪ್ರದಂ ॥ ೩೯ ॥

ಪ್ರಣವೇನಾದಿಸಂಯುಕ್ತಂ ಬ್ರಾಹ್ಮಣಾನಾಂ ವಿಶಿಷ್ಯತೇ ।
ದೀಕ್ಷಾಯುಕ್ತಂ ಗುರೋರ್ಗ್ರಾಹ್ಯಂ ಮಂತ್ರಂ ಹ್ಯಥ ಫಲಾಪ್ತಯೇ ॥ ೪೦ ॥

ಕುಂಭಸ್ನಾನಂ ಮಂತ್ರದೀಕ್ಷಾ ಮಾತೃಕಾನ್ಯಾಸಮೇವ ಚ ।
ಬ್ರಾಹ್ಮಣಃ ಸತ್ಯಪೂತಾತ್ಮಾ ಗುರುರ್ಜ್ಞಾನೀ ವಿಶಿಷ್ಯತೇ ॥ ೪೧ ॥

ದ್ವಿಜಾನಾಂ ಚ ನಮಃ ಪೂರ್ವಮನ್ಯೇಷಾಂ ಚ ನಮೋಽಂತಕಂ ।
ಸ್ತ್ರೀಣಾಂ ಚ ಕಚಿದಿಚ್ಛಂತಿ ನಮೋಽಂತಂ ಚ ಯಥಾವಿಧಿ ॥ ೪೨ ॥

ವಿಪ್ರಸ್ತ್ರೀಣಾಂ-ನಮಃಪೂರ್ವಮಿದಮಿಚ್ಛಂತಿ ಕೇಚನ ।
ಪಂಚಕೋಟಿಜಪಂ ಕೃತ್ವಾ ಸದಾಶಿವಸಮೋ ಭವೇತ್ ॥ ೪೩ ॥

---

೩೯. ಅಲ್ಲದೆ "ಓಂ ನಮಃ ಶಿವಾಯ" ಎಂಬ ಪಂಚಾಕ್ಷರ ಮಂತ್ರವನ್ನು ನಿತ್ಯವೂ ಹತ್ತು ಸಾವಿರ ಬಾರಿ ಜಪಿಸಬೇಕು. ಪ್ರಾತಃ ಮತ್ತು ಸಾಯಂ ಸಂಧ್ಯಾ ಕಾಲಗಳೆರಡರಲ್ಲಿಯೂ, ಸಾವಿರ ಸಾವಿರ ಬಾರಿ ಜಪಿಸಿದರೆ ಶಿವಪದವು ಲಭಿಸುವುದು.

೪೦. ಆದಿಯಲ್ಲಿ ಓಂಕಾರದಿಂದ ಕೂಡಿದ ಪಂಚಾಕ್ಷರ ಮಂತ್ರವು ಬ್ರಾಹ್ಮಣ ರಿಗೆ ಯುಕ್ತವಾದುದು. ಮಂತ್ರವನ್ನು ದೀಕ್ಷಾಪೂರ್ವಕವಾಗಿ ಗುರುಗಳಿಂದ ಉಪದೇಶ ತೆಗೆದುಕೊಳ್ಳಬೇಕು.

೪೧. ಕಲಶಸ್ನಾನ, ಮಂತ್ರದೀಕ್ಷೆ, ಮಾತೃಕಾಸ್ನಾನ ಇವುಗಳಗನ್ನೂ ಮಾಡ ಬೇಕು. ಸತ್ಯವಂತನೂ, ಪರಿಶುದ್ಧನೂ ಜ್ಞಾನಿಯೂ ಆದಂತಹ ಬ್ರಾಹ್ಮಣಗುರುವೇ ಉತ್ತಮನಾದವನು. ಅಂತಹ ಬ್ರಾಹ್ಮಣನನ್ನೇ ಗುರುವಾಗಿ ಮಾಡಿಕೊಳ್ಳಬೇಕು.

೪೨-೪೩. ದ್ವಿಜರು ಪಂಚಾಕ್ಷರ ಮಂತ್ರದಲ್ಲಿ ನಮಃಪದವನ್ನು ಮೊದಲುಚ್ಚರಿಸ ಬೇಕು. ಮಿಕ್ಕವರು ಕೊನೆಯಲ್ಲಿ ಉಚ್ಚರಿಸಿ ಜಪಿಸಬೇಕು. ಕೆಲವರು ಸ್ತ್ರೀಯರೂ ನಮಃ ಪದವನ್ನು ಕೊನೆಯಲ್ಲಿ ಉಚ್ಚರಿಸಿ ಪಂಚಾಕ್ಷರ ಮಂತ್ರವನ್ನು ಜಪಿಸಬಹು ದೆಂದು ಹೇಳಿರುವರು ಎಂದರೆ ದ್ವಿಜರು ಅಥವಾ ಉತ್ತಮ ವರ್ಣದವರು

ಏಕದ್ವಿತ್ರಿಚತುಃಕೋಟ್ಯಾ ಬ್ರಹ್ಮಾದೀನಾಂ ಪದಂ ವ್ರಜೇತ್ ।
ಜಪೇದಕ್ಷರಲಕ್ಷಂ ವಾ ಅಕ್ಷರಾಣಾಂ ಪೃಥಕ್ಪೃಥಕ್ ॥ ೪೪ ॥

ಅಥವಾಕ್ಷರಲಕ್ಷಂ ವಾ ಜ್ಞೇಯಂ ಶಿವಪದಪ್ರದಂ ।
ಸಹಸ್ರಂ ತು ಸಹಸ್ರಾಣಾಂ ಸಹಸ್ರೇಣ ದಿನೇನ ಹಿ ॥ ೪೫ ॥

ಜಪೇನ್ಮಂತ್ರಾದಿಷ್ಟಸಿದ್ಧಿರ್ನಿತ್ಯಂ ಬ್ರಾಹ್ಮಣಭೋಜನಾತ್ ।
ಅಷ್ಟೋತ್ತರಸಹಸ್ರಂ ವೈ ಗಾಯತ್ರೀಂ ಪ್ರಾತರೇವ ಚ ॥ ೪೬ ॥

ಬ್ರಾಹ್ಮಣಸ್ತು ಜಪೇನ್ನಿತ್ಯಂ ಕ್ರಮಾಚ್ಛಿವಪದಪ್ರದಾಂ ।
ವೇದಮಂತ್ರಾಂಶ್ಚ ಸೂಕ್ತಾನಿ ಜಪೇನ್ನಿಯಮಮಾಸ್ಥಿತಃ ॥ ೪೭ ॥

---

ಓಂನಮಃಶಿವಾಯ ಎಂತಲೂ, ಇತರರು ಓಂಶಿವಾಯನಮಃ ಎಂತಲೂ ಉಚ್ಚರಿಸಬೇಕು. ನಮಃಪದ ಪೂರ್ವದಲ್ಲಿರುವ ನಮಃಶಿವಾಯ ಎಂಬ ಪಂಚಾಕ್ಷರೀಮಂತ್ರವು ಶ್ರುತಿಪ್ರತಿಪಾದ್ಯವಾದುದು. ಎಲ್ಲಕ್ಕಿಂತಲೂ ಶ್ರೇಷ್ಠವಾದುದು. (ತೈ. ಸಂ. ೪-೫-೮) ಬ್ರಾಹ್ಮಣ ಸ್ತ್ರೀಯರು ನಮಃ ಪದವನ್ನು ಮೊದಲಲ್ಲಿಯೇ ಉಚ್ಚರಿಸಬೇಕೆಂದು ಕೆಲವರು ಹೇಳಿರುವರು. ಐದು ಕೋಟಿ ಪಂಚಾಕ್ಷರೀ ಜಪವನ್ನು ಮಾಡಿದರೆ ಸದಾಶಿವನ ಸಮಾನತೆಯು ಲಭಿಸುವುದು.

೪೪. ಒಂದು, ಎರಡು, ಮೂರು ಕೋಟಿ ಜಪಗಳನ್ನು ಮಾಡಿದರೆ ಬ್ರಹ್ಮ ಮೊದಲಾದವರ ಪದವನ್ನು ಪಡೆಯುವನು. ಒಂದೊಂದು ಅಕ್ಷರಗಳಿಗೆ ಬೇರೆ ಬೇರೆ ಲಕ್ಷ ಲಕ್ಷ ಜಪವನ್ನು ಮಾಡಿದರೆ ಶಿವಪದವನ್ನು ಪಡೆವನು.

೪೫. ಪ್ರತಿ ದಿನವೂ ಸಾವಿರ ಸಾವಿರ ಜಪಗಳನ್ನು ಸಾವಿರ ದಿನಗಳವರೆಗೆ ಮಾಡಿ, ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು.

೪೬-೪೭. ಕ್ರಮವಾಗಿ ಶಿವಪದವನ್ನುಂಟುಮಾಡುವಂತಹ ಗಾಯತ್ರಿಯನ್ನು ಸಾವಿರದ ನೂರೆಂಟು ಬಾರಿ ಪ್ರಾತಃಕಾಲ ಬ್ರಾಹ್ಮಣನು ಜಪಿಸಬೇಕು. ಮತ್ತು ವೇದ ಮಂತ್ರಗಳು, ಸೂಕ್ತಗಳು ಇವುಗಳನ್ನು ನಿಯಮದಿಂದ ನಿತ್ಯವೂ ಜಪಿಸಬೇಕು, ಪಠಿಸಬೇಕು, ಇಲ್ಲಿ ಗಾಯತ್ರಿಯೆಂದರೆ "ತತ್ಪುರುಷಾಯವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋರುದ್ರಃ ಪ್ರಚೋದಯಾತ್ ॥" ಎಂಬ ರುದ್ರಗಾಯತ್ರಿಯು.

ಏಕಂ ದಶಾರ್ಣಮಂತ್ರಂ ಚ ಶತೋನಂ ಚ ತದೂರ್ಧ್ವಕಂ ।
ಅಯುತಂ ಚ ಸಹಸ್ರಂ ಚ ಶತಮೇಕಂ ವಿನಾ ಭವೇತ್ ॥ ೪೮ ॥

ವೇದಪಾರಾಯಣಂ ಚೈವ ಜ್ಞೇಯಂ ಶಿವಪದಪ್ರದಂ ।
ಅನ್ಯಾನ್ ಬಹುತರಾನ್ಮಂತ್ರಾನ್ ಜಪೇದಕ್ಷರಲಕ್ಷತಃ ॥ ೪೯ ॥

ಏಕಾಕ್ಷರಾಂಸ್ತಥಾ ಮಂತ್ರಾನ್ ಜಪೇದಕ್ಷರಕೋಟಿತಃ ।
ತತಃ ಪರಂ ಜಪೇಚ್ಚೈವ ಸಹಸ್ರಂ ಭಕ್ತಿಪೂರ್ವಕಂ ॥ ೫೦ ॥

ಏವಂ ಕುರ್ಯಾದ್ಯಥಾಶಕ್ತಿ ಕ್ರಮಾಚ್ಛಿವಪದಂ ಲಭೇತ್ ।
ನಿತ್ಯಂ ರುಚಿಕರಂ ತ್ವೇಕಂ ಮಂತ್ರಮಾಮರಣಾಂತಿಕಂ ॥ ೫೧ ॥

ಸಹಸ್ರಮೋಮಿತಿ ಜಪೇತ್ಸರ್ವಾಭೀಷ್ಟಂ ಶಿವಾಜ್ಞಯಾ ।
ಪುಷ್ಪಾರಾಮಾದಿಕಂ ವಾಪಿ ತಥಾ ಸಮ್ಮಾರ್ಜನಾದಿಕಂ ॥ ೫೨ ॥

---

೪೮. ದಶಾರ್ಣಮಂತ್ರವೊಂದನ್ನು ತೊಂಭತ್ತೊಂಭತ್ತು ಬಾರಿ ಜಪಿಸಬೇಕು. ಅಥವಾ ಅದಕ್ಕಿಂತಲೂ ಹೆಚ್ಚಾಗಿ ಹತ್ತುಸಾವಿರ ಬಾರಿಯಾಗಲೀ, ಸಾವಿರದ ತೊಂಭತ್ತೊಂಭತ್ತು ಬಾರಿಯಾಗಲೀ ಜಪಿಸಬೇಕು.

೪೯. ನಿತ್ಯವೂ ವೇದಪಾರಾಯಣ ಮಾಡಿದರೆ ಶಿವಲೋಕವು ಲಭಿಸುವುದು, ಇನ್ನೂ ಮಿಕ್ಕ ಅನೇಕ ಮಂತ್ರಗಳನ್ನು ಅಕ್ಷರವೊಂದಕ್ಕೆ ಲಕ್ಷದಂತೆ ಜಪಿಸಬೇಕು.

೫೦. ಒಂದೇ ಅಕ್ಷರವುಳ್ಳ ಮಂತ್ರಗಳನ್ನು ಕೋಟಿ ಬಾರಿಯೂ ಸಾವಿರ ಬಾರಿಯೂ ಭಕ್ತಿಪೂರ್ವಕವಾಗಿ ಜಪಿಸಬೇಕು. ಹೀಗೆ ತನ್ನ ಶಕ್ತಿಗನುಸಾರವಾಗಿ ಯಾವನು ಮಾಡುವನೋ ಅವನು ಕ್ರಮವಾಗಿ ಶಿವಲೋಕವನ್ನು ಪಡೆಯುವನು.

೫೧. ಈಶ್ವರಿಗೆ ಪ್ರಿಯವಾದ "ಓಂ" ಎಂಬ ಒಂದೇ ಮಂತ್ರವನ್ನು ನಿತ್ಯವೂ ಸಹಸ್ರಬಾರಿ ಜಪಿಸಿದರೆ ಶಿವನ ಆಜ್ಞೆಯಿಂದ ಸಕಲ ಇಷ್ಟಾರ್ಥಗಳೂ ನೆರವೇರುವುವು.

೫೨. ಹೂದೋಟ ಮುಂತಾದುವುಗಳ ನಿರ್ಮಾಣ, ಶಿವದೇವಾಲಯವನ್ನು ಶುದ್ಧಿಗೊಳಿಸುವುದು, ಇವುಗಳನ್ನು ಶಿವಕಾರ್ಯಾರ್ಥವಾಗಿ ಅಥವಾ ಶಿವಪ್ರೀತಿಗಾಗಿ ಮಾಡಿದರೆ ಶಿವಪದವು ಲಭಿಸುವುದು.

ಶಿವಾಯ ಶಿವಕಾರ್ಯಾರ್ಥೇ ಕೃತ್ವಾ ಶಿವಪದಂ ಲಭೇತ್ ।
ಶಿವಕ್ಷೇತ್ರೇ ತಥಾ ವಾಸಂ ನಿತ್ಯಂ ಕುರ್ಯಾಚ್ಚ ಭಕ್ತಿತಃ ॥ ೫೩ ॥

ಜಡಾನಾಮಜಡಾನಾಂ ಚ ಸರ್ವೇಷಾಂ ಭುಕ್ತಿಮುಕ್ತಿದಂ ।
ತಸ್ಮಾದ್ವಾಸಂ ಶಿವಕ್ಷೇತ್ರೇ ಕುರ್ಯಾದಾಮರಣಂ ಬುಧಃ ॥ ೫೪ ॥

ಲಿಂಗಾದ್ಧಸ್ತಶತಂ ಪುಣ್ಯಂ ಕ್ಷೇತ್ರೇ ಮಾನುಷಕೇ ವಿದುಃ ।
ಸಹಸ್ರಾರತ್ನಿಮಾತ್ರಂ ತು ಪುಣ್ಯಂ ಕ್ಷೇತ್ರೇ ತಥಾರ್ಷಕೇ ॥ ೫೫ ॥

ದೈವಲಿಂಗೇ ತಥಾ ಜ್ಞೇಯಂ ಸಹಸ್ರಾರತ್ನಿಮಾನತಃ ।
ಧನುಃಪ್ರಮಾಣಸಾಹಸ್ರಂ ಪುಣ್ಯಂ ಕ್ಷೇತ್ರೇ ಸ್ವಯಂಭುವಿ ॥ ೫೬ ॥

ಪುಣ್ಯಕ್ಷೇತ್ರೇ ಸ್ಥಿತಾ ವಾಪೀ ಕೂಪಾದ್ಯಂ ಪುಷ್ಕರಾಣಿ ಚ ।
ಶಿವಗಂಗೇತಿ ವಿಜ್ಞೇಯಂ ಶಿವಸ್ಯ ವಚನಂ ಯಥಾ ॥ ೫೭ ॥

---

೫೩-೫೪. ಶಿವಕ್ಷೇತ್ರದಲ್ಲಿ ನಿತ್ಯವೂ ಭಕ್ತಿಯಿಂದ ವಾಸವನ್ನು ಮಾಡಬೇಕು. ಶಿವಕ್ಷೇತ್ರವಾಸವು ತಿಳಿವಳಿಕೆಯುಳ್ಳವರಿಗೂ, ತಿಳಿವಳಿಕೆ ಇಲ್ಲದವರಿಗೂ ಭೋಗ ಮತ್ತು ಮುಕ್ತಿಯನ್ನು ಕೊಡುವುದು. ಆದುದರಿಂದ ಶಿವಕ್ಷೇತ್ರದಲ್ಲಿ ಮರಣ ಪರ್ಯಂತವೂ ವಾಸವನ್ನು ಮಾಡಬೇಕು.

೫೫. ಮನುಷ್ಯಕ್ಷೇತ್ರದಲ್ಲಿ ಲಿಂಗದ ಸುತ್ತಲೂ ನೂರು ಮೊಳಗಳಷ್ಟು ಪ್ರದೇಶವು ಪುಣ್ಯಸ್ಥಳವು. ಋಷಿಕ್ಷೇತ್ರದಲ್ಲಿ ಲಿಂಗದ ಸುತ್ತಲೂ ಸಾವಿರ ಹಸ್ತಪ್ರಮಾಣಗಳಷ್ಟು ಪ್ರದೇಶವು ಪುಣ್ಯ ಸ್ಥಳವು.

೫೬. ದೇವಪ್ರತಿಷ್ಠಿತವಾದ ಲಿಂಗದ ಸುತ್ತಲೂ ಸಾವಿರ ಹಸ್ತ ಪ್ರಮಾಣಗಳಷ್ಟು ಪ್ರದೇಶವು ಪವಿತ್ರವಾದುದು. ಉದ್ಭವಲಿಂಗವುಳ್ಳ ಕ್ಷೇತ್ರದಲ್ಲಿ ಸಾವಿರ ಧನುಸ್ಸಿನಷ್ಟು ವಿಸ್ತಾರವಾದ ಪ್ರದೇಶವು ಪವಿತ್ರವಾದುದು.

೫೭. ಪುಣ್ಯಕ್ಷೇತ್ರದಲ್ಲಿರುವ ಭಾವಿ, ಕಲ್ಯಾಣಿ, ಸರೋವರ ಮುಂತಾದುವುಗಳನ್ನು ಶಿವಗಂಗೆಯೆಂದು ತಿಳಿಯಬೇಕು ಎಂದು ಶಿವನೇ ಹೇಳಿರುವನು.

ತತ್ರ ಸ್ನಾತ್ವಾ ತಥಾ ದತ್ವಾ ಜಪಿತ್ವಾ ಚ ಶಿವಂ ವ್ರಜೇತ್ ।
ಶಿವಕ್ಷೇತ್ರಂ ಸಮಾಶ್ರಿತ್ಯ ವಸೇದಾಮರಣಂ ತಥಾ ॥ ೫೮ ॥

ದಾಹಂ ದಶಾಹಂ ಮಾಸ್ಯಂ ವಾ ಸಪಿಂಡೀಕರಣಂ ತಥಾ ।
ಆಬ್ದಿಕಂ ವಾ ಶಿವಕ್ಷೇತ್ರೇ ಕ್ಷೇತ್ರೇ ಪಿಂಡಮಥಾಪಿ ವಾ ॥ ೫೯ ॥

ಸರ್ವಪಾಪವಿನಿರ್ಮುಕ್ತಃ ಸದ್ಯಃ ಶಿವಪದಂ ಲಭೇತ್ ।
ಅಥವಾ ಸಪ್ತರಾತ್ರಂ ವಾ ವಸೇದ್ವಾ ಪಂಚರಾತ್ರಕಂ ॥ ೬೦ ॥

ತ್ರಿರಾತ್ರಮೇಕರಾತ್ರಂ ವಾ ಕ್ರಮಾಚ್ಛಿವಪದಂ ಲಭೇತ್ ।
ಸ್ವವರ್ಣಾನುಗುಣಂ ಲೋಕೇ ಸ್ವಾಚಾರಾತ್ಪ್ರಾಪ್ನುತೇ ನರಃ ॥ ೬೧ ॥

ವರ್ಣೋದ್ಧಾರೇಣ ಭಕ್ತ್ಯಾ ಚ ತತ್ಫಲಾತಿಶಯಂ ನರಃ ।
ಸರ್ವಂ ಕೃತಂ ಕಾಮನಯಾ ಸದ್ಯಃ ಫಲಮವಾಪ್ನುಯಾತ್ ॥ ೬೨ ॥

---

೫೮. ಆ ಶಿವಗಂಗೆಗಳಲ್ಲಿ ಸ್ನಾನ, ದಾನ, ಜಪ ಇವುಗಳನ್ನು ಮಾಡಿದರೆ ಶಿವ ಪದವನ್ನು ಪಡೆಯುವನು; ಶಿವಕ್ಷೇತ್ರಕ್ಕೆ ಹೋಗಿ ಮರಣ ಪರ್ಯಂತವಾಗಿ ಅಲ್ಲಿಯೇ ವಾಸಿಸಬೇಕು.

೫೯. ಶಿವಕ್ಷೇತ್ರದಲ್ಲಿ ಮೃತನಾದವನನ್ನು ದಹನಮಾಡುವುದು (ಸುಡುವುದು) ಅವನಿಗೆ ಹತ್ತು ದಿನಗಳಲ್ಲಿ ಮಾಡುವ ನಿತ್ಯಕ್ರಿಯೆ, ಮಾಸಿಕ, ಹನ್ನೆರಡನೆಯ ದಿನದಲ್ಲಿ ಮಾಡುವ ಸಪಿಂಡೀಕರಣ, ವರ್ಷಾಂತಕಶ್ರಾದ್ಧ ಇವುಗಳನ್ನು ಮಾಡಿದರೆ ಆಮೃತನಾದ ವನು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಆಕೂಡಲೇ ಶಿವಲೋಕವನ್ನು ಪಡೆವನು.

೬೦. ಅಥವಾ ಶಿವಕ್ಷೇತ್ರದಲ್ಲಿ ಏಳು ರಾತ್ರಿಯಾಗಲೀ, ಐದು ರಾತ್ರಿಯಾಗಲೀ, ಮೂರು ರಾತ್ರಿಯಾಗಲೀ ಕೊನೆಗೆ ಒಂದು ರಾತ್ರಿಯಾಗಲೀ ವಾಸಮಾಡಬೇಕು. ಅದ ರಿಂದ ಕ್ರಮವಾಗಿ ಶಿವಲೋಕವು ಲಭಿಸುವುದು.

೬೧. ತನ್ನ ಜಾತಿಗೆ ಅನುಸಾರವಾಗಿ ಆಚರಿಸುತ್ತಾ ಶಿವನನ್ನು ಭಕ್ತಿಯಿಂದ ಪೂಜಿಸಿದರೆ, ಅವನು ಆ ಜಾತಿಯನ್ನೂ ಉದ್ಧರಿಸಿ ಉತ್ತಮವಾದ ಫಲವನ್ನು ಪಡೆಯುವನು.

೬೨. ಫಲಾಪೇಕ್ಷೆಯಿಂದ ಶಿವಪೂಜೆಯನ್ನು ಮಾಡಿದರೆ ಆ ಕೂಡಲೇ ಬೇಕಾ

ಸರ್ವಂ ಕೃತಮಕಾಮೇನ ಸಾಕ್ಷಾಚ್ಛಿವಪದಪ್ರದಂ ।
ಪ್ರಾತರ್ಮಧ್ಯಾಹ್ನ ಸಾಯಾಹ್ನ ಮಹಸ್ತ್ರಿಷ್ವೇಕತಃ ಕ್ರಮಾತ್ ॥ ೬೩ ॥

ಪ್ರಾತರ್ವಿಧಿಕರಂ ಜ್ಞೇಯಂ ಮಧ್ಯಾಹ್ನಂ ಕಾಮಿಕಂ ತಥಾ ।
ಸಾಯಾಹ್ನಂ ಶಾಂತಿಕಂ ಜ್ಞೇಯಂ ರಾತ್ರಾವಪಿ ತಥೈವ ಹಿ ॥ ೬೪ ॥

ಕಾಲೋ ನಿಶೀಥೋ ವೈ ಪ್ರೋಕ್ತೋ ಮಧ್ಯಯಾಮದ್ವಯಂ ನಿಶಿ ।
ಶಿವಪೂಜಾ ವಿಶೇಷೇಣ ತತ್ಕಾಲೇಽಭೀಷ್ಟಸಿದ್ಧಿದಾ ॥ ೬೫ ॥

ಏವಂ ಜ್ಞಾತ್ವಾ ನರಃ ಕುರ್ವನ್ಯಥೋಕ್ತಫಲಭಾಗ್ಭವೇತ್ ।
ಕಲೌ ಯುಗೇ ವಿಶೇಷೇಣ ಫಲಸಿದ್ಧಿಸ್ತು ಕರ್ಮಣಾ ॥ ೬೬ ॥

ಉಕ್ತೇನ ಕೇನಚಿದ್ವಾಪಿ ಹ್ಯಧಿಕಾರವಿಭೇದತಃ ।
ಸದ್ವೃತ್ತಿಃ ಪಾಪಭೀರುಶ್ಚೇತ್ತತ್ತತ್ಫಲಮವಾಪ್ನುಯಾತ್ ॥ ೬೭ ॥

---

ದಂತಹ ಫಲವನ್ನು ಪಡೆಯುವನು. ಫಲೇಚ್ಛೆಯಿಲ್ಲದೆ ಮಾಡಿದರೆ ಸಾಕ್ಷಾತ್ ಶಿವ ಲೋಕವೇ ಲಭಿಸುವುದು.

೬೩-೬೪. ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಮೂರು ಕಾಲಗಳಲ್ಲಿ ಕ್ರಮವಾಗಿ ಪ್ರಾತಃಕಾಲವು ನಿತ್ಯಕರ್ಮ ವಿಧಿಯನ್ನು ನಿರ್ವಹಿಸುವುದಕ್ಕೆ ಶ್ರೇಷ್ಠವು. ಮಧ್ಯಾಹ್ನವು ಕಾಮ್ಯಕರ್ಮಕ್ಕೂ ಸಾಯಂಕಾಲ ಮತ್ತು ರಾತ್ರಿಕಾಲಗಳು ಶಾಂತಿ ಕರ್ಮಕ್ಕೂ ಪ್ರಶಸ್ತವಾದವುಗಳು.

೬೫. ರಾತ್ರಿಯಲ್ಲಿ ಮಧ್ಯದ ಎರಡು ಯಾಮಗಳಿಗೆ ನಿಶೀಥವೆಂದು ಹೆಸರು. ಈ ನಿಶೀಥಕಾಲವು ಶಿವಪೂಜೆಗೆ ಪ್ರಶಸ್ತವಾದುದು. ಆಗ ಶಿವನನ್ನು ಪೂಜಿಸಿದರೆ ಇಷ್ಟಸಿದ್ಧಿಯು ಆಗುವುದು.

೬೬. ಈ ರೀತಿಯಾಗಿ ತಿಳಿದುಕೊಂಡು ಆಯಾಯ ಕ್ರಮದಿಂದ ಶಿವಪೂಜೆ ಯನ್ನು ಮಾಡಿದರೆ ಹಿಂದೆ ಹೇಳಿದಂತೆ ಫಲಗಳು ಲಭಿಸುವುವು. ಕಲಿಯುಗದಲ್ಲಿ ಕರ್ಮದಿಂದಲೇ ಫಲಸಿದ್ಧಿಯು ವಿಶೇಷವಾಗಿ ಆಗುವುದು.

೬೭. ಪಾಪವನ್ನು ಆಚರಿಸದೆ ಒಳ್ಳೆಯ ಆಚಾರವುಳ್ಳವನಾಗಿ ಹಿಂದೆ ಹೇಳಿದ ಯಾವುದಾದರೂ ತನಗೆ ಯೋಗ್ಯವಾದ ಕರ್ಮವನ್ನು ಆಚರಿಸಿದರೆ ಅದಕ್ಕೆ ತಕ್ಕ ಫಲ ವನ್ನು ಪಡೆಯುವನು.

॥ ಋಷಯ ಊಚುಃ ॥

ಅಥ ಕ್ಷೇತ್ರಾಣಿ ಪುಣ್ಯಾನಿ ಸಮಾಸಾತ್ಕಥಯಸ್ವ ನಃ ।
ಸರ್ವಾಃ ಸ್ತ್ರಿಯಶ್ಚ ಪುರುಷಾ ಯಾನ್ಯಾಶ್ರಿತ್ಯ ಪದಂ ಲಭೇತ್ ॥ ೬೮ ॥

ಸೂತ ಯೋಗಿವರಶ್ರೇಷ್ಠ ಶಿವಕ್ಷೇತ್ರಾಗಮಾಂಸ್ತಥಾ ।

॥ ಸೂತ ಉವಾಚ ॥

ಶೃಣುತ ಶ್ರದ್ಧಯಾ ಸರ್ವಕ್ಷೇತ್ರಾಣಿ ಚ ತದಾಗಮಾ್ ॥ ೬೯ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಏಕಾದಶೋಽಧ್ಯಾಯಃ.

---

೬೮. ಋಷಿಗಳು ಕೇಳಿದರು:—ಓ ಸೂತಮುನಿಯೇ! ಇನ್ನು ಸಕಲ ಸ್ತ್ರೀಯರೂ ಪುರುಷರೂ ಸಹ ಎಂತಹ ಕ್ಷೇತ್ರಗಳನ್ನು ಆಶ್ರಯಿಸಿ ಶಿವಪದವನ್ನು ಪಡೆಯಬಹುದೋ ಅಂತಹ ಪುಣ್ಯ ಕ್ಷೇತ್ರಗಳನ್ನು ಸಂಕ್ಷೇಪವಾಗಿ ನಮಗೆ ಹೇಳು. ಅಲ್ಲದೆ ಯೋಗಿಶ್ರೇಷ್ಠನಾದ ಓ ಸೂತನೇ! ಶಿವಕ್ಷೇತ್ರಗಳ ಆಗಮಗಳನ್ನು ಸಹ ಹೇಳುವವನಾಗು, ಎಂದು ಕೇಳಿದರು.

೬೯. ಸೂತಮುನಿಯು ಹೇಳಿದನು:—ಎಲೈ ಋಷಿಗಳೇ! ಕೇಳಿ. ಸಕಲ ಶಿವಕ್ಷೇತ್ರಗಳನ್ನೂ ಅವುಗಳ ಆಗಮಗಳನ್ನೂ ಹೇಳುವೆನು. ಶ್ರದ್ಧೆಯಿಂದ ಕೇಳುವವರಾಗಿರಿ ಎಂದನು.

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ದ್ವಾದಶೋಽಧ್ಯಾಯಃ

॥ ಸೂತ ಉವಾಚ ॥

ಶೃಣುಧ್ವಮೃಷಯಃ ಪ್ರಾಜ್ಞಾಃ ಶಿವಕ್ಷೇತ್ರಂ ವಿಮುಕ್ತಿದಂ ।
ತದಾಗಮಾಂಸ್ತತೋ ವಕ್ಷ್ಯೇ ಲೋಕರಕ್ಷಾರ್ಥಮೇವ ಹಿ ॥ ೧ ॥

ಪಂಚಾಶತ್ಕೋಟಿವಿಸ್ತೀರ್ಣಾ ಸಶೈಲವನಕಾನನಾ ।
ಶಿವಾಜ್ಞಯಾ ಹಿ ಪೃಥಿವೀ ಲೋಕಂ ಧೃತ್ವಾ ಚ ತಿಷ್ಠತಿ ॥ ೨ ॥

---

## ಹನ್ನೆರಡನೆಯ ಅಧ್ಯಾಯ.

೧. ಸೂತಮುನಿಯು ಹೇಳಿದನು :—ಪಂಡಿತರಾದ ಎಲೈ ಮುನಿಗಳೇ! ಮುಕ್ತಿಯನ್ನುಂಟುಮಾಡುವಂತಹ ಶಿವಕ್ಷೇತ್ರಗಳನ್ನು ಹೇಳುವೆನು ಕೇಳಿರಿ, ಮತ್ತು ಲೋಕಕ್ಷೇಮಕ್ಕಾಗಿ ಆ ಕ್ಷೇತ್ರಗಳ ಆಗಮಗಳನ್ನೂ ಹೇಳುವೆನು.

೨. ಐವತ್ತು ಕೋಟಿ ಯೋಜನ ವಿಸ್ತಾರವಾಗಿದ್ದು, ಬೆಟ್ಟ ಕಾಡುಗಳಿಂದ ಕೂಡಿರುವ ಈ ಭೂಮಿಯು, ಶಿವನ ಆಜ್ಞೆಯಿಂದ ಭೂಲೋಕದಲ್ಲಿ ನಿಂತಿರುವುದು.

ತತ್ರ ತತ್ರ ಶಿವಕ್ಷೇತ್ರಂ ತತ್ರ ತತ್ರ ನಿವಾಸಿನಾಂ ।
ಮೋಕ್ಷಾರ್ಥಂ ಕೃಪಯಾ ದೇವಃ ಕ್ಷೇತ್ರಂ ಕಲ್ಪಿತವಾನ್ ಪ್ರಭುಃ ॥ ೩ ॥

ಪರಿಗ್ರಹಾದೃಷೀಣಾಂ ಚ ದೇವಾನಾಂ ಚ ಪರಿಗ್ರಹಾತ್ ।
ಸ್ವಯಂಭೂತಾನ್ಯಥಾನ್ಯಾನಿ ಲೋಕರಕ್ಷಾರ್ಥಮೇವ ಹಿ ॥ ೪ ॥

ತೀರ್ಥೇ ಕ್ಷೇತ್ರೇ ಸದಾ ಕಾರ್ಯಂ ಸ್ನಾನದಾನಜಪಾದಿಕಂ ।
ಅನ್ಯಥಾ ರೋಗದಾರಿದ್ರ್ಯಮೂಕತ್ವಾದ್ಯಾಪ್ನುಯಾನ್ನರಃ ॥ ೫ ॥

ಅಥಾಸ್ಮಿನ್ ಭಾರತೇ ವರ್ಷೇ ಪ್ರಾಪ್ನೋತಿ ಮರಣಂ ನರಃ ।
ಸ್ವಯಂಭೂಸ್ಥಾನವಾಸೇನ ಪುನರ್ಮಾನುಷ್ಯಮಾಪ್ನುಯಾತ್ ॥ ೬ ॥

ಕ್ಷೇತ್ರೇ ಪಾಪಸ್ಯ ಕರಣಂ ದೃಢಂ ಭವತಿ ಭೂಸುರಾಃ ।
ಪುಣ್ಯಕ್ಷೇತ್ರೇ ನಿವಾಸೇ ಹಿ ಪಾಪಮಣ್ವಪಿ ನಾಚರೇತ್ ॥ ೭ ॥

---

೩. ಜಗದೀಶ್ವರನಾದ ಮಹಾದೇವನು, ಈ ಭೂಮಿಯಲ್ಲಿ ಅಲ್ಲಲ್ಲಿ ವಾಸ ಮಾಡುವ ಜನರಿಗೆ ಮುಕ್ತಿಯಾಗಲೋಸುಗ ದಯೆಯಿಂದ ಅಲ್ಲಲ್ಲಿ ಅನೇಕ ಶಿವಕ್ಷೇತ್ರ ಗಳನ್ನು ಕಲ್ಪಿಸಿರುವನು.

೪. ಋಷಿಗಳ ಮತ್ತು ದೇವತೆಗಳ ಸಂಬಂಧದಿಂದ ಇನ್ನೂ ಕೆಲವು ಕ್ಷೇತ್ರಗಳು ತಾನಾಗಿಯೇ ಲೋಕಕ್ಷೇಮಕ್ಕಾಗಿ ಉಂಟಾದವು.

೫. ತೀರ್ಥಕ್ಷೇತ್ರಗಳಲ್ಲಿ ಸದಾ, ಸ್ನಾನ, ದಾನ, ಜಪ ಮುಂತಾದುವುಗಳನ್ನು ಮಾಡಬೇಕು. ಹಾಗೆ ಮಾಡದಿದ್ದರೆ ರೋಗ ಬಡತನ ಮೂಗತನ ಮುಂತಾದುವು ಗಳು ಬರುವುವು.

೬. ಈ ಭರತವರ್ಷದಲ್ಲಿದ್ದು ಮರಣವನ್ನು ಹೊಂದಿದ ನರನು ಬ್ರಹ್ಮಲೋಕ ವನ್ನು ಪಡೆದು ಅಲ್ಲಿ ಬಹುಕಾಲ ವಾಸವಾಗಿದ್ದು ತಿರುಗಿ ಮನುಷ್ಯನಾಗಿ ಜನಿಸುವನು. ಅಥವಾ ಈ ಭರತಖಂಡದಲ್ಲಿ ತಾನಾಗಿಯೇ ಉದ್ಭವಿಸಿದ ಶಿವಕ್ಷೇತ್ರದಲ್ಲಿ ವಾಸವಾಗಿದ್ದು ಮರಣವನ್ನು ಹೊಂದಿದ ನರನು, ತಿರುಗಿ ಮನುಷ್ಯಭಾವವನ್ನು ಹೊಂದುವುದಿಲ್ಲ. ಮುಕ್ತನೇ ಆಗುವನು.

೭. ಎಲೈ ಬ್ರಾಹ್ಮಣೋತ್ತಮರೆ! ಪುಣ್ಯಕ್ಷೇತ್ರದಲ್ಲಿ ಪಾಪವನ್ನು ಮಾಡಿದರೆ ಅದು ದೃಢವಾಗುವುದು. ಆದುದರಿಂದ ಪುಣ್ಯಕ್ಷೇತ್ರದಲ್ಲಿ ಸ್ವಲ್ಪವೂ ಪಾಪವನ್ನು ಆಚರಿಸಬಾರದು.

ಯೇನ ಕೇನಾಪ್ಯುಪಾಯೇನ ಪುಣ್ಯಕ್ಷೇತ್ರೇ ವಸೇನ್ನರಃ ।
ಸಿಂಧೋಃ ಶತನದೀತೀರೇ ಸಂತಿ ಕ್ಷೇತ್ರಾಣ್ಯನೇಕಶಃ ॥ ೮ ॥

ಸರಸ್ವತೀ ನದೀ ಪುಣ್ಯಾ ಪ್ರೋಕ್ತಾ ಷಷ್ಟಿಮುಖಾ ತಥಾ ।
ತತ್ತೀರೇ ಚ ವಸೇತ್ಪ್ರಾಜ್ಞಃ ಕ್ರಮಾದ್ಬ್ರಹ್ಮಪದಂ ಲಭೇತ್ ॥ ೯ ॥

ಹಿಮವದ್ಗಿರಿಜಾ ಗಂಗಾ ಪುಣ್ಯಾ ಶತಮುಖಾ ನದೀ ।
ತತ್ತೀರೇ ಚೈವ ಕಾಶ್ಯಾದಿಪುಣ್ಯಕ್ಷೇತ್ರಾಣ್ಯನೇಕಶಃ ॥ ೧೦ ॥

ತತ್ರ ತೀರಂ ಪ್ರಶಸ್ತಂ ಹಿ ಮೃಗೇ ಮೃಗಬೃಹಸ್ಪತೌ ।
ಶೋಣಭದ್ರೋ ದಶಮುಖಃ ಪುಣ್ಯೋಽಭೀಷ್ಟಫಲಪ್ರದಃ ॥ ೧೧ ॥

ತತ್ರ ಸ್ನಾನೋಪವಾಸೇನ ಪದಂ ವೈನಾಯಕಂ ಲಭೇತ್ ।
ಚತುರ್ವಿಂಶಮುಖಾ ಪುಣ್ಯಾ ನರ್ಮದಾ ಚ ಮಹಾನದೀ ॥ ೧೨ ॥

---

೮. ಹೇಗಾದರೂ ಮಾಡಿ, ಕಷ್ಟಪಟ್ಟಾದರೂ ಪುಣ್ಯಕ್ಷೇತ್ರದಲ್ಲಿ ವಾಸಮಾಡಬೇಕು. ಸಿಂಧುನದೀ ಮತ್ತು ಶತನದೀ ಇವುಗಳ ದಡದಲ್ಲಿ ಅನೇಕ ಕ್ಷೇತ್ರಗಳು ಇರುವುವು.

೯. ಸರಸ್ವತೀ ನದಿಯೂ ಷಷ್ಟಿಮುಖಾ ಎಂಬ ನದಿಯೂ ಸಹ ಪುಣ್ಯವಾದುವುಗಳು. ಆ ನದಿಗಳ ದಡದಲ್ಲಿ ವಾಸಮಾಡಿದರೆ ಕ್ರಮವಾಗಿ ಬ್ರಹ್ಮಲೋಕವು ಲಭಿಸುವುದು.

೧೦. ಹಿಮಾಲಯದಿಂದ ಜನಿಸಿ ಅನೇಕ ಮುಖವಾಗಿ ಹರಿಯುವ ಗಂಗಾ ನದಿಯು ಅತಿ ಪವಿತ್ರವಾದುದು. ಆ ನದಿಯ ತೀರದಲ್ಲಿ ಕಾಶಿಯೇ ಮೊದಲಾದ ಅನೇಕ ಪುಣ್ಯ ಕ್ಷೇತ್ರಗಳಿರುವುವು.

೧೧. ಮಾರ್ಗಶಿರಮಾಸದಲ್ಲಿ ಮೃಗಶಿರಾನಕ್ಷತ್ರದಲ್ಲಿ ಗುರುವು ಇರುವಾಗ ಆ ಗಂಗೆಯ ತೀರಗಳು ಅತಿ ಪವಿತ್ರವಾದುವುಗಳು. ಹತ್ತು ಮುಖವಾಗಿ ಹರಿಯುವ ಶೋಣಭದ್ರವೆಂಬ ನದವು ಪುಣ್ಯಪ್ರದವಾದುದು ಮತ್ತು ಸಕಲ ಇಷ್ಟಾರ್ಥಗಳನ್ನುಂಟು ಮಾಡುವುದು.

೧೨. ಆ ಕ್ಷೇತ್ರದಲ್ಲಿ ಸ್ನಾನ ಮತ್ತು ವಾಸಗಳನ್ನು ಮಾಡಿದರೆ ವಿನಾಯಕ ಪದವು ಲಭಿಸುವುದು. ಇಪ್ಪತ್ತು ನಾಲ್ಕು ಮುಖಗಳುಳ್ಳ ನರ್ಮದೆಯೆಂಬ ಮಹಾ ನದಿಯು ಪುಣ್ಯವಾದುದು.

ತಸ್ಯಾಂ ಸ್ನಾನೇನ ವಾಸೇನ ಪದಂ ವೈಷ್ಣವಮಾಪ್ನುಯಾತ್ ।
ತಮಸಾ ದ್ವಾದಶಮುಖಾ ರೇವಾ ದಶಮುಖಾ ನದೀ ॥ ೧೩ ॥

ಗೋದಾವರೀ ಮಹಾಪುಣ್ಯಾ ಬ್ರಹ್ಮಗೋವಧನಾಶಿನೀ ।
ಏಕವಿಂಶಮುಖಾ ಪ್ರೋಕ್ತಾ ರುದ್ರಲೋಕಪ್ರದಾಯಿನೀ ॥ ೧೪ ॥

ಕೃಷ್ಣವೇಣೀ ಪುಣ್ಯನದೀ ಸರ್ವಪಾಪಕ್ಷಯಾವಹಾ ।
ಸಾಷ್ಟಾದಶಮುಖಾ ಪ್ರೋಕ್ತಾ ವಿಷ್ಣುಲೋಕಪ್ರದಾಯಿನೀ ॥ ೧೫ ॥

ತುಂಗಭದ್ರಾ ದಶಮುಖಾ ಬ್ರಹ್ಮಲೋಕಪ್ರದಾಯಿನೀ ।
ಸುವರ್ಣಮುಖರೀ ಪುಣ್ಯಾ ಪ್ರೋಕ್ತಾ ನವಮುಖಾ ತಥಾ ॥ ೧೬ ॥

---

೧೩. ಆ ನರ್ಮದಾನದಿಯಲ್ಲಿ ಸ್ನಾನಮಾಡುವುದು, ಅದರ ತೀರದಲ್ಲಿ ವಾಸ ಮಾಡುವುದು ಇವುಗಳಿಂದ ವಿಷ್ಣುಪದವು ಲಭಿಸುವುದು. ಮತ್ತು ಹನ್ನೆರಡು ಮುಖವಾಗಿ ಹರಿಯುವ ತಮಸಾನದಿಯೂ ಹತ್ತು ಮುಖವಾಗಿ ಹರಿಯುವ ರೇವಾನದಿಯೂ ಪುಣ್ಯವಾದುವುಗಳು.

೧೪. ಗೋದಾವರೀನದಿಯು ಮಹಾಪುಣ್ಯತಮವಾದುದು. ಅದರಲ್ಲಿ ಸ್ನಾನ ಮಾಡಿದರೆ ಬ್ರಹ್ಮಹತ್ಯೆ ಮತ್ತು ಗೋಹತ್ಯೆಗಳು ನಾಶವಾಗುವುವು. ಅದು ಇಪ್ಪತ್ತೊಂದು ಮುಖವಾಗಿ ಹರಿಯುವುದು, ರುದ್ರಪದವನ್ನುಂಟುಮಾಡುವುದು.

೧೫. ಕೃಷ್ಣವೇಣೀ ನದಿಯು ಪುಣ್ಯವಾದುದು, ಸಕಲ ಪಾಪಗಳನ್ನು ಹೋಗಲಾಗಿಸುವಂತಹುದು. ಅದು ಹದಿನೆಂಟು ಮುಖವಾಗಿ ಹರಿಯುವುದು, ಅದರಲ್ಲಿ ಸ್ನಾನ ಮತ್ತು ವಾಸಗಳಿಂದ ವಿಷ್ಣುಪದವು ಲಭಿಸುವುದು.

೧೬. ಹತ್ತು ಮುಖವಾಗಿ ಹರಿಯುವ ತುಂಗಭದ್ರಾನದಿಯು ತುಂಬಾ ಪವಿತ್ರವಾದುದು. ಅದರಲ್ಲಿ ಸ್ನಾನ ಮತ್ತು ವಾಸಗಳನ್ನು ಮಾಡಿದರೆ ಬ್ರಹ್ಮಲೋಕವು ಲಭಿಸುವುದು. ಸುವರ್ಣಮುಖರೀ ಎಂಬ ನದಿಯೂ ಪುಣ್ಯವಾದುದು, ಅದು ಒಂಭತ್ತು ಮುಖವಾಗಿ ಹರಿಯುವುದು.

ತತ್ರೈವ ಸುಪ್ರಜಾಯಂತೇ ಬ್ರಹ್ಮಲೋಕಚ್ಯುತಾಸ್ತಥಾ ।
ಸರಸ್ವತೀ ಚ ಪಂಪಾ ಚ ಕನ್ಯಾ ಶ್ವೇತನದೀ ಶುಭಾ ॥ ೧೭ ॥

ಏತಾಸಾಂ ತೀರವಾಸೇನ ಇಂದ್ರಲೋಕಮವಾಪ್ನುಯಾತ್ ।
ಸಹ್ಯಾದ್ರಿಜಾ ಮಹಾಪುಣ್ಯಾ ಕಾವೇರೀತಿ ಮಹಾನದೀ ॥ ೧೮ ॥

ಸಪ್ತವಿಂಶಮುಖಾ ಪ್ರೋಕ್ತಾ ಸರ್ವಾಭೀಷ್ಟಪ್ರದಾಯಿನೀ ।
ತತ್ತೀರಾಃ ಸ್ವರ್ಗದಾಶ್ಚೈವ ಬ್ರಹ್ಮವಿಷ್ಣುಪದಪ್ರದಾಃ ॥ ೧೯ ॥

ಶಿವಲೋಕಪ್ರದಾಃ ಶೈವಾಃ ತಥಾಭೀಷ್ಟಫಲಪ್ರದಾಃ ।
ನೈಮಿಷೇ ಬದರೇ ಸ್ನಾಯಾನ್ಮೇಷಗೇ ಚ ಗುರೌ ರವೌ ॥ ೨೦ ॥

ಬ್ರಹ್ಮಲೋಕಪ್ರದಂ ವಿದ್ಯಾತ್ತತಃ ಪೂಜಾದಿಕಂ ತಥಾ ।
ಸಿಂಧುನದ್ಯಾಂ ತಥಾ ಸ್ನಾನಂ ಸಿಹ್ಮೇ ಕರ್ಕಟಿಕೇ ರವೌ ॥ ೨೧ ॥

---

೧೭. ಬ್ರಹ್ಮಲೋಕವನ್ನನುಭವಿಸಿ ಅದರಿಂದ ಚ್ಯುತರಾದಂತಹವರು ಆ ನದಿಯ ದಡದಲ್ಲಿಯೇ ಜನಿಸುವರು. ಸರಸ್ವತೀ, ಪಂಪಾ, ಕನ್ಯಾ, ಶ್ವೇತನದೀ ಇವುಗಳೂ ಪವಿತ್ರವಾದುವುಗಳು. ಈ ಸರಸ್ವತೀನದೀ ಮೊದಲಾದ ನದಿಗಳ ದಡದಲ್ಲಿ ವಾಸ ಮಾಡಿದರೆ ಇಂದ್ರಲೋಕ ಲಭಿಸುವುದು.

೧೮. ಸಹ್ಯಪರ್ವತದಲ್ಲಿ ಜನಿಸಿರುವ ಕಾವೇರಿನದಿಯು ಮಹಾಪುಣ್ಯವಾದುದು. ಮತ್ತು ಮಹಾನದಿಯು. ಅದು ಇಪ್ಪತ್ತೇಳು ಮುಖವಾಗಿ ಹರಿಯುವುದು. ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡುವಂತಹುದು.

೧೯-೨೦. ಆ ಕಾವೇರೀನದಿಯ ತೀರಗಳು ಬ್ರಹ್ಮಲೋಕ, ವಿಷ್ಣುಲೋಕ ಮತ್ತು ಶಿವಲೋಕವನ್ನುಂಟುಮಾಡುವುವು. ಮತ್ತು ಅಲ್ಲಿರುವ ಶಿವಕ್ಷೇತ್ರಗಳು ಶಿವಲೋಕವನ್ನುಂಟುಮಾಡುವುವು. ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವಂತಹವು. ನೈಮಿಷಾರಣ್ಯದಲ್ಲಿರುವ ಬದರಿಕಾಕ್ಷೇತ್ರವಲ್ಲಿ ಗುರುವೂ, ಸೂರ್ಯನೂ ಮೇಷರಾಶಿಯಲ್ಲಿರುವಾಗ ಸ್ನಾನಮಾಡಿ ಪೂಜಿಸಿದರೆ ಬ್ರಹ್ಮಲೋಕವು ಲಭಿಸುವುದು.

೨೧. ಸಿಂಧುನದಿಯಲ್ಲಿ ಸಿಂಹಮಾಸದಲ್ಲಿಯೂ ಕರ್ಕಾಟಕ ಮಾಸದಲ್ಲಿಯೂ ಸ್ನಾನಮಾಡಬೇಕು. ಕೇದಾರಕ್ಷೇತ್ರದಲ್ಲಿ ತೀರ್ಥ ಪಾನ ಮತ್ತು ಸ್ನಾನಗಳನ್ನು ಮಾಡಿದರೆ ಬ್ರಹ್ಮಜ್ಞಾನವು ಉಂಟಾಗುವುದು.

ಕೇದಾರೋದಕಪಾನಂ ಚ ಸ್ನಾನಂ ಚ ಜ್ಞಾನದಂ ವಿದುಃ ।
ಗೋದಾವರ್ಯಾಂ ಸಿಂಹಮಾಸೇ ಸ್ನಾಯಾತ್ಸಿಂಹಬೃಹಸ್ಪತೌ ॥ ೨೨ ॥

ಶಿವಲೋಕಪ್ರದಮಿತಿ ಶಿವೇನೋಕ್ತಂ ತಥಾ ಪುರಾ ।
ಯಮುನಾಶೋಣಯೋಃ ಸ್ನಾಯಾದ್ಗುರೌ ಕನ್ಯಾಗತೇ ರವೌ ॥ ೨೩ ॥

ಧರ್ಮಲೋಕೇ ದಂತಿಲೋಕೇ ಮಹಾಭೋಗಪ್ರದಂ ವಿದುಃ ।
ಕಾವೇರ್ಯಾಂ ಚ ತಥಾ ಸ್ನಾಯಾತ್ತುಲಾಗೇ ತು ರವೌ ಗತೌ ॥ ೨೪ ॥

ವಿಷ್ಣೋರ್ವಚನಮಾಹಾತ್ಮ್ಯಾತ್ಸರ್ವಾಭೀಷ್ಟಪ್ರದಂ ವಿದುಃ ।
ವೃಶ್ಚಿಕೇ ಮಾಸಿ ಸಂಪ್ರಾಪ್ತೇ ತಥಾರ್ಕೇ ಗುರುವೃಶ್ಚಿಕೇ ॥ ೨೫ ॥

ನರ್ಮದಾಯಾಂ ನದೀಸ್ನಾನಾದ್ವಿಷ್ಣುಲೋಕಮವಾಪ್ನುಯಾತ್ ।
ಸುವರ್ಣಮುಖರೀಸ್ನಾನಂ ಚಾಪಗೇ ಚ ಗುರೌ ರವೌ ॥ ೨೬ ॥

---

೨೨. ಸಿಂಹಮಾಸದಲ್ಲಿ ಗುರುವು ಸಿಹ್ಮರಾಶಿಯಲ್ಲಿರುವಾಗ ಗೋದಾವರೀನದಿಯಲ್ಲಿ ಸ್ನಾನಮಾಡಿದರೆ ಶಿವಲೋಕವು ಲಭಿಸುವುದು ಎಂದು ಶಿವನೇ ಹಿಂದೆ ಹೇಳಿರುವನು.

೨೩. ಯಮುನಾ ಮತ್ತು ಶೋಣ ಈ ನದಿಗಳಲ್ಲಿ ಸೂರ್ಯನೂ, ಗುರುವೂ ಕನ್ಯಾರಾಶಿಯಲ್ಲಿರುವಾಗ ಸ್ನಾನಮಾಡಿದವರಿಗೆ ಯಮಧರ್ಮರಾಜನ ಲೋಕದಲ್ಲಿಯೂ ವಿನಾಯಕ ಲೋಕದಲ್ಲಿಯೂ ಉತ್ತಮವಾದ ಭೋಗಗಳು ಲಭಿಸುವುವು.

೨೪. ಕಾವೇರೀನದಿಯಲ್ಲಿ -ತುಲಾಮಾಸದಲ್ಲಿ ಗುರುವೂ ತುಲಾರಾಶಿಯಲ್ಲಿರುವಾಗ ಸ್ನಾನಮಾಡಿದರೆ, ವಿಷ್ಣುವಚನದ ಮಾಹಾತ್ಮ್ಯದಿಂದ ಸಕಲ ಇಷ್ಟಾರ್ಥಗಳೂ ಲಭಿಸುವುವು.

೨೫. ವೃಶ್ಚಿಕಮಾಸದಲ್ಲಿ ಗುರುವೂ ವೃಶ್ಚಿಕದಲ್ಲಿರುವಾಗ ನರ್ಮದಾನದಿಯಲ್ಲಿ ಸ್ನಾನಮಾಡಿದರೆ ವಿಷ್ಣುಲೋಕವು ಲಭಿಸುವುದು.

೨೬. ಧನುರ್ಮಾಸದಲ್ಲಿ ಗುರುವು ಧನೂರಾಶಿಯಲ್ಲಿರುವಾಗ ಸುವರ್ಣಮುಖರೀ ನದಿಯಲ್ಲಿ ಸ್ನಾನಮಾಡಿದರೆ ಶಿವಲೋಕವು ಲಭಿಸುವುದು ಎಂದು ಬ್ರಹ್ಮನು ಹೇಳಿರುವನು.

ಶಿವಲೋಕಪ್ರದಮಿತಿ ಬ್ರಹ್ಮಣೋ ವಚನಂ ಯಥಾ ।
ಮೃಗಮಾಸಿ ತಥಾ ಸ್ನಾಯಾಜ್ಜಾಹ್ನವ್ಯಾಂ ಮೃಗಗೇ ಗುರೌ ॥ ೨೭ ॥

ಶಿವಲೋಕಪ್ರದಮಿತಿ ಬ್ರಹ್ಮಣೋ ವಚನಂ ಯಥಾ ।
ಬ್ರಹ್ಮವಿಷ್ಣ್ವೋಃ ಪದೇ ಭುಕ್ತ್ವಾ ತದಂತೇ ಜ್ಞಾನಮಾಪ್ನುಯಾತ್ ॥

ಗಂಗಾಯಾಂ ಮಾಘಮಾಸೇ ತು ತಥಾ ಕುಂಭಗತೇ ರವೌ ।
ಶ್ರಾದ್ಧಂ ವಾ ಪಿಂಡದಾನಂ ವಾ ತಿಲೋದಕಮಥಾಪಿ ವಾ ॥ ೨೯ ॥

ವಂಶದ್ವಯಪಿತೄಣಾಂ ಚ ಕುಲಕೋಟ್ಯುದ್ಧರಂ ವಿದುಃ ।
ಕೃಷ್ಣವೇಣ್ಯಾಂ ಪ್ರಶಂಸಂತಿ ಮೀನಗೇ ಚ ಗುರೌ ರವೌ ॥ ೩೦ ॥

ತತ್ತತ್ತೀರ್ಥೇ ಚ ತನ್ಮಾಸಿ ಸ್ನಾನಮಿಂದ್ರಪದಪ್ರದಂ ।
ಗಂಗಾಂ ವಾ ಸಹ್ಯಜಾಂ ವಾಪಿ ಸಮಾಶ್ರಿತ್ಯ ವಸೇದ್ಬುಧಃ ॥ ೩೧ ॥

---

೨೭-೨೮. ಮಾರ್ಗಶಿರಮಾಸದಲ್ಲಿ ಗುರುವು ಮೃಗಶಿರಾನಕ್ಷತ್ರದಲ್ಲಿರುವಾಗ ಗಂಗಾನದಿಯಲ್ಲಿ ಸ್ನಾನಮಾಡಿದರೆ ಶಿವಲೋಕವು ಲಭಿಸುವುದು ಎಂದೂ ಬ್ರಹ್ಮನು ಹೇಳಿರುವನು. ಅಥವಾ ಬ್ರಹ್ಮಲೋಕ ಮತ್ತು ವಿಷ್ಣುಲೋಕಗಳಲ್ಲಿ ಬಹಳ ಕಾಲ ಭೋಗವನ್ನು ಅನುಭವಿಸಿ ಕೊನೆಗೆ ಬ್ರಹ್ಮಜ್ಞಾನವನ್ನು ಪಡೆಯುವರು.

೨೯. ಮಾಘಮಾಸದಲ್ಲಿ ರವಿಯು ಕುಂಭರಾಶಿಯಲ್ಲಿರುವಾಗ ಗಂಗಾನದಿಯಲ್ಲಿ (ಗಂಗಾತೀರದಲ್ಲಿರುವ ಪುಣ್ಯಕ್ಷೇತ್ರಗಳಲ್ಲಿ) ಶ್ರಾದ್ಧ ಅಥವಾ ಪಿಂಡದಾನ, ತರ್ಪಣ ಇವುಗಳನ್ನು ಮಾತೃವಂಶದ ಮತ್ತು ಪಿತೃವಂಶದ ಪಿತೃಗಳಿಗೆ ಮಾಡಿದರೆ ಅಂತಹ ಪುರುಷನ ಕೋಟಿ ಕುಲಗಳು ಉದ್ಧಾರವಾಗುವುವು.

೩೦. ಮೀನಮಾಸದಲ್ಲಿ ಗುರುವೂ ಮೀನರಾಶಿಯಲ್ಲಿರುವಾಗ ಕೃಷ್ಣವೇಣೀ ನದಿಯ (ತೀರದಲ್ಲಿರುವ) ಆಯಾಯ ತೀರ್ಥಗಳಲ್ಲಿ ಸ್ನಾನಮಾಡಿದರೆ ಸ್ವರ್ಗವು ಲಭಿಸುವುದೆಂದು ತಿಳಿದವರು ಹೇಳಿರುವರು.

೩೧-೩೨. ಗಂಗೆಯನ್ನಾಗಲೀ, ಕಾವೇರಿಯನ್ನಾಗಲೀ, ಸೇರಿ ಅದರ ತೀರದಲ್ಲಿ ವಾಸಮಾಡಿದರೆ ಆ ಜನ್ಮದಲ್ಲಿ ಮಾಡಿದಂತಹ ಪಾಪವು ಸಂಪೂರ್ಣವಾಗಿ

ತತ್ಕಾಲಕೃತಪಾಪಸ್ಯ ಕ್ಷಯೋ ಭವತಿ ನಿಶ್ಚಿತಂ ।
ರುದ್ರಲೋಕಪ್ರದಾನ್ಯೇವ ಸಂತಿ ಕ್ಷೇತ್ರಾಣ್ಯನೇಕಶಃ ॥ ೩೨ ॥

ತಾಮ್ರಪರ್ಣೀ ವೇಗವತೀ ಬ್ರಹ್ಮಲೋಕಫಲಪ್ರದೇ ।
ತಯೋಸ್ತೀರೇ ಹಿ ಸಂತ್ಯೇವ ಕ್ಷೇತ್ರಾಣಿ ಸ್ವರ್ಗದಾನಿ ಚ ॥ ೩೩ ॥

ಸಂತಿ ಕ್ಷೇತ್ರಾಣಿ ತನ್ಮಧ್ಯೇ ಪುಣ್ಯದಾನಿ ಚ ಭೂರಿಶಃ ।
ತತ್ರ ತತ್ರ ವಸನ್ ಪ್ರಾಜ್ಞಸ್ತಾದೃಶಂ ಚ ಫಲಂ ಲಭೇತ್ ॥ ೩೪ ॥

ಸದಾಚಾರೇಣ ಸದ್ವೃತ್ತ್ಯಾ ಸದಾ ಭಾವನಯಾಪಿ ಚ ।
ವಸೇದ್ದಯಾಲುಃ ಪ್ರಾಜ್ಞೋ ವೈ ನಾನ್ಯಥಾ ತತ್ಫಲಂ ಲಭೇತ್ ॥ ೩೫ ॥

ಪುಣ್ಯಕ್ಷೇತ್ರೇ ಕೃತಂ ಪುಣ್ಯಂ ಬಹುಧಾ ಋದ್ಧಿಮೃಚ್ಛತಿ ।
ಪುಣ್ಯಕ್ಷೇತ್ರೇ ಕೃತಂ ಪಾಪಂ ಮಹದಣ್ವಪಿ ಜಾಯತೇ ॥ ೩೬ ॥

---

ನಷ್ಟವಾಗುವುದು. ರುದ್ರಲೋಕವನ್ನೇ ಉಂಟುಮಾಡುವಂಥ ಅನೇಕ ಕ್ಷೇತ್ರಗಳು ಇಲ್ಲಿ ಇರುವುವು.

೩೩. ತಾಮ್ರಪರ್ಣೀ, ವೇಗವತೀ ಈ ಎರಡು ನದಿಗಳು ಬ್ರಹ್ಮಲೋಕವನ್ನುಂಟುಮಾಡುವಂತಹವು. ಈ ನದಿಗಳ ತೀರದಲ್ಲಿ ಸ್ವರ್ಗವನ್ನುಂಟುಮಾಡುವಂತಹ ಅನೇಕ ಕ್ಷೇತ್ರಗಳು ಇರುವುವು.

೩೪. ಅವುಗಳ ಮಧ್ಯದಲ್ಲಿ ಪುಣ್ಯವನ್ನುಂಟುಮಾಡುವಂತಹ ಕ್ಷೇತ್ರಗಳೂ ಅನೇಕವಾಗಿರುವುವು. ಆಯಾಯ ತೀರ್ಥದಲ್ಲಿ ವಾಸಮಾಡಿದ ಪ್ರಾಜ್ಞರಿಗೆ ಅದಕ್ಕೆ ತಕ್ಕ ಫಲಗಳು ಲಭಿಸುವುವು.

೩೫. ಪುಣ್ಯಕ್ಷೇತ್ರಗಳಲ್ಲಿ ಪ್ರಾಜ್ಞನೂ, ದಯಾಲುವೂ ಆಗಿದ್ದು ಒಳ್ಳೆಯ ಆಚಾರ, ವೃತ್ತಿ, ಭಾವನೆ (ಚಿಂತೆ) ಇವುಗಳುಳ್ಳವನಾಗಿರಬೇಕು. ಅದಿಲ್ಲದೆ, ಅನಾಚಾರಿಯಾಗಿದ್ದರೆ ಫಲವು ಲಭಿಸಲಾರದು.

೩೬. ಪುಣ್ಯಕ್ಷೇತ್ರದಲ್ಲಿ ಮಾಡಿದ ಪುಣ್ಯವು ಅನೇಕ ಪ್ರಕಾರವಾಗಿ ವೃದ್ಧಿಯನ್ನೈದುವುದು, ಪಾಪವನ್ನು ಮಾಡಿದರೆ ಅದು ಸ್ವಲ್ಪವಾದರೂ ಮಹತ್ತಾಗಿ ಆಗುವುದು.

ತತ್ಕಾಲಂ ಜೀವನಾರ್ಥಶ್ಚೇತ್ಪುಣ್ಯೇನ ಕ್ಷಯಮೇಷ್ಯತಿ ।
ಪುಣ್ಯನ್ಯೈಶ್ವರ್ಯದಾಃ ಪ್ರಾಹುಃ ಕಾಯಿಕಂ ವಾಚಿಕಂ ತಥಾ ॥ ೩೭ ॥

ಮಾನಸಂ ಚ ತಥಾ ಪಾಪಂ ತಾದೃಶಂ ನಾಶಯೇದ್ದ್ವಿಜಾಃ ।
ಮಾನಸಂ ವಜ್ರಲೇಪಂ ತು ಕಲ್ಪಕಲ್ಪಾನುಗಂ ತಥಾ ॥ ೩೮ ॥

ಧ್ಯಾನಾದೇವ ಹಿ ತನ್ನಶ್ಯೇನ್ನಾನ್ಯಥಾ ನಾಶಮೃಚ್ಛತಿ ।
ವಾಚಿಕಂ ಜಪಜಾಲೇನ ಕಾಯಿಕಂ ಕಾಯಶೋಷಣಾತ್ ॥ ೩೯ ॥

ದಾನಾದ್ಧನಕೃತಂ ನಶ್ಯೇನ್ನಾನ್ಯಥಾ ಕಲ್ಪಕೋಟಿಭಿಃ ।
ಕ್ವಚಿತ್ಪಾಪೇನ ಪುಣ್ಯಂ ಚ ವೃದ್ಧಿಪೂರ್ವೇಣ ನಶ್ಯತಿ ॥ ೪೦ ॥

ಬೀಜಾಂಶಶ್ಚೈವ ವೃಧ್ಯಂಶೋ ಭೋಗಾಂಶಃ ಪುಣ್ಯಪಾಪಯೋಃ ।
ಜ್ಞಾನನಾಶ್ಯೋ ಹಿ ಬೀಜಾಂಶೋ ವೃದ್ಧಿರುಕ್ತಪ್ರಕಾರತಃ ॥ ೪೧ ॥

---

೩೭. ಆ ಪುಣ್ಯಕ್ಷೇತ್ರದಲ್ಲಿ ವಾಸಮಾಡುವ ಕಾಲವನ್ನು ಜೀವನಕ್ಕಾಗಿ ಎಂದರೆ ಪೌರೋಹಿತ್ಯ ಮುಂತಾದುವುಗಳಿಂದ ದ್ರವ್ಯಾರ್ಜನೆಮಾಡುತ್ತಾ ಕಾಲವನ್ನು ಕಳೆದರೆ ಅಲ್ಲಿ ವಾಸಮಾಡಿದ ಪುಣ್ಯವು ನಾಶವಾಗುವುದು, ಪಾಪವೂ ಬರುವುದು. ಆದುದರಿಂದ ಎಲೈ ಬ್ರಾಹ್ಮಣೋತ್ತಮರೆ! ಶರೀರದಿಂದಲೂ, ಮಾತಿನಿಂದಲೂ ಮನಸ್ಸಿನಿಂದಲೂ ಸಹ ಪುಣ್ಯಕ್ಷೇತ್ರದಲ್ಲಿ ಅಂತಹ ಪಾಪವನ್ನು ಆಚರಿಸಬಾರದು.

೩೮. ಮಾನಸವಾದ ಪಾಪವು ವಜ್ರಲೇಪದಂತೆ ದೃಢವಾದುದು, ಕಲ್ಪಕಲ್ಪಗಳುರುಳಿದರೂ ಆ ಮಾನಸಪಾಪವು ನಾಶವಾಗಲಾರದು. ಧ್ಯಾನದಿಂದಲೇ ಆ ಪಾಪವು ನಾಶವಾಗುವುದು. ಇನ್ನಾವುದರಿಂದಲೂ ಅದು ನಾಶವಾಗುವುದಿಲ್ಲ.

೩೯-೪೦. ವಾಚಿಕ (ಮಾತಿನಿಂದಾಚರಿಸಿದ) ಪಾಪವು ಜಪಗಳಿಂದಲೂ, ಕಾಯಿಕ (ಶರೀರದಿಂದ ಆಚರಿಸಿದ) ಪಾಪವು ವ್ರತೋಪವಾಸಾದಿಗಳಿಂದ ಶರೀರವನ್ನು ಶೋಷಿಸುವುದರಿಂದಲೂ ಹೋಗುವುವು. ಧನದಿಂದ ಮಾಡಿದ ಪಾಪವು ದಾನದಿಂದ ಹೋಗುವುದು. ಹೀಗೆ ಮಾಡದಿದ್ದರೆ ಆ ಪಾಪಗಳು ಕೋಟಿಕಲ್ಪಗಳಾದರೂ ಹೋಗಲಾರವು. ಕೆಲವು ಸಂದರ್ಭಗಳಲ್ಲಿ ಪಾಪವು ಹೆಚ್ಚುತ್ತಾ ಬಂದು ಪುಣ್ಯವು ನಾಶವಾಗುವುದು.

೪೧. ಪುಣ್ಯಪಾಪಗಳಿಗೆ ಬೀಜಾಂಶ, ವೃಧ್ಯಂಶ, ಭೋಗಾಂಶಗಳೆಂದು ಮೂರು ಅಂಶಗಳಿರುವುವು. ಬೀಜಾಂಶ (ಕಾರಣಾಂಶ) ವು ಜ್ಞಾನದಿಂದ ನಾಶವಾಗುವುದು. ವೃದ್ಧ್ಯಂಶವು ಹಿಂದೆ ಹೇಳಿದಂತೆ ಧ್ಯಾನ ಮುಂತಾದುವುಗಳಿಂದ ನಾಶವಾಗುವುದು.

ಭೋಗಾಂಶೋ ಭೋಗನಾಶ್ಯಸ್ತು ನಾನ್ಯಥಾ ಪುಣ್ಯಕೋಟಿಭಿಃ ।
ಬೀಜಪ್ರರೋಹೇ ನಷ್ಟೇ ತು ಶೇಷೋ ಭೋಗಾಯ ಕಲ್ಪತೇ ॥ ೪೨ ॥

ದೇವಾನಾಂ ಪೂಜಯಾ ಚೈವ ಬ್ರಾಹ್ಮಣಾನಾಂ ಚ ದಾನತಃ ।
ತಪೋಧಿಕ್ಯಾಚ್ಚ ಕಾಲೇನ ಭೋಗಃ ಸಹ್ಯೋ ಭವೇನ್ನೃಣಾಂ ।
ತಸ್ಮಾತ್ಪಾಪಮಕೃತ್ವೈವ ವಸ್ತವ್ಯಂ ಸುಖಮಿಚ್ಛತಾ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ದ್ವಾದಶೋಽಧ್ಯಾಯಃ.

---

೪೨. ಭೋಗಾಂಶವು ಭೋಗ ಎಂದರೆ ಅನುಭವದಿಂದ ನಾಶವಾಗುವುದು. ಅದಿಲ್ಲದೆ ಕೋಟಿ ಪುಣ್ಯಗಳಿಂದಲೂ ನಾಶವಾಗಲಾರದು. ಪುಣ್ಯಪಾಪಗಳ ಬೀಜಾಂಶವು ಜ್ಞಾನದಿಂದ ನಾಶವಾಗಲು ಮಿಕ್ಕ ಅಂಶವು ಭೋಗಕ್ಕಾಗಿ ಉಳಿಯುವುದು. ಅದು ಭೋಗದಿಂದಲೇ ನಾಶವಾಗುವುದು.

೪೩. ದೇವತೆಗಳನ್ನು ಪೂಜಿಸುವುದರಿಂದಲೂ, ಬ್ರಾಹ್ಮಣರಿಗೆ ಪೂಜೆ, ದಾನಗಳನ್ನು ಮಾಡುವುದರಿಂದಲೂ, ತಪಸ್ಸಿನಿಂದಲೂ ಆ ಪುಣ್ಯಪಾಪಗಳ ಭೋಗಾನುಭವವು ಸಹ್ಯವಾಗುವುದು. ಎಂದರೆ ಸಹಿಸುವಂತಹುದಾಗುವುದು. ಆದುದರಿಂದ ಸುಖವಾಗಿರಬೇಕೆಂದು ಅಪೇಕ್ಷಿಸುವವನು ಪಾಪವನ್ನು ಆಚರಿಸದೆ ಒಳ್ಳೆಯ ಕರ್ಮಗಳನ್ನು ಮಾಡುತ್ತಾ ಇರಬೇಕು.

ಇಲ್ಲಿಗೆ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಹನ್ನೆರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ತ್ರಯೋದಶೋಽಧ್ಯಾಯಃ

---

॥ ಋಷಯ ಊಚುಃ ॥

ಸದಾಚಾರಂ ಶ್ರಾವಯಾಶು ಯೇನ ಲೋಕಾನ್ ಜಯೇದ್ಬುಧಃ ।
ಧರ್ಮಾಧರ್ಮಮಯಾನ್ ಬ್ರೂಹಿ ಸ್ವರ್ಗನಾರಕದಾಂಸ್ತಥಾ. ॥ ೧ ॥

॥ ಸೂತ ಉವಾಚ ॥

ಸದಾಚಾರಯುತೋ ವಿದ್ವಾನ್ ಬ್ರಾಹ್ಮಣೋ ನಾಮ ನಾಮತಃ ।
ವೇದಾಚಾರಯುತೋ ವಿಪ್ರೋ ಹ್ಯೇತೈರೇಕೈಕವಾನ್ ದ್ವಿಜಃ ॥ ೨ ॥

---

## ಹದಿಮೂರನೆಯ ಅಧ್ಯಾಯವು.

೧. ಋಷಿಗಳು ಪ್ರಶ್ನಿಸಿದರು :—ಓ ಸೂತಮುನಿ! ಪುಣ್ಯಲೋಕಗಳನ್ನು ಜಯಿಸುವಂತಹ ಸದಾಚಾರಗಳು ಯಾವವು? ಅಲ್ಲದೆ ಧರ್ಮ ಮತ್ತು ಅಧರ್ಮ ಸ್ವರೂಪಗಳಾಗಿದ್ದು ಕ್ರಮವಾಗಿ ಸ್ವರ್ಗ ಮತ್ತು ನರಕಗಳನ್ನುಂಟುಮಾಡುವಂತಹ ಆಚಾರಗಳಾವವು? ಅವುಗಳನ್ನು ಹೇಳುವವನಾಗು ಎಂದು ಕೇಳಲು,

೨. ಸೂತಮುನಿಯು ಹೇಳಿದನು :—ಸದಾಚಾರವುಳ್ಳವನೂ, ವಿದ್ವಾಂಸನೂ ಆದವನಿಗೆ ಬ್ರಾಹ್ಮಣನೆಂದು ಹೆಸರು. ವೇದ ಮತ್ತು ಆಚಾರಗಳಿಂದ ಕೂಡಿದವನಿಗೆ ವಿಪ್ರನೆಂದು ಹೆಸರು. ಅವುಗಳಲ್ಲಿ ಯಾವುದಾದರೊಂದರಿಂದ ಕೂಡಿದವನು ದ್ವಿಜನು.

ಅಲ್ಪಾಚಾರೋಽಲ್ಪವೇದಶ್ಚ ಕ್ಷತ್ರಿಯೋ ರಾಜಸೇವಕಃ ।
ಕಿಂಚಿದಾಚಾರವಾನ್ ವೈಶ್ಯಃ ಕೃಷಿವಾಣಿಜ್ಯಕೃತ್ತಥಾ ॥ ೩ ॥

ಶೂದ್ರಬ್ರಾಹ್ಮಣ ಇತ್ಯುಕ್ತಃ ಸ್ವಯಮೇವ ಹಿ ಕರ್ಷಕಃ ।
ಅಸೂಯಾಲುಃ ಪರದ್ರೋಹೀ ಚಂಡಾಲದ್ವಿಜ ಉಚ್ಯತೇ ॥ ೪ ॥

ಪೃಥಿವೀಪಾಲಕೋ ರಾಜಾ ಇತರೇ ಕ್ಷತ್ರಿಯಾ ಮತಾಃ ।
ಧಾನ್ಯಾದಿಕ್ರಯವಾನ್ ವೈಶ್ಯ ಇತರೋ ವಣಿಗುಚ್ಯತೇ ॥ ೫ ॥

ಬ್ರಹ್ಮಕ್ಷತ್ರಿಯವೈಶ್ಯಾನಾಂ ಶುಶ್ರೂಷುಃ ಶೂದ್ರ ಉಚ್ಯತೇ ।
ಕರ್ಷಕೋ ವೃಷಲೋ ಜ್ಞೇಯ ಇತರೇ ಚೈವ ದಸ್ಯವಃ ॥ ೬ ॥

ಸರ್ವೋ ಹ್ಯುಷಃ ಪ್ರಾಙ್ಮುಖಶ್ಚ ಚಿಂತಯೇದ್ದೇವಪೂರ್ವಕಾನ್ ।
ಧರ್ಮಾನರ್ಥಾಂಶ್ಚ ತತ್ಕ್ಲೇಶಾನಾಯಂ ಚ ವ್ಯಯಮೇವ ಚ ॥ ೭ ॥

---

೩. ಸ್ವಲ್ಪವೇ ವೇದವನ್ನು ಬಲ್ಲವನೂ, ಆಚಾರವುಳ್ಳವನೂ ಆದಂತಹವನು ರಾಜಸೇವಕನಾದ ಕ್ಷತ್ರಿಯನು. ಸ್ವಲ್ಪವೇ ಆಚಾರವುಳ್ಳ ವ್ಯವಸಾಯ ಮತ್ತು ವ್ಯಾಪಾರಗಳನ್ನು ಮಾಡುವಂತಹವನು ವೈಶ್ಯನು.

೪. ತಾನೇ ಭೂಮಿಯನ್ನು ಉಳುವಂತಹ ಬ್ರಾಹ್ಮಣನಿಗೆ ಶೂದ್ರಬ್ರಾಹ್ಮಣನೆಂದು ಹೆಸರು. ಅಸೂಯೆಯುಳ್ಳವನೂ, ಪರರಿಗೆ ಕೇಡನ್ನು ಬಯಸುವವನೂ ಆದಂತಹ ಬ್ರಾಹ್ಮಣನಿಗೆ ಚಂಡಾಲದ್ವಿಜನೆಂದು ಹೆಸರು.

೫. (ರಾಜ್ಯವನ್ನಾಳುವ) ಭೂಮಿಯನ್ನು ಪಾಲಿಸುವವನೇ ರಾಜನು. ಮಿಕ್ಕವರು ಕ್ಷತ್ರಿಯರು. ದವಸ ಮುಂತಾದುವುಗಳನ್ನು ವಿಕ್ರಯಿಸು (ವ್ಯಾಪಾರಮಾಡು) ವವನು ವೈಶ್ಯನು. ಮಿಕ್ಕವರಿಗೆ "ವಣಿಕ್" ಎಂದು ಹೆಸರು.

೬. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣಗಳನ್ನು ಸೇವಿಸುವವನು ಶೂದ್ರನು. ಭೂಮಿಯನ್ನು ಉಳುವವನು "ವೃಷಲ" ನು. ಇದಾವುದನ್ನೂ ಮಾಡದ ಮಿಕ್ಕವರು ದಸ್ಯುಗಳು.

೭. ಎಲ್ಲ ಪುರುಷರೂ ಸಹ ಉಷಃಕಾಲದಲ್ಲಿ ಪೂರ್ವಾಭಿಮುಖವಾಗಿ ಎದ್ದು ನಿಂತು ದೇವತೆಗಳನ್ನು ಧ್ಯಾನಿಸಿ, ಧರ್ಮ, ಅರ್ಥ, ಇವುಗಳನ್ನೂ, ಇವುಗಳ ಸಂಬಂಧವಾದ ವ್ಯವಹಾರವನ್ನೂ, ಆದಾಯವ್ಯಯಗಳನ್ನೂ ಚಿಂತಿಸಬೇಕು.

ಆಯುರ್ದ್ವೇಷಶ್ಚ ಮರಣಂ ಪಾಪಂ ಭಾಗ್ಯಂ ತಥೈವ ಚ ।
ವ್ಯಾಧಿಃ ಪುಷ್ಟಿಸ್ತಥಾ ಶಕ್ತಿಃ ಪ್ರಾತರುತ್ಥಾನದಿಕ್ಫಲಂ ॥ ೮ ॥

ನಿಶಾಂತ್ಯಯಾಮೋಷಾ ಜ್ಞೇಯಾ ಯಾಮಾರ್ಧಂ ಸಂಧಿರುಚ್ಯತೇ ।
ತತ್ಕಾಲೇ ತು ಸಮುತ್ಥಾಯ ವಿಣ್ಮೂತ್ರೇ ವಿಸೃಜೇನ್ನರಃ ॥ ೯ ॥

ಗೃಹಾದ್ದೂರಂ ತತೋ ಗತ್ವಾ ಬಾಹ್ಯತಃ ಪ್ರಾವೃತಸ್ತಥಾ ।
ಉದಙ್ಮುಖಃ ಸಮಾವಿಶ್ಯ ಪ್ರತಿಬಂಧೇಽನ್ಯದಿಙ್ಮುಖಃ ॥ ೧೦ ॥

ಜಲಾಗ್ನಿಬ್ರಾಹ್ಮಣಾದೀನಾಂ ದೇವಾನಾಂ ನಾಭಿಮುಖ್ಯತಃ ।
ಲಿಂಗಂ ಪಿಧಾಯ ವಾಮೇನ ಮುಖಮನ್ಯೇನ ಪಾಣಿನಾ ॥ ೧೧ ॥

ಮಲಮುತ್ಸೃಜ್ಯ ಚೋತ್ಥಾಯ ನಪಶ್ಯೇಚ್ಚೈವ ತನ್ಮಲಂ ।
ಉದ್ಧೃತೇನ ಜಲೇನೈವ ಶೌಚಂ ಕುರ್ಯಾಜ್ಜಲಾದ್ಬಹಿಃ ॥ ೧೨ ॥

---

೮. ಪ್ರಾತಃಕಾಲದಲ್ಲಿ ಹಾಸಿಗೆಯಿಂದ ಏಳುವಾಗ, ಪೂರ್ವ, ಆಗ್ನೇಯ, ದಕ್ಷಿಣ, ನೈರ್ಋತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಇಶಾನ್ಯ ಎಂಬ ಎಂಟು ದಿಕ್ಕುಗಳಲ್ಲಿ ಅಭಿಮುಖವಾಗಿ ಎದ್ದರೆ ಕ್ರಮವಾಗಿ ಆಯುಸ್ಸು, ದ್ವೇಷ, ಮರಣ, ಪಾಪ, ಭಾಗ್ಯ, ರೋಗ, ಪುಷ್ಟಿ, ಶಕ್ತಿ ಎಂಬ ಫಲಗಳು ಉಂಟಾಗುವವು.

೯. ರಾತ್ರಿಯ ಕೊನೆಯ ಯಾಮಕ್ಕೆ ಉಷಃಕಾಲವೆಂದು ಹೆಸರು. ಆ ಯಾಮದ ಅರ್ಧಭಾಗಕ್ಕೆ ಸಂಧಿಯೆಂದು ಹೆಸರು. ಆ ಸಂಧಿಕಾಲದಲ್ಲೆದ್ದು ಜಲಬಾಧೆ ಮತ್ತು ಮಲಬಾಧೆಗಳನ್ನು ತೀರಿಸಬೇಕು.

೧೦. ದೇಹಬಾಧೆಗಾಗಿ ಮನೆಯಿಂದ ದೂರವಾದ ಹೊರಗಿನ ಪ್ರದೇಶಕ್ಕೆ ಹೋಗಬೇಕು. ಶಿರಸ್ಸನ್ನು ಬಟ್ಟೆಯಿಂದ (ಶಿರೋವೇಷ್ಟನ) ಮುಚ್ಚಿಕೊಳ್ಳಬೇಕು. ಉತ್ತರ ದಿಕ್ಕಿಗೆದುರಾಗಿ ಕುಳಿತುಕೊಳ್ಳಬೇಕು. ಅದಕ್ಕೆ ತೊಂದರೆಯಿದ್ದರೆ ಮಿಕ್ಕ ಯಾವುದಾದರೂ ದಿಕ್ಕಿಗೆ ಎದುರಾಗಿ ಕುಳಿತುಕೊಳ್ಳಬಹುದು.

೧೧. ಜಲ, ಅಗ್ನಿ, ಬ್ರಾಹ್ಮಣ ಮುಂತಾದವರು, ದೇವತೆಗಳು ಇವರಿಗೆ ಎದುರಾಗಿ ಕುಳಿತುಕೊಳ್ಳಬಾರದು. ತನ್ನ ಲಿಂಗ(ಜನನೇಂದ್ರಿಯ) ವನ್ನು ಎಡಗೈಯಿಂದಲೂ ಮುಖವನ್ನು ಬಲಗೈನಿಂದಲೂ ಮುಚ್ಚಿಕೊಳ್ಳಬೇಕು.

೧೨. ಮಲವನ್ನು (ಅಮೇಧ್ಯವನ್ನು) ವಿಸರ್ಜನೆಮಾಡಿ ಎದ್ದಮೇಲೆ ತಿರುಗಿ ಆ ಮಲವನ್ನು ನೋಡಬಾರದು. ಜಲವನ್ನು ತಂಬಿಗೆ ಮುಂತಾದುವುಗಳಿಂದ ತೆಗೆದು

ಅಥವಾ ದೇವಪಿತ್ರೃರ್ಷಿತೀರ್ಥಾವತರಣಂ ವಿನಾ ।
ಸಪ್ತ ವಾ ಪಂಚ ವಾ ತಿಸ್ರೋ ಗುದಂ ಸಂಶೋಧಯೇನ್ಮೃದಾ ॥ ೧೩ ॥

ಲಿಂಗೇ ಕರ್ಕೋಟಮಾತ್ರಂ ತು ಗುದೇ ಪ್ರಸೃತಿರಿಷ್ಯತೇ ।
ತತ ಉತ್ಥಾಯ ಪದ್ಧಸ್ತಶೌಚಂ ಗಂಡೂಷಮಷ್ಟಕಂ ॥ ೧೪ ॥

ಯೇನ ಕೇನ ಚ ಪತ್ರೇಣ ಕಾಷ್ಠೇನ ಚ ಜಲಾದ್ಬಹಿಃ ।
ಕಾರ್ಯಂ ಸಂತ್ಯಜ್ಯ ತರ್ಜನೀಂ ದಂತಧಾವನಮೀರಿತಂ ॥ ೧೫ ॥

ಜಲದೇವಾನ್ನಮಸ್ಕೃತ್ಯ ಮಂತ್ರೇಣ ಸ್ನಾನಮಾಚರೇತ್ ।
ಅಶಕ್ತಃ ಕಂಠದಘ್ನಂ ವಾ ಕಟಿದಘ್ನಮಥಾಪಿ ವಾ ॥ ೧೬ ॥

---

ಕೊಂಡು ಪೃಷ್ಠ ಮುಂತಾದುವುಗಳ ಶೌಚವನ್ನು (ಶುದ್ಧಿಯನ್ನು) ಮಾಡಬೇಕು. ಜಲಾಶಯದ ನೀರಿನಲ್ಲಿಯೇ ಮಾಡಬಾರದು. ನೀರಿನ ಹೊರಪ್ರದೇಶದಲ್ಲಿ ಮಾಡಬೇಕು.

೧೩. ಅಥವಾ ದೇವತೀರ್ಥ, ಋಷಿತೀರ್ಥ ಈ ಪ್ರದೇಶಗಳನ್ನು ಬಿಟ್ಟು ಬೇರೆ ಸ್ಥಳದಲ್ಲಿ ಏಳು ಬಾರಿಯಾಗಲಿ, ಐದು ಬಾರಿಯಾಗಲಿ, ಮೂರು ಬಾರಿಯಾಗಲಿ, ಮಣ್ಣಿನಿಂದ ಗುದವನ್ನು ಶುದ್ಧಿಗೊಳ್ಳಬೇಕು.

೧೪. ಲಿಂಗವನ್ನು ಎಂಟು ಬಾರಿಯೂ, ಗುದಪ್ರದೇಶವನ್ನೂ ಹತ್ತು ಬಾರಿಯೂ ಪ್ರಕ್ಷಾಳನೆ ಮಾಡಿ ಬಳಿಕ ಅಲ್ಲಿಂದೆದ್ದು ಕೈಕಾಲುಗಳನ್ನು ತೊಳೆದುಕೊಂಡು ಎಂಟಾವರ್ತಿ ಬಾಯಿಮುಕ್ಕಳಿಸಬೇಕು.

೧೫. ಯಾವುದಾದರೂ ಎಲೆಯಿಂದ ಅಥವಾ ಕಡ್ಡಿಯಿಂದ ನೀರಿನ ಹೊರಗೆ ನಿಂತು ಹಲ್ಲುಗಳನ್ನುಜ್ಜಬೇಕು, ತರ್ಜನೀ (ಎರಡನೆಯ) ಬೆರಳಿನಿಂದ ಹಲ್ಲನ್ನು ಉಜ್ಜಬಾರದು.

೧೬. ಜಲದ ಅಭಿಮಾನಿದೇವತೆಗಳನ್ನು ನಮಸ್ಕರಿಸಿ ಮಂತ್ರಪೂರ್ವಕವಾಗಿ ಸ್ನಾನವನ್ನು ಮಾಡಬೇಕು. ಅಶಕ್ತನಾದವನು, ಕಂಠಪರ್ಯಂತವಾಗಲೀ ಸೊಂಟದ ಪರ್ಯಂತವಾಗಲೀ ಸ್ನಾನಮಾಡಬಹುದು.

ಆಜಾನುಜಲಮಾಸಿಚ್ಯ ಮಂತ್ರಸ್ನಾನಂ ಸಮಾಚರೇತ್ ।
ದೇವಾದೀನ್ ತರ್ಪಯೇದ್ವಿದ್ವಾಂಸ್ತತ್ರ ತೀರ್ಥಜಲೇನ ಚ ॥ ೧೭ ॥

ಧೌತವಸ್ತ್ರಂ ಸಮಾದಾಯ ಪಂಚಕಚ್ಛೇನ ಧಾರಯೇತ್ ।
ಉತ್ತರೀಯಂ ಚ ಕಿಂಚೈವ ಧಾರ್ಯಂ ಸರ್ವೇಷು ಕರ್ಮಸು ॥ ೧೮ ॥

ನದ್ಯಾದಿತೀರ್ಥಸ್ನಾನೇ ತು ಸ್ನಾನವಸ್ತ್ರಂ ನ ಶೋಧಯೇತ್ ।
ವಾಪೀಕೂಪಗೃಹಾದೌ ತು ಸ್ನಾನಾದೂರ್ಧ್ವಂ ನಯೇದ್ಬುಧಃ ॥ ೧೯ ॥

ಶಿಲಾದಾರ್ವಾದಿಕೇ ವಾಪಿ ಜಲೇ ವಾಪಿ ಸ್ಥಲೇऽಪಿ ವಾ ।
ಸಂಶೋಧ್ಯ ಪೀಡಯೇದ್ವಸ್ತ್ರಂ ಪಿತೄಣಾಂ ತೃಪ್ತಯೇ ದ್ವಿಜಾಃ ॥ ೨೦ ॥

ಜಾಬಾಲಕೋಕ್ತಮಂತ್ರೇಣ ಭಸ್ಮನಾ ಚ ತ್ರಿಪುಂಡ್ರಕಂ ।
ಅನ್ಯಥಾ ಚೇಜ್ಜಲೇ ಪಾತಸ್ತತೋ ನರಕಮೃಚ್ಛತಿ ॥ ೨೧ ॥

---

೧೭. ಆದಕ್ಕೂ ಶಕ್ತಿಯಿಲ್ಲದವನು ಮೊಳಕಾಲುಗಳ ಪರ್ಯಂತರ ಜಲವನ್ನು ಪ್ರೋಕ್ಷಿಸಿಕೊಂಡು ಮಂತ್ರಸ್ನಾನವನ್ನು ಮಾಡಬೇಕು. ಮತ್ತು ಅಲ್ಲಲ್ಲಿ ತೀರ್ಥಜಲ ದಿಂದ ದೇವಋಷಿ ಪಿತೃಗಳಿಗೆ ತರ್ಪಣವನ್ನು ಮಾಡಬೇಕು.

೧೮. ಒಗೆದು ಮಡಿಯಾಗಿರುವ ಬಟ್ಟೆಯನ್ನು, ಪಂಚಕಚ್ಚೆಯನ್ನು ಹಾಕಿ ಉಟ್ಟುಕೊಳ್ಳಬೇಕು. ಉತ್ತರೀಯ (ಹೊರೆಯುವ) ಬಟ್ಟೆಯನ್ನೂ ಸಹ ಎಲ್ಲಾ ಕರ್ಮಗಳಲ್ಲಿಯೂ ಧರಿಸಬೇಕು.

೧೯. ನದಿ ಮೊದಲಾದ ತೀರ್ಥಗಳಲ್ಲಿ ಸ್ನಾನಮಾಡಿದ ಬಟ್ಟೆಯನ್ನು ತೊಳೆಯು ಬಾರದು. ಸ್ನಾನವಾದ ಮೇಲೆ ಭಾವಿ, ಕೊಳ, ಮನೆ ಮುಂತಾದುವುಗಳಿಗೆ ಆ ಬಟ್ಟೆ ಯನ್ನು ತೆಗೆದುಕೊಂಡು ಹೋಗಿ ಶುದ್ಧಿಗೊಳಿಸ (ಒಗೆಯ) ಬೇಕು.

೨೦. ನದಿತೀರ ಅಥವಾ ಇತರ ಸ್ಥಳಗಳಲ್ಲಿರುವ ಕಲ್ಲುಚಪ್ಪಡಿ, ಮರದ ಹಲಗೆ ಮುಂತಾದುವುಗಳಲ್ಲಿ ಬಟ್ಟೆಗಳನ್ನು ಒಗೆದು ಮಡಿಮಾಡಬೇಕು. ಅದರಿಂದ ಪಿತೃ ಗಳು ತೃಪ್ತರಾಗುವರು.

೨೧. ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಮಂತ್ರದಿಂದ ಭಸ್ಮವನ್ನು

ಆಪೋಹಿಷ್ಠೇತಿ ಶಿರಸಿ ಪ್ರೋಕ್ಷಯೇತ್ಪಾಪಶಾಂತಯೇ ।
ಯಸ್ಯೇತಿ ಮಂತ್ರಂ ಪಾದೇ ತು ಸಂಧಿಪ್ರೋಕ್ಷಣಮುಚ್ಯತೇ ॥ ೨೨ ॥

ಪಾದೇ ಮೂರ್ಧ್ನಿ ಹೃದಿ ಚೈವ ಮೂರ್ಧ್ನಿ ಹೃತ್ಪಾದ ಏವ ಚ ।
ಹೃತ್ಪಾದಮೂರ್ಧ್ನಿ ಸಂಪ್ರೋಕ್ಷ್ಯ ಮಂತ್ರಸ್ನಾನಂ ವಿದುರ್ಬುಧಾಃ ॥ ೨೩ ॥

ಈಷತ್ಸ್ಪರ್ಶೇ ಚ ದೌಃಸ್ವಾಸ್ಥ್ಯೇ ರಾಜರಾಷ್ಟ್ರಭಯೇಽಪಿ ಚ ।
ಅಗತ್ಯಾ ಗತಿಕಾಲೇ ಚ ಮಂತ್ರಸ್ನಾನಂ ಸಮಾಚರೇತ್ ॥ ೨೪ ॥

ಪ್ರಾತಃಸೂರ್ಯಾನುವಾಕೇನ ಸಾಯಮಗ್ನ್ಯನುವಾಕತಃ ।
ಅಪಃ ಪೀತ್ವಾ ತಥಾ ಮಧ್ಯೇ ಪುನಃ ಪ್ರೋಕ್ಷಣಮಾಚರೇತ್ ॥ ೨೫ ॥

---

ಮೂರು ಪಟ್ಟೆಯಾಗಿ ಹಣೆಯಲ್ಲಿ ಹಚ್ಚಬೇಕು. ಇದಕ್ಕೆ ವಿಪರೀತವಾಗಿ ಆಚರಿಸಿದರೆ ಜಲದಲ್ಲಿ ಮರಣವೂ ಮುಂದೆ ನರಕವೂ ಉಂಟಾಗುವುವು.

೨೨. "ಆಪೋಹಿಷ್ಠಾ" ಎಂಬ ಮಂತ್ರದಿಂದ ಶಿರಸ್ಸಿನಲ್ಲಿ ಜಲವನ್ನು ಪ್ರೋಕ್ಷಿಸಿಕೊಳ್ಳಬೇಕು. "ಯಸ್ಯಕ್ಷಯಾಯ ಜಿನ್ವಥ" ಎಂಬ ಮಂತ್ರದಿಂದ ಕಾಲಿನಲ್ಲಿ ಸಂಧಿಗಳನ್ನು ಪ್ರೋಕ್ಷಿಸಬೇಕು.

೨೩. ಪಾದ, ಶಿರಸ್ಸು, ಹೃದಯ, ತಿರುಗಿ ಶಿರಸ್ಸು, ಹೃದಯ, ಪಾದ ಮತ್ತು ಹೃದಯ, ಪಾದ, ಶಿರಸ್ಸು, ಇವುಗಳಲ್ಲಿ ಕ್ರಮವಾಗಿ (ಮೂರು ಬಾರಿ) ಪ್ರೋಕ್ಷಿಸಬೇಕು. ಇದಕ್ಕೆ ಮಂತ್ರಸ್ನಾನವೆಂದು ಹೆಸರು.

೨೪. ಸಾಮಾನ್ಯವಾದ ಅಶುದ್ಧಿವಸ್ತುಸ್ಪರ್ಶ, ಅನಾರೋಗ್ಯ (ಕಾಯಿಲೆ), ರಾಜಭಯ ಮತ್ತು ರಾಜ್ಯಭಯ, ಜರೂರಾಗಿ ಬಂದ ಪ್ರಯಾಣ, ಇಂತಹ ಕಾಲಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಲು ಕಾಲಾವಕಾಶವಿಲ್ಲದಿರುವಾಗ ಮಂತ್ರಸ್ನಾನವನ್ನು ಮಾಡಬಹುದು.

೨೫. ಪ್ರಾತಃಕಾಲದಲ್ಲಿ "ಸೂರ್ಯಶ್ಚ ಮಾಮನ್ಯುಶ್ಚ" ಎಂಬ ಸೂರ್ಯಾನುವಾಕದಿಂದಲೂ ಸಾಯಂಕಾಲದಲ್ಲಿ "ಅಗ್ನಿಶ್ಚ ಮಾಮನ್ಯುಶ್ಚ" ಎಂಬ ಅಗ್ನ್ಯನುವಾಕದಿಂದಲೂ ಜಲಪ್ರಾಶನೆ ಮಾಡಿ ಪುನಃ ಆಪೋಹಿಷ್ಠಾ" ಎಂಬ ಮಂತ್ರದಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು.

ಗಾಯತ್ರ್ಯಾ ಜಪಮಂತ್ರಾಂತೇ ತ್ರಿರೂರ್ಧ್ವಂ ಪ್ರಾಗ್ವಿನಿಕ್ಷಿಪೇತ್ ।
ಮಂತ್ರೇಣ ಸಹ ಚೈಕಂ ವೈ ಮಧ್ಯೇಽರ್ಘ್ಯಂ ತು ರವೇರ್ದ್ವಿಜಾಃ ॥ ೨೬ ॥

ಅಥ ಜಾತೇ ಚ ಸಾಯಾಹ್ನೇ ಭುವಿ ಪಶ್ಚಿಮದಿಙ್ಮುಖಃ ।
ಉದ್ಧೃತ್ಯ ದದ್ಯಾತ್ಪ್ರಾತಸ್ತು ಮಧ್ಯಾಹ್ನೇಽಂಗುಲಿಭಿಸ್ತಥಾ ॥ ೨೭ ॥

ಅಂಗುಲೀನಾಂ ಚ ರಂಧ್ರೇಣ ಲಂಬಂ ಪಶ್ಯೇದ್ದಿವಾಕರಂ ।
ಆತ್ಮಪ್ರದಕ್ಷಿಣಂ ಕೃತ್ವಾ ಶುದ್ಧಾಚಮನಮಾಚರೇತ್ ॥ ೨೮ ॥

ಸಾಯಂ ಮುಹೂರ್ತಾದರ್ವಾಕ್ತು ಕೃತಾ ಸಂಧ್ಯಾ ವೃಥಾ ಭವೇತ್ ।
ಅಕಾಲಾತ್ಕಾಲ ಇತ್ಯುಕ್ತೋ ದಿನೇಽತೀತೇ ಯಥಾಕ್ರಮಂ ॥ ೨೯ ॥

ದಿವಾತೀತೇ ಚ ಗಾಯತ್ರೀಂ ಶತಂ ನಿತ್ಯಂ ಸಮಾಚರೇತ್ ।
ಆದಶಾಹಾತ್ಪರಾತೀತಂ ಗಾಯತ್ರೀಂ ಲಕ್ಷಮಭ್ಯಸೇತ್ ॥ ೩೦ ॥

---

೨೬. ಜಪವಾದ ಮೇಲೆ ಗಾಯತ್ರೀಮಂತ್ರದಿಂದ ಮೂರು ಬಾರಿ ಪೂರ್ವಾಭಿಮುಖವಾಗಿ ನಿಂತು ಊರ್ಧ್ವಮುಖವಾಗಿ ನೀರನ್ನು ಎರಚಬೇಕು. ಮಧ್ಯದಲ್ಲಿ ಗಾಯತ್ರೀಮಂತ್ರದಿಂದಲೇ ಸೂರ್ಯನಿಗೆ ಒಂದು ಅರ್ಘ್ಯವನ್ನು ಕೊಡಬೇಕು.

೨೭. ಬಳಿಕ ಸಾಯಂಕಾಲದಲ್ಲಿ ಪಶ್ಚಿಮದಿಕ್ಕಿಗೆ ಎದುರಾಗಿ ನಿಂತು ಭೂಮಿಯಲ್ಲಿ ಕೆಳಮುಖವಾಗಿ ಅರ್ಘ್ಯವನ್ನು ಕೊಡಬೇಕು. ಪ್ರಾತಃಕಾಲದಲ್ಲಿ ಮೇಲುಮುಖವಾಗಿಯೂ ಮಧ್ಯಾಹ್ನದಲ್ಲಿ ಬೆರಳುಗಳಿಂದಲೂ ಅರ್ಘ್ಯವನ್ನು ಕೊಡಬೇಕು.

೨೮. ಬೆರಳುಗಳ ರಂಧ್ರದಿಂದ ಸೂರ್ಯಬಿಂಬವನ್ನು ನೋಡಬೇಕು. ತಾನೇ ತನ್ನ ಪ್ರದಕ್ಷಿಣವನ್ನು ಮಾಡಿ ಬಳಿಕ ಶುದ್ಧಾಚಮನವನ್ನು ಮಾಡಬೇಕು.

೨೯. ಸಾಯಂಕಾಲದಲ್ಲಿ ಸಂಧ್ಯಾಕಾಲಕ್ಕಿಂತಲೂ ಮುಹೂರ್ತಕಾಲಕ್ಕೆ ಮುಂಚೆ ಮಾಡಿದ ಸಂಧ್ಯಾವಂದನೆಗೆ ಫಲವಿಲ್ಲ. ಹಗಲು ಸಾಯಂಸಂಧ್ಯೆಗೆ ಕಾಲವಲ್ಲ. ಹಗಲು ಕಳೆದ ಮೇಲೆ ಕ್ರಮವಾಗಿ ಸಂಧ್ಯಾಕಾಲವು ಬರುವುದು.

೩೦. ಹಗಲು ಕಳೆಯಲು ಸಂಧ್ಯಾಕಾಲದಲ್ಲಿ ನಿತ್ಯವೂ ನೂರು ಗಾಯತ್ರೀ ಜಪವನ್ನು ಮಾಡಬೇಕು. ಹತ್ತು ದಿನಗಳವರೆಗೆ ಸಂಧ್ಯಾವಂದನೆಯನ್ನು ಮಾಡ

ಮಾಸಾತೀತೇ ತು ನಿತ್ಯೇ ಹಿ ಪುನಶ್ಚೋಪನಯಂ ಚರೇತ್ ।
ಈಶೋ ಗೌರೀ ಗುಹೋ ವಿಷ್ಣುರ್ಬ್ರಹ್ಮಾ ಚಂದ್ರಶ್ಚ ವೈ ಯಮಃ ॥

ಏವಂ ರೂಪಾಂಶ್ಚ ವೈ ದೇವಾಸ್ತರ್ಪಯೇದರ್ಥಸಿದ್ಧಯೇ ।
ಬ್ರಹ್ಮಾರ್ಪಣಂ ತತಃ ಕೃತ್ವಾ ಶುದ್ಧಾಚಮನಮಾಚರೇತ್ ॥ ೩೨ ॥

ತೀರ್ಥದಕ್ಷಿಣತಃ ಶಸ್ತೇ ಮಠೇ ಮಂತ್ರಾಲಯೇ ಬುಧಃ ।
ತತ್ರ ದೇವಾಲಯೇ ವಾಪಿ ಗೃಹೇ ವಾ ನಿಯತಸ್ಥಲೇ ॥ ೩೩ ॥

ದೇವಾನ್ ಸರ್ವಾನ್ನಮಸ್ಕೃತ್ಯ ಸ್ಥಿರಬುದ್ಧಿಃ ಸ್ಥಿರಾಸನಃ ।
ಪ್ರಣವಂ ಪೂರ್ವಮಭ್ಯಸ್ಯ ಗಾಯತ್ರೀಮಭ್ಯಸೇತ್ತತಃ ॥ ೩೪ ॥

ಜೀವಬ್ರಹ್ಮೈಕ್ಯವಿಷಯಂ ಬುದ್ಧ್ವಾ ಪ್ರಣವಮಭ್ಯಸೇತ್ ।
ತ್ರೈಲೋಕ್ಯಸೃಷ್ಟಿಕರ್ತಾರಂ ಸ್ಥಿತಿಕರ್ತಾರಮಚ್ಯುತಂ ॥ ೩೫ ॥

---

ದಿದ್ದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಲಕ್ಷಗಾಯತ್ರೀಜಪವನ್ನು ಮಾಡಬೇಕು. ಒಂದು ತಿಂಗಳು ಸಂಧ್ಯಾವಂದನೆಯನ್ನು ಮಾಡದಿದ್ದರೆ ತಿರುಗಿ ಉಪನಯನವನ್ನೇ ಮಾಡಿ ಕೊಳ್ಳಬೇಕು.

೩೧. ಈಶ್ವರ, ಗೌರೀ, ಷಣ್ಮುಖ, ವಿಷ್ಣು, ಬ್ರಹ್ಮ, ಚಂದ್ರ, ಯಮ, ಈ ದೇವತೆಗಳನ್ನು ಇಷ್ಟಾರ್ಥಸಿದ್ಧಿಗಾಗಿ ನಿತ್ಯವೂ ಪೂಜಿಸಬೇಕು.

೩೨. ಮಾಡಿದ ಕರ್ಮವನ್ನು ಬ್ರಹ್ಮವಸ್ತುವಿಗೆ ಅರ್ಪಿಸಿ ಬಳಿಕ ಶುದ್ಧಾಚಮನ ವನ್ನು ಮಾಡಬೇಕು.

೩೩-೩೪. ತೀರ್ಥಪ್ರದೇಶದಿಂದ ದಕ್ಷಿಣಭಾಗದಲ್ಲಿರುವಂತಹ ಪ್ರಶಸ್ತವಾದ ಮಠ, ಮಂತ್ರಾಲಯ, ಇಲ್ಲವೇ ದೇವಾಲಯ, ಪರಿಶುದ್ಧವಾದ ಮನೆ, ಮುಂತಾದ ನಿಯತಸ್ಥಳದಲ್ಲಿ ಸ್ಥಿರವಾದ ಆಸನದಲ್ಲಿ ಕುಳಿತು, ಎಲ್ಲಾ ದೇವತೆಗಳನ್ನೂ ನಮಸ್ಕರಿಸಿ, ಮೊದಲು ಓಂಕಾರವನ್ನುಚ್ಚರಿಸಿ ಸ್ಥಿರವಾದ ಮನಸ್ಸಿನಿಂದ ಗಾಯತ್ರೀ ಜಪವನ್ನು ಮಾಡಬೇಕು.

೩೫. ಜೀವನೂ, ಬ್ರಹ್ಮನೂ ಭಿನ್ನರಲ್ಲ. ಅವರ ಸ್ವರೂಪವು ಒಂದೇ ಆಗಿರುವುದು. ಎಂಬ ಅರ್ಥವುಳ್ಳ ಓಂಕಾರಾರ್ಥವನ್ನು ಅನುಸಂಧಾನಮಾಡುತ್ತಾ ಓಂಕಾರವನ್ನು ಜಪಿಸಬೇಕು. ಮೂರು ಲೋಕಗಳನ್ನೂ ಸೃಷ್ಟಿಸುವಂತಹ ಬ್ರಹ್ಮ, ಅವುಗಳನ್ನು

ಸಂಹರ್ತಾರಂ ತಥಾ ರುದ್ರಂ ಸ್ವಪ್ರಕಾಶಮುಪಾಸ್ಮಹೇ ।
ಜ್ಞಾನಕರ್ಮೇಂದ್ರಿಯಾಣಾಂ ಚ ಮನೋವೃತ್ತೀರ್ಧಿಯಸ್ತಥಾ ॥ ೩೬ ॥

ಭೋಗಮೋಕ್ಷಪ್ರದೇ ಧರ್ಮಜ್ಞಾನೇ ಚ ಪ್ರೇರಯೇತ್ಸದಾ ।
ಇತ್ಥಮರ್ಥಂ ಧಿಯಾ ಧ್ಯಾಯನ್ ಬ್ರಹ್ಮ ಪ್ರಾಪ್ನೋತಿ ನಿಶ್ಚಯಂ ॥ ೩೭ ॥

ಕೇವಲಂ ವಾ ಜಪೇನ್ನಿತ್ಯಂ ಬ್ರಾಹ್ಮಣ್ಯಸ್ಯ ಚ ಪೂರ್ತಯೇ ।
ಸಹಸ್ರಮಭ್ಯಸೇನ್ನಿತ್ಯಂ ಪ್ರಾತರ್ಬ್ರಾಹ್ಮಣಪುಂಗವಃ ॥ ೩೮ ॥

ಅನ್ಯೇಷಾಂ ಚ ಯಥಾಶಕ್ತಿ ಮಧ್ಯಾಹ್ನೇ ಚ ಶತಂ ಜಪೇತ್ ।
ಸಾಯಂ ದ್ವಿದಶಕಂ ಜ್ಞೇಯಂ ಶಿಖಾಷ್ಟಕಸಮನ್ವಿತಂ ॥ ೩೯ ॥

ಮೂಲಾಧಾರಂ ಸಮಾರಭ್ಯ ದ್ವಾದಶಾಂತಸ್ಥಿತಾಂಸ್ತಥಾ ।
ವಿದ್ಯೇಶಬ್ರಹ್ಮವಿಷ್ಣ್ವೀಶಜೀವಾತ್ಮಪರಮೇಶ್ವರಾನ್ ॥ ೪೦ ॥

---

ಪಾಲಿಸುವಂತಹ ವಿಷ್ಣು, ಮತ್ತು ಪ್ರಳಯಕಾಲದಲ್ಲಿ ಆ ಲೋಕಗಳನ್ನೂ ಸಂಹರಿಸುವನೂ, (ಅಗ್ನಿಯಂತೆ) ಪ್ರಕಾಶರೂಪನೂ ಆದಂತಹ ರುದ್ರ ಇವರನ್ನು ಉಪಾಸಿಸುವೆವು.

೩೬-೩೭. ಜ್ಞಾನೇಂದ್ರಿಯ, ಕರ್ಮೇದ್ರಿಯಗಳು, ಮನಸ್ಸು, ಅದರ ವೃತ್ತಿಗಳು, ಭೋಗ ಮತ್ತು ಮುಕ್ತಿಗಳನ್ನುಂಟುಮಾಡುವಂತಹ ಧರ್ಮ ಮತ್ತು ಇವೆಲ್ಲವುಗಳನ್ನೂ ಪ್ರೇರಿಸುವಂತಹ ಬ್ರಹ್ಮವಸ್ತುವನ್ನು ಉಪಾಸಿಸುವೆವು ಎಂದು ಧ್ಯಾನ ಮಾಡುತ್ತಾ ಜಪಿಸುವವನು ನಿಶ್ಚಯವಾಗಿಯೂ ಬ್ರಹ್ಮವಸ್ತುವನ್ನು ಪಡೆಯುವನು, ಅಥವಾ ಅರ್ಥವನ್ನು ಸ್ಮರಿಸಲು ಅಶಕ್ತನಾದವನು ಬ್ರಾಹ್ಮಣ್ಯದ ರಕ್ಷಣೆಗಾಗಿಯಾದರೂ ಅರ್ಥವನ್ನು ಸ್ಮರಿಸದೆ ಸುಮ್ಮನೆ ನಿತ್ಯವೂ ಜಪಿಸಬೇಕು.

೩೮. ಬ್ರಾಹ್ಮಣನು ನಿತ್ಯವೂ ಪ್ರಾತಃಕಾಲದಲ್ಲಿ ಸಾವಿರ ಗಾಯತ್ರೀಜಪವನ್ನು ಮಾಡಬೇಕು. ಮಿಕ್ಕವರು ತಮ್ಮ ಶಕ್ತಿಗನುಸಾರವಾಗಿ ಜಪವನ್ನು ಮಾಡಬೇಕು. ಮಧ್ಯಾಹ್ನದಲ್ಲಿ ನೂರು ಜಪಗಳನ್ನು ಮಾಡಬೇಕು.

೩೯. ಸಾಯಂಕಾಲದಲ್ಲಿ ಇನ್ನೂರು ಗಾಯತ್ರೀಜಪಗಳನ್ನು ಮಾಡಬೇಕು. ಗಾಯತ್ರೀಶಿರಸ್ಸನ್ನು ಎಂಟುಬಾರಿ ಜಪಿಸಬೇಕು.

೪೦-೪೧. ಮೂಲಪ್ರಕೃತಿಯನ್ನು ಪ್ರಾರಂಭಿಸಿ ಹನ್ನೆರಡನೆಯ ಅಂಶದ ಮೇಲ್ಭಾಗದಲ್ಲಿರುವಂತಹ ವಿದ್ಯೇಶ, ಬ್ರಹ್ಮ, ವಿಷ್ಣು, ಈಶ್ವರ, ಜೀವಾತ್ಮ, ಪರಮಾತ್ಮ

ಬ್ರಹ್ಮಬುದ್ಧ್ಯಾ ತದೈಕ್ಯಂ ಚ ಸೋಽಹಂಭಾವನಯಾ ಜಪೇತ್ ।
ತಾನೇವ ಬ್ರಹ್ಮರಂಧ್ರಾದೌ ಕಾಯಾದ್ಬಾಹ್ಯೇ ಚ ಭಾವಯೇತ್ ॥ ೪೧ ॥

ಮಹತ್ತತ್ತ್ವಂ ಸಮಾರಭ್ಯ ಶರೀರಂ ತು ಸಹಸ್ರಕಂ ।
ಏಕೈಕಸ್ಮಾಜ್ಜಪಾದೇಕಮತಿಕ್ರಮ್ಯ ಶನೈಃ ಶನೈಃ ॥ ೪೨ ॥

ಪರಸ್ಮಿನ್ಯೋಜಯೇಜ್ಜೀವಂ ಜಪತತ್ತ್ವಮುದಾಹೃತಂ ।
ಶತದ್ವಿದಶಕಂ ದೇಹಂ ಶಿಖಾಷ್ಟಕಸಮನ್ವಿತಂ ॥ ೪೩ ॥

ಮಂತ್ರಾಣಾಂ ಜಪ ಏವಂ ಹಿ ಜಪಮಾದಿಕ್ರಮಾದ್ವಿದುಃ ।
ಸಹಸ್ರಂ ಬ್ರಾಹ್ಮದಂ ವಿದ್ಯಾಚ್ಛತಮೈಂದ್ರಂ ಪದಂ ವಿದುಃ ॥ ೪೪ ॥

ಇತರತ್ವಾತ್ಮರಕ್ಷಾರ್ಥಂ ಬ್ರಹ್ಮಯೋನಿಷು ಜಾಯತೇ ।
ದಿವಾಕರಮುಪಸ್ಥಾಯ ನಿತ್ಯಮಿತ್ಥಂ ಸಮಾಚರೇತ್ ॥ ೪೫ ॥

---

ಇವರೆಲ್ಲರೂ ಬ್ರಹ್ಮಸ್ವರೂಪರೆಂದೂ ತಾನೂ ಸಹ ಬ್ರಹ್ಮಸ್ವರೂಪನೆಂದೂ ಸೋಽಹಂ ಭಾವದಿಂದ ಅನುಸಂಧಾನಮಾಡುತ್ತಾ ಜಪಿಸಬೇಕು. ಆ ವಿದ್ಯೇಶ್ವರ ಮುಂತಾದವರನ್ನೇ ಶರೀರದ ಹೊರಪ್ರದೇಶದಲ್ಲಿಯೂ ಭಾವಿಸಬೇಕು.

೪೨. ಮಹತ್ತತ್ತ್ವವನ್ನು ಪ್ರಾರಂಭಿಸಿ ಒಂದೊಂದು ಜಪದಿಂದ ಒಂದೊಂದು ಶರೀರವನ್ನತಿಕ್ರಮಿಸುತ್ತಾ ಸಾವಿರ ಶರೀರಗಳನ್ನು ಅತಿಕ್ರಮಿಸಿ ಕೊನೆಗೆ ಪರಬ್ರಹ್ಮ ವಸ್ತುವಿನಲ್ಲಿ ಜೀವಾತ್ಮವನ್ನು ಸೇರಿಸಬೇಕು ಎಂದರೆ ಐಕ್ಯವನ್ನು ಹೊಂದಿಸಬೇಕು. ಇದೇ ಜಪದ ತತ್ತ್ವವು.

೪೩. ಶರೀರ ಶುದ್ಧಿಗಾಗಿ ನೂರಿಪ್ಪತ್ತು ಗಾಯತ್ರೀಜಪ, ಎಂಟು ಗಾಯತ್ರೀ ಶಿರಸ್ಸಿನ ಜಪ ಇವುಗಳನ್ನು ಮಾಡಬೇಕು. ಈ ರೀತಿಯಾಗಿ ಮಂತ್ರಗಳ ಜಪ ಕ್ರಮವು ಹಿಂದಿನಿಂದಲೂ ಆಚಾರದಲ್ಲಿ ಬಂದಿರುವುದು.

೪೪-೪೫. ಸಹಸ್ರ ಗಾಯತ್ರೀಜಪವನ್ನು ನಿತ್ಯವೂ ಮಾಡಿದರೆ ಬ್ರಹ್ಮಲೋಕವು ಲಭಿಸುವುದು. ನೂರು ಜಪಗಳಿಂದ ಇಂದ್ರಪದವಿಯು ಲಭಿಸುವುದು. ಇದಕ್ಕಿಂತಲೂ ಕಮ್ಮಿಯಾದ ಜಪವು ತನ್ನ ಬ್ರಾಹ್ಮಣತ್ವದ ರಕ್ಷಣೆಗೆ ಮಾತ್ರವೇ ಆಗುವುದು. ಆ ರೀತಿ ಜಪಿಸುವವನು ಬ್ರಾಹ್ಮಣಕುಲದಲ್ಲಿ ಜನಿಸುವನು.

ಲಕ್ಷದ್ವಾದಶಯುಕ್ತಸ್ತು ಪೂರ್ಣಬ್ರಾಹ್ಮಣ ಈರಿತಃ ।
ಗಾಯತ್ರ್ಯಾ ಲಕ್ಷಹೀನಂ ತು ವೇದಕಾರ್ಯೇ ನ ಯೋಜಯೇತ್ ॥ ೪೬ ॥

ಆಸಪ್ತತೇಸ್ತು ನಿಯಮಂ ಪಶ್ಚಾತ್ಪ್ರವ್ರಾಜನಂ ಚರೇತ್ ।
ಪ್ರಾತರ್ದ್ವಾದಶಸಾಹಸ್ರಂ ಪ್ರವ್ರಾಜೀ ಪ್ರಣವಂ ಜಪೇತ್ ॥ ೪೭ ॥

ದಿನೇ ದಿನೇ ತ್ವತಿಕ್ರಾಂತೇ ನಿತ್ಯಮೇವಂ ಕ್ರಮಾಜ್ಜಪೇತ್ ।
ಮಾಸಾದೌ ಕ್ರಮಶೋಽತೀತೇ ಸಾರ್ಧಲಕ್ಷಜಪೇನ ಹಿ ॥ ೪೮ ॥

ಅತ ಊರ್ಧ್ವಮತಿಕ್ರಾಂತೇ ಪುನಃ ಪ್ರೈಷಂ ಸಮಾಚರೇತ್ ।
ಏವಂ ಕೃತ್ವಾ ದೋಷಶಾಂತಿರನ್ಯಥಾ ರೌರವಂ ವ್ರಜೇತ್ ॥ ೪೯ ॥

ಧರ್ಮಾರ್ಥಯೋಸ್ತತೋ ಯತ್ನಂ ಕುರ್ಯಾತ್ಕಾಮೀ ನ ಚೇತರಃ ।
ಬ್ರಾಹ್ಮಣೋ ಮುಕ್ತಿಕಾಮಃ ಸ್ಯಾದ್ಬ್ರಹ್ಮಜ್ಞಾನಂ ಸದಾಭ್ಯಸೇತ್ ॥ ೫೦ ॥

---

೪೬. ಹನ್ನೆರಡು ಲಕ್ಷ ಜಪವನ್ನು ಮಾಡದಿರುವವನ್ನು ವೇದೋಕ್ತವಾದ ಕರ್ಮಗಳಿಗೆ ಸೇರಿಸಬಾರದು.

೪೭. ಎಪ್ಪತ್ತು ವರ್ಷಗಳವರೆಗೆ ಈ ನಿಯಮವು. ಆಮೇಲೆ ಬ್ರಾಹ್ಮಣನು ಸನ್ಯಾಸವನ್ನು ತೆಗೆದುಕೊಳ್ಳಬೇಕು. ಸನ್ಯಾಸಿಯಾದವನು ದಿನವೂ ಪ್ರಾತಃಕಾಲ ಹನ್ನೆರಡು ಸಾವಿರ ಓಂಕಾರಜಪಗಳನ್ನು ಮಾಡಬೇಕು.

೪೮. ಆದರೆ ನಿತ್ಯವೂ ಸರಿಯಾಗಿ ಜಪಗಳನ್ನು ಮಾಡದೆ ಒಂದು ತಿಂಗಳಿನಲ್ಲಿ ಒಂದೂವರೆ ಲಕ್ಷ ಜಪಗಳಿಗಿಂತಲೂ ಹೆಚ್ಚಾಗಿ ಜಪಗಳು ಉಳಿದುವಾದರೆ ತಿರುಗಿ ಸನ್ಯಾಸವನ್ನು ಸ್ವೀಕರಿಸಬೇಕು.

೪೯. ಹೀಗೆ ಮಾಡಿದರೆ ಪಾಪನಿವೃತ್ತಿಯು ಆಗುವುದು. ಇಲ್ಲದಿದ್ದರೆ ಘೋರವಾದ ನರಕವು ಲಭಿಸುವುದು. ಆದುದರಿಂದ ಧರ್ಮ ಮತ್ತು ಅರ್ಥಗಳಲ್ಲಿ ಫಲೇಚ್ಛೆಯುಳ್ಳ ಗೃಹಸ್ಥನು ಮಾತ್ರ ಯತ್ನವನ್ನು ಮಾಡಬೇಕು. ವಿರಕ್ತನಾದ ಸನ್ಯಾಸಿಯು ಮಾಡಬಾರದು.

೫೦. ಬ್ರಾಹ್ಮಣನು ಮುಕ್ತಿಯನ್ನೇ ಅಪೇಕ್ಷಿಸುವವನಾಗಿದ್ದರೆ ಸದಾ ಬ್ರಹ್ಮಜ್ಞಾನವನ್ನು ಅಭ್ಯಾಸಮಾಡಬೇಕು.

ಧರ್ಮಾದರ್ಥೋಽರ್ಥತೋ ಭೋಗೋ ಭೋಗಾದ್ವೈರಾಗ್ಯಸಂಭವಃ ।
ಧರ್ಮಾರ್ಜಿತಾರ್ಥಭೋಗೇನ ವೈರಾಗ್ಯಮುಪಜಾಯತೇ ॥ ೫೧ ॥

ವಿಪರೀತಾರ್ಥಭೋಗೇನ ರಾಗ ಏವ ಹಿ ಜಾಯತೇ ।
ಧರ್ಮಶ್ಚ ದ್ವಿವಿಧಃ ಪ್ರೋಕ್ತೋ ದ್ರವ್ಯದೇಹದ್ವಯೇನ ಚ ॥ ೫೨ ॥

ದ್ರವ್ಯಮಿಜ್ಯಾದಿರೂಪಂ ಸ್ಯಾತ್ತೀರ್ಥಸ್ನಾನಾದಿ ದೈಹಿಕಂ ।
ಧರ್ಮೇಣ ಧನಮಾಪ್ನೋತಿ ತಪಸಾ ದಿವ್ಯರೂಪತಾಂ ॥ ೫೩ ॥

ನಿಷ್ಕಾಮಃ ಶುದ್ಧಿಮಾಪ್ನೋತಿ ಶುದ್ಧ್ಯಾ ಜ್ಞಾನಂ ನ ಸಂಶಯಃ ।
ಕೃತಾದೌ ಹಿ ತಪಃ ಶ್ಲಾಘ್ಯಂ ದ್ರವ್ಯಧರ್ಮಃ ಕಲೌ ಯುಗೇ ॥ ೫೪ ॥

ಕೃತೇ ಧ್ಯಾನಾಜ್ಜ್ಞಾನಸಿದ್ಧಿಸ್ತ್ರೇತಾಯಾಂ ತಪಸಾ ತಥಾ ।
ದ್ವಾಪರೇ ಯಜನಾಜ್ಜ್ಞಾನಂ ಪ್ರತಿಮಾಪೂಜಯಾ ಕಲೌ ॥ ೫೫ ॥

---

೫೧. ಧರ್ಮದಿಂದ ಅರ್ಥವೂ, ಅರ್ಥದಿಂದ ಭೋಗವೂ, ಭೋಗದಿಂದ ವೈರಾಗ್ಯವೂ ಜನಿಸುವುವು. ಧರ್ಮದಿಂದ ಸಂಪಾದಿಸಿದ ಅರ್ಥವನ್ನು ( ದ್ರವ್ಯ ) ಅನುಭವಿಸುವುದರಿಂದ ವೈರಾಗ್ಯವು ಜನಿಸುವುದು.

೫೨. ವಿಪರೀತವಾಗಿ ಅರ್ಥವನ್ನು ಭೋಗಿಸಿದರೆ ರಾಗವೇ ಉಂಟಾಗುವುದು. ವೈರಾಗ್ಯವು ಉಂಟಾಗಲಾರದು. ಧರ್ಮವು ಅರ್ಥದಿಂದ ಆಗುವುದು ಮತ್ತು ಶರೀರ ದಿಂದ ಮಾಡುವುದು ಎಂದು ಎರಡು ವಿಧವಾಗಿರುವುದು.

೫೩. ಅರ್ಥದಿಂದಾಗುವ ಧರ್ಮವು ಯಾಗ ಮುಂತಾದುದು; ತೀರ್ಥಸ್ನಾನ ಮುಂತಾದುವು ಶರೀರದಿಂದಾಗುವ ಧರ್ಮವು. ಧರ್ಮದಿಂದ ಧನವು ಲಭಿಸುವುದು, ತಪಸ್ಸಿನಿಂದ ದೇವಲೋಕವು ಲಭಿಸುವುದು.

೫೪. ಫಲೇಚ್ಛೆಯಿಲ್ಲದೆ ತಪಸ್ಸನ್ನಾಚರಿಸಿದರೆ ಚಿತ್ತಶುದ್ಧಿಯು ಆಗುವುದು. ಆದರಿಂದ ಮುಂದೆ ಬ್ರಹ್ಮಜ್ಞಾನವುಂಟಾಗುವುದು. ಕೃತ ಮೊದಲಾದ ಯುಗಗಳಲ್ಲಿ ತಪಸ್ಸೇ ಹೆಚ್ಚಾಗಿಯೂ ಶ್ರೇಷ್ಠವಾಗಿಯೂ ಇದ್ದಿತು. ದ್ರವ್ಯದಿಂದಾಗುವ ಧರ್ಮವು ಕಲಿಯುಗದಲ್ಲಿಯೇ ಹೆಚ್ಚಾಗಿರುವುದು.

೫೫. ಕೃತಯುಗದಲ್ಲಿ ಧ್ಯಾನದಿಂದಲೂ. ತ್ರೇತಾಯುಗದಲ್ಲಿ ತಪಸ್ಸಿನಿಂದಲೂ, ದ್ವಾಪರಯುಗದಲ್ಲಿ ಕರ್ಮದಿಂದಲೂ ಕಲಿಯುಗದಲ್ಲಿ ದೇವತಾವಿಗ್ರಹವನ್ನು ಪೂಜಿಸುವುದರಿಂದಲೂ ಜ್ಞಾನವುಂಟಾಗುವುದು.

ಯಾದೃಶಂ ಪುಣ್ಯಪಾಪಂ ವಾ ತಾದೃಶಂ ಫಲಮೇವ ಹಿ ।
ದ್ರವ್ಯದೇಹಾಂಗಭೇದೇನ ನ್ಯೂನವೃದ್ಧಿಕ್ಷಯಾದಿಕಂ ॥ ೫೬ ॥

ಅಧರ್ಮೋ ಹಿಂಸಕಾರೂಪೋ ಧರ್ಮಸ್ತು ಸುಖರೂಪಕಃ ।
ಅಧರ್ಮಾದ್ದುಃಖಮಾಪ್ನೋತಿ ಧರ್ಮಾದ್ವೈ ಸುಖಮೇಧತೇ ॥ ೫೭ ॥

ವಿದ್ಯಾದ್ದುರ್ವೃತ್ತಿತೋ ದುಃಖಂ ಸುಖಂ ವಿದ್ಯಾತ್ಸುವೃತ್ತಿತಃ ।
ಧರ್ಮಾರ್ಜನಮತಃ ಕುರ್ಯಾದ್ಭೋಗಮೋಕ್ಷಪ್ರಸಿದ್ಧಯೇ ॥ ೫೮ ॥

ಸಕುಟುಂಬಸ್ಯ ವಿಪ್ರಸ್ಯ ಚತುರ್ಜನಯುತಸ್ಯ ಚ ।
ಶತವರ್ಷಸ್ಯ ವೃತ್ತಿಂ ತು ದತ್ವಾತ್ತದ್ಬ್ರಹ್ಮಲೋಕದಂ ॥ ೫೯ ॥

ಚಾಂದ್ರಾಯಣಸಹಸ್ರಂ ತು ಬ್ರಹ್ಮಲೋಕಪ್ರದಂ ವಿದುಃ ।
ಸಹಸ್ರಸ್ಯ ಕುಟುಂಬಸ್ಯ ಪ್ರತಿಷ್ಠಾಂ ಕ್ಷತ್ರಿಯಶ್ಚರೇತ್ ॥ ೬೦ ॥

---

೫೬. ದ್ರವ್ಯ ಮತ್ತು ಶರೀರಗಳಿಂದ ಲೋಪವಾಗಿ ಮಾಡುವ ಕರ್ಮದ ಫಲವು ಜಾಗ್ರತೆ ಕ್ಷಯಿಸುವಂತಹುದು. ಯಾವ ರೀತಿಯಾಗಿ ಪುಣ್ಯಪಾಪಗಳು ಸಂಪಾದಿಸಲ್ಪಟ್ಟಿರುವುವೋ ಆ ಪುಣ್ಯ ಪಾಪಗಳಿಗೆ ಅನುಗುಣವಾಗಿಯೇ ಫಲವು ಲಭಿಸುವುದು.

೫೭. ಅಧರ್ಮವು ಹಿಂಸಾರೂಪವಾದುದು, ಧರ್ಮವು ಸುಖರೂಪವಾದುದು. ಅಧರ್ಮದಿಂದ ದುಃಖವುಂಟಾಗುವುದು, ಧರ್ಮಾಚರಣೆಯಿಂದ ಸುಖವು ಲಭಿಸುವುದು.

೫೮. ದುರಾಚಾರದಿಂದ ದುಃಖವುಂಟಾಗುವುದು, ಸದಾಚಾರದಿಂದ ಸುಖವು ಲಭಿಸುವುದು. ಆದುದರಿಂದ ಭೋಗ ಮತ್ತು ಮೋಕ್ಷಗಳು ಸಿದ್ಧಿಸಬೇಕಾದರೆ ಧರ್ಮವನ್ನೇ ಸಂಪಾದಿಸಬೇಕು.

೫೯. ಕುಟುಂಬದಿಂದ ಕೂಡಿದ್ದು ನಾಲ್ಕು ಜನಗಳೊಡನೆ ಇರುವಂತಹ ಮತ್ತು ಸದಾಚಾರಿಯಾದ ಬ್ರಾಹ್ಮಣನಿಗೆ ನೂರು ವರ್ಷ ಪರ್ಯಂತ ಜೀವನವನ್ನು ಕಲ್ಪಿಸಿದರೆ ಬ್ರಹ್ಮಲೋಕವು ಲಭಿಸುವುದು.

೬೦. ಸಾವಿರ ಬಾರಿ ಚಾಂದ್ರಾಯಣ ವ್ರತವನ್ನು ಮಾಡಿದರೆ ಬ್ರಹ್ಮಲೋಕವು ಲಭಿಸುವುದು. ಕ್ಷತ್ರಿಯನು ಸಾವಿರ ಸಂಸಾರಗಳ ಜೀವನವನ್ನು ಕಲ್ಪಿಸಿ ಸಲಹಬೇಕು.

ಇಂದ್ರಲೋಕಪ್ರದಂ ವಿದ್ಯಾದಯುತಂ ಬ್ರಹ್ಮಲೋಕದಂ ।
ಯಾಂ ದೇವತಾಂ ಪುರಸ್ಕೃತ್ಯ ದಾನಮಾಚರತೇ ನರಃ ॥ ೬೧ ॥

ತತ್ತಲ್ಲೋಕಮವಾಪ್ನೋತಿ ಇತಿ ವೇದವಿದೋ ವಿದುಃ ।
ಅರ್ಥಹೀನಃ ಸದಾ ಕುರ್ಯಾತ್ತಪಸಾಮರ್ಜನಂ ತಥಾ ॥ ೬೨ ॥

ತೀರ್ಥಾಚ್ಚ ತಪಸಾ ಪ್ರಾಪ್ಯಂ ಸುಖಮಕ್ಷಯ್ಯಮಶ್ನುತೇ ।
ಅರ್ಥಾರ್ಜನಮಥೋ ವಕ್ಷ್ಯೇ ನ್ಯಾಯತಃ ಸುಸಮಾಹಿತಃ ॥ ೬೩ ॥

ಕೃತಾತ್ಪ್ರತಿಗ್ರಹಾಚ್ಚೈವ ಯಾಜನಾಚ್ಚ ವಿಶುದ್ಧತಃ ।
ಅದೈನ್ಯಾದನತಿಕ್ಲೇಶಾದ್ಬ್ರಾಹ್ಮಣೋ ಧನಮರ್ಜಯೇತ್ ॥ ೬೪ ॥

ಕ್ಷತ್ರಿಯೋ ಬಾಹುವೀರ್ಯೇಣ ಕೃಷಿಗೋರಕ್ಷಣಾದ್ವಿಶಃ ।
ನ್ಯಾಯಾರ್ಜಿತಸ್ಯ ವಿತ್ತಸ್ಯ ದಾನಾತ್ಸಿದ್ಧಿಂ ಸಮಶ್ನುತೇ ॥ ೬೫ ॥

---

ಹಾಗೆ ಮಾಡಿದರೆ ಸ್ವರ್ಗವು ಲಭಿಸುವುದು. ಹತ್ತು ಸಾವಿರ ಕುಟುಂಬ (ಸಂಸಾರ) ವನ್ನು ಸಲಹಿದರೆ ಬ್ರಹ್ಮಲೋಕವು ಲಭಿಸುವುದು.

೬೧. ಯಾವ ದೇವತೆಯನ್ನು ಪುರಸ್ಕರಿಸಿ ನರನು ದಾನಮಾಡುವನೋ ಆ ದೇವತೆಯ ಲೋಕವನ್ನೇ ಅವನು ಪಡೆಯುವನು, ಎಂದು ವೇದವಿತ್ತುಗಳು ಹೇಳಿರುವರು.

೬೨. ದ್ರವ್ಯವಿಲ್ಲದವನು ಸದಾ ತಪಸ್ಸನ್ನೇ ಆಚರಿಸಬೇಕು. ತೀರ್ಥಯಾತ್ರೆಯಿಂದುಂಟಾಗುವ ಸುಖಕ್ಕಿಂತಲೂ ಚಿರಸ್ಥಾಯಿಯಾದ ಸುಖವು ತಪಸ್ಸಿನಿಂದ ಲಭಿಸುವುದು.

೬೩-೬೪. ನ್ಯಾಯದಿಂದ ಧನವನ್ನು ಸಂಪಾದಿಸುವ ಕ್ರಮವನ್ನು ಹೇಳುವೆನು. ದಾನವನ್ನು ತೆಗೆದುಕೊಳ್ಳುವುದರಿಂದಲೂ, ಶುದ್ಧವಾದ ಪೌರೋಹಿತ್ಯಮಾಡಿಸುವುದರಿಂದಲೂ, ದೈನ್ಯವನ್ನಾಶ್ರಯಿಸದೆ ಎಂದರೆ ಯಾಚನೆಮಾಡದೆ ಹೆಚ್ಚಿಗೆ ಕ್ಲೇಶವನ್ನು ಪಡೆಯದೆ ಧನವನ್ನು ಸಂಪಾದಿಸಬೇಕು. ಪ್ರಯತ್ನಪೂರ್ವಕವಾಗಿ ಅತ್ಯಾಶೆಯಿಂದ ಧನವನ್ನಾರ್ಜಿಸಬಾರದು.

೬೫. ಕ್ಷತ್ರಿಯನು ತನ್ನ ಭುಜಬಲದಿಂದಲೂ, ವೈಶ್ಯನು ವ್ಯವಸಾಯ, ಗೋಪಾಲನೆ, ವ್ಯಾಪಾರ ಮುಂತಾದುವುಗಳಿಂದಲೂ ಧನವನ್ನಾರ್ಜಿಸಬೇಕು, ನ್ಯಾಯದಿಂದ ಸಂಪಾದಿಸಿದ ಧನವನ್ನು ಯೋಗ್ಯರಾದವರಿಗೆ ದಾನಮಾಡಿದರೆ ಬ್ರಹ್ಮಜ್ಞಾನವು

ಜ್ಞಾನಸಿದ್ಧ್ಯಾ ಮೋಕ್ಷಸಿದ್ಧಿಃ ಸರ್ವೇಷಾಂ ಗುರ್ವನುಗ್ರಹಾತ್ ।
ಮೋಕ್ಷಾತ್ಸ್ವರೂಪಸಿದ್ಧಿಃ ಸ್ಯಾತ್ಪರಾನಂದಂ ಸಮಶ್ನುತೇ ॥ ೧೬ ॥

ಸತ್ಸಂಗಾತ್ಸರ್ವಮೇತದ್ವೈ ನರಾಣಾಂ ಜಾಯತೇ ದ್ವಿಜಾಃ ।
ಧನಧಾನ್ಯಾದಿಕಂ ಸರ್ವಂ ದೇಯಂ ವೈ ಗೃಹಮೇಧಿನಾ ॥ ೧೭ ॥

ಯದ್ಯತ್ಕಾಲೇ ವಸ್ತುಜಾತಂ ಫಲಂ ವಾ ಧಾನ್ಯಮೇವ ಚ ।
ತತ್ತತ್ಸರ್ವಂ ಬ್ರಾಹ್ಮಣೇಭ್ಯೋ ದೇಯಂ ವೈ ಹಿತಮಿಚ್ಛತಾ ॥ ೧೮ ॥

ಜಲಂ ಚೈವ ಸದಾ ದೇಯಮನ್ನಂ ಕ್ಷುದ್ವ್ಯಾಧಿಶಾಂತಯೇ ।
ಕ್ಷೇತ್ರಂ ಧಾನ್ಯಂ ತಥಾಽಽಮಾನ್ನಮನ್ನಮೇವ ಚತುರ್ವಿಧಂ ॥ ೧೯ ॥

ಯಾವತ್ಕಾಲಂ ಯದನ್ನಂ ವೈ ಭುಕ್ತ್ವಾ ಶ್ರವಣಮೇಧತೇ ।
ತಾವತ್ಕೃತಸ್ಯ ಪುಣ್ಯಸ್ಯ ತ್ವರ್ಧಂ ದಾತುರ್ನ ಸಂಶಯಃ ॥ ೨೦ ॥

---

ಸಿದ್ಧಿಸುವುದು.

೧೬. ಜ್ಞಾನಸಿದ್ಧಿಯಿಂದಲೂ ಗುರುಗಳ ಅನುಗ್ರಹದಿಂದಲೂ ಸರ್ವರಿಗೂ ಮೋಕ್ಷವು ಸಿದ್ಧಿಸುವುದು. ಮೋಕ್ಷದಿಂದ ಸ್ವ (ಬ್ರಹ್ಮ) ಸ್ವರೂಪವು ಸಿದ್ಧಿಸುವುದು. ಉತ್ಕೃಷ್ಟವಾದ ಬ್ರಹ್ಮಾನಂದವೂ ಲಭಿಸುವುದು.

೧೭. ಎಲೈ ವಿಪ್ರರೇ! ಮೇಲೆ ಹೇಳಿದುದೆಲ್ಲವೂ ಸತ್ಪುರುಷರ ಸಹವಾಸ ದಿಂದ ಲಭಿಸುವುದು. ಗೃಹಸ್ಥನಾದವನು ತನ್ನ ಶಕ್ತಿಗನುಸಾರವಾಗಿ ಧನ, ಧಾನ್ಯ ಮುಂತಾದುವುಗಳೆಲ್ಲವನ್ನೂ ದಾನಮಾಡಬೇಕು.

೧೮. ಯಾವಾವ ಕಾಲದಲ್ಲಿ ಯಾವಾವ ವಸ್ತು, ಫಲ, ಧಾನ್ಯ ಮುಂತಾದುವು ಗಳು ಸಿಗುವುವೋ ಅವೆಲ್ಲವನ್ನು, ತನಗೆ ಹಿತವನ್ನಪೇಕ್ಷಿಸುವಂತಹವನು ಬ್ರಾಹ್ಮಣರಿಗೆ ದಾನಮಾಡಬೇಕು.

೧೯. ಹಸಿವು, ಬಾಯಾರಿಗೆ ಇವುಗಳ ಶಾಂತ್ಯರ್ಥವಾಗಿ ಸರ್ವ ಪ್ರಾಣಿಗಳಿಗೂ ನೀರು ಮತ್ತು ಅನ್ನಗಳನ್ನು ಕೊಡಬೇಕು. ಕ್ಷೇತ್ರ, ಧಾನ್ಯ, ಆಮ (ಹಸಿಯ ಹಿಟ್ಟು) ಅನ್ನಗಳೆಂದು ಅನ್ನವು ನಾಲ್ಕು ವಿಧವಾಗಿರುವುದು.

೨೦. ಅನ್ನವನ್ನು ದಾನವಾಗಿ ತೆಗೆದುಕೊಂಡವನು ಯಾವ ಕಾಲದವರೆಗೆ ಬದುಕಿರುವನೋ ಅಲ್ಲಿಯವರೆಗೆ ಅವನು ಮಾಡಿದ ಪುಣ್ಯದಲ್ಲಿ ಅರ್ಧವು ಅನ್ನದಾತೃ ವಿಗೆ ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

ಗ್ರಹೀತಾ ಹಿ ಗೃಹೀತಸ್ಯ ದಾನಾಡ್ವೈ ತಪಸಾ ತಥಾ ।
ಪಾಪಸಂಶೋಧನಂ ಕುರ್ಯಾದನ್ಯಥಾ ರೌರವಂ ವ್ರಜೇತ್ ॥ ೭೧ ॥

ಆತ್ಮವಿತ್ತಂ ತ್ರಿಧಾ ಕುರ್ಯಾದ್ಧರ್ಮವೃದ್ಧ್ಯಾತ್ಮಭೋಗತಃ ।
ನಿತ್ಯಂ ನೈಮಿತ್ತಿಕಂ ಕಾಮ್ಯಂ ಕರ್ಮ ಕುರ್ಯಾತ್ತು ಧರ್ಮತಃ ॥ ೭೨ ॥

ವಿತ್ತಸ್ಯ ವರ್ಧನಂ ಕುರ್ಯಾದ್ವೃದ್ಧ್ಯಂಶೇನ ಹಿ ಸಾಧಕಃ ।
ಹಿತೇನ ಮಿತಮೇಧ್ಯೇನ ಭೋಗಂ ಭೋಗಾಂಶತಶ್ಚರೇತ್ ॥ ೭೩ ॥

ಕೃಷ್ಯರ್ಜಿತೇ ದಶಾಂಶಂ ಹಿ ದೇಯಂ ಪಾಪಸ್ಯ ಶುದ್ಧಯೇ ।
ಶೇಷೇಣ ಕುರ್ಯಾದ್ಧರ್ಮಾದಿ ಅನ್ಯಥಾ ರೌರವಂ ವ್ರಜೇತ್ ॥ ೭೪ ॥

ಅಥವಾ ಪಾಪವೃದ್ಧಿಃ ಸ್ಯಾತ್ಸಸ್ಯಂ ವಾ ಕ್ಷಯಮೇಷ್ಯತಿ ।
ವೃದ್ಧಿವಾಣಿಜ್ಯಕೇ ದೇಯಂ ಷಡಂಶಂ ಹಿ ವಿಚಕ್ಷಣೈಃ ॥ ೭೫ ॥

---

೭೧. ದಾನವನ್ನು ತೆಗೆದುಕೊಂಡವನು, ತೆಗೆದುಕೊಂಡ ದಾನದ ಶುದ್ಧಿಗಾಗಿ ದಾನಮಾಡಿಯೂ ತಪಸ್ಸನ್ನು ಮಾಡಿಯೂ ಪಾಪವನ್ನು ಕಳೆದುಕೊಳ್ಳಬೇಕು. ಇಲ್ಲದಿದ್ದರೆ ಘೋರವಾದ ನರಕವು ಲಭಿಸುವುದು.

೭೨. ತನ್ನ ಧನವನ್ನು ಧರ್ಮ, ವೃದ್ಧಿ, ತನ್ನ ಜೀವನ ಈ ಮೂರಕ್ಕಾಗಿ ಮೂರು ವಿಧವಾಗಿ ವಿಂಗಡಿಸಿ ವಿನಿಯೋಗಿಸಬೇಕು. ನಿತ್ಯಕರ್ಮ, ನೈಮಿತ್ತಿಕಕರ್ಮ ಮತ್ತು ಕಾಮ್ಯಕರ್ಮಗಳನ್ನು ವಿಧಿವತ್ತಾಗಿ ಮಾಡಬೇಕು.

೭೩-೭೪. ವೃದ್ಧಿಗಾಗಿಟ್ಟ ಧನದಿಂದ ಧನವನ್ನು ವೃದ್ಧಿಗೊಳಿಸಬೇಕು. ಭೋಗಕ್ಕಾಗಿಟ್ಟ ಧನದಿಂದ ಹಿತವೂ, ಪರಿಮಿತವೂ, ಪರಿಶುದ್ಧವೂ ಆದಂತಹ ವಸ್ತುವನ್ನು ಸೇವಿಸಬೇಕು. ವ್ಯವಸಾಯದಿಂದ ಲಭಿಸಿದ ದ್ರವ್ಯದಲ್ಲಿ ಹತ್ತನೆಯ ಒಂದಂಶವನ್ನು ಪಾಪಶುದ್ಧಿಗಾಗಿ ದಾನಮಾಡಬೇಕು. ಮಿಕ್ಕ ದ್ರವ್ಯದಿಂದ ಧರ್ಮ ಮುಂತಾದುವುಗಳನ್ನು ಮಾಡಬೇಕು. ಹಾಗೆ ಮಾಡದಿದ್ದವನು ಘೋರವಾದ ನರಕವನ್ನು ಹೊಂದುವನು. ಇಲ್ಲದಿದ್ದರೆ ಅವನಪಾಪವು ಹೆಚ್ಚಿ ಅವನು ಮಾಡಿರುವ ವ್ಯವಸಾಯಾದಿ ಕೃಷಿಯು ಎಂದರೆ ಹೊಲಗಳಲ್ಲಿ ಬೆಳೆದ ಬೆಳೆಯು ಕೆಟ್ಟುಹೋಗುವುದು.

೭೫. ಬುದ್ಧಿವಂತನಾದ ವೈಶ್ಯನು ವ್ಯಾಪಾರದಿಂದ ಬಂದ ಲಾಭದಲ್ಲಿ ಆರನೆಯ ಒಂದಂಶವನ್ನು ದಾನಮಾಡಬೇಕು.

ಶುದ್ಧಪ್ರತಿಗ್ರಹೇ ದೇಯಂ ಚತುರ್ಥಾಂಶಂ ದ್ವಿಜೋತ್ತಮೈಃ ।
ಅಕಸ್ಮಾದುತ್ಥಿತೇಽರ್ಥೇ ಹಿ ದೇಯಮರ್ಧಂ ದ್ವಿಜೋತ್ತಮೈಃ ॥ ೭೬ ॥

ಅಸತ್ಪ್ರತಿಗ್ರಹೇ ಸರ್ವಂ ದುರ್ದಾನಂ ಸಾಗರೇ ಕ್ಷಿಪೇತ್ ।
ಆಹೂಯ ದಾನಂ ಕರ್ತವ್ಯಮಾತ್ಮಭೋಗಸಮೃದ್ಧಯೇ ॥ ೭೭ ॥

ಪೃಷ್ಟಂ ಸರ್ವಂ ಸದಾ ದೇಯಮಾತ್ಮಶಕ್ತ್ಯನುಸಾರತಃ ।
ಜನ್ಮಾಂತರೇ ಋಣೀ ಹಿ ಸ್ಯಾದದತ್ತೇ ಪೃಷ್ಟವಸ್ತುನಿ ॥ ೭೮ ॥

ಪರೇಷಾಂ ಚ ತಥಾ ದೋಷಂ ನ ಪ್ರಶಂಸೇದ್ವಿಚಕ್ಷಣಃ ।
ವಿದ್ವೇಷೇಣ ತಥಾ ಬ್ರಹ್ಮನ್ ಶ್ರುತಂ ದೃಷ್ಟಂ ಚ ನೋ ವದೇತ್ ॥ ೭೯ ॥

ನ ವದೇತ್ಸರ್ವಜಂತೂನಾಂ ಹೃದಿ ರೋಷಕರಂ ಬುಧಃ ।
ಸಂಧ್ಯಯೋರಗ್ನಿಕಾರ್ಯಂ ಚ ಕುರ್ಯಾದೈಶ್ವರ್ಯಸಿದ್ಧಯೇ ॥ ೮೦ ॥

---

೭೬. ನ್ಯಾಯವಾಗಿ ದಾನವನ್ನು ತೆಗೆದುಕೊಂಡುದರಲ್ಲಿ ನಾಲ್ಕನೆಯ ಒಂದಂಶವನ್ನು ಬ್ರಾಹ್ಮಣನು ದಾನಮಾಡಬೇಕು. ಹಾಗೆಯೇ ಅಕಸ್ಮಾತ್ತು ಸಿಕ್ಕಿದ ಧನದಲ್ಲಿ ಅರ್ಧಭಾಗವನ್ನು ದಾನಮಾಡಬೇಕು.

೭೭. ದುರ್ದಾನವನ್ನು ತೆಗೆದುಕೊಂಡರೆ ಅದರ ಲಾಭವನ್ನೆಲ್ಲವನ್ನೂ ಸಮುದ್ರದಲ್ಲೆಸೆಯಬೇಕು. ತನ್ನ ಭೋಗದ ಅಭಿವೃದ್ಧಿಗಾಗಿ ಕರೆದು ದಾನವನ್ನು ಕೊಡಬೇಕು.

೭೮. ದರಿದ್ರನಾದವನು ಕೇಳಿದ ವಸ್ತುವೆಲ್ಲವನ್ನೂ ಸಹ ತನ್ನ ಶಕ್ತಿಗೆ ಅನುಸಾರವಾಗಿ ಕೊಡಬೇಕು. ಹಾಗೆ ಕೊಡದಿದ್ದವನು ಜನ್ಮಾಂತರದಲ್ಲಿ ಸಾಲಗಾರನಾಗುವನು.

೭೯. ತಿಳಿವಳಿಕೆಯುಳ್ಳವನು ಇನ್ನೊಬ್ಬರ ದೋಷವನ್ನು ಎತ್ತಿ ಆಡಬಾರದು. ವಿಶೇಷವಾಗಿ ಕೇಳಿದ ಮತ್ತು ನೋಡಿದಂತಹ ಇನ್ನೊಬ್ಬರ ದೋಷವನ್ನೂ ಸಹ ಹೇಳಬಾರದು.

೮೦. ಎಲ್ಲಾ ಪ್ರಾಣಿಗಳಿಗೂ ಕೋಪವನ್ನುಂಟುಮಾಡುವಂತೆ ಮಾತನಾಡಬಾರದು. ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿ ಅಗ್ನಿಕಾರ್ಯ, ಔಪಾಸನ ಮುಂತಾದುವುಗಳನ್ನು ಐಶ್ವರ್ಯಸಿದ್ಧಿಗಾಗಿ ಆಚರಿಸಬೇಕು.

ಅಶಕ್ತಸ್ತ್ವೇಕಕಾಲೇ ವಾ ಸೂರ್ಯಾಗ್ನೀ ಚ ಯಥಾವಿಧಿ ।
ತಂಡುಲಂ ಧಾನ್ಯಮಾಜ್ಯಂ ವಾ ಫಲಂ ಕಂದಂ ಹವಿಸ್ತಥಾ ॥ ೮೧ ॥

ಸ್ಥಾಲೀಪಾಕಂ ತಥಾ ಕುರ್ಯಾದ್ಯಥಾನ್ಯಾಯಂ ಯಥಾವಿಧಿ ।
ಪ್ರಧಾನಹೋಮಮಾತ್ರಂ ವಾ ಹವ್ಯಾಭಾವೇ ಸಮಾಚರೇತ್ ॥ ೮೨ ॥

ನಿತ್ಯಸಂಧಾನಮಿತ್ಯುಕ್ತಂ ತಮಜಸ್ರಂ ವಿದುರ್ಬುಧಾಃ ।
ಅಥವಾ ಜಪಮಾತ್ರಂ ವಾ ಸೂರ್ಯವಂದನಮೇವ ಚ ॥ ೮೩ ॥

ಏವಮಾತ್ಮಾರ್ಥಿನಃ ಕುರ್ಯುರರ್ಥಾರ್ಥೀ ಚ ಯಥಾವಿಧಿ ।
ಬ್ರಹ್ಮಯಜ್ಞರತಾ ನಿತ್ಯಂ ದೇವಪೂಜರತಾಸ್ತಥಾ ॥ ೮೪ ॥

---

೮೧. ಅಶಕ್ತನಾದವನು ಒಂದು ಕಾಲದಲ್ಲಿಯಾದರೂ ಸೂರ್ಯ ಮತ್ತು ಅಗ್ನಿಗಳನ್ನು ವಿಧಿವತ್ತಾಗಿ ತೃಪ್ತಿಪಡಿಸಬೇಕು.

೮೨. ಅಕ್ಕಿ, ಧಾನ್ಯ, ತುಪ್ಪ, ಫಲ, ಗೆಡ್ಡೆಗೆಣಸು ಮುಂತಾದವುಗಳನ್ನು ಸೂರ್ಯಾಗ್ನಿಗಳಿಗೆ ಅಗ್ನಿಯಮೂಲಕ ಹವಿಸ್ಸಾಗಿ ಅರ್ಪಿಸಬೇಕು. ಮತ್ತು ವಿಧಿವತ್ತಾಗಿ ಸ್ಥಾಲೀಪಾಕವೆಂಬ ಕರ್ಮವನ್ನು ಮಾಡಬೇಕು.

೮೩. ಎಲ್ಲಾ ಹವಿಸ್ಸುಗಳೂ ಸಿಕ್ಕದಿದ್ದರೆ ಪ್ರಧಾನ ಹೋಮವೊಂದನ್ನಾದರೂ ಮಾಡಬೇಕು, ಇದಕ್ಕೆ ನಿತ್ಯಕರ್ಮವೆಂದು ಹೆಸರು. ಇವುಗಳನ್ನು ನಿತ್ಯವೂ ಮಾಡಬೇಕೆಂದು ತಿಳಿದವರು ಹೇಳಿರುವರು. ಅಥವಾ ಸಂಧ್ಯಾಕಾಲದಲ್ಲಿ ಸೂರ್ಯವಂದನೆ ಜಪಗಳನ್ನಾದರೂ ಮಾಡಬೇಕು.

೮೪. ಈ ರೀತಿಯಾಗಿ ಆತ್ಮಸ್ವರೂಪವನ್ನಪೇಕ್ಷಿಸುವ ಮುಮುಕ್ಷುಗಳೂ, ಧನವನ್ನಪೇಕ್ಷಿಸುವ ಸಂಸಾರಿಗಳೂ ಸಹ ವಿಧಿಯಂತೆ ನಿತ್ಯಕರ್ಮವನ್ನು ಮಾಡಬೇಕು. ಬ್ರಹ್ಮಯಜ್ಞ (ವೇದಾಧ್ಯಯನ) ವನ್ನೂ ದೇವಪೂಜೆಯನ್ನೂ ನಿತ್ಯವೂ ಮಾಡಬೇಕು.

ಅಗ್ನಿಪೂಜಾಪರಾ ನಿತ್ಯಂ ಗುರುಪೂಜಾರತಾಸ್ತಥಾ ।
ಬ್ರಾಹ್ಮಣಾನಾಂ ತೃಪ್ತಿಕರಾಃ ಸರ್ವೇ ಸ್ವರ್ಗಸ್ಯ ಭಾಗಿನಃ ॥ ೮೫

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ತ್ರಯೋದಶೋಽಧ್ಯಾಯಃ.

---

೮೫. ನಿತ್ಯವೂ ಅಗ್ನಿಯನ್ನು ಪೂಜಿಸಬೇಕು. ಮತ್ತು ಗುರುಪೂಜೆಯನ್ನು ಮಾಡುತ್ತಾ ಬ್ರಾಹ್ಮಣರನ್ನು ಸಂತುಷ್ಟಿಪಡಿಸುತ್ತಲಿದ್ದರೆ ಅಂತವರು ಸ್ವರ್ಗವನ್ನು ಪಡೆಯುವರು.

ಇಲ್ಲಿಗೆ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಹದಿಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಚತುರ್ದಶೋಽಧ್ಯಾಯಃ

---

॥ ಋಷಯ ಊಚುಃ ॥

ಅಗ್ನಿಯಜ್ಞಂ ದೇವಯಜ್ಞಂ ಬ್ರಹ್ಮಯಜ್ಞಂ ತಥೈವ ಚ ।
ಗುರುಪೂಜಾಂ ಬ್ರಹ್ಮತೃಪ್ತಿಂ ಕ್ರಮೇಣ ಬ್ರೂಹಿ ನಃ ಪ್ರಭೋ ॥ ೧ ॥

॥ ಸೂತ ಉವಾಚ ॥

ಅಗ್ನೌ ಜುಹೋತಿ ಯದ್ದ್ರವ್ಯಮಗ್ನಿಯಜ್ಞಃ ಸ ಉಚ್ಯತೇ ।
ಬ್ರಹ್ಮಚರ್ಯಾಶ್ರಮಸ್ಥಾನಾಂ ಸಮಿದಾಧಾನಮೇವ ಹಿ ॥ ೨ ॥

---

### ಹದಿನಾಲ್ಕನೆಯ ಅಧ್ಯಾಯವು.

೧. ಋಷಿಗಳು ಕೇಳಿದರು :—ಎಲೈ ಪೂಜ್ಯನೇ ಅಗ್ನಿಯಜ್ಞ, ಬ್ರಹ್ಮಯಜ್ಞ, ಗುರುಪೂಜೆ, ಬ್ರಾಹ್ಮಣ ಸಂತುಷ್ಟಿ ಇವುಗಳನ್ನು ಕ್ರಮವಾಗಿ ನಮಗೆ ವಿವರಿಸಿ ಹೇಳು ಎಂದು ಕೇಳಿದರು.

೨ ಸೂತಮುನಿಯು ಹೇಳಿದನು :—ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡುವುದು ಅಗ್ನಿಯಜ್ಞವು. ಬ್ರಹ್ಮಚಾರಿಗಳಿಗೆ ಅಗ್ನಿಯಲ್ಲಿ ಸಮಿತ್ತುಗಳನ್ನ ರ್ಪಿಸುವುದೇ (ಅಗ್ನಿಕಾರ್ಯವೇ) ಅಗ್ನಿಯಜ್ಞವು.

ಸಮಿದಗ್ನೌ ವ್ರತಾದ್ಯಂ ಚ ವಿಶೇಷಯಜನಾದಿಕಂ ।
ಪ್ರಥಮಾಶ್ರಮಿಣಾಮೇವಂ ಯಾವದೌಪಾಸನಂ ದ್ವಿಜಾಃ ॥ ೩ ॥

ಆತ್ಮನ್ಯಾರೋಪಿತಾಗ್ನೀನಾಂ ವನಿನಾಂ ಯತಿನಾಂ ದ್ವಿಜಾಃ ।
ಹಿತಂ ಚ ಮಿತಮೇಧ್ಯಾನ್ನಂ ಸ್ವಕಾಲೇ ಭೋಜನಂ ಹುತಿಃ ॥ ೪ ॥

ಔಪಾಸನಾಗ್ನಿಸಂಧಾನಂ ಸಮಾರಭ್ಯ ಸುರಕ್ಷಿತಂ ।
ಕುಂಡೇ ವಾಪ್ಯಥ ಭಾಂಡೇ ವಾ ತದಜಸ್ರಂ ಸಮೀರಿತಂ ॥ ೫ ॥

ಅಗ್ನಿಮಾತ್ಮನ್ಯರಣ್ಯಾಂ ವಾ ರಾಜದೈವವಶಾದ್ಧ್ರುವಂ ।
ಅಗ್ನಿತ್ಯಾಗಭಯಾದುಕ್ತಂ ಸಮಾರೋಪಿತಮುಚ್ಯತೇ ॥ ೬ ॥

ಸಂಪತ್ಕರೀ ತಥಾ ಜ್ಞೇಯಾ ಸಾಯಮಗ್ನ್ಯಾಹುತಿರ್ದ್ವಿಜಾಃ ।
ಆಯುಷ್ಕರೀತಿ ವಿಜ್ಞೇಯಾ ಪ್ರಾತಃ ಸೂರ್ಯಾಹುತಿಸ್ತಥಾ ॥ ೭ ॥

---

೩. ಅಗ್ನಿಯಲ್ಲಿ ಸಮಿತ್ತನ್ನರ್ಪಿಸುವುದು, ವ್ರತ ಮುಂತಾದುವುಗಳು, ವಿಶೇಷವಾದ ಜ್ಯೋತಿಷ್ಟೋಮ ಮುಂತಾದ ಯಾಗವನ್ನು ಮಾಡುವುದು, ಔಪಾಸನ, ಇವುಗಳು, ಗೃಹಸ್ಥಾಶ್ರಮಿಗಳಿಗೆ ಹೇಳಿದ ಅಗ್ನಿಯಜ್ಞಗಳು.

೪. ತಮ್ಮಲ್ಲಿಯೇ ಅಗ್ನಿಯನ್ನು ಆರೋಪಿಸಿಕೊಂಡಿರುವ ಎಂದರೆ ಅಗ್ನಿಯನ್ನು ಆತ್ಮಸಮಾರೋಪಣೆಮಾಡಿಕೊಂಡಿರುವ ವಾನಪ್ರಸ್ಥರು ಮತ್ತು ಸನ್ಯಾಸಿಗಳಿಗೆ ಯುಕ್ತವಾದ ಕಾಲದಲ್ಲಿ ಹಿತವೂ, ಪರಿಮಿತವೂ, ಪರಿಶುದ್ಧವೂ ಆದಂತಹ ಅನ್ನವನ್ನು ಭೋಜನಮಾಡುವುದೇ ಅಗ್ನಿಯಜ್ಞವು.

೫. ಗೃಹಸ್ಥನಾದವನು ಔಪಾಸನ ಮತ್ತು ಅಗ್ನಿಹೋತ್ರಗಳನ್ನು ಪ್ರಾರಂಭಿಸಿ ಆ ಅಗ್ನಿಯನ್ನು ಕುಂಡ ಅಥವಾ ಮಡಕೆಯಲ್ಲಿಟ್ಟು ಸದಾ ರಕ್ಷಿಸಬೇಕು.

೬. ರಾಜ ಮತ್ತು ದೈವ ಇವುಗಳಿಂದ ಅಗ್ನಿಯು ನಾಶವಾಗಬಹುದೆಂಬ ಭಯವು ಉಂಟಾದ ಸಂದರ್ಭನಲ್ಲಿ ಅಗ್ನಿಯನ್ನು ಆತ್ಮಸ್ವರೂಪದಲ್ಲಿಯೂ ಅರಣಿ ಎಂದರೆ ಅಗ್ನಿಯನ್ನು ಕಡೆಯುವ ಶಮೀದಂಡದಲ್ಲಿಯೂ ಆರೋಪಿಸಬೇಕೆಂದು ಹೇಳಿರುವುದು.

೭. ಸಾಯಂಕಾಲ ಅಗ್ನಿಯಲ್ಲಿ ಸಮರ್ಪಿಸಿದ ಆಹುತಿಯು ಸಂಪತ್ತನ್ನುಂಟು ಮಾಡುವುದು. ಪ್ರಾತಃಕಾಲ ಅಗ್ನಿಯಲ್ಲಿ ಸೂರ್ಯನಿಗರ್ಪಿಸಿದ ಆಹುತಿಯು ಆಯುಸ್ಸನ್ನುಂಟುಮಾಡುವುದು.

ಅಗ್ನಿಯಜ್ಞೋ ಹ್ಯಯಂ ಪ್ರೋಕ್ತೋ ದಿವಾ ಸೂರ್ಯನಿವೇಶನಾತ್ ।
ಇಂದ್ರಾದೀನ್ ಸಕಲಾನ್ ದೇವಾನುದ್ದಿಶ್ಯಾಗ್ನೌ ಜುಹೋತಿ ಯತ್ ॥ ೮ ॥

ದೇವಯಜ್ಞಂ ಹಿ ತಂ ವಿದ್ಯಾತ್ ಸ್ಥಾಲಿಪಾಕಾದಿಕಾನ್ ಕ್ರತೂನ್ ।
ಚೌಲಾದಿಕಂ ತಥಾ ಜ್ಞೇಯಂ ಲೌಕಿಕಾಗ್ನೌ ಪ್ರತಿಷ್ಠಿತಂ ॥ ೯ ॥

ಬ್ರಹ್ಮಯಜ್ಞಂ ದ್ವಿಜಃ ಕುರ್ಯಾದ್ದೇವಾನಾಂ ತೃಪ್ತಯೇ ಸಕೃತ್
ಬ್ರಹ್ಮಯಜ್ಞ ಇತಿ ಪ್ರೋಕ್ತೋ ವೇದಸ್ಯಾಧ್ಯಯನಂ ಭವೇತ್ ॥ ೧೦ ॥

ನಿತ್ಯಾನಂತರಮಾಸಾಯಂ ತತಸ್ತು ನ ವಿಧೀಯತೇ ।
ಅನಗ್ನೌ ದೇವಯಜನಂ ಶೃಣುತ ಶ್ರದ್ಧಯಾದರಾತ್ ॥ ೧೧ ॥

ಆದಿಸೃಷ್ಟೌ ಮಹಾದೇವಃ ಸರ್ವಜ್ಞಃ ಕರುಣಾಕರಃ ।
ಸರ್ವಲೋಕೋಪಕಾರಾರ್ಥಂ ವಾರಾನ್ ಕಲ್ಪಿತವಾನ್ ಪ್ರಭುಃ ॥ ೧೨ ॥

---

೮. ಹಗಲು ಸೂರ್ಯನಿರುವುದರಿಂದ ಅವನನ್ನುದ್ದೇಶಿಸಿ ಅಗ್ನಿಯಲ್ಲಿ ಹವಿಸ್ಸ ರ್ಪಿಸಿದರೆ ಅದೇ ಅಗ್ನಿಯಜ್ಞವು.

೯. ಇಂದ್ರನೇ ಮೊದಲಾದ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮ ಮಾಡುವಂತಹ "ಸ್ಥಾಲೀಪಾಕ" ಮುಂತಾದ ಕರ್ಮಗಳಿಗೆ ದೇವಯಜ್ಞವೆಂದು ಹೆಸರು. ಚೂಡಾಕರ್ಮ ಮುಂತಾದುವು ಲೌಕಿಕಾಗ್ನಿಯಲ್ಲಿ ಮಾಡುವಂತಹ ಕರ್ಮಗಳು.

೧೦. ದ್ವಿಜನು ನಿತ್ಯವೂ ಒಂದು ಬಾರಿ ಬ್ರಹ್ಮಯಜ್ಞವನ್ನು ದೇವತೆಗಳ ಪ್ರೀತಿಗಾಗಿ ಮಾಡಬೇಕು. ವೇದಾಧ್ಯಯನಕ್ಕೆ ಬ್ರಹ್ಮಯಜ್ಞವೆಂದು ಹೆಸರು.

೧೧. ನಿತ್ಯಕರ್ಮವನ್ನು ಮಾಡಿದ ಮೇಲೆ ಸಾಯಂಕಾಲದವರೆಗೂ ವೇದಾ ಧ್ಯಯನವನ್ನು ಮಾಡಬೇಕು. ಸಾಯಂಕಾಲದ ಮೇಲೆ ಮಾಡಬಾರದು. ಅಗ್ನಿ ಯಲ್ಲದೆ ಬೇರೆಡೆಯಲ್ಲಿ ಮಾಡುವಂತಹ ದೇವಯಜನ ವಿಧಿಯನ್ನು ಹೇಳುವೆನು. ಆದರದಿಂದಲೂ ಶ್ರದ್ಧೆಯಿಂದಲೂ ಕೇಳಿ.

೧೨. ಸರ್ವಜ್ಞನೂ ದಯಾಮಯನೂ ಜಗದೊಡೆಯನೂ ಆದಂತಹ ಮಹಾದೇವನು ಆದಿಸೃಷ್ಟಿಯಲ್ಲಿ ಸಕಲ ಲೋಕಗಳ ಉಪಕಾರಕ್ಕಾಗಿ ವಾರಗಳನ್ನು ಕಲ್ಪಿಸಿದನು.

ಸಂಸಾರವೈದ್ಯಃ ಸರ್ವಜ್ಞಃ ಸರ್ವಭೇಷಜಭೇಷಜಂ ।
ಆದಾವಾರೋಗ್ಯದಂ ವಾರಂ ಸ್ವವಾರಂ ಕೃತವಾನ್ ಪ್ರಭುಃ ॥ ೧೩ ॥

ಸಂಪತ್ಕರಂ ಸ್ವಮಾಯಾಯಾ ವಾರಂ ಚ ಕೃತವಾಂಸ್ತತಃ ।
ಜನನೇ ದುರ್ಗತಿಕ್ರಾಂತೇ ಕುಮಾರಸ್ಯ ತತಃ ಪರಂ ॥ ೧೪ ॥

ಆಲಸ್ಯದುರಿತಕ್ರಾಂತ್ಯೈ ವಾರಂ ಕಲ್ಪಿತವಾನ್ ಪ್ರಭುಃ ।
ರಕ್ಷಕಸ್ಯ ತಥಾ ವಿಷ್ಣೋರ್ಲೋಕಾನಾಂ ಹಿತಕಾಮ್ಯಯಾ ॥ ೧೫ ॥

ಪುಷ್ಟ್ಯರ್ಥಂ ಚೈವ ರಕ್ಷಾರ್ಥಂ ವಾರಂ ಕಲ್ಪಿತವಾನ್ ಪ್ರಭುಃ ।
ಆಯುಷ್ಕರಂ ತತೋ ವಾರಮಾಯುಷಾಂ ಕರ್ತುರೇವ ಚ ॥ ೧೬ ॥

ತ್ರೈಲೋಕ್ಯಸೃಷ್ಟಿಕರ್ತುರ್ಹಿ ಬ್ರಹ್ಮಣಃ ಪರಮೇಷ್ಠಿನಃ ।
ಜಗದಾಯುಷ್ಯಸಿದ್ಧ್ಯರ್ಥಂ ವಾರಂ ಕಲ್ಪಿತವಾನ್ ಪ್ರಭುಃ ॥ ೧೭ ॥

---

೧೩. ಸಂಸಾರಬಂಧವನ್ನು ಹೋಗಲಾಡಿಸುವ ಮಹಾವೈದ್ಯನೂ, ಸರ್ವಜ್ಞನೂ ಆದ ಆ ಮಹಾದೇವನು ಮೊದಲು ಸಕಲ ಔಷಧಿಗಳಿಗೂ ಔಷಧಿಯಾದುದೂ, ಆರೋಗ್ಯಪ್ರದವೂ ಆದಂತಹ ಭಾನುವಾರವನ್ನು ಕಲ್ಪಿಸಿದನು.

೧೪. ಆಮೇಲೆ ಸಂಪತ್ಕರವೂ, ಸೃಷ್ಟಿಗನುಕೂಲವೂ, ಕಷ್ಟವನ್ನು ಹೋಗಲಾಡಿಸುವುದೂ ಆದಂತಹ ತನ್ನ ಮಾಯೆಯವಾರ ಎಂದರೆ ಸೋಮವಾರವನ್ನು ಕಲ್ಪಿಸಿದನು. ಬಳಿಕ ಆಲಸ್ಯ ಪಾಪ ಇವುಗಳನ್ನು ಹೋಗಲಾಡಿಸುವಂತಹ ಷಣ್ಮುಖನ ವಾರವನ್ನು (ಮಂಗಳವಾರವನ್ನು) ಕಲ್ಪಿಸಿದನು.

೧೫. ಆಮೇಲೆ ಜಗತ್ತನ್ನು ರಕ್ಷಿಸುವ ವಿಷ್ಣುವಿನ ವಾರವನ್ನು (ಬುಧವಾರವನ್ನು) ಲೋಕಗಳ ಕ್ಷೇಮ, ಪುಷ್ಟಿ, ರಕ್ಷಣೆ, ಇವುಗಳಿಗಾಗಿ ಕಲ್ಪಿಸಿದನು.

೧೬-೧೭. ಅನಂತರ ಆಯುಸ್ಸನ್ನುಂಟುಮಾಡುವವನೂ, ಮೂರು ಲೋಕಗಳನ್ನು ಸೃಷ್ಟಿಸುವವನೂ ಆದಂತಹ ಬ್ರಹ್ಮನ ಆಯುಷ್ಕರವಾದಂತಹ ಗುರುವಾರವನ್ನು ಜನಗಳಿಗೆ ಆಯುಸ್ಸು ಸಿದ್ಧಿಸಲೋಸುಗ ಕಲ್ಪಿಸಿದನು.

ಆದೌ ತ್ರೈಲೋಕ್ಯವೃದ್ಧ್ಯರ್ಥಂ ಪುಣ್ಯಪಾಪೇ ಪ್ರಕಲ್ಪಿತೇ ।
ತಯೋಃ ಕರ್ತ್ರೋಸ್ತತೋ ವಾರಮಿಂದ್ರಸ್ಯ ಚ ಯಮಸ್ಯ ಚ ॥ ೧೮ ॥

ಭೋಗಪ್ರದಂ ಮೃತ್ಯುಹರಂ ಲೋಕಾನಾಂ ಚ ಪ್ರಕಲ್ಪಿತಂ ।
ಆದಿತ್ಯಾದೀನ್ ಸ್ವಸ್ವರೂಪಾನ್ ಸುಖದುಃಖಸ್ಯ ಸೂಚಕಾನ್ ॥ ೧೯ ॥

ವಾರೇಶಾನ್ ಕಲ್ಪಯಿತ್ವಾದೌ ಜ್ಯೋತಿಶ್ಚಕ್ರೇ ಪ್ರತಿಷ್ಠಿತಾನ್ ।
ಸ್ವಸ್ವವಾರೇ ತು ತೇಷಾಂ ತು ಪೂಜಾ ಸ್ವಸ್ವಫಲಪ್ರದಾ ॥ ೨೦ ॥

ಆರೋಗ್ಯಂ ಸಂಪದಶ್ಚೈವ ವ್ಯಾಧೀನಾಂ ಶಾಂತಿರೇವ ಚ ।
ಪುಷ್ಟಿರಾಯುಸ್ತಥಾ ಭೋಗೋ ಮೃತೇರ್ಹಾನಿರ್ಯಥಾಕ್ರಮಂ ॥ ೨೧ ॥

ವಾರಕ್ರಮಫಲಂ ಪ್ರಾಹುರ್ದೇವಪ್ರೀತಿಪುರಸ್ಸರಂ ।
ಅನ್ಯೇಷಾಮಪಿ ದೇವಾನಾಂ ಪೂಜಾಯಾಃ ಫಲದಃ ಶಿವಃ ॥ ೨೨ ॥

---

೧೮. ಸೃಷ್ಟ್ಯಾದಿಯಲ್ಲಿ ಮೂರು ಲೋಕಗಳು ಅಭಿವೃದ್ಧಿಗೊಳ್ಳಲು ಪುಣ್ಯ ಮತ್ತು ಪಾಪಗಳು ಕಲ್ಪಿಸಲ್ಪಟ್ಟವು. ಆ ಪುಣ್ಯಪಾಪಗಳಿಗೆ ಕರ್ತೃಗಳಾದ ಇಂದ್ರ ಮತ್ತು ಯಮ ಇವರ ಶುಕ್ರ ಮತ್ತು ಶನಿ ಎಂಬ ವಾರಗಳೆರಡನ್ನು ಶಿವನು ಆಮೇಲೆ ಕಲ್ಪಿಸಿದನು. ಜನಗಳಿಗೆ ಭೋಗವು ಲಭಿಸುವುದಕ್ಕಾಗಿಯೂ, ಮೃತ್ಯುವು ನಾಶವಾಗುವುದಕ್ಕಾಗಿಯೂ ಆ ಎರಡು ವಾರಗಳು ಕಲ್ಪಿತವಾದವು.

೧೯. ಆಮೇಲೆ ಶಿವನು ತನ್ನ ಸ್ವರೂಪರಾದಂತಹ ಆದಿತ್ಯ ಮೊದಲಾದವರನ್ನು ಜನಗಳ ಸುಖದುಃಖಗಳನ್ನು ಸೂಚಿಸುವ ವಾರಾಧಿಪತಿಗಳನ್ನಾಗಿಮಾಡಿ ಜ್ಯೋತಿರ್ಮಂಡಲ (ಗ್ರಹಮಂಡಲ) ದಲ್ಲಿ ಪ್ರತಿಷ್ಠಿಸಿದನು.

೨೦. ಆದಿತ್ಯಾದಿಗಳ ವಾರದಲ್ಲಿ ಆಯಾಯ ಗ್ರಹಗಳನ್ನು ಪೂಜಿಸಿದರೆ ಆಯಾಯ ಗ್ರಹಗಳಿಂದಾಗುವ ಫಲವು ಲಭಿಸುವುದು.

೨೧. ಆದಿತ್ಯನೇ ಮೊದಲಾದ ವಾರದೇವತೆಗಳನ್ನು ಆಯಾಯ ವಾರಗಳಲ್ಲಿ ಪೂಜಿಸಿ ಪ್ರೀತಿಗೊಳಿಸಿದರೆ ಕ್ರಮವಾಗಿ ಆರೋಗ್ಯ, ಸಂಪತ್ತು, ರೋಗನಿವೃತ್ತಿ, ಪುಷ್ಟಿ, ಆಯುಸ್ಸು, ಭೋಗ, ಮೃತ್ಯುನಾಶ, ಈ ಏಳು ಫಲಗಳು ಲಭಿಸುವವು.

೨೨. ಎಲ್ಲ ದೇವತೆಗಳ ಪೂಜೆಗೂ ಫಲವನ್ನು ಕೊಡುವವನು ಶಿವನೇ ಆಗಿರುವನು.

ದೇವಾನಾಂ ಪ್ರೀತಯೇ ಪೂಜಾ ಪಂಚಧೈವ ಪ್ರಕಲ್ಪಿತಾ ।
ತತ್ತನ್ಮಂತ್ರಜಪೋ ದಾನಂ ಹೋಮಶ್ಚೈವ ತಪಸ್ತಥಾ ॥ ೨೩ ॥

ಸ್ಥಂಡಿಲೇ ಪ್ರತಿಮಾಯಾಂ ಚ ಹ್ಯಗ್ನೌ ಬ್ರಾಹ್ಮಣವಿಗ್ರಹೇ ।
ಸಮಾರಾಧನಮಿತ್ಯೇವಂ ಷೋಡಶೈರುಪಚಾರಕೈಃ ॥ ೨೪ ॥

ಉತ್ತರೋತ್ತರವೈಶಿಷ್ಟ್ಯಾತ್ಪೂರ್ವಾಭಾವೇ ತಥೋತ್ತರಂ ।
ನೇತ್ರಯೋಃ ಶಿರಸೋ ರೋಗೇ ತಥಾ ಕುಷ್ಠಸ್ಯ ಶಾಂತಯೇ ॥ ೨೫ ॥

ಆದಿತ್ಯಂ ಪೂಜಯಿತ್ವಾ ತು ಬ್ರಾಹ್ಮಣಾನ್ ಭೋಜಯೇತ್ತತಃ ।
ದಿನಂ ಮಾಸಂ ತಥಾ ವರ್ಷಂ ವರ್ಷತ್ರಯಮಥಾಪಿ ವಾ ॥ ೨೬ ॥

ಪ್ರಾರಬ್ಧಂ ಪ್ರಬಲಂ ಚೇತ್ಸ್ಯಾನ್ನಶ್ಯೇದ್ರೋಗಜರಾದಿಕಂ ।
ಜಪಾದ್ಯಮಿಷ್ಟದೇವಸ್ಯ ವಾರಾದೀನಾಂ ಫಲಂ ವಿದುಃ ॥ ೨೭ ॥

---

೨೩-೨೪. ದೇವತೆಗಳ ಪೂಜೆಯು ಐದು ವಿಧವಾಗಿರುವುದು ಅದು ಹೇಗೆಂದರೆ:—ಆಯಾಯ ದೇವತೆಗಳ ಮಂತ್ರ, ಜಪ, ಹೋಮ, ದಾನ, ತಪಸ್ಸು ಸ್ಥಂಡಿಲ, ವಿಗ್ರಹ, ಅಗ್ನಿ, ಬ್ರಾಹ್ಮಣ ಇವರುಗಳಲ್ಲಿ ಹದಿನಾರು ಉಪಚಾರಗಳಿಂದ ಆ ದೇವತೆಗಳ ಸಮಾರಾಧನೆ ಇವೇ ಐದು ವಿಧವಾದ ಪೂಜೆಗಳು. ಈ ಐದು ವಿಧಗಳಲ್ಲಿ ಹಿಂದಿನಕ್ಕಿಂತಲೂ ಮುಂದಿನದು ಶ್ರೇಷ್ಠವಾದುದು.

೨೫. ನೇತ್ರರೋಗ, ಶಿರಸ್ಸಿನರೋಗ, ಕುಷ್ಠ, ಇವುಗಳು ನಾಶವಾಗಲು ಆದಿತ್ಯನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೨೬-೨೭. ಪ್ರಾರಬ್ಧಕರ್ಮವು ಪ್ರಬಲವಾಗಿದ್ದರೆ ಒಂದು ದಿನ ಮಾಸಪರ್ಯಂತ, ಇಲ್ಲವೇ ಒಂದು ವರ್ಷ, ಇಲ್ಲವೆ ಮೂರು ವರ್ಷ ಪರ್ಯಂತ ಆದಿತ್ಯನನ್ನು ಪೂಜಿಸಬೇಕು. ಇಷ್ಟದೇವತೆಗಳ ಜಪ ಮುಂತಾದುವುಗಳನ್ನು ಆಯಾಯ ವಾರಗಳಲ್ಲಿ ಮಾಡಿದರೆ ಆಯಾಯ ಫಲಗಳು ಲಭಿಸುವುವು.

ಪಾಪಶಾಂತಿರ್ವಿಶೇಷೇಣ ಹ್ಯಾದಿವಾರೋ ನಿವೇದಯೇತ್ ।
ಆದಿತ್ಯಸ್ಯೈವ ದೇವಾನಾಂ ಬ್ರಾಹ್ಮಣಾನಾಂ ವಿಶಿಷ್ಟದಂ ॥ ೨೮ ॥

ಸೋಮವಾರೇ ಚ ಲಕ್ಷ್ಮ್ಯಾದೀನ್ ಸಂಪದರ್ಥಂ ಯಜೇದ್ಬುಧಃ ।
ಆಜ್ಯಾನ್ನೇನ ತಥಾ ವಿಪ್ರಾನ್ ಸಪತ್ನೀಕಾಂಶ್ಚ ಭೋಜಯೇತ್ ॥ ೨೯ ॥

ಕಾಲ್ಯಾದೀನ್ ಭೌಮವಾರೇ ತು ಯಜೇದ್ರೋಗಪ್ರಶಾಂತಯೇ ।
ಮಾಷಮುದ್ಗಾಢಕಾನ್ನೇನ ಬ್ರಾಹ್ಮಣಾಂಶ್ಚೈವ ಭೋಜಯೇತ್ ॥ ೩೦ ॥

ಸೌಮ್ಯವಾರೇ ತಥಾ ವಿಷ್ಣುಂ ದಧ್ಯನ್ನೇನ ಯಜೇದ್ಬುಧಃ ।
ಪುತ್ರಮಿತ್ರಕಲತ್ರಾದಿಪುಷ್ಟಿರ್ಭವತಿ ಸರ್ವದಾ ॥ ೩೧ ॥

ಆಯುಷ್ಕಾಮೋ ಗುರುವಾರೇ ದೇವಾನಾಂ ಪುಷ್ಟಿಸಿದ್ಧಯೇ ।
ಉಪವೀತೇನ ವಸ್ತ್ರೇಣ ಕ್ಷೀರಾಜ್ಯೇನ ಯಜೇದ್ಬುಧಃ ॥ ೩೨ ॥

---

೨೮. ಮೊದಲನೆಯದಾದ ಆದಿತ್ಯವಾರವು ಪಾಪಶಾಂತಿಯನ್ನುಂಟುಮಾಡುವುದು. ಆದಿತ್ಯವಾರವೇ ಬ್ರಾಹ್ಮಣರಿಗೂ ದೇವತೆಗಳಿಗೂ ಪ್ರಶಸ್ತವಾದುದು.

೨೯. ಸೋಮವಾರದಲ್ಲಿ ಸಂಪತ್ತು ಅಭಿವೃದ್ಧಿಯಾಗಲು ಲಕ್ಷ್ಮೀ ಮುಂತಾದ ದೇವತೆಯರನ್ನು ಪೂಜಿಸಬೇಕು ಮತ್ತು ಆಜ್ಯಾನ್ನ (ತುಪ್ಪನ್ನ) ದಿಂದ ಬ್ರಾಹ್ಮಣ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು.

೩೦. ಮಂಗಳವಾರದಲ್ಲಿ ರೋಗನಾಶವಾಗಲೋಸುಗ ಕಾಳೀ ಮುಂತಾದ ದೇವತೆಯರನ್ನರ್ಚಿಸಬೇಕು. ಉದ್ದು, ಹೆಸರು, ತೊಗರಿ ಇವುಗಳಿಂದ ಮಿಶ್ರವಾದ ಅನ್ನ (ಪಂಗಲು) ದಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೩೧. ಬುಧವಾರದಲ್ಲಿ ಮೊಸರನ್ನದಿಂದ ವಿಷ್ಣುವನ್ನರ್ಚಿಸಬೇಕು. ಪುತ್ರ, ಮಿತ್ರ, ಪತ್ನೀ ಇವರುಗಳಿಗೆ ಸದಾ ಪುಷ್ಟಿಯು ಆಗುವುದು.

೩೨. ಆಯುಸ್ಸನ್ನಪೇಕ್ಷಿಸುವವನು ಗುರುವಾರದಲ್ಲಿ ಉಪವೀತ, ವಸ್ತ್ರ, ತುಪ್ಪ ಹಾಲು ಇವುಗಳಿಂದ ದೇವತೆಗಳನ್ನರ್ಪಿಸಿ ಸಂತೋಷಗೊಳಿಸಬೇಕು.

ಭೋಗಾರ್ಥಂ ಭೃಗುವಾರೇ ತು ಯಜೇದ್ದೇವಾನ್ ಸಮಾಹಿತಃ ।
ಷಡ್ರಸೋಪೇತಮನ್ನಂ ಚ ದದ್ಯಾದ್ಬ್ರಾಹ್ಮಣತೃಪ್ತಯೇ ॥ ೩೩ ॥

ಸ್ತ್ರೀಣಾಂ ಚ ತೃಪ್ತಯೇ ತದ್ವದ್ದೇಯಂ ವಸ್ತ್ರಾದಿಕಂ ಶುಭಂ ।
ಅಪಮೃತ್ಯುಹರೇ ಮಂದೇ ರುದ್ರಾದೀಂಶ್ಚ ಯಜೇದ್ಬುಧಃ ॥ ೩೪ ॥

ತಿಲಹೋಮೇನ ದಾನೇನ ತಿಲಾನ್ನೇನ ಚ ಭೋಜಯೇತ್ ।
ಇತ್ಥಂ ಯಜೇಚ್ಚ ವಿಬುಧಾನಾರೋಗ್ಯಾದಿಫಲಂ ಲಭೇತ್ ॥ ೩೫ ॥

ದೇವಾನಾಂ ನಿತ್ಯಯಜನೇ ವಿಶೇಷಯಜನೇಽಪಿ ಚ ।
ಸ್ನಾನೇ ದಾನೇ ಜಪೇ ಹೋಮೇ ಬ್ರಾಹ್ಮಣಾನಾಂ ಚ ತರ್ಪಣೇ ॥ ೩೬ ॥

ಆದಿವಾರಾದಿವಾರೇಷು ಸರ್ವಜ್ಞೋ ಜಗದೀಶ್ವರಃ ।
ತಿಥಿನಕ್ಷತ್ರಯೋಗೇ ಚ ತತ್ತದ್ದೇವಪ್ರಪೂಜನೇ ॥ ೩೭ ॥

---

೩೩. ಸುಖವನ್ನು ಅನುಭವಿಸುವುದಕ್ಕಾಗಿ ಶುಕ್ರವಾರದಲ್ಲಿ ದೇವತೆಗಳನ್ನು ವಿಧಿವತ್ತಾಗಿ ಅರ್ಚಿಸಬೇಕು. ಷಡ್ರಸ (ಆರುರಸ) ಗಳಿಂದ ಕೂಡಿದ ಮೃಷ್ಟಾನ್ನ ದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ಸ್ತ್ರೀಯರಿಗೂ ಸಹ ವಸ್ತ್ರ (ಸೀರೆ) ಮುಂತಾದ ಮಂಗಳವಸ್ತುಗಳನ್ನು ಕೊಟ್ಟು ಅವರನ್ನು ಸಂತೋಷಗೊಳಿಸಬೇಕು.

೩೪-೩೫. ಅಪಮೃತ್ಯು (ಅಕಾಲಮೃತ್ಯು) ವನ್ನು ಹೋಗಲಾಡಿಸುವಂತಹ ಶನಿವಾರದಲ್ಲಿ ತಿಲಹೋಮದಿಂದಲೂ, ದಾನದಿಂದಲೂ ರುದ್ರ ಮೊದಲಾದ ದೇವತೆ ಗಳನ್ನರ್ಚಿಸಬೇಕು. ತಿಲಾನ್ನ (ಎಳ್ಳನ್ನ) ದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸ ಬೇಕು. ಈರೀತಿಯಾಗಿ ಆಯಾಯ ವಾರಗಳಲ್ಲಿ ದೇವತೆಗಳನ್ನರ್ಚಿಸಿದರೆ ಆರೋಗ್ಯ ಮೊದಲಾದ ಫಲವು ಲಭಿಸುವುದು.

೩೬-೩೭. ನಿತ್ಯವೂ ಮಾಡುವ ದೇವಪೂಜೆ, ನವರಾತ್ರಿ ಮುಂತಾದುವುಗಳಲ್ಲಿ ಮಾಡುವ ವಿಶೇಷ ಪೂಜೆ, ತೀರ್ಥಸ್ನಾನ, ದಾನ, ಜಪ, ಹೋಮ, ಬ್ರಾಹ್ಮಣ ಸಂತರ್ಪಣೆ, ತಿಥಿಯೋಗ, ನಕ್ಷತ್ರಯೋಗ, ಆದಿತ್ಯವಾರ ಮೊದಲಾದ ವಾರಗಳಲ್ಲಿ ಮಾಡುವ ಆಯಾಯ ದೇವತೆಗಳ ಪೂಜೆ, ಇವುಗಳಲ್ಲಿ ಸರ್ವಜ್ಞನಾದ ಪರಮೇಶ್ವರನೇ ಎಲ್ಲರಿಗೂ ಆಯಾಯ ದೇವತಾರೂಪದಿಂದ ಆರೋಗ್ಯವೇ ಮುಂತಾದ ಫಲಗಳನ್ನು ಕೊಡುವನು.

ತತ್ತದ್ರೂಪೇಣ ಸರ್ವೇಷಾಮಾರೋಗ್ಯಾದಿಫಲಪ್ರದಃ ।
ದೇಶಕಾಲಾನುಸಾರೇಣ ತಥಾ ಪಾತ್ರಾನುಸಾರತಃ । ॥ ೩೮ ॥

ದ್ರವ್ಯಂಶ್ರದ್ಧಾನುಸಾರೇಣ ತಥಾ ಲೋಕಾನುಸಾರತಃ ।
ತಾರತಮ್ಯಕ್ರಮಾದ್ದೇವಸ್ತ್ವಾರೋಗ್ಯಾದೀನ್ ಪ್ರಯಚ್ಛತಿ ॥ ೩೯ ॥

ಶುಭಾದಾವಶುಭಾಂತೇ ಚ ಜನ್ಮರ್ಕ್ಷೇಷು ಗೃಹೇ ಗೃಹೀ ।
ಆರೋಗ್ಯಾದಿಸಮೃದ್ಧ್ಯರ್ಥಮಾದಿತ್ಯಾದೀನ್ ಗ್ರಹಾನ್ ಯಜೇತ್ ॥ ೪೦ ॥

ತಸ್ಮಾದ್ವೈ ದೇವಯಜನಂ ಸರ್ವಾಭೀಷ್ಟಫಲಪ್ರದಂ ।
ಸಮಂತ್ರಕಂ ಬ್ರಾಹ್ಮಣಾನಾಮನ್ಯೇಷಾಂ ಚೈವ ತಾಂತ್ರಿಕಂ ॥ ೪೧ ॥

ಯಥಾಶಕ್ತ್ಯನುಸಾರೇಣ ಕರ್ತವ್ಯಂ ಸರ್ವದಾ ನರೈಃ ।
ಸಪ್ತಸ್ವಪಿ ಚ ವಾರೇಷು ನರೈಃ ಶುಭಫಲೇಪ್ಸುಭಿಃ ॥ ೪೨ ॥

---

೩೮-೩೯. ದೇಶಕಾಲಗಳಿಗನುಸಾರವಾಗಿಯೂ ಫಲಕ್ಕೆ ಯೋಗ್ಯನಾದವನ ಯೋಗ್ಯತೆಗನುಸಾರವಾಗಿಯೂ ತಾರತಮ್ಯತೆಯಿಂದ ಅವರವರಿಗೆ ಆಯಾಯ ಫಲಗಳನ್ನು ಸರ್ವಜ್ಞನಾದ ಈಶ್ವರನು ಕೊಡುವನು.

೪೦. ಶುಭಕರ್ಮದ ಆದಿಯಲ್ಲೂ, ಅಶುಭ (ಮೃತಸಂಸ್ಕಾರ)ಕರ್ಮದ ಕೊನೆಯಲ್ಲಿಯೂ, ಜನ್ಮನಕ್ಷತ್ರದಲ್ಲಿಯೂ ಸಹ ಗೃಹಸ್ಥನು ಆರೋಗ್ಯ ಮುಂತಾದ ಫಲಗಳಿಗಾಗಿ ಆದಿತ್ಯನೇ ಮೊದಲಾದ ಗ್ರಹಗಳನ್ನರ್ಚಿಸಬೇಕು.

೪೧. ಆದುದರಿಂದ ಈ ದೇವಯಜ್ಞವು ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡುವಂತಹುದು. ಬ್ರಾಹ್ಮಣರು ವೇದಮಂತ್ರಗಳಿಂದ ಪೂಜೆ ಮಾಡಬೇಕು. ಮಿಕ್ಕವರು (ಪುರಾಣಶ್ಲೋಕ) ಮುಂತಾದುವುಗಳಿಂದಲಾಗಲಿ ಅಥವಾ ಮಂತ್ರವಿಲ್ಲದೆ ಬರೀ ತಂತ್ರದಿಂದಲಾಗಲೀ ಮಾಡಬೇಕು.

೪೨. ಈ ದೇವಯಜ್ಞವನ್ನು ಏಳುವಾರಗಳಲ್ಲಿಯೂ ಸಹ ತಮ್ಮ ಶಕ್ತಿಗನುಸಾರವಾಗಿ ಶುಭಫಲವನ್ನಪೇಕ್ಷಿಸುವವರು ಮಾಡಬೇಕು.

ದರಿದ್ರಾಸ್ತಪಸಾ ದೇವಾನ್ಯಜೇದಾಢ್ಯೋ ಧನೇನ ಹಿ ।
ಪುನಶ್ಚೈವಂ ವಿಧಂ ಧರ್ಮಂ ಕುರುತೇ ಶ್ರದ್ಧಯಾ ಸಹ ॥ ೪೩ ॥

ಪುನಶ್ಚ ಭೋಗಾನ್ ವಿವಿಧಾನ್ ಭುಕ್ತ್ವಾ ಭೂಮೌ ಪ್ರಜಾಯತೇ ।
ಛಾಯಾಂ ಜಲಾಶಯಂ ಬ್ರಹ್ಮಪ್ರತಿಷ್ಠಾಂ ಧರ್ಮಸಂಚಯಂ ॥ ೪೪ ॥

ಸರ್ವಂ ಚ ವಿತ್ತವಾನ್ ಕುರ್ಯಾತ್ಸದಾ ಭೋಗಪ್ರಸಿದ್ಧಯೇ ।
ಕಾಲಾಚ್ಚ ಪುಣ್ಯಪಾಕೇನ ಜ್ಞಾನಸಿದ್ಧಿಃ ಪ್ರಜಾಯತೇ ॥ ೪೫ ॥

ಯ ಇಮಂ ಶೃಣುತೇಽಧ್ಯಾಯಂ ಪಠತೇ ವಾ ನರೋ ದ್ವಿಜಾಃ ।
ಶ್ರವಣಸ್ಯೋಪಕರ್ತಾ ಚ ದೇವಯಜ್ಞಫಲಂ ಲಭೇತ್ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಚತುರ್ದಶೋಽಧ್ಯಾಯಃ.

---

೪೩. ದರಿದ್ರನು ತಪಸ್ಸಿನಿಂದ ದೇವತೆಗಳನ್ನು ಪೂಜಿಸಬೇಕು. ಶ್ರೀಮಂತನು ಧನದಿಂದ ಪೂಜಿಸಬೇಕು. ಈರೀತಿಯಾದ ಧರ್ಮವನ್ನು ಯಾವನು ಶ್ರದ್ಧೆಯಿಂದ ಆಚರಿಸುವನೋ ಅವನು ಇಹಪರಗಳಲ್ಲಿ ಉತ್ತಮವಾದ ಭೋಗಗಳನ್ನು ಪಡೆದು, ತಿರುಗಿ ಭೂಮಿಯಲ್ಲಿ ಉತ್ತಮ ಜನ್ಮವನ್ನು ಹೊಂದುವನು.

೪೪-೪೫. ನೆರಳಿಗಾಗಿ ಸಾಲುಮರ ಹಾಕಿಸುವುದು, ಕೆರೆ, ಭಾವಿ ಮುಂತಾದುವುಗಳನ್ನು ತೋಡಿಸುವುದು, ಬ್ರಾಹ್ಮಣರಿಗೆ ಜೀವನ ನಡೆಸುವುದು, ದೇವಪ್ರತಿಷ್ಠೆಯನ್ನು ಮಾಡುವುದು, ಮುಂತಾದ ಧರ್ಮಕಾರ್ಯಗಳನ್ನು ಧನವಂತನಾದವನು ಮಾಡಬೇಕು. ಅದರಿಂದ ಅವನಿಗೆ ಇಹದಲ್ಲಿ ಭೋಗವು ಸಿದ್ಧಿಸುವುದು. ಕಾಲಾನುಸಾರವಾಗಿ ಪುಣ್ಯಬಲದಿಂದ ಬ್ರಹ್ಮಜ್ಞಾನವು ಸಿದ್ಧಿಸುವುದು.

೪೬. ಈ ದೇವಯಜ್ಞವನ್ನು ಪ್ರತಿಪಾದಿಸುವ ಅಧ್ಯಾಯವನ್ನು ಯಾವ ಪುರುಷನು ಕೇಳುವನೋ ಮತ್ತು ಪಠಿಸುವನೋ ಅಥವಾ ಕೇಳುವವರಿಗೆ ಅನುಕೂಲ ಪಡಿಸುವನೋ ಅವನು ದೇವಯಜ್ಞವನ್ನು ಮಾಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಶಿವಮಹಾಪುರಾಣದ ವಿದ್ಯೇಶ್ವರಸಂಹಿತೆಯಲ್ಲಿ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಪಂಚದಶೋಽಧ್ಯಾಯಃ

॥ ಋಷಯ ಊಚುಃ ॥

ದೇಶಾದೀನ್ ಕ್ರಮಶೋ ಬ್ರೂಹಿ ಸೂತ ಸರ್ವಾರ್ಥವಿತ್ತಮ ।

॥ ಸೂತ ಉವಾಚ ॥

ಶುದ್ಧಂ ಗೃಹಂ ಸಮಫಲಂ ದೇವಯಜ್ಞಾದಿಕರ್ಮಸು ॥ ೧ ॥

ತತೋ ದಶಗುಣಂ ಗೋಷ್ಠಂ ಜಲತೀರಂ ತತೋ ದಶ ।
ತತೋ ದಶಗುಣಂ ಬಿಲ್ವತುಲಸ್ಯಶ್ವತ್ಥಮೂಲಕಂ ॥ ೨ ॥

---

### ಹದಿನೈದನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು:—ಸಕಲ ವಿಷಯಗಳನ್ನೂ ಬಲ್ಲ ಓ ಸೂತ ಸೂತಮುನಿ ! ದೇವಯಜ್ಞಾದಿಗಳಿಗೆ ಯೋಗ್ಯವಾದ ದೇಶ ಮೊದಲಾದವುಗಳನ್ನು ಕ್ರಮವಾಗಿ ನಮಗೆ ಹೇಳು ಎಂದು ಕೇಳಲು, ಸೂತಮುನಿಯು ಹೇಳಿದನು. ಶುದ್ಧವಾದ ಮನೆಯು ದೇವಯಜ್ಞಾದಿ ಕರ್ಮಗಳಲ್ಲಿ ಸಮವಾದ ಫಲ ವನ್ನುಂಟುಮಾಡುವುದು. ಗೋಶಾಲೆಯು ಅದಕ್ಕಿಂತಲೂ ಹತ್ತರಷ್ಟು ಹೆಚ್ಚಾದ ಫಲವನ್ನು ಕೊಡುವುದು. ಜಲತೀರವು ಅದಕ್ಕಿಂತಲೂ ಹತ್ತರಷ್ಟು ಹೆಚ್ಚಾಗಿ ಫಲ ವನ್ನು ಕೊಡುವುದು. ಬಿಲ್ವವೃಕ್ಷದ ಮೂಲ, ತುಲಸೀಮೂಲ, ಅಶ್ವತ್ಥವೃಕ್ಷದ ಮೂಲ ಇವುಗಳು ಜಲತೀರಕ್ಕಿಂತಲೂ ಹತ್ತರಷ್ಟು ಫಲಪ್ರದವಾದವು.

ತತೋ ದೇವಾಲಯಂ ವಿದ್ಯಾತ್ತೀರ್ಥತೀರಂ ತತೋ ದಶ ।
ತತೋ ದಶಗುಣಂ ನದ್ಯಾಸ್ತೀರ್ಥನದ್ಯಾಸ್ತತೋ ದಶ । ॥ ೩ ॥

ಸಪ್ತಗಂಗಾನದೀತೀರ್ಥಂ ತಸ್ಯಾ ದಶಗುಣಂ ಭವೇತ್ ।
ಗಂಗಾ ಗೋದಾವರೀ ಚೈವ ಕಾವೇರೀ ತಾಮ್ರಪರ್ಣಿಕಾ ॥ ೪ ॥

ಸಿಂಧುಶ್ಚ ಸರಯೂ ರೇವಾ ಸಪ್ತ ಗಂಗಾಃ ಪ್ರಕೀರ್ತಿತಾಃ ।
ತತೋಽಬ್ಧಿತೀರೇ ದಶ ಚ ಪರ್ವತಾಗ್ರೇ ತತೋ ದಶ ॥ ೫ ॥

ಸರ್ವಸ್ಮಾದಧಿಕಂ ಜ್ಞೇಯಂ ಯತ್ರ ವಾ ರೋಚತೇ ಮನಃ ।
ಕೃತೇ ಪೂರ್ಣಫಲಂ ಜ್ಞೇಯಂ ಯಜ್ಞದಾನಾದಿಕಂ ತಥಾ ॥ ೬ ॥

ತ್ರೇತಾಯುಗೇ ತ್ರಿಪಾದಂ ಚ ದ್ವಾಪರೇಽರ್ಧಂ ಸದಾ ಸ್ಮೃತಂ ।
ಕಲೌ ಪಾದಂ ತು ವಿಜ್ಞೇಯಂ ತತ್ಪಾದೋನಂ ತತೋಽರ್ಧಕೇ ॥ ೭ ॥

---

೩. ಅಶ್ವತ್ಥಮೂಲಾದಿಗಳಿಂತಲೂ ದೇವಾಲಯವು ಪತ್ತುಗುಣವುಳ್ಳದುದು, ಅದಕ್ಕಿಂತಲೂ ತೀರ್ಥಕ್ಷೇತ್ರವು ಪತ್ತುಗುಣ ಉತ್ತಮವಾದುದು. ಅದಕ್ಕಿಂತಲೂ ನದೀತೀರವು ಹತ್ತರಷ್ಟು ಉತ್ತಮವಾದುದು, ಅದಕ್ಕಿಂತ ತೀರ್ಥನದಿ (ಗಂಗಾ ಮೊದಲಾದ ನದಿ) ಗಳ ತೀರವು ಹತ್ತರಷ್ಟು ಹೆಚ್ಚಾದ ಫಲವುಳ್ಳಂತಹುದು. ತೀರ್ಥನದೀ ತೀರಕ್ಕಿಂತಲೂ ಏಳು ಗಂಗಾನದಿಗಳ ತೀರವು ಹತ್ತರಷ್ಟು ಹೆಚ್ಚಾದ ಫಲವುಳ್ಳದುದು.

೪. ಗಂಗಾ, ಗೋದಾವರಿ, ಕಾವೇರಿ, ತಾಮ್ರಪರ್ಣೀನದಿ, ಸಿಂಧುನದಿ, ಸರಯೂನದಿ, ರೇವಾನದಿ ಇವು ಏಳೂ ಸಪ್ತಗಂಗೆಗಳು.

೫. ಆ ಗಂಗಾತೀರಕ್ಕಿಂತಲೂ ಸಮುದ್ರತೀರವು ಹತ್ತುಪಾಲು ಹೆಚ್ಚಾಗಿ ಫಲವನ್ನುಂಟುಮಾಡುವುದು. ಅದಕ್ಕಿಂತಲೂ ಪರ್ವತದ ಅಗ್ರಭಾಗವು ಹತ್ತು ಪಾಲು ಉತ್ತಮವಾದುದು. ಎಲ್ಲಾ ಸ್ಥಳಕ್ಕಿಂತಲೂ ಮನಸ್ಸಿಗೆ ಹಿತವಾಗಿ ತೋರುವಂತಹ ಪ್ರದೇಶವೇ ಅತ್ಯುತ್ತಮವಾದುದು.

೬-೭. ಕೃತಯುಗದಲ್ಲಿ ಯಜ್ಞ, ದಾನ ಮೊದಲಾದುವುಗಳಿಗೆ ಸಂಪೂರ್ಣವಾದ ಫಲವು ಲಭಿಸುವುದು. ತ್ರೇತಾಯುಗದಲ್ಲಿ ಮುಕ್ಕಾಲು ಫಲವೂ, ದ್ವಾಪರಯುಗದಲ್ಲಿ ಅರ್ಧ ಫಲವೂ, ಕಲಿಯುಗದಲ್ಲಿ ನಾಲ್ಕನೆಯ ಒಂದು ಭಾಗ ಫಲವೂ ಕಲಿಯುಗವು ಅರ್ಧ ಕಳೆದ ಮೇಲೆ ಆ ನಾಲ್ಕನೆಯ ಒಂದು ಭಾಗದಲ್ಲಿಯೂ ಕಾಲು ಭಾಗ ಮಾತ್ರ ಫಲವೂ ಲಭಿಸುವುದು.

ಶುದ್ಧಾತ್ಮನಃ ಶುದ್ಧದಿನಂ ಪುಣ್ಯಂ ಸಮಫಲಂ ವಿದುಃ ।
ತಸ್ಮಾದ್ದಶಗುಣಂ ಜ್ಞೇಯಂ ರವಿಸಂಕ್ರಮಣೇ ಬುಧಾಃ ॥ ೮ ॥

ವಿಷುವೇ ತದ್ದಶಗುಣಮಯನೇ ತದ್ದಶ ಸ್ಮೃತಂ ।
ತದ್ದಶ ಮೃಗಸಂಕ್ರಾಂತೌ ತಚ್ಚಂದ್ರಗ್ರಹಣೇ ದಶ ॥ ೯ ॥

ತತಶ್ಚ ಸೂರ್ಯಗ್ರಹಣೇ ಪೂರ್ಣಂ ಕಾಲೋತ್ತಮೇ ವಿದುಃ ।
ಜಗದ್ರೂಪಸ್ಯ ಸೂರ್ಯಸ್ಯ ವಿಷಯೋಗಾಚ್ಚ ರೋಗದಂ ॥ ೧೦ ॥

ಅತಸ್ತದ್ವಿಷಶಾಂತ್ಯರ್ಥಂ ಸ್ನಾನದಾನಜಪಾಂಶ್ಚರೇತ್ ।
ವಿಷಶಾಂತ್ಯರ್ಥಕಾಲತ್ವಾತ್ಸ ಕಾಲಃ ಪುಣ್ಯದಃ ಸ್ಮೃತಃ ॥ ೧೧ ॥

---

೮. ಪರಿಶುದ್ಧವಾದ ದಿನದಲ್ಲಿ ಪರಿಶುದ್ಧನಾಗಿಮಾಡಿದ ಪುಣ್ಯಕ್ಕೆ ಹೆಚ್ಚಾದ ಫಲವು ಲಭಿಸುವುದು. ಅದಕ್ಕಿಂತಲೂ ಸೂರ್ಯಸಂಕ್ರಮಣ ಕಾಲದಲ್ಲಿ ಮಾಡಿದ ಪುಣ್ಯವು ಹತ್ತು ಪಾಲು ಹೆಚ್ಚಾದ ಫಲವನ್ನು ಕೊಡುವುದು.

೯. ವಿಷುವ (ಸಮವಾದ ರಾತ್ರಿಗಳುಳ್ಳ) ಕಾಲದಲ್ಲಿ ಸೂರ್ಯಸಂಕ್ರಮಣಕ್ಕಿಂತಲೂ ಹತ್ತುಪಾಲು ಹೆಚ್ಚು ಪುಣ್ಯವು ಲಭಿಸುವುದು. ದಕ್ಷಿಣಾಯನ ಉತ್ತರಾಯಣ ಪುಣ್ಯಕಾಲಗಳಲ್ಲಿ ಅದಕ್ಕೆ ಹತ್ತರಷ್ಟು ಪುಣ್ಯವು, ಅದಕ್ಕೆ ಹತ್ತರಷ್ಟು ಪುಣ್ಯವು ಮಕರಸಂಕ್ರಾಂತಿ ಕಾಲದಲ್ಲಿ ಲಭಿಸುವುದು. ಚಂದ್ರಗ್ರಹಣಕಾಲದಲ್ಲಿ ಅದಕ್ಕೆ ಹತ್ತರಷ್ಟು ಪುಣ್ಯವು ಲಭಿಸುವುದು.

೧೦. ಚಂದ್ರಗ್ರಹಣಕಾಲಕ್ಕಿಂತಲೂ ಸೂರ್ಯಗ್ರಹಣಕಾಲವು ಅತ್ಯುತ್ತಮವಾದುದು. ಆ ಕಾಲದಲ್ಲಿ ಜಗದ್ರೂಪನಾದ ಸೂರ್ಯನಿಗೆ ವಿಷಯೋಗ (ಅನಿಷ್ಟ)ವು ಸಂಭವಿಸುವುದರಿಂದ ಜಗತ್ತಿಗೇ ಆ ಕಾಲವು ರೋಗಪ್ರದವಾದುದು.

೧೧. ಆದುದರಿಂದ ಸೂರ್ಯಗ್ರಹಣ ಕಾಲದಲ್ಲಿ ವಿಷಶಾಂತಿಗಾಗಿ ಸ್ನಾನ, ದಾನ ಮತ್ತು ಜಪಗಳನ್ನು ಆಚರಿಸಬೇಕು. ವಿಷವನ್ನು ಶಾಂತಿಗೊಳಿಸುವ ಕಾಲವಾದುದರಿಂದ ಸೂರ್ಯಗ್ರಹಣಕಾಲವು ಪುಣ್ಯಪ್ರದವಾದುದು.

ಜನ್ಮರ್ಕ್ಷೇ ಚ ವ್ರತಾಂತೇ ಚ ಸೂರ್ಯರಾಗೋಪಮಂ ವಿದುಃ ।
ಮಹತಾಂ ಸಂಗಕಾಲಶ್ಚ ಕೋಟ್ಯರ್ಕಗ್ರಹಣಂ ವಿದುಃ ॥ ೧೨ ॥

ತಪೋನಿಷ್ಠಾ ಜ್ಞಾನನಿಷ್ಠಾ ಯೋಗಿನೋ ಯತಯಸ್ತಥಾ ।
ಪೂಜಯಾಃ ಪಾತ್ರಮೇತೇ ಹಿ ಪಾಪಸಂಕ್ಷಯಕಾರಣಂ ॥ ೧೩ ॥

ಚತುರ್ವಿಂಶತಿಲಕ್ಷಂ ವಾ ಗಾಯತ್ರ್ಯಾ ಜಪಸಂಯುತಃ ।
ಬ್ರಾಹ್ಮಣಸ್ತು ಭವೇತ್ಪಾತ್ರಂ ಸಂಪೂರ್ಣಫಲಭೋಗದಂ ॥ ೧೪ ॥

ಪತನಾತ್ತ್ರಾಯತ ಇತಿ ಪಾತ್ರಂ ಶಾಸ್ತ್ರೇ ಪ್ರಯುಜ್ಯತೇ ।
ದಾತುಶ್ಚ ಪಾತಕಾತ್ತ್ರಾಣಾತ್ಪಾತ್ರಮಿತ್ಯಭಿಧೀಯತೆ ॥ ೧೫ ॥

ಗಾಯಂತಂ ತ್ರಾಯತೇ ಪಾತಾದ್ಗಾಯತ್ರೀತ್ಯುಚ್ಯತೇ ಹಿ ಸಾ ।
ಯಥಾರ್ಥಹೀನೋ ಲೋಕೇಽಸ್ಮಿನ್ ಪರಸ್ಯಾರ್ಥಂ ನ ಯಚ್ಛತಿ ॥ ೧೬ ॥

---

೧೨. ಜನ್ಮನಕ್ಷತ್ರಕಾಲವೂ, ವ್ರತವನ್ನು ಮುಗಿಸಿದ ಕಾಲವೂ ಸಹ ಸೂರ್ಯ ಗ್ರಹಣಕಾಲಕ್ಕೆ ಸಮವಾದುವುಗಳು. ಸತ್ಪುರುಷರೊಡನೆ ಸಹವಾಸ ಬೆಳೆಸಿದಕಾಲವು ಕೋಟಿ ಸೂರ್ಯಗ್ರಹಣ ಕಾಲಗಳಂತೆ ಪುಣ್ಯವಾದುದು.

೧೩. ತಪಸ್ವಿಗಳೂ, ಜ್ಞಾನಿಗಳೂ, ಯೋಗಿ ಮತ್ತು ಯತಿಗಳೂ ಸಹ ಪೂಜೆಗೆ ಪಾತ್ರರು, ಯೋಗ್ಯರಾದವರು, ಪಾಪವನ್ನು ಹೋಗಲಾಡಿಸುವರು. ಅವರನ್ನು ಶ್ರದ್ಧೆಯಿಂದ ಪೂಜಿಸಬೇಕು.

೧೪. ಇಪ್ಪತ್ತುನಾಲ್ಕು ಲಕ್ಷ ಗಾಯತ್ರೀ ಜಪಗಳನ್ನು ಮಾಡಿದ ಬ್ರಾಹ್ಮಣನು ಪೂಜೆಗೆ ಪಾತ್ರನು, (ಯೋಗ್ಯನು) ಅವನನ್ನು ಪೂಜೆಸಿದರೆ ಸಂಪೂರ್ಣವಾದ ಫಲವೂ ಭೋಗವೂ ಲಭಿಸುವುದು.

೧೫. ಪತನ (ಅಧೋಗತಿ) ದಿಂದ ಕಾಪಾಡುವುದೆಂಬ ಅರ್ಥದಲ್ಲಿ ಪಾತ್ರಶಬ್ದವನ್ನು ಶಾಸ್ತ್ರದಲ್ಲಿ ಪ್ರಯೋಗಿಸಿರುವುದು. ಆದುದರಿಂದ ಪೂಜೆಗೆ ಪಾತ್ರ (ಯೋಗ್ಯ) ನಾದವನನ್ನು ಪೂಜಿಸಿ ದಾನಮಾಡಿದರೆ ಪಾಪದಿಂದ ರಕ್ಷಿಸುವನೆಂದು ತಿಳಿಯಬೇಕು.

೧೬. ಗಾನ (ಜಪ) ಮಾಡುವವನ್ನು ಪಾಪದಿಂದ ರಕ್ಷಿಸುವುದರಿಂದ ಗಾಯತ್ರೀ ಮಂತ್ರಕ್ಕೆ ಆ ಹೆಸರು ಬಂದಿರುವುದು, ಯಾವನು ಧನವನ್ನು ಜಿಪುಣತೆಯಿಂದ ಪರರಿಗೆ ದಾನಮಾಡುವುದಿಲ್ಲವೋ ಅವನು ದರಿದ್ರನಾಗುವನು.

ಅರ್ಥವಾನಿಹ ಯೋ ಲೋಕೇ ಪರಸ್ಯಾರ್ಥಂ ಪ್ರಯಚ್ಛತಿ ।
ಸ್ವಯಂ ಶುದ್ಧೋ ಹಿ ಪೂತಾತ್ಮಾ ನರಾನ್ ಸಂತ್ರಾತುಮರ್ಹತಿ ॥ ೧೭ ॥

ಗಾಯತ್ರೀಜಪಶುದ್ಧೋ ಹಿ ಶುದ್ಧಬ್ರಾಹ್ಮಣ ಉಚ್ಯತೇ ।
ತಸ್ಮಾದ್ದಾನೇ ಜಪೇ ಹೋಮೇ ಪೂಜಾಯಾಂ ಸರ್ವಕರ್ಮಣಿ ॥ ೧೮ ॥

ದಾನಂ ಕರ್ತುಂ ತಥಾ ತ್ರಾತುಂ ಪಾತ್ರಂತ್ವಂ ಬ್ರಾಹ್ಮಣೋಽರ್ಹತಿ ।
ಅನ್ನಸ್ಯ ಕ್ಷುಧಿತಂ ಪಾತ್ರಂ ನರನಾರೀಮಯಾತ್ಮಕಂ ॥ ೧೯ ॥

ಬ್ರಾಹ್ಮಣಂ ಶ್ರೇಷ್ಠಮಾಹೂಯ ಯತ್ಕಾಲೇ ಸುಸಮಾಹಿತಂ ।
ತದರ್ಥಂ ಶಬ್ದಮರ್ಥಂ ವಾ ಸದ್ಬೋಧಕಮಭೀಷ್ಟದಂ ॥ ೨೦ ॥

ಇಚ್ಛಾವತಃ ಪ್ರದಾನಂ ಚ ಸಂಪೂರ್ಣಫಲದಂ ವಿದುಃ ।
ಯತ್ಪ್ರಶ್ನಾನಂತರಂ ದತ್ತಂ ತದರ್ಧಫಲದಂ ವಿದುಃ ॥ ೨೧ ॥

---

೧೭. ಯಾವನು ದಾನಮಾಡುವನೋ ಅವನು ಶ್ರೀಮಂತ್ರನಾಗುವನು. ತಾನು ಶುದ್ಧನೂ, ಪವಿತ್ರನೂ ಆದಂತಹವನೇ ಮಿಕ್ಕವರನ್ನು ಸಲಹಬಲ್ಲನು.

೧೮-೧೯. ಗಾಯತ್ರೀಜಪದಿಂದ ಶುದ್ಧನಾಗುವಂತಹ ಬ್ರಾಹ್ಮಣನೇ ಶುದ್ಧನಾದವನು. ಆದುದರಿಂದ ದಾನ, ಜಪ, ಹೋಮ, ಪೂಜೆ ಮುಂತಾದ ಎಲ್ಲಾ ಕರ್ಮಗಳಲ್ಲಿಯೂ ದಾನಮಾಡಲು, ದಾನಮಾಡುವವನನ್ನು ಪಾಪದಿಂದ ರಕ್ಷಿಸಲೂ ಸಹ, ಬ್ರಾಹ್ಮಣನೇ ಯೋಗ್ಯನಾದ ಪಾತ್ರವು. ಅವನೇ ಸಮರ್ಥನು, ಯೋಗ್ಯನು. ಅನ್ನದಾನಕ್ಕೆ ಹಸಿದ ಸ್ತ್ರೀಪುರುಷರೇ ಪಾತ್ರರು.

೨೦. ಜಿತೇಂದ್ರಿಯನೂ, ಸದುಪದೇಶವನ್ನು ಮಾಡುವ ಮೂಲಕ ಇಷ್ಟಾರ್ಥವನ್ನುಂಟುಮಾಡುವವನೂ ಆದಂತಹ ಶ್ರೇಷ್ಠ ಬ್ರಾಹ್ಮಣನನ್ನು ಯೋಗ್ಯವಾದ ಕಾಲದಲ್ಲಿ ಕರೆದು ಅವನಪೇಕ್ಷಿಸುವ ವಸ್ತುವನ್ನು ದಾನಮಾಡಿದರೆ ಸಂಪೂರ್ಣವಾದ ಫಲವು ಲಭಿಸುವುದು.

೨೧. ಯಾಚಕನು ಕೇಳಿದಮೇಲೆ ದಾನಮಾಡಿದರೆ ಅರ್ಧಫಲವು ಲಭಿಸುವುದು. ಸೇವಕನಿಗೆ ದಾನಮಾಡಿದರೆ ಕಾಲುಭಾಗ ಫಲವು ಲಭಿಸುವುದು.

ಯತ್ಸೇವಕಾಯ ದತ್ತಂ ಸ್ಯಾತ್ತತ್ಪಾದಫಲದಂ ವಿದುಃ ।
ಜಾತಿಮಾತ್ರಸ್ಯ ವಿಪ್ರಸ್ಯ ದೀನವೃತ್ತೇರ್ದ್ವಿಜರ್ಷಭಾಃ ॥ ೨೨ ॥

ದತ್ತಮರ್ಥಂ ಹಿ ಭೋಗಾಯ ಭೂರ್ಲೋಕೇ ದಶವಾರ್ಷಿಕಂ ।
ವೇದಯುಕ್ತಸ್ಯ ವಿಪ್ರಸ್ಯ ಸ್ವರ್ಗೇ ಹಿ ದಶವಾರ್ಷಿಕಂ । ॥ ೨೩ ॥

ಗಾಯತ್ರೀಜಪಯುಕ್ತಸ್ಯ ಸತ್ಯಂ ಹಿ ದಶವಾರ್ಷಿಕಂ ।
ವಿಷ್ಣುಭಕ್ತಸ್ಯ ವಿಪ್ರಸ್ಯ ದತ್ತಂ ವೈಕುಂಠದಂ ವಿದುಃ ॥ ೨೪ ॥

ಶಿವಭಕ್ತಸ್ಯ ವಿಪ್ರಸ್ಯ ದತ್ತಂ ಕೈಲಾಸದಂ ವಿದುಃ ।
ತತ್ತಲ್ಲೋಕೋಪಭೋಗಾರ್ಥಂ ಸರ್ವೇಷಾಂ ದಾನಮಿಷ್ಯತೇ ॥ ೨೫ ॥

ದಶಾಂಗಮನ್ನಂ ವಿಪ್ರಸ್ಯ ಭಾನುವಾರೇ ದದನ್ನರಃ ।
ಪರಜನ್ಮನಿ ಚಾರೋಗ್ಯಂ ದಶವರ್ಷಂ ಸಮಶ್ನುತೇ ॥ ೨೬ ॥

---

೨೨. ಸರಿಯಾದ ಆಚಾರವಿಲ್ಲದೆ ದೀನವಾದ ವೃತ್ತಿಯುಳ್ಳ (ದರಿದ್ರನಾದ) ಕೇವಲ ಬ್ರಾಹ್ಮಣ ಜಾತಿಯವನಿಗೆ ಧನವನ್ನು ಕೊಟ್ಟು ಹತ್ತು ವರ್ಷ ಪರ್ಯಂತ ಜೀವನವನ್ನು ಕಲ್ಪಿಸಿದರೆ ಭೂಲೋಕದಲ್ಲಿ ಸುಖವಾದ ಭೋಗವು ಲಭಿಸುವುದು.

೨೩-೨೪. ವೇದಾಧ್ಯಯನನಿಷ್ಠನಾದ ಬ್ರಾಹ್ಮಣನಿಗೆ ಹತ್ತು ವರ್ಷ ಪರ್ಯಂತ ಜೀವನವನ್ನು ಕಲ್ಪಿಸಿದರೆ ಸ್ವರ್ಗದಲ್ಲಿ ಭೋಗವು ಲಭಿಸುವುದು. ಗಾಯತ್ರೀಜಪವನ್ನು ಮಾಡುವಂತಹ ಬ್ರಾಹ್ಮಣನಿಗೆ ದಾನಮಾಡಿದರೆ ಸತ್ಯಲೋಕದಲ್ಲಿ ಭೋಗವು ಲಭಿಸುವುದು. ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ದಾನಮಾಡಿದರೆ ವೈಕುಂಠಲೋಕವು ಲಭಿಸುವುದು.

೨೫. ಶಿವಭಕ್ತನಾದ ಬ್ರಾಹ್ಮಣನಿಗೆ ದಾನಮಾಡಿದರೆ ಕೈಲಾಸವು ಲಭಿಸುವುದು. ಎಲ್ಲಾ ಲೋಕಗಳಲ್ಲೂ ಭೋಗವನ್ನನುಭವಿಸಬೇಕಾದರೆ ಈರೀತಿ ಎಲ್ಲಾ ಬ್ರಾಹ್ಮಣರಿಗೂ ದಾನಮಾಡಬೇಕು.

೨೬. ಭಾನುವಾರದಲ್ಲಿ ಹತ್ತು ಅಂಗಗಳೊಡನೆ ಬ್ರಾಹ್ಮಣನಿಗೆ ಅನ್ನವನ್ನು ದಾನಮಾಡಿದರೆ ಮುಂದಿನ ಜನ್ಮದಲ್ಲಿ ಹತ್ತು ವರ್ಷಗಳವರೆಗೆ ಆರೋಗ್ಯವು ಲಭಿಸುವುದು. ಈ ಹತ್ತು ಅಂಗಗಳು ಯಾವವೆಂದರೆ:—

ಬಹುಮಾನಮಥಾಹ್ವಾನಮಭ್ಯಂಗಂ ಪಾದಸೇವನಂ ।
ವಾಸೋ ಗಂಧಾದ್ಯರ್ಚನಂ ಚ ಘೃತಾಪೂಪರಸೋತ್ತರಂ ॥ ೨೭ ॥

ಷಡ್ರಸಂ ವ್ಯಂಜನಂ ಚೈವ ತಾಂಬೂಲಂ ದಕ್ಷಿಣೋತ್ತರಂ ।
ನಮಶ್ಚಾನುಗಮಶ್ಚೈವ ಸ್ವನ್ನದಾನಂ ದಶಾಂಗಕಂ ॥ ೨೮ ॥

ದಶಾಂಗಮನ್ನಂ ವಿಪ್ರೇಭ್ಯೋ ದಶಭ್ಯೋ ವೈ ದದನ್ನರಃ ।
ಅರ್ಕವಾರೇ ತಥಾರೋಗ್ಯಂ ಶತವರ್ಷಂ ಸಮಶ್ನುತೇ ॥ ೨೯ ॥

ಸೋಮವಾರಾದಿವಾರೇಷು ತತ್ತದ್ವಾರಗುಣಂ ಫಲಂ ।
ಅನ್ನದಾನಸ್ಯ ವಿಜ್ಞೇಯಂ ಭೂರ್ಲೋಕೇ ಪರಜನ್ಮನಿ ॥ ೩೦ ॥

ಸಪ್ತಸ್ವಪಿ ಚ ವಾರೇಷು ದಶಭ್ಯಶ್ಚ ದಶಾಂಗಕಂ ।
ಅನ್ನಂ ದತ್ವಾ ಶತಂ ವರ್ಷಮಾರೋಗ್ಯಾದಿಕಮಶ್ನುತೇ ॥ ೩೧ ॥

---

೨೭-೨೮. ಅತಿಥಿಗಳಿಗೆ ಬಹುಮಾನ (ಗೌರವ), ಆಹ್ವಾನ, ಅಭ್ಯಂಜನ ಮಾಡಿಸುವುದು, ಪಾದವನ್ನು ಸೇವಿಸುವುದು, ವಾಸವನ್ನು ಕಲ್ಪಿಸುವುದು, ಗಂಧಾದಿಗಳಿಂದ ಅರ್ಚಿಸುವುದು, ತುಪ್ಪ, ಭಕ್ಷ್ಯ, ಇವುಗಳೊಡನೆ ಷಡ್ರಸಮಯವಾದ ವ್ಯಂಜನವನ್ನು ಬಡಿಸಿ ಊಟಮಾಡಿಸುವುದು, ದಕ್ಷಿಣೆ, ತಾಂಬೂಲ, ನಮಸ್ಕಾರ, ಬೀಳ್ಕೊಟ್ಟು ಕಳುಹಿಸಿಕೊಡುವುದು. ಈ ಹತ್ತೂ ಅನ್ನದಾನದ ಅಂಗಗಳು.

೨೯. ಈ ಹತ್ತು ಅಂಗಗಳೊಡನೆ ಅನ್ನದಾನವನ್ನು ಭಾನುವಾರದಲ್ಲಿ ಬ್ರಾಹ್ಮಣರಿಗೆ ಮಾಡಿದರೆ ನೂರು ವರ್ಷ ಪರ್ಯಂತವಾಗಿ ಆರೋಗ್ಯವನ್ನು ಪಡೆವನು.

೩೦. ಸೋಮವಾರ ಮುಂತಾದ ವಾರಗಳಲ್ಲಿ ಅನ್ನದಾನಮಾಡಿದರೆ ಈ ಜನ್ಮ ಮತ್ತು ಜನ್ಮಾಂತರಗಳಲ್ಲಿ ಆಯಾಯ ವಾರಗಳಿಗೆ ಹೇಳಿರುವ ಫಲವನ್ನು ಪಡೆವನು.

೩೧. ಏಳು ವಾರಗಳಲ್ಲಿಯೂ ಹತ್ತು ಜನ ಅತಿಥಿಗಳಿಗೆ ಹಿಂದೆ ಹೇಳಿದ ಹತ್ತು ಅಂಗಗಳೊಡನೆ ಅನ್ನದಾನವನ್ನು ಮಾಡಿದರೆ ನೂರು ವರ್ಷ ಪರ್ಯಂತ ಆರೋಗ್ಯ ಮೊದಲಾದ ಆಯಾಯ ವಾರಫಲಗಳನ್ನು ಪಡೆಯುವನು,

ಏವಂ ಶತೇಭ್ಯೋ ವಿಪ್ರೇಭ್ಯೋ ಭಾನುವಾರೇ ದದನ್ನರಃ ।
ಸಹಸ್ರವರ್ಷಮಾರೋಗ್ಯಂ ಶರ್ವಲೋಕೇ ಸಮಶ್ನುತೇ ॥ ೩೨ ॥

ಸಹಸ್ರೇಭ್ಯಸ್ತಥಾ ದತ್ವ್ವಾಯುತವರ್ಷಂ ಸಮಶ್ನುತೇ ।
ಏವಂ ಸೋಮಾದಿವಾರೇಷು ವಿಜ್ಞೇಯಂ ಹಿ ವಿಪಶ್ಚಿತಾ ॥ ೩೩ ॥

ಭಾನುವಾರೇ ಸಹಸ್ರಾಣಾಂ ಗಾಯತ್ರೀಪೂತಚೇತಸಾಂ ।
ಅನ್ನಂ ದತ್ವಾ ಸತ್ಯಲೋಕೇ ಹ್ಯಾರೋಗ್ಯಾದಿ ಸಮಶ್ನುತೇ ॥ ೩೪ ॥

ಅಯುತಾನಾಂ ತಥಾ ದತ್ವಾ ವಿಷ್ಣುಲೋಕೇ ಸಮಶ್ನುತೇ ।
ಅನ್ನಂ ದತ್ವಾ ತು ಲಕ್ಷಾಣಾಂ ರುದ್ರಲೋಕೇ ಸಮಶ್ನುತೇ ॥ ೩೫ ॥

ಬಾಲಾನಾಂ ಬ್ರಹ್ಮಬುದ್ಧ್ಯಾ ಹಿ ದೇಯಂ ವಿದ್ಯಾರ್ಥಿಭಿರ್ನರೈಃ ।
ಯೂನಾಂ ಚ ವಿಷ್ಣುಬುದ್ಧ್ಯಾ ಹಿ ಪುತ್ರಕಾಮಾರ್ಥಿಭಿರ್ನರೈಃ ॥ ೩೬ ॥

---

೩೨. ಹೀಗೆಯೇ ಭಾನುವಾರದಲ್ಲಿ ನೂರು ಜನ ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಿದರೆ ಶಿವಲೋಕದಲ್ಲಿ ಸಾವಿರ ವರ್ಷಗಳವರೆಗೆ ಆರೋಗ್ಯವಾಗಿರುವನು.

೩೩. ಸಾವಿರ ಬ್ರಾಹ್ಮಣರಿಗೆ ಅನ್ನದಾನಮಾಡಿದರೆ ಹತ್ತು ಸಾವಿರ ವರ್ಷ ಆರೋಗ್ಯವನ್ನು ಪಡೆವನು. ಹೀಗೆಯೇ ಸೋಮವಾರಾದಿಗಳಲ್ಲಿ ಫಲವು ಆಗುವುದೆಂದು ತಿಳಿಯಬೇಕು.

೩೪. ಭಾನುವಾರದಲ್ಲಿ ಗಾಯತ್ರೀಜಪದಿಂದ ಪರಿಶುದ್ಧರಾದ ಸಾವಿರ ಬಾಹ್ಮಣರಿಗೆ ಅನ್ನದಾನಮಾಡಿದರೆ ಸತ್ಯಲೋಕದಲ್ಲಿ ಆರೋಗ್ಯ ಮೊದಲಾದ ಫಲಗಳನ್ನು ಪಡೆಯುವನು.

೩೫. ಹಿಂದೆ ಹೇಳಿದಂತಹ ಹತ್ತು ಸಾವಿರ ಬ್ರಾಹ್ಮಣರಿಗೆ ಅನ್ನದಾನಮಾಡಿದರೆ ವಿಷ್ಣುಲೋಕದಲ್ಲಿ ಆರೋಗ್ಯಾದಿಗಳನ್ನು ಪಡೆಯುವನು. ಲಕ್ಷ ಜನಗಳಿಗೆ ದಾನ ಮಾಡಿದರೆ ರುದ್ರಲೋಕದಲ್ಲಿ ಸೌಖ್ಯವನ್ನು ಪಡೆಯುವನು.

೩೬. ವಿದ್ಯೆಯನ್ನಪೇಕ್ಷಿಸುವವರು, ಬ್ರಹ್ಮಬುದ್ಧಿಯಿಂದ ಬಾಲಕರಿಗೆ ಅನ್ನವನ್ನು ದಾನಮಾಡಬೇಕು. ಪುತ್ರ ಮತ್ತು ಕಾಮವನ್ನಪೇಕ್ಷಿಸುವವರು ಯುವಕರಿಗೆ ವಿಷ್ಣುಬುದ್ಧಿಯಿಂದ ಅನ್ನವನ್ನು ದಾನಮಾಡಬೇಕು.

ವೃದ್ಧಾನಾಂ ರುದ್ರಬುದ್ಧ್ಯಾ ಹಿ ದೇಯಂ ಜ್ಞಾನಾರ್ಥಿಭಿರ್ನರೈಃ ।
ಬಾಲಸ್ತ್ರೀಭಾರತೀಬುದ್ಧ್ಯಾ ಬುದ್ಧಿಕಾಮೈರ್ನರೋತ್ತಮೈಃ ॥ ३२ ॥

ಲಕ್ಷ್ಮೀಬುದ್ಧ್ಯಾ ಯುವಸ್ತ್ರೀಷು ಭೋಗಕಾಮೈರ್ನರೋತ್ತಮೈಃ ।
ವೃದ್ಧಾಸು ಪಾರ್ವತೀಬುದ್ಧ್ಯಾ ದೇಯಮಾತ್ಮಾರ್ಥಿಭಿರ್ನರೈಃ ॥ ३೮ ॥

ಶಿಲವೃತ್ತ್ಯೋಂಛವೃತ್ತ್ಯಾ ಚ ಗುರುದಕ್ಷಿಣಯಾರ್ಜಿತಂ ।
ಶುದ್ಧದ್ರವ್ಯಮಿತಿ ಪ್ರಾಹುಸ್ತತ್ಪೂರ್ಣಫಲದಂ ವಿದುಃ ॥ ३೯ ॥

ಶುಕ್ಲಪ್ರತಿಗ್ರಹಾದ್ದತ್ತಂ ಮಧ್ಯಮಂ ದ್ರವ್ಯಮುಚ್ಯತೇ ।
ಕೃಷಿವಾಣಿಜ್ಯಕೋಪೇತಮಧಮಂ ದ್ರವ್ಯಮುಚ್ಯತೇ ॥ ೪೦ ॥

ಕ್ಷತ್ರಿಯಾಣಾಂ ವಿಶಾಂ ಚೈವ ಶೌರ್ಯವಾಣಿಜ್ಯಕಾರ್ಜಿತಂ ।
ಉತ್ತಮಂ ದ್ರವ್ಯಮಿತ್ಯಾಹುಃ ಶೂದ್ರಾಣಾಂ ಭೃತಕಾರ್ಜಿತಂ ॥ ೪೧ ॥

---

३२-३೮. ಜ್ಞಾನವನ್ನಪೇಕ್ಷಿಸುವವರು ರುದ್ರಬುದ್ಧಿಯಿಂದ ವೃದ್ಧರಿಗೆ ಅನ್ನದಾನವನ್ನು ಮಾಡಬೇಕು. ಸದ್ಬುದ್ಧಿಯನ್ನಪೇಕ್ಷಿಸುವವರು ಸರಸ್ವತೀ ಬುದ್ಧಿಯಿಂದ ಕನ್ಯೆಯರಿಗೆ ಅನ್ನದಾನವನ್ನು ಮಾಡಬೇಕು. ಭೋಗವನ್ನಪೇಕ್ಷಿಸುವವರು ಲಕ್ಷ್ಮೀ ಬುದ್ಧಿಯಿಂದ ತರುಣಿಯರಿಗೆ ಅನ್ನದಾನವನ್ನು ಮಾಡಬೇಕು. ಆತ್ಮಸ್ವರೂಪವನ್ನಪೇಕ್ಷಿಸುವವರು ಪಾರ್ವತೀ ಬುದ್ಧಿಯಿಂದ ವೃದ್ಧ ಸುಮಂಗಲಿಯರಿಗೆ ಅನ್ನದಾನ ಮಾಡಬೇಕು.

३೯. ಶಿಲವೃತ್ತಿ ಉಪಾದಾನ, (ನಿತ್ಯಯಾತ್ರೆ) ಗುರುದಕ್ಷಿಣೆ ಇವುಗಳಿಂದ ಸಂಪಾದಿಸಿದ ಧನವು ಪರಿಶುದ್ಧವಾದುದು. ಅದು ಸಂಪೂರ್ಣ ಫಲವನ್ನುಂಟು ಮಾಡುವುದು.

೪೦. ದಾನವನ್ನು ತೆಗೆದುಕೊಂಡು ಸಂಪಾದಿಸಿದ ದ್ರವ್ಯವು ಮಧ್ಯಮವಾದುದು. ವ್ಯವಸಾಯ ವ್ಯಾಪಾರಗಳಿಂದ ಸಂಪಾದಿಸಿದ ಧನವು ಅಧಮವಾದುದು.

೪೧. ಕ್ಷತ್ರಿಯ ಮತ್ತು ವೈಶ್ಯರಿಗೆ ಕ್ರಮವಾಗಿ ಪರಾಕ್ರಮ ಮತ್ತು ವ್ಯಾಪಾರದಿಂದ ಸಂಪಾದಿಸಿದ ಧನವು ಉತ್ತಮವಾದುದು. ಕೂಲಿಯಿಂದ ಸಂಪಾದಿಸಿದ ಧನವು ಶೂದ್ರರಿಗೆ ಉತ್ತಮವಾದು. ಧರ್ಮಾರ್ಥಿಗಳಾದ ಸ್ತ್ರೀಯರಿಗೆ ತಂದೆಯ ಸಂಬಂಧವಾದ ಮತ್ತು ಪತಿಯ ಸಂಬಂಧವಾದ ಧನವು ಉತ್ತಮವಾದುದು.

ಸ್ತ್ರೀಣಾಂ ಧರ್ಮಾರ್ಥಿನಾಂ ದ್ರವ್ಯಂ ಪೈತೃಕಂ ಭರ್ತೃಕಂ ತಥಾ ।
ಗವಾದೀನಾಂ ದ್ವಾದಶಾನಾಂ ಚೈತ್ರಾದಿಷು ಯಥಾಕ್ರಮಂ ॥ ೪೨ ॥

ಸಂಭೂಯ ವಾ ಪುಣ್ಯಕಾಲೇ ದದ್ಯಾದಿಷ್ಟಾರ್ಥಸಿದ್ಧಯೇ ।
ಗೋಭೂತಿಲಹಿರಣ್ಯಾಜ್ಯವಾಸೋಧಾನ್ಯಗುಡಾನಿ ಚ ॥ ೪೩ ॥

ರೌಪ್ಯಂ ಲವಣಕೂಷ್ಮಾಂಡೇ ಕನ್ಯಾ ದ್ವಾದಶಕಂ ತಥಾ ।
ಗೋದಾನಾದ್ದತ್ತಗವ್ಯೇನ ಗೋಮಯೇನೋಪಕಾರಿಣಾ ॥ ೪೪ ॥

ಧನಧಾನ್ಯಾದ್ಯಾಶ್ರಿತಾನಾಂ ದುರಿತಾನಾಂ ನಿವಾರಣಂ ।
ಜಲಸ್ನೇಹಾದ್ಯಾಶ್ರಿತಾನಾಂ ದುರಿತಾನಾಂ ತು ಗೋಜಲೈಃ ॥ ೪೫ ॥

ಕಾಯಿಕಾದಿತ್ರಯಾಣಾಂ ತು ಕ್ಷೀರದಧ್ಯಾಜ್ಯಕೈಸ್ತಥಾ ।
ತಥಾ ತೇಷಾಂ ಚ ಪುಷ್ಟಿಶ್ಚ ವಿಜ್ಞೇಯಾ ಹಿ ವಿಪಶ್ಚಿತಾ ॥ ೪೬ ॥

---

೪೨. ಮುಂದೆ ಹೇಳುವ ಹಸು ಮುಂತಾದ ಹನ್ನೆರಡು ವಸ್ತುಗಳನ್ನು ಕ್ರಮವಾಗಿ ಚೈತ್ರ ಮೊದಲಾದ ಹನ್ನೆರಡು ಮಾಸಗಳಲ್ಲಿ ದಾನಮಾಡಿದರೆ ಇಷ್ಟಸಿದ್ಧಿಯಾಗುವುದು. ಅಥವಾ ಯಾವುದಾದರೊಂದು ಪುಣ್ಯಕಾಲದಲ್ಲಿ ಇ ಹನ್ನೆರಡು ದಾನಗಳನ್ನೂ ಒಟ್ಟಿಗೆ ಮಾಡಬಹುದು.

೪೩. ಹಸು, ಭೂಮಿ, ಎಳ್ಳು, ಸುವರ್ಣ, ತುಪ್ಪ, ವಸ್ತ್ರ, ಧಾನ್ಯ, ಬೆಲ್ಲ, ಬೆಳ್ಳಿ, ಉಪ್ಪು, ಕುಂಬಳಕಾಯಿ, ಕನ್ಯಾ, ಇವು ಹನ್ನೆರಡು ದಾನವಸ್ತುಗಳು. ಇವುಗಳನ್ನು ದಾನಮಾಡಬೇಕು.

೪೪-೪೫. ಗೋದಾನ ಮಾಡಿದರೆ ಅವುಗಳ ಬೆಣ್ಣೆ ಮತ್ತು ಗೋಮಯುಗಳಿಂದ ಧನ ಮತ್ತು ಧಾನ್ಯ ಮುಂತಾದುವುಗಳನ್ನನುಭವಿಸುವುದರಿಂದ ಬರುವ ಪಾಪಗಳು ನಾಶವಾಗುವುವು. ಜಲ ಮತ್ತು ಎಣ್ಣೆ, ತುಪ್ಪ ಮುಂತಾದುವುಗಳ ಪಾಪವು ಗೋಮೂತ್ರದಿಂದ ನಾಶವಾಗುವುದು.

೪೬. ದಾನಮಾಡಿದ ಹಸುಗಳ ಹಾಲು, ಮೊಸರು, ತುಪ್ಪ, ಈ ಮೂರರಿಂದ ಕಾಯಿಕ, ವಾಚಿಕ, ಮಾನಸಿಕ, ಎಂಬ ಮೂರು ಪಾಪಗಳು ನಾಶವಾಗುವುವು. ಮತ್ತು ಹಾಲು, ಮೊಸರು, ತುಪ್ಪ ಇವುಗಳು ದಾತೃವಿನ ಮನೆಯಲ್ಲಭಿವೃದ್ಧಿಗೊಳ್ಳುವುವು.

ಭೂದಾನಂ ತು ಪ್ರತಿಷ್ಠಾರ್ಥಮಿಹ ಚಾಮುತ್ರ ಚ ದ್ವಿಜಾಃ ।
ತಿಲದಾನಂ ಬಲಾರ್ಥಂ ಹಿ ಸದಾ ಮೃತ್ಯುಜಯಂ ವಿದುಃ ॥ ೪೭ ॥

ಹಿರಣ್ಯಂ ಜಾಠರಾಗ್ನೇಸ್ತು ವೀರ್ಯದಂ ವೃದ್ಧಿದಂ ತಥಾ ।
ಆಜ್ಯಂ ಪುಷ್ಟಿಕರಂ ವಿದ್ಯಾದ್ವಸ್ತ್ರಮಾಯುಷ್ಕರಂ ವಿದುಃ ॥ ೪೮ ॥

ಧಾನ್ಯಮನ್ನಸಮೃದ್ಧ್ಯರ್ಥಂ ಮಧುರಾಹಾರದಂ ಗುಡಂ ।
ರೌಪ್ಯಂ ರೇತೋಽಭಿವೃದ್ಧ್ಯರ್ಥಂ ಷಡ್ರಸಾರ್ಥಂ ತು ಲಾವಣಂ ॥ ೪೯ ॥

ಸರ್ವಂ ಸರ್ವಸಮೃದ್ಧ್ಯರ್ಥಂ ಕೂಷ್ಮಾಂಡಂ ಪುಷ್ಟಿದಂ ವಿದುಃ ।
ಪ್ರಾಪ್ತಿದಂ ಸರ್ವಭೋಗಾನಾಮಿಹ ಚಾಮುತ್ರ ಚ ದ್ವಿಜಾಃ ॥ ೫೦ ॥

ಯಾವಜ್ಜೀವನಮುಕ್ತಂ ಹಿ ಕನ್ಯಾದಾನಂ ತು ಭೋಗದಂ ।
ಪನಸಾಮ್ರಕಪಿತ್ಥಾನಾಂ ವೃಕ್ಷಾಣಾಂ ಫಲಮೇವ ಚ ॥ ೫೧ ॥

---

೪೭. ಭೂದಾನಮಾಡಿದರೆ ಇಹಪರ ಜನ್ಮಗಳಲ್ಲಿ ಪ್ರತಿಷ್ಠೆಯು ಲಭಿಸುವುದು. ತಿಲದಾನದಿಂದ ಬಲವು ಬರುವುದು. ಅಪಮೃತ್ಯುವು ನಾಶವಾಗುವುದು.

೪೮-೪೯. ಸುವರ್ಣದಾನದಿಂದ ಜಾಠರಾಗ್ನಿಗೆ ವೃದ್ಧಿಯೂ ವೀರ್ಯ-(ಸಾಮರ್ಥ್ಯ)ವೂ ಉಂಟಾಗುವುವು. ಆಜ್ಯದಾನದಿಂದ ಪುಷ್ಟಿಯು ಲಭಿಸುವುದು, ವಸ್ತ್ರದಾನದಿಂದ ಆಯುಸ್ಸು ಲಭಿಸುವುದು, ಧಾನ್ಯದಾನದಿಂದ ಅನ್ನಸಮೃದ್ಧಿಯಾಗುವುದು. ಬೆಲ್ಲವನ್ನು ದಾನಮಾಡಿದರೆ ಮಧುರವಾದ ಆಹಾರವು ಲಭಿಸುವುದು. ಬೆಳ್ಳಿಯ ದಾನದಿಂದ ತೇಜಸ್ಸು ಅಭಿವೃದ್ಧಿಯಾಗುವುದು. ಲವಣ (ಉಪ್ಪು) ದಾನದಿಂದ ಷಡ್ರಸಗಳು ವೃದ್ಧಿಗೊಳ್ಳುವುವು.

೫೦. ಕೂಷ್ಮಾಂಡ (ಕುಂಬಳಕಾಯಿ) ವನ್ನು ದಾನಮಾಡಿದರೆ ಪುಷ್ಟಿಯು ಲಭಿಸುವುದು. ಮೇಲೆಹೇಳಿದ ಎಲ್ಲಾವಸ್ತುಗಳನ್ನೂ ದಾನಮಾಡಿದರೆ ಇಹಪರಗಳಲ್ಲಿ ಸಕಲ ಭೋಗವೂ ಎಲ್ಲಾ ಫಲಗಳೂ ಲಭಿಸುಲಭಿಸುವುವು. ಕನ್ಯಾದಾನಮಾಡಿದರೆ ಜೀವಿಸಿರುವ ಪರ್ಯಂತವೂ ಭೋಗಗಳು ಲಭಿಸುವುವು.

೫೧-೫೩. ಹಲಸಿನಹಣ್ಣು, ಮಾವಿನಹಣ್ಣು, ಬೇಲದಹಣ್ಣು, ಬಾಳೇಹಣ್ಣು, ಮಿಕ್ಕ ವನಸ್ಪತಿಗಳ ಫಲ, ದ್ರಾಕ್ಷಿ ಮುಂತಾದುವುಗಳು, ಉದ್ದು, ಹೆಸರು, ತರಕಾರಿ, ಮೆಣಸು, ಸಾಸಿವೆ ಮುಂತಾದ ಅಡಿಗೆ ಸಾಮಗ್ರಿಗಳು ಇವುಗಳನ್ನೂ ದಾನಮಾಡ

ಕದಲ್ಯಾದ್ಯೌಷಧೀನಾಂ ಚ ಫಲಂ ಗುಲ್ಮೋದ್ಭವಂ ತಥಾ ।
ಮಾಷಾದೀನಾಂ ಚ ಮುದ್ಗಾನಾಂ ಫಲಂ ಶಾಕಾದಿಕಂ ತಥಾ　　॥ ೫೨ ॥

ಮರೀಚಿಸರ್ಷಪಾದ್ಯಾನಾಂ ಶಾಕೋಪಕರಣಂ ತಥಾ ।
ಯದ್ವೃತೌ ಯತ್ಫಲಂ ಸಿದ್ಧಂ ತದ್ದೇಯಂ ಹಿ ವಿಪಶ್ಚಿತಾ　　॥ ೫೩ ॥

ಶ್ರೋತ್ರಾದೀಂದ್ರಿಯತೃಪ್ತಿಶ್ಚ ಸದಾ ದೇಯಾ ವಿಪಶ್ಚಿತಾ ।
ಶಬ್ದಾದಿದಶಭೋಗಾರ್ಥಂ ದಿಗಾದೀನಾಂ ತು ತುಷ್ಟಿದಾ　　॥ ೫೪ ॥

ವೇದಶಾಸ್ತ್ರಂ ಸಮಾಪಾಯ ಬುದ್ಧ್ವಾ ಗುರುಮುಖಾತ್ಸ್ವಯಂ ।
ಕರ್ಮಣಾಂ ಫಲಮಸ್ತೀತಿ ಬುದ್ಧಿರಾಸ್ತಿಕ್ಯಮುಚ್ಯತೇ　　॥ ೫೫ ॥

ಬಂಧುರಾಜಭಯಾದ್ಬುದ್ಧಿಃ ಶ್ರದ್ಧಾ ಸಾ ಚ ಕನೀಯಸೀ ।
ಸರ್ವಾಭಾವೇ ದರಿದ್ರಸ್ತು ವಾಚಾ ವಾ ಕರ್ಮಣಾ ಯಜೇತ್　　॥ ೫೬ ॥

ವಾಚಿಕಂ ಯಜನಂ ವಿದ್ಯಾನ್ಮಂತ್ರಸ್ತೋತ್ರಜಪಾದಿಕಂ ।
ತೀರ್ಥಯಾತ್ರಾ ವ್ರತಾದ್ಯಂ ಹಿ ಕಾಯಿಕಂ ಯಜನಂ ವಿದುಃ　　॥ ೫೭ ॥

---

ಬೇಕು. ಮತ್ತು ಯಾವ ಋತುವಿನಲ್ಲಿ ಯಾವ ಫಲವು ಬಿಡುವುದೋ ಅದೆಲ್ಲವನ್ನೂ ದಾನಮಾಡಬೇಕು.

೫೪. ಕಿವಿಯೇ ಮೊದಲಾದ ಹತ್ತು ಜ್ಞಾನೇಂದ್ರಿಯಗಳ ಮತ್ತು ಕರ್ಮೇಂದ್ರಿಯಗಳತೃಪ್ತಿಗಾಗಿ ಶಬ್ದ(ಸಂಗೀತ)ವೇ ಮೊದಲಾದ ಹತ್ತು ವಿಷಯಗಳನ್ನು ಅತಿಥಿಗಳಿಗೆ ಸಲ್ಲಿಸಬೇಕು, ಅದರಿಂದ ದಿಗ್ದೇವತೆಗಳು ಸಂತೋಷಗೊಂಡು ಬೇಕಾದ ಭೋಗವನ್ನು ಕರುಣಿಸುವರು.

೫೫. ಗುರುಮುಖದಿಂದ ವೇದ ಮತ್ತು ಶಾಸ್ತ್ರಗಳನ್ನು ಅಭ್ಯಾಸಮಾಡಿ ಕರ್ಮಗಳಿಗೆ ಫಲವು ಇರುವುದೆಂದು ತಿಳಿಯುವುದೇ ಆಸ್ತಿಕ್ಯ ಬುದ್ಧಿಯು.

೫೬. ಬಂಧು ಮತ್ತು ರಾಜ ಇವರ ಭಯದಿಂದ ಸನ್ಮಾರ್ಗದಲ್ಲಿ ನಡೆಯುವ ಬುದ್ಧಿಯು ಶ್ರದ್ಧೆಯೆನಿಸಿಕೊಳ್ಳುವದು. ಅದು ಆಸ್ತಿಕ್ಯಬುದ್ಧಿಗಿಂತ ಉತ್ತಮವಾದುದಲ್ಲ. ಪೂಜಿಸಲು ಯಾವ ಸಾಮಗ್ರಿಯೂ ಇಲ್ಲದ ದರಿದ್ರನು, ಬರೀ ಮಂತ್ರಗಳಿಂದಲಾಗಲಿ ಕರ್ಮದಿಂದಲಾಗಲೀ ಪೂಜಿಸಬೇಕು.

೫೭. ಮಂತ್ರಪಠನ, ಸ್ತೋತ್ರಪಠನ, ಜಪ ಮುಂತಾದುವುಗಳು, ವಾಕ್ಕಿನಿಂದ ಮಾಡುವಂತಹ ಪೂಜೆಯು. ತೀರ್ಥಯಾತ್ರೆ, ವ್ರತ ಮುಂತಾದುವುಗಳು ಕರ್ಮದಿಂದಾಗುವ ಪೂಜೆಯು.

ಯೇನ ಕೇನಾಪ್ಯುಪಾಯೇನ ಹ್ಯಲ್ಪಂ ವಾ ಯದಿ ವಾ ಬಹು ।
ದೇವತಾರ್ಪಣಬುದ್ಧ್ಯಾ ಚ ಕೃತಂ ಭೋಗಾಯ ಕಲ್ಪತೇ ॥ ೫೮ ॥

ತಪಶ್ಚರ್ಯಾ ಚ ದಾನಂ ಚ ಕರ್ತವ್ಯಮುಭಯಂ ಸದಾ ।
ಪ್ರತಿಶ್ರಯಂ ಪ್ರದಾತವ್ಯಂ ಸ್ವವರ್ಣಂ ಗುಣಶೋಭಿತಂ ॥ ೫೯ ॥

ದೇವಾನಾಂ ತೃಪ್ತಯೇಽತ್ಯರ್ಥಂ ಸರ್ವಭೋಗಪ್ರದಂ ಬುಧೈಃ ।
ಇಹಾಮುತ್ರೋತ್ತಮಂ ಜನ್ಮ ಸದಾ ಭೋಗಂ ಲಭೇದ್ಬುಧಃ ॥ ೬೦ ॥

ಈಶ್ವರಾರ್ಪಣಬುದ್ಧ್ಯಾ ಹಿ ಕೃತ್ವಾ ಮೋಕ್ಷಫಲಂ ಲಭೇತ್ ।
ಯ ಇಮಂ ಪಠತೇಽಧ್ಯಾಯಂ ಯಃ ಶೃಣೋತಿ ನರಸ್ಸದಾ ॥ ೬೧ ॥
ತಸ್ಯ ವೈ ಧರ್ಮಬುದ್ಧಿಶ್ಚ ಜ್ಞಾನಸಿದ್ಧಿಃ ಪ್ರಜಾಯತೇ ।

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಪಂಚದಶೋಽಧ್ಯಾಯಃ.

---

೫೮. ಯಾವರೀತಿ ಮಾಡಿದ ಕರ್ಮವಾದರೂ ಚಿಕ್ಕದಾಗಲಿ, ದೊಡ್ಡದಾಗಲಿ ಅದನ್ನು ದೇವತಾರ್ಪಣ ಬುದ್ಧಿಯಿಂದ ಮಾಡಿದರೆ ಉತ್ತಮವಾದ ಭೋಗವು 'ಲಭಿಸುವುದು.

೫೯. ತಪಸ್ಸು ಮತ್ತು ದಾನ ಮತ್ತು ಇವುಗಳನ್ನು ಸದಾ ಮಾಡಬೇಕು. ಗುಣವಂತನಾದ ಸ್ವಜಾತಿಯವನಿಗೆ ಆಶ್ರಯವನ್ನು ಕೊಡಬೇಕು.

೬೦. ದೇವತೆಗಳ ತೃಪ್ತಿಗಾಗಿ ಸಕಲ ಭೋಗವನ್ನುಂಟುಮಾಡುವಂತಹ ಉತ್ತಮ ಜನ್ಮವನ್ನು ಪುಣ್ಯದಿಂದ ಇಹಪರಗಳೆರಡಲ್ಲೂ ಸಂಪಾದಿಸಬೇಕು. ಅದರಿಂದ ಇಹಪರಗಳೆರಡರಲ್ಲೂ ಉತ್ತಮವಾದ ಭೋಗವು ಲಭಿಸುವುದು.

೬೧. ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡಿದರೆ ಮುಕ್ತಿಯು ಲಭಿಸುವುದು. ಈ ಅಧ್ಯಾಯಮನ್ನ ಯಾವನು ಪಠಿಸುವನೋ ಮತ್ತು ಕೇಳುವನೋ ಅವನಿಗೆ ಧರ್ಮಬುದ್ಧಿಯೂ ಜ್ಞಾನಸಿದ್ಧಿಯೂ ಉಂಟಾಗುವುವು.

ಇಲ್ಲಿಗೆ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಹದಿನೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಷೋಡಶೋಽಧ್ಯಾಯಃ

---

॥ ಋಷಯ ಊಚುಃ ॥

ಪಾರ್ಥಿವಪ್ರತಿಮಾಪೂಜಾವಿಧಾನಂ ಬ್ರೂಹಿ ಸತ್ತಮ ।
ಯೇನ ಪೂಜಾವಿಧಾನೇನ ಸರ್ವಾಭೀಷ್ಟಮವಾಪ್ಸ್ಯತೇ ॥ ೧ ॥

॥ ಸೂತ ಉವಾಚ ॥

ಸುಸಾಧು ಪೃಷ್ಟಂ ಯುಷ್ಮಾಭಿಃ ಸದಾ ಸರ್ವಾರ್ಥದಾಯಕಂ ।
ಸದ್ಯೋ ದುಃಖಸ್ಯ ಶಮನಂ ಶೃಣುತ ಪ್ರಬ್ರವೀಮಿ ವಃ ॥ ೨ ॥

---

## ಹದಿನಾರನೆಯ ಅಧ್ಯಾಯವು.

೧. ಋಷಿಗಳು ಕೇಳಿದರು :—ಓ ಸೂತಮುನಿವರ್ಯನೇ ! ಸಕಲ ಇಷ್ಟಾರ್ಥಗಳನ್ನುಂಟುಮಾಡುವಂತಹ ಪಾರ್ಥಿವಪ್ರತಿಮೆಯ ಪೂಜೆಯ ವಿಧಾನವನ್ನು ನಮಗೆ ಹೇಳು ಎನ್ನಲು,

೨. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ! ನೀವು ಒಳ್ಳೆಯದನ್ನೇ ಕೇಳಿರುವಿರಿ. ನೀವು ಕೇಳಿರುವ ವಿಷಯವು ಸಕಲ ಇಷ್ಟಾರ್ಥಗಳನ್ನುಂಟುಮಾಡುವಂತಹುದು. ತಕ್ಷಣ ದುಃಖವನ್ನು ನಾಶಮಾಡುವಂತಹುದು. ಅದನ್ನು ಹೇಳುವೆನು, ಕೇಳಿರಿ.

ಅಪಮೃತ್ಯುಹರಂ ಕಾಲಮೃತ್ಯೋಶ್ಚಾಪಿ ವಿನಾಶನಂ।
ಸದ್ಯಃ ಕಲತ್ರಪುತ್ರಾದಿಧನಧಾನ್ಯಪ್ರದಂ ದ್ವಿಜಾಃ ॥ ೩ ॥

ಅನ್ನಾದಿಭೋಜ್ಯಂ ವಸ್ತ್ರಾದಿ ಸರ್ವಮುತ್ಪದ್ಯತೇ ಯತಃ।
ಮೃದಾದಿಪ್ರತಿಮಾಪೂಜಾ ಸರ್ವಾಭೀಷ್ಟಪ್ರದಾ ಭುವಿ ॥ ೪ ॥

ಪುರುಷಾಣಾಂ ಚ ನಾರೀಣಾಮಧಿಕಾರೋಽತ್ರ ನಿಶ್ಚಿತಂ।
ನದ್ಯಾಂ ತಡಾಗೇ ಕೂಪೇ ವಾ ಜಲಾಂತರ್ಮೃದಮಾಹರೇತ್ ॥ ೫ ॥

ಸಂಶೋಧ್ಯ ಗಂಧಚೂರ್ಣೇನ ಪೇಷಯಿತ್ವಾ ಸುಮಂಡಪೇ।
ಹಸ್ತೇನ ಪ್ರತಿಮಾಂ ಕುರ್ಯಾತ್ಕ್ಷೀರೇಣ ಚ ಸುಸಂಸ್ಕೃತಾಂ ॥ ೬ ॥

ಅಂಗಪ್ರತ್ಯಂಗಕೋಪೇತಾಮಾಯುಧೈಶ್ಚ ಸಮನ್ವಿತಾಂ।
ಪದ್ಮಾಸನಸ್ಥಿತಾಂ ಕೃತ್ವಾ ಪೂಜಯೇದಾದರೇಣ ಹಿ ॥ ೭ ॥

---

೩. ಮತ್ತು ನೀವು ಕೇಳಿದ ವಿಷಯವು ಅಪಮೃತ್ಯು ಕಾಲಮೃತ್ಯುಗಳನ್ನು ನಾಶಮಾಡುವಂತಹುದು. ಪತ್ನಿ, ಪುತ್ರ, ಧನ, ಧಾನ್ಯ, ಇವುಗಳನ್ನು ಶೀಘ್ರವಾಗಿ ಅಭಿವೃದ್ಧಿಗೊಳಿಸುವುದು.

೪. ಅನ್ನಾದಿ ಆಹಾರವಸ್ತುಗಳೂ ವಸ್ತ್ರ ಮುಂತಾದ ಭೋಗ್ಯವಸ್ತುಗಳೂ ಅದರಿಂದ ಸಿದ್ಧಿಸುವುವು. ಆದುದರಿಂದ ನೀವು ಕೇಳಿದ ಮಣ್ಣು ಮುಂತಾದುವುಗಳಿಂದ ನಿರ್ಮಿತವಾದ ಪಾರ್ಥಿವವಿಗ್ರಹವನ್ನು ಪೂಜಿಸುವುದು ಸಕಲ ಇಷ್ಟಾರ್ಥವನ್ನುಂಟು ಮಾಡುವುದು.

೫. ವಿಗ್ರಹಪೂಜೆಯಲ್ಲಿ ಸ್ತ್ರೀಪುರುಷರೀರ್ವರಿಗೂ ಅಧಿಕಾರವಿರುವುದು. ವಿಗ್ರಹಕ್ಕಾಗಿ ನದಿ, ಸರೋವರ, ಕಲ್ಯಾಣಿ ಮುಂತಾದುವುಗಳ ನೀರಿನ ಮಧ್ಯದಲ್ಲಿರುವ ಮಣ್ಣನ್ನು ತರಬೇಕು.

೬. ಆ ಮಣ್ಣನ್ನು ಚೆನ್ನಾಗಿ ಶೋಧಿಸಿ ಹದಮಾಡಿ, ಗಂಧವಪುಡಿಯಿಂದ ಸುವಾಸನೆಗೊಳಿಸಿ, ಹಾಲನ್ನು ಸೇರಿಸಿ ಕೈಯಿನಿಂದ ವಿಗ್ರಹವನ್ನು ಮಾಡಬೇಕು.

೭. ಆ ವಿಗ್ರಹಕ್ಕೆ ಪ್ರತಿಯೊಂದು ಅಂಗಗಳನ್ನೂ ಮಾಡಿ ಆಯಾಯ ಆಯುಧಗಳೊಡನೆ ಪದ್ಮಾಸನದಲ್ಲಿ ಕುಳಿತಿರುವಂತೆ ನಿರ್ಮಿಸಿ ಶ್ರದ್ಧೆಯಿಂದ ಅದನ್ನು ಪೂಜಿಸಬೇಕು.

ವಿಘ್ನೇಶಾದಿತ್ಯವಿಷ್ಣೂನಾಮಂಬಾಯಾಶ್ಚ ಶಿವಸ್ಯ ಚ ।
ಶಿವಸ್ಯ ಶಿವಲಿಂಗಂ ಚ ಸರ್ವದಾ ಪೂಜಯೇದ್ದ್ವಿಜಃ । ॥ ೮ ॥

ಷೋಡಶೈರುಪಚಾರೈಶ್ಚ ಕುರ್ಯಾತ್ತತ್ಫಲಸಿದ್ಧಯೇ ।
ಪುಷ್ಪೇಣ ಪ್ರೋಕ್ಷಣಂ ಕುರ್ಯಾದಭಿಷೇಕಂ ಸಮಂತ್ರಕಂ ॥ ೯ ॥

ಶಾಲ್ಯನ್ನೇನೈವ ನೈವೇದ್ಯಂ ಸರ್ವಂ ಕುಡವಮಾನತಃ ।
ಗೃಹಂ ತು ಕುಡವಂ ಜ್ಞೇಯಂ ಮಾನುಷೇ ಪ್ರಸ್ಥಮಿಷ್ಯತೇ ॥ ೧೦ ॥

ದೈವೇ ಪ್ರಸ್ಥತ್ರಯಂ ಯೋಗ್ಯಂ ಸ್ವಯಂಭೋಃ ಪ್ರಸ್ಥಪಂಚಕಂ ।
ಏವಂ ಪೂರ್ಣಫಲಂ ವಿದ್ಯಾದಧಿಕಂ ವೈ ದ್ವಯಂ ತ್ರಯಂ ॥ ೧೧ ॥

ಸಹಸ್ರಪೂಜಯಾ ಸತ್ಯಂ ಸತ್ಯಲೋಕಂ ಲಭೇದ್ದ್ವಿಜಃ ।
ದ್ವಾದಶಾಂಗುಲಮಾಯಾಮಂ ದ್ವಿಗುಣಂ ಚ ತತೋಽಧಿಕಂ ॥ ೧೨ ॥

---

೮. ವಿನಾಯಕ, ಸೂರ್ಯ, ವಿಷ್ಣು, ಜಗನ್ಮಾತೆಯಾದ ಪಾರ್ವತಿ, ಶಿವ ಇವರ ವಿಗ್ರಹಳಗನ್ನೂ ಶಿವಲಿಂಗವನ್ನೂ ನಿರ್ಮಿಸಿ, ಹದಿನಾರು ಉಪಚಾರಗಳಿಂದ ಸದಾ ಪೂಜಿಸಬೇಕು.

೯. ಹೂವಿನಿಂದ ಪ್ರೋಕ್ಷಣವನ್ನು ಮಾಡಿ ಮಂತ್ರಪೂರ್ವಕವಾಗಿ ವಿಗ್ರಹಕ್ಕೆ ಅಭಿಷೇಕವನ್ನು ಮಾಡಬೇಕು. ಶಾಲ್ಯನ್ನವನ್ನು ನೈವೇದ್ಯಮಾಡಬೇಕು. ನೈವೇದ್ಯವು ಒಂದು ಕೊಳಗ ಪ್ರಮಾಣವುಳ್ಳದ್ದಾಗಿರಬೇಕು.

೧೦-೧೧. ಮನೆಯಲ್ಲಿ ಒಂದು ಕುಡವದಷ್ಟು ನೈವೇದ್ಯವು ಇರಬೇಕು' ದೇವಾಲಯದಲ್ಲಿ ಒಂದು ಪ್ರಸ್ಥ ನೈವೇದ್ಯಮಾಡಬೇಕು. ದೇವನಿರ್ಮಿತವಾದ ವಿಗ್ರಹಕ್ಕೆ ಮೂರು ಪ್ರಸ್ಥದಷ್ಟು ನಿವೇದನಮಾಡಬೇಕು. ಉದ್ಭವಿಸಿದ ಸ್ಥಳದಲ್ಲಿ ಐದು ಪ್ರಸ್ಥ ನೈವೇದ್ಯವನ್ನು ಮಾಡಬೇಕು. ಹೀಗೆ ಮಾಡಿದರೆ ಪೂರ್ಣವಾದ ಫಲವು ಲಭಿಸುವುದು. ಇದಕ್ಕಿಂತಲೂ ಎರಡು ಮೂರರಷ್ಟು ಮಾಡಿದರೆ ಹೆಚ್ಚಾದ ಫಲವು ಲಭಿಸುವುದು. ಸಹಸ್ರ ಪೂಜೆಯನ್ನು ಮಾಡಿದರೆ ಸತ್ಯಲೋಕವು ಲಭಿಸುವುದು.

೧೨-೧೩. ಹನ್ನೆರಡು ಅಂಗುಲ ಅಗಲವಾಗಿಯೂ, ಹದಿನೈದು ಅಂಗುಲ ಎತ್ತರವಾಗಿಯೂ, ಒಂದುಗುಲ ದಪ್ಪವಾಗಿಯೂ ಇರುವಂತಹ ಲೋಹ ಮತ್ತು ಮರಗಳಿಂದ ಮಾಡಿದ ಪಾತ್ರಕ್ಕೆ "ಶಿವ" ವೆಂದು ಹೆಸರು. ಆ ಶಿವದ ಎಂಟನೆಯ ಒಂದು

ಪ್ರಮಾಣಮಂಗುಲಸ್ಯೈಕಂ ತದೂರ್ಧ್ವಂ ಪಂಚಕತ್ರಯಂ ।
ಅಯೋದಾರುಕೃತಂ ಪಾತ್ರಂ ಶಿವಮಿತ್ಯುಚ್ಯತೇ ಬುಧೈಃ ॥ ೧೩ ॥

ತದಷ್ಟಭಾಗಃ ಪ್ರಸ್ಥಸ್ಸ್ಯಾತ್ತಚ್ಚತುಃ ಕುಡವಂ ಮತಂ ।
ದಶಪ್ರಸ್ಥಂ ಶತಪ್ರಸ್ಥಂ ಸಹಸ್ರಪ್ರಸ್ಥಮೇವ ಚ ॥ ೧೪ ॥

ಜಲತೈಲಾದಿಗಂಧಾನಾಂ ಯಥಾಯೋಗ್ಯಂ ಚ ಮಾನತಃ ।
ಮಾನುಷಾರ್ಷಸ್ವಯಂಭೂನಾಂ ಮಹಾಪೂಜೇತಿ ಕಥ್ಯತೇ ॥ ೧೫ ॥

ಅಭಿಷೇಕಾದಾತ್ಮಶುದ್ಧಿರ್ಗಂಧಾತ್ಪುಣ್ಯಮವಾಪ್ಯತೇ ॥
ಆಯುಸ್ತೃಪ್ತಿಶ್ಚ ನೈವೇದ್ಯಾದ್ಧೂಪಾದರ್ಥಮವಾಪ್ಯತೇ ॥ ೧೬ ॥

ದೀಪಾಜ್ಞ್ಞಾನಮವಾಪ್ನೋತಿ ತಾಂಬೂಲಾದ್ಭೋಗಮಾಪ್ನುಯಾತ್ ।
ತಸ್ಮಾತ್ಸ್ನಾನಾದಿಕಂ ಷಟ್ಕಂ ಪ್ರಯತ್ನೇನ ಪ್ರಸಾಧಯೇತ್ ॥ ೧೭ ॥

ನಮಸ್ಕಾರೋ ಜಪಶ್ಚೈವ ಸರ್ವಾಭೀಷ್ಟಪ್ರದಾವುಭೌ ।
ಪೂಜಾಂತೇ ಚ ಸದಾ ಕಾರ್ಯೌ ಭೋಗಮೋಕ್ಷಾರ್ಥಿಭಿರ್ನರೈಃ ॥ ೧೮ ॥

---

ಭಾಗಕ್ಕೆ "ಪ್ರಸ್ಥ" ವೆಂದು ಹೆಸರು. ಆ ಪ್ರಸ್ಥದ ನಾಲ್ಕನೆಯ ಒಂದು ಭಾಗಕ್ಕೆ "ಕುಡವ" ವೆಂದು ಹೆಸರು.

೧೪-೧೫. ಜಲ, ತೈಲ ಮತ್ತು ಗಂಧ ಮೊದಲಾದುವುಗಳನ್ನು ಮನುಷ್ಯರು ನಿರ್ಮಿಸಿದ ದೇವವಿಗ್ರಹ, ಋಷಿಗಳು ನಿರ್ಮಿಸಿದ ದೇವವಿಗ್ರಹ, ಉದ್ಭವಿಸಿದ ವಿಗ್ರಹ ಇವುಗಳಿಗೆ ಕ್ರಮವಾಗಿ ಹತ್ತು ಪ್ರಸ್ಥ, ನೂರು ಪ್ರಸ್ಥ, ಸಹಸ್ರಪ್ರಸ್ಥ, ಪ್ರಮಾಣಗಳಷ್ಟು ನಿವೇದಿಸಿ ಅರ್ಚಿಸಿದರೆ ಅದಕ್ಕೆ ಮಹಾಪೂಜೆಯೆಂದು ಹೆಸರು.

೧೬-೧೭. ಅಭಿಷೇಕದಿಂದ ಆತ್ಮಶುದ್ಧಿಯೂ, ಗಂಧವನ್ನರ್ಪಿಸಿದರೆ ಪುಣ್ಯವೂ, ನೈವೇದ್ಯದಿಂದ ಆಯುಸ್ಸು ಮತ್ತು ತೃಪ್ತಿಯೂ, ಧೂಪದಿಂದ ಧನವೂ, ದೀಪದಿಂದ ಜ್ಞಾನವೂ, ತಾಂಬೂಲದಿಂದ ಭೋಗವೂ ಲಭಿಸುವುವು. ಆದುದರಿಂದ ಸ್ನಾನ ಮೊದಲಾದ ಆರು ಉಪಚಾರಗಳನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು.

೧೮. ನಮಸ್ಕಾರ ಮತ್ತು ಜಪಗಳು ಸಕಲ ಇಷ್ಟಾರ್ಥಗಳನ್ನು ಕೊಡುವುವು. ಭೋಗ ಮತ್ತು ಮುಕ್ತಿಗಳನ್ನಪೇಕ್ಷಿಸುವವರು ಪೂಜೆಯ ಕೊನೆಯಲ್ಲಿ ಆ ನಮಸ್ಕಾರ ಮತ್ತು ಜಪಗಳನ್ನು ಮಾಡಬೇಕು.

ಸಂಪೂಜ್ಯ ಮನಸಾ ಪೂರ್ವಂ ಕುರ್ಯಾತ್ತತ್ತತ್ಸದಾ ನರಃ ।
ದೇವಾನಾಂ ಪೂಜಯಾ ಚೈವ ತತ್ತಲ್ಲೋಕಮವಾಪ್ನುಯಾತ್ ॥ ೧೯ ॥

ತದವಾಂತರಲೋಕೇ ಚ ಯಥೇಷ್ಟಂ ಭೋಗ್ಯಮಾಪ್ಯತೇ ।
ತದ್ವಿಶೇಷಾನ್ ಪ್ರವಕ್ಷ್ಯಾಮಿ ಶೃಣುತ ಶ್ರದ್ಧಯಾ ದ್ವಿಜಾಃ ॥ ೨೦ ॥

ವಿಘ್ನೇಶಪೂಜಯಾ ಸಮ್ಯಗ್ಭೂಲೋಕೇಽಭೀಷ್ಟಮಾಪ್ನುಯಾತ್ ।
ಶುಕ್ರವಾರೇ ಚತುರ್ಥ್ಯಾಂ ಚ ಸಿತೇ ಶ್ರಾವಣಭಾದ್ರಕೇ ॥ ೨೧ ॥

ಭಿಷಗೃಕ್ಷೇ ಧನುರ್ಮಾಸೇ ವಿಘ್ನೇಶಂ ವಿಧಿವದ್ಯಜೇತ್ ।
ಶತಂ ಪೂಜಾ ಸಹಸ್ರಂ ವಾ ತತ್ಸಂಖ್ಯಾಕದಿನೈರ್ವ್ರಜೇತ್ ॥ ೨೨ ॥

ದೇವಾಗ್ನಿಶ್ರದ್ಧಯಾ ನಿತ್ಯಂ ಪುತ್ರದಂ ಚೇಷ್ಟದಂ ನೃಣಾಂ ।
ಸರ್ವಪಾಪಪ್ರಶಮನಂ ತತ್ತದ್ದುರಿತನಾಶನಂ ॥ ೨೩ ॥

---

೧೯-೨೦. ಮೊದಲು ಮನಸ್ಸಿನಲ್ಲಿ ದೇವತೆಗಳನ್ನು ಪೂಜಿಸಿ ಆಯಾಯ ಕರ್ಮಗಳನ್ನು ಮಾಡಬೇಕು. ದೇವತೆಗಳ ಪೂಜೆಯಿಂದ ಆಯಾಯ ದೇವತೆಗಳ ಲೋಕವೂ ಆಯಾಯ ಲೋಕಗಳಲ್ಲಿ ಬೇಕಾದಂತಹ ಭೋಗ್ಯವಸ್ತುಗಳೂ ಲಭಿಸುವವು. ಆಯಾಯ ದೇವತೆಗಳ ಪೂಜಾವಿಶೇಷಗಳನ್ನು ಹೇಳುವೆನು, ಎಲೈ ಬ್ರಾಹ್ಮಣೋತ್ತಮರೆ! ಶ್ರದ್ಧೆಯಿಂದ ಕೇಳಿರಿ.

೨೧. ವಿಘ್ನೇಶ್ವರನ ಪೂಜೆಯಿಂದ ಭೂಲೋಕದಲ್ಲಿ ಸಕಲ ಇಷ್ಟಾರ್ಥಗಳು ಲಭಿಸುವುವು. ಶುಕ್ರವಾರ, ಶುಕ್ಲಚತುರ್ಥೀ, ಶ್ರಾವಣ ಮತ್ತು ಭಾದ್ರಪದಮಾಸ, ಶತಭಿಷಾನಕ್ಷತ್ರ, ಧನುರ್ಮಾಸ ಇವುಗಳಲ್ಲಿ ಗಣೇಶನನ್ನು ವಿಧಿವತ್ತಾಗಿ ಪೂಜಿಸಬೇಕು.

೨೨. ನೂರು ಅಥವಾ ಸಾವಿರದಿನಗಳವರೆಗೆ ಅಷ್ಟೇ ಸಂಖ್ಯೆಯ ಪೂಜೆಗಳನ್ನು ಮಾಡಬೇಕು.

೨೩. ಅಗ್ನಿಯನ್ನೂ, ದೇವತೆಗಳನ್ನೂ ಶ್ರದ್ಧೆಯಿಂದ ಪೂಜಿಸಿದರೆ ಪುತ್ರಸಮೃದ್ಧಿಯೂ, ಇಷ್ಟಸಿದ್ಧಿಯೂ, ಸಕಲಪಾಪನಿವೃತ್ತಿಯೂ ಆಗುವವು.

ವಾರಪೂಜಾಂ ಶಿವಾದೀನಾಮಾತ್ಮಶುದ್ಧಿಪ್ರದಾಂ ವಿದುಃ ।
ತಿಥಿನಕ್ಷತ್ರಯೋಗಾನಾಮಾಧಾರಂ ಸಾರ್ವಕಾಮಿಕಂ ॥ ೨೪ ॥

ತಥಾ ವೃದ್ಧಿಕ್ಷಯಾಭಾವಾತ್ಪೂರ್ಣಬ್ರಹ್ಮಾತ್ಮಕಂ ವಿದುಃ ।
ಉದಯಾದುದಯಂ ವಾರೋ ಬ್ರಹ್ಮಪ್ರಭೃತಿ ಕರ್ಮಣಾಂ ॥ ೨೫ ॥

ತಿಥ್ಯಾದೌ ದೇವಪೂಜಾ ಹಿ ಪೂರ್ಣಭೋಗಪ್ರದಾ ನೃಣಾಂ ।
ಪೂರ್ವಭಾಗಃ ಪಿತೄಣಾಂ ತು ನಿಶಿ ಯುಕ್ತಃ ಪ್ರಶಸ್ಯತೇ ॥ ೨೬ ॥

ಪರಭಾಗಸ್ತು ದೇವಾನಾಂ ದಿವಾಯುಕ್ತಃ ಪ್ರಶಸ್ಯತೇ ।
ಉದಯವ್ಯಾಪಿನೀ ಗ್ರಾಹ್ಯಾ ಮಧ್ಯಾಹ್ನೇ ಯದಿ ಸಾ ತಿಥಿಃ ॥ ೨೭ ॥

ದೇವಕಾರ್ಯೇ ತಥಾ ಗ್ರಾಹ್ಯಾಸ್ತಿಥಿಋಕ್ಷಾದಿಕಾಃ ಶುಭಾಃ ।
ಸಮ್ಯಗ್ವಿಚಾರ್ಯ ವಾರಾದೀನ್ ಕುರ್ಯಾತ್ಪೂಜಾಜಪಾದಿಕಂ ॥ ೨೮ ॥

---

೨೪-೨೫. ಶಿವನೇ ಮೊದಲಾದ ದೇವತೆಗಳ ವಾರಗಳಲ್ಲಿ ಆಯಾಯ ದೇವತೆಗಳನ್ನು ಪೂಜಿಸುವುದರಿಂದ ಆತ್ಮಶುದ್ಧಿಯು ಆಗುವುದು. ಆ ವಾರವು ತಿಥಿ ನಕ್ಷತ್ರ ಮತ್ತು ಯೋಗಳಿಗೆ ಆಧಾರವು. ಸಕಲ ಇಷ್ಟಾರ್ಥಮಾಡುವಂತಹುದು, ಮತ್ತು ವೃದ್ಧಿಕ್ಷಯಗಳಿಲ್ಲದುದರಿಂದ ಆ ವಾರವು ಪೂರ್ಣ ಬ್ರಹ್ಮಸ್ವರೂಪವಾದುದು. ಸೂರ್ಯೋದಯದಿಂದ ಮುಂದಿನದಿನ ಸೂರ್ಯೋದಯದ ಮಧ್ಯಕಾಲಕ್ಕೆ ವಾರವೆಂದು ಹೆಸರು. ವೇದಾಧ್ಯಯನ ಮುಂತಾದ ಕರ್ಮಗಳಿಗೆ ಯೋಗ್ಯವಾದುದು.

೨೬. ತಿಥಿಯ ಆದಿಭಾಗದಲ್ಲಿ ದೇವಪೂಜೆಯು ಪೂರ್ಣವಾದ ಫಲವನ್ನುಂಟು ಮಾಡುವುದು. ರಾತ್ರಿ ವ್ಯಾಪಿಯಾದ ತಿಥಿಯ ಪೂರ್ವಭಾಗವು ಪಿತೃ (ಕರ್ಮ) ಗಳಿಗೆ ಪ್ರಶಸ್ತವಾದುದು. ಹಗಲು ವ್ಯಾಪಿಯಾದ ತಿಥಿಯ ಕೊನೆಯ ಭಾಗವು ದೇವ (ಕರ್ಮ) ಗಳಿಗೆ ಪ್ರಶಸ್ತವಾದುದು.

೨೭-೨೮. ಮಧ್ಯಾಹ್ನದಲ್ಲಿ ಮಾಡುವಂತಹ ದೇವಕಾರ್ಯಕ್ಕೆ ಉದಯಕಾಲವನ್ನು ವ್ಯಾಪಿಸಿರುವ ತಿಥಿಯು ಗ್ರಾಹ್ಯವಾದುದು. ತಿಥಿಯಂತೆ ಶುಭವಾದ ನಕ್ಷತ್ರ ಮುಂತಾದುವುಗಳೂ ದೇವಕಾರ್ಯಕ್ಕೆ ಗ್ರಾಹ್ಯಗಳು. ವಾರ ಮುಂತಾದುವುಗಳನ್ನು ಚೆನ್ನಾಗಿ ಪರೀಕ್ಷಿಸಿ ಪೂಜಾ ಜಪಾದಿಗಳನ್ನು ಮಾಡಬೇಕು.

ಪೂರ್ಜಾಯತೇ ಹ್ಯನೇನೇತಿ ವೇದೇಷ್ವರ್ಥಸ್ಯ ಯೋಜನಾ ।
ಪೂಭೋಗಫಲಸಿದ್ಧಿಶ್ಚ ಜಾಯತೇ ತೇನ ಕರ್ಮಣಾ ॥ ೨೯ ॥

ಮನೋಭಾವಾಂಸ್ತಥಾ ಜ್ಞಾನಮಿಷ್ಟಭೋಗಾರ್ಥಯೋಜನಾತ್ ।
ಪೂಜಾಶಬ್ದಾರ್ಥ ಏವಂ ಹಿ ವಿಶ್ರುತೋ ಲೋಕವೇದಯೋಃ ॥ ೩೦ ॥

ನಿತ್ಯನೈಮಿತ್ತಿಕಂ ಕಾಲಾತ್ಸದ್ಯಃ ಕಾಮ್ಯೇ ಸ್ವನುಷ್ಠಿತೇ ।
ನಿತ್ಯಂ ಮಾಸಂ ಚ ಪಕ್ಷಂ ಚ ವರ್ಷಂ ಚೈವ ಯಥಾಕ್ರಮಂ ॥ ೩೧ ॥

ತತ್ತತ್ಕರ್ಮಫಲಪ್ರಾಪ್ತಿಸ್ತಾದೃಕ್ಪಾಪಕ್ಷಯಃ ಕ್ರಮಾತ್ ।
ಮಹಾಗಣಪತೇಃ ಪೂಜಾ ಚತುರ್ಥ್ಯಾಂ ಕೃಷ್ಣಪಕ್ಷಕೇ ॥ ೩೨ ॥

ಪಕ್ಷಪಾಪಕ್ಷಯಕರೀ ಪಕ್ಷಭೋಗಫಲಪ್ರದಾ ।
ಚೈತ್ರೇ ಚತುರ್ಥ್ಯಾಂ ಪೂಜಾ ಚ ಕೃತಾ ಮಾಸಫಲಪ್ರದಾ ॥ ೩೩ ॥

---

೨೯. ಪೂಃ ಎಂದರೆ ಭೋಗವು, ಅದು ಈ ಪೂಜೆಯಿಂದ ಜನಿಸಿರುವುದರಿಂದ ಪೂಜೆಯೆಂದು ಪೂಜಾಶಬ್ದದ ಅರ್ಥವು ವೇದಗಳಲ್ಲಿ ನಿರೂಪಿಸಿರುವುದು. ಆದುದರಿಂದ ಇಷ್ಟದೇವತಾಪೂಜೆಯು ಭೋಗಪ್ರದವಾದುದು-

೩೦. ಮತ್ತು ಸಕಲ ಇಷ್ಟಾರ್ಥಗಳನ್ನೂ, ಜ್ಞಾನವನ್ನೂ, ಭೋಗವನ್ನೂ ಉಂಟುಮಾಡುವುದೆಂದು ಪೂಜಾಶಬ್ದಕ್ಕೆ ಅರ್ಥವು ವೇದ ಮತ್ತು ಲೋಕಗಳಲ್ಲಿ ಪ್ರಸಿದ್ಧವಾಗಿರುವುದು.

೩೧. ನಿತ್ಯ ಮತ್ತು ನೈಮಿತ್ತಿಕ ಕರ್ಮಗಳ ಫಲವು ಕೆಲವು ಕಾಲದ ಮೇಲೆ ಲಭಿಸುವುದು. ಕಾಮ್ಯಕರ್ಮದ ಫಲವು ತಕ್ಷಣವೇ ಲಭಿಸುವುದು, ಪ್ರತಿನಿತ್ಯವೂ, ಪ್ರತಿಮಾಸವೂ, ಪ್ರತಿ ಪಕ್ಷವೂ, ಪ್ರತಿಯೊಂದು ವರ್ಷದಲ್ಲೂ ಮಾಡತಕ್ಕ ಆಯಾಯ ಕರ್ಮಗಳಿಂದ ಆಯಾಯ ಫಲಗಳೂ, ಪಾಪನಾಶವೂ ಆಗುವುದು

೩೨-೩೩. ಕೃಷ್ಣಪಕ್ಷದ ಚತುರ್ಥಿಯಲ್ಲಿ ಮಹಾಗಣಪತಿಯನ್ನು ಪೂಜಿಸಿದರೆ ಆ ಪಕ್ಷದಲ್ಲಿ ಮಾಡಿದ ಪಾಪಗಳು ನಷ್ಟವಾಗುವುವು. ಒಂದು ಪಕ್ಷ (೧೫ ದಿನ) ಭೋಗವನ್ನುಂಟುಮಾಡುವುದು. ಚೈತ್ರ ಕೃಷ್ಣ ಚತುರ್ಥಿಯಲ್ಲಿ ಪೂಜಿಸಿದರೆ ಮಾಸ ಪರ್ಯಂತ ಭೋಗವು ಲಭಿಸುವುದು. ಸಿಂಹಮಾಸವಿರುವ ಭಾದ್ರಪದ ಮಾಸದ ಚತುರ್ಥಿಯಲ್ಲಿ ಪೂಜಿಸಿದರೆ ಒಂದು ವರ್ಷ ಕಾಲ ಭೋಗವು ಲಭಿಸುವುದು.

ವರ್ಷಭೋಗಪ್ರದಾ ಜ್ಞೇಯಾ ಕೃತಾ ವೈ ಸಿಂಹಭಾದ್ರಕೇ ।
ಶ್ರಾವಣಾದಿತ್ಯವಾರೇ ಚ ಸಪ್ತಮ್ಯಾಂ ಹಸ್ತಭೇ ದಿನೇ ॥ ೩೪ ॥

ಮಾಘಶುಕ್ಲೇ ಚ ಸಪ್ತಮ್ಯಾಮಾದಿತ್ಯಯಜನಂ ಚರೇತ್ ।
ಜ್ಯೇಷ್ಠಭಾದ್ರಕಸೌಮ್ಯೇ ಚ ದ್ವಾದಶ್ಯಾಂ ಶ್ರವಣರ್ಕ್ಷಕೇ ॥ ೩೫ ॥

ದ್ವಾದಶ್ಯಾಂ ವಿಷ್ಣುಯಜನಮಿಷ್ಟಸಂಪತ್ಕರಂ ವಿದುಃ ।
ಶ್ರಾವಣೇ ವಿಷ್ಣುಯಜನಮಿಷ್ಟಾರೋಗ್ಯಪ್ರದಂ ಭವೇತ್ ॥ ೩೬ ॥

ಗವಾದೀನ್ ದ್ವಾದಶಾನರ್ಥಾನ್ ಸಾಂಗಾನ್ ದತ್ವಾ ತು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ದ್ವಾದಶ್ಯಾಂ ವಿಷ್ಣುತರ್ಪಣಾತ್ ॥ ೩೭ ॥

ದ್ವಾದಶ್ಯಾಂ ದ್ವಾದಶಾನ್ ವಿಪ್ರಾನ್ ವಿಷ್ಣೋರ್ದ್ವಾದಶನಾಮತಃ ।
ಷೋಡಶೈರುಪಚಾರೈಶ್ಚ ಯಜೇತ್ತತ್ಪ್ರೀತಿಮಾಪ್ನುಯಾತ್ ॥ ೩೮ ॥

---

೩೪. ಶ್ರಾವಣಮಾಸದಲ್ಲಿ ಹಸ್ತ, ನಕ್ಷತ್ರ, ಸಪ್ತಮೀ ತಿಥಿಗಳಿರುವ ಆದಿತ್ಯ ವಾರದಲ್ಲಿಯೂ, ಮಾಘಮಾಸದ ಶುಕ್ಲ ಸಪ್ತಮಿಯಲ್ಲಿಯೂ ಸೂರ್ಯನನ್ನು ಪೂಜಿಸ ಬೇಕು.

೩೫. ಜ್ಯೇಷ್ಠ ಮತ್ತು ಭಾದ್ರಪದ ಮಾಸಗಳಲ್ಲಿ ಶ್ರವಣನಕ್ಷತ್ರ ದ್ವಾದಶೀ ತಿಥಿ ಗಳಿರುವ ಬುಧವಾರದಲ್ಲಿ ವಿಷ್ಣುವನ್ನು ಪೂಜಿಸಿದರೆ ಇಷ್ಟಾರ್ಥಸಿದ್ಧಿಯೂ ಸಂಪತ್ತೂ ಲಭಿಸುವುವು.

೩೬. ಶ್ರಾವಣಮಾಸದ ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸಿದರೆ ಇಷ್ಟಸಿದ್ಧಿ ಮತ್ತು ಆರೋಗ್ಯಗಳು ಲಭಿಸುವುವು.

೩೭. ಗೋದಾನ ಮುಂತಾದ ಹಿಂದೆ ಹೇಳಿದ ಹನ್ನೆರಡು ದಾನಗಳನ್ನು ಸಾಂಗ ವಾಗಿ ಮಾಡಿದರೆ ಯಾವ ಫಲವು ಲಭಿಸುವುದೋ ಆ ಫಲವು ದ್ವಾದಶಿಯಲ್ಲಿ ವಿಷ್ಣು ವನ್ನು ಪೂಜಿಸಿದರೆ ಲಭಿಸುವುದು.

೩೮. ದ್ವಾದಶಿಯಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ವಿಷ್ಣುವಿನ ಹನ್ನೆರಡು ನಾಮಗಳಿಂದ ಷೋಡಶೋಪಚಾರಪೂರ್ವಕವಾಗಿ ಪೂಜಿಸಿದರೆ ವಿಷ್ಣುವು ಪ್ರೀತಿಗೊಂಡು ಸಂತುಷ್ಟನಾಗುವನು.

ಏವಂ ಚ ಸರ್ವದೇವಾನಾಂ ತತ್ತದ್ದ್ವಾದಶನಾಮಕೈಃ ।
ದ್ವಾದಶಬ್ರಹ್ಮಯಜನಂ ತತ್ತತ್ಪ್ರೀತಿಕರಂ ಭವೇತ್ ॥ ೬೯ ॥

ಕರ್ಕಟೇ ಸೋಮವಾರೇ ಚ ನವಮ್ಯಾಂ ಮೃಗಶೀರ್ಷಕೇ ।
ಅಂಬಾಂ ಯಜೇದ್ಭೂತಿಕಾಮಃ ಸರ್ವಭೋಗಫಲಪ್ರದಾಂ ॥ ೪೦ ॥

ಆಶ್ವಯುಕ್ಛುಕ್ಲನವಮೀ ಸರ್ವಾಭೀಷ್ಟಫಲಪ್ರದಾ ।
ಆದಿವಾರೇ ಚತುರ್ದಶ್ಯಾಂ ಕೃಷ್ಣಪಕ್ಷೇ ವಿಶೇಷತಃ ॥ ೪೧ ॥

ಆರ್ದ್ರಾಯಾಂ ಚ ಮಹಾರ್ದ್ರಾಯಾಂ ಶಿವಪೂಜಾ ವಿಶಿಷ್ಯತೇ ।
ಮಾಘಕೃಷ್ಣಚತುರ್ದಶ್ಯಾಂ ಸರ್ವಾಭೀಷ್ಟಫಲಪ್ರದಾ ॥ ೪೨ ॥

ಆಯುಷ್ಕರೀ ಮೃತ್ಯುಹರಾ ಸರ್ವಸಿದ್ಧಿಕರೀ ನೃಣಾಂ ।
ಜ್ಯೇಷ್ಠಮಾಸೇ ಮಹಾರ್ದ್ರಾಯಾಂ ಚತುರ್ದಶೀದಿನೇಽಪಿ ಚ ॥ ೪೩ ॥

---

೩೯. ಇದರಂತೆ ಮಿಕ್ಕ ಎಲ್ಲಾ ದೇವತೆಗಳನ್ನೂ ಅವರವರ ಹನ್ನೆರಡು ನಾಮಗಳಿಂದ ಹನ್ನೆರಡು ಜನ ಬ್ರಾಹ್ಮಣರನ್ನು ಪೂಜಿಸಿದರೆ ಆಯಾಯ ದೇವತೆಗಳು ಸಂತುಷ್ಟರಾಗುವರು.

೪೦. ಕರ್ಕಾಟಮಾಸದ ನವಮಿಯಲ್ಲಿ ಮೃಗಶಿರಾನಕ್ಷತ್ರವಿದ್ದು, ಸೋಮವಾರವಾಗಿದ್ದರೆ, ಆ ದಿನದಲ್ಲಿ ಸಕಲ ಭೋಗಗಳನ್ನೂ ಕೊಡುವಂತ ಜಗನ್ಮಾತೆ (ಪಾರ್ವತಿ) ಯನ್ನರ್ಚಿಸಿದರೆ ಐಶ್ವರ್ಯವು ಲಭಿಸುವುದು.

೪೧. ಆಶ್ವಯುಜಮಾಸದಲ್ಲಿ ಶುಕ್ಲಪಕ್ಷದ ನವಮಿಯು ಸಕಲ ಇಷ್ಟಾರ್ಥಗಳನ್ನುಂಟುಮಾಡುವುದು. ಕೃಷ್ಣಪಕ್ಷದಲ್ಲಿ ಆದಿತ್ಯವಾರವಿರುವ ಚತುರ್ದಶೀತಿಥಿಯು ಇನ್ನೂ ಉತ್ತಮವಾದುದು.

೪೨. ಮಾಘಮಾಸದ ಕೃಷ್ಣಚತುರ್ದಶಿಯಲ್ಲಿ ಆರ್ದ್ರಾನಕ್ಷತ್ರದಲ್ಲಿ ಶಿವನನ್ನು ಪೂಜಿಸಿದರೆ ಸಕಲ ಇಷ್ಟಾರ್ಥಗಳೂ ನೆರವೇರುವುವು. ಆಯುಸ್ಸು ವೃದ್ಧಿಯಾಗುವುದು. ಮೃತ್ಯುವು ನಾಶವಾಗುವುದು.

೪೩-೪೪. ಜ್ಯೇಷ್ಠಮಾಸದಲ್ಲಿ ಆರ್ದ್ರಾನಕ್ಷತ್ರವಿರುವ ಚತುರ್ದಶಿಯಲ್ಲಿ ಅಥವಾ ಮಾರ್ಗಶಿರಮಾಸದಲ್ಲಿ ಆರ್ದ್ರಾನಕ್ಷತ್ರವಿರುವ ಚತುರ್ದಶಿಯಲ್ಲಿ ಹದಿನಾರು

ಮಾರ್ಗಶೀರ್ಷಾದ್ರ್ರಕಾಯಾಂ ವಾ ಷೋಡಶೈರುಪಚಾರಕೈಃ ।
ತತ್ತನ್ಮೂರ್ತಿಶಿವಂ ಪೂಜ್ಯ ತಸ್ಯ ವೈ ಪಾದದರ್ಶನಂ ॥ ೪೪ ॥

ಶಿವಸ್ಯ ಯುಜನಂ ಜ್ಞೇಯಂ ಭೋಗಮೋಕ್ಷಪ್ರದಂ ನೃಣಾಂ ।
ವಾರಾದಿದೇವಯುಜನಂ ಕಾರ್ತಿಕೇ ಹಿ ವಿಶಿಷ್ಯತೇ ॥ ೪೫ ॥

ಕಾರ್ತಿಕೇ ಮಾಸಿ ಸಂಪ್ರಾಪ್ತೇ ಸರ್ವಾ೯ ದೇವಾ೯ ಯುಜೇದ್ಬುಧಃ ।
ದಾನೇನ ತಪಸಾ ಹೋಮೈರ್ಜಪೇನ ನಿಯಮೇನ ಚ ॥ ೪೬ ॥

ಷೋಡಶೈರುಪಚಾರೈಶ್ಚ ಪ್ರತಿಮಾಂ ವಿಪ್ರಮಂತ್ರಕೈಃ ।
ಬ್ರಾಹ್ಮಣಾನಾಂ ಭೋಜನೇನ ನಿಷ್ಕಾಮಾರ್ತಿಹರೋ ಭವೇತ್ ॥ ೪೭ ॥

ಕಾರ್ತಿಕೇ ದೇವಯುಜನಂ ಸರ್ವಭೋಗಪ್ರದಂ ಭವೇತ್ ।
ವ್ಯಾಧೀನಾಂ ಹರಣಂ ಚೈವ ಭವೇದ್ಭೂತಗ್ರಹಕ್ಷಯಃ ॥ ೪೮ ॥

---

ಉಪಚಾರಗಳಿಂದ ಆಯಾಯ ಮೂರ್ತಿಗಳಲ್ಲಿ ಶಿವನನ್ನು ಪೂಜಿಸಿ ಪಾದವನ್ನು ದರ್ಶನಮಾಡಬೇಕು. ಹಾಗೆ ಮಾಡಿದರೆ ಭೋಗ ಮತ್ತು ಮೋಕ್ಷಗಳು ಲಭಿಸುವುವು.

೪೫-೪೬. ವಾರಾದಿದೇವತೆಗಳನ್ನು ಕಾರ್ತಿಕಮಾಸದಲ್ಲಿ ಪೂಜಿಸುವುದು ಪ್ರಶಸ್ತವಾದುದು. ಕಾರ್ತಿಕಮಾಸದಲ್ಲಿ ಎಲ್ಲಾ ದೇವತೆಗಳನ್ನೂ, ದಾನ, ತಪಸ್ಸು, ಹೋಮ, ಜಪ, ವ್ರತ, ಇವುಗಳಿಂದ ಅರ್ಚಿಸಬೇಕು.

೪೭. ಹದಿನಾರು ಬಗೆಯ ಉಪಚಾರಗಳಿಂದ ಶಿವ ಮತ್ತು ವಿಷ್ಣು ವಿಗ್ರಹ ಗಳನ್ನು ವೇದೋಕ್ತವಾಗಿ ಪೂಜಿಸಬೇಕು. ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸ ಬೇಕು. ಫಲಕಾಮನೆಯಿಲ್ಲದೆ ಮಾಡಿದ ಕರ್ಮವು ಸಕಲ ಪೀಡೆಯನ್ನೂ ನಾಶ ಗೊಳಿಸುವುದು.

೪೮. ಕಾರ್ತಿಕಮಾಸದಲ್ಲಿ ದೇವತೆಗಳನ್ನು ಪೂಜಿಸಿದರೆ ಸಕಲ ಭೋಗಗಳೂ ಲಭಿಸುವುವು. ರೋಗವು ನಾಶವಾಗುವುದು. ದೆವ್ವ, ಪಿಶಾಚಿ ಬಾಲಗ್ರಹ ಮುಂತಾ ದುವುಗಳ ಭಯವು ನಾಶವಾಗುವುದು.

ಕಾರ್ತಿಕಾದಿತ್ಯವಾರೇಷು ನೃಣಾಮಾದಿತ್ಯಪೂಜನಾತ್ ।
ತೈಲಕಾರ್ಪಾಸದಾನಾತ್ತು ಭವೇತ್ಕುಷ್ಠಾದಿಸಂಕ್ಷಯಃ ॥ ೪೯ ॥

ಹಾರೀತಕೀಮರೀಚೀನಾಂ ವಸ್ತ್ರಕ್ಷೀರಾದಿದಾನತಃ ।
ಬ್ರಹ್ಮಪ್ರತಿಷ್ಠಯಾ ಚೈವ ಕ್ಷಯರೋಗಕ್ಷಯೋ ಭವೇತ್ ॥ ೫೦ ॥

ದೀಪಸರ್ಷಪದಾನಾಚ್ಚ ಅಪಸ್ಮಾರಕ್ಷಯೋ ಭವೇತ್ ।
ಕೃತ್ತಿಕಾಸೋಮವಾರೇಷು ಶಿವಸ್ಯ ಯಜನಂ ನೃಣಾಂ ॥ ೫೧ ॥

ಮಹಾದಾರಿದ್ರ್ಯಶಮನಂ ಸರ್ವಸಂಪತ್ಕರಂ ಭವೇತ್ ।
ಗೃಹಕ್ಷೇತ್ರಾದಿದಾನಾಚ್ಚ ಗೃಹೋಪಕರಣಾದಿನಾ ॥ ೫೨ ॥

ಕೃತ್ತಿಕಾಭೌಮವಾರೇಷು ಸ್ಕಂದಸ್ಯ ಯಜನಾನ್ನೃಣಾಂ ।
ದೀಪಘಂಟಾದಿದಾನಾಚ್ಚ ವಾಕ್ಸಿದ್ಧಿರಚಿರಾದ್ಭವೇತ್ ॥ ೫೩ ॥

---

೪೯. ಕಾರ್ತಿಕಮಾಸದ ಆದಿತ್ಯವಾರಗಳಲ್ಲಿ ಆದಿತ್ಯನನ್ನು ಪೂಜಿಸುವುದರಿಂದಲೂ, ಎಣ್ಣೆ ಮತ್ತು ಬಟ್ಟೆಗಳನ್ನು ದಾನಮಾಡುವುದರಿಂದಲೂ ಕುಷ್ಠ ಮುಂತಾದ ಮಹಾ ರೋಗಗಳು ನಾಶವಾಗುವುವು.

೫೦. ಅಳಲೇಕಾಯಿ, ಮೆಣಸು ಮತ್ತು ವಸ್ತ್ರ, ಹಾಲು ಮುಂತಾದುವುಗಳ ದಾನದಿಂದಲೂ, ದರಿದ್ರಬ್ರಾಹ್ಮಣನಿಗೆ ಜೀವನವನ್ನು ಕಲ್ಪಿಸುವುದರಿಂದಲೂ ಸಹ ಕ್ಷಯರೋಗವು ನಾಶವಾಗುವುದು. ದೀಪದಾನ ಮತ್ತು ಸಾಸಿವೆ ದಾನಗಳನ್ನು ಮಾಡಿದರೆ ಅಪಸ್ಮಾರ (ಮೂರ್ಛಾರೋಗ ಅಥವಾ ಮಲರೋಗ) ವು ನಾಶವಾಗುವುದು.

೫೧-೫೨. ಕೃತ್ತಿಕಾನಕ್ಷತ್ರ ಮತ್ತು ಸೋಮವಾರಗಳಲ್ಲಿ ಅಥವಾ ಕಾರ್ತಿಕ ಸೋಮವಾರಗಳಲ್ಲಿ ಶಿವನನ್ನು ಅರ್ಚಿಸಿದರೆ ಬಡತನವೆಲ್ಲವೂ ನಾಶವಾಗುವುದು, ಸಕಲ ಸಂಪತ್ತೂ ಲಭಿಸುವುದು. ಆಗ ಗೃಹ (ಮನೆ) ಮತ್ತು ಕ್ಷೇತ್ರ (ಗದ್ದೆ-ಹೊಲ) ಗಳನ್ನು ಸಕಲ ಪರಿಕರಗಳೊಡನೆ ದಾನಮಾಡಬೇಕು.

೫೩. ಕಾರ್ತಿಕಮಾಸದ ಮಂಗಳವಾರದಲ್ಲಿ ಷಣ್ಮುಖನನ್ನು ಪೂಜಿಸುವುದರಿಂದಲೂ, ದೀಪದಾನ ಮತ್ತು ಘಂಟಾದಾನಗಳನ್ನು ಮಾಡುವುದರಿಂದಲೂ ವಾಕ್ಸಿದ್ಧಿ (ತಾನು ಹೇಳಿದಂತೆ ನಡೆಯುವುದು) ಯು ಜಾಗ್ರತೆ ಲಭಿಸುವುದು.

ಕೃತ್ತಿಕಾಸೌಮ್ಯವಾರೇಷು ವಿಷ್ಣೋರ್ವೈ ಯಜನಂ ನೃಣಾಂ ।
ದಧ್ಯೋದನಸ್ಯ ದಾನಂ ಚ ಸತ್ಸಂತಾನಕರಂ ಭವೇತ್ ॥ ೫೪ ॥

ಕೃತ್ತಿಕಾಗುರುವಾರೇಷು ಬ್ರಹ್ಮಣೋ ಯಜನಾದ್ಧನೈಃ ।
ಮಧುಸ್ವರ್ಣಾಜ್ಯದಾನೇನ ಭೋಗವೃದ್ಧಿರ್ಭವೇನ್ನೃಣಾಂ ॥ ೫೫ ॥

ಕೃತ್ತಿಕಾಶುಕ್ರವಾರೇಷು ಗಜಗೋಮೇಡಯಾಜನಾತ್ ।
ಗಂಧಪುಷ್ಪಾನ್ನದಾನೇನ ಭೋಗ್ಯವೃದ್ಧಿರ್ಭವೇನ್ನೃಣಾಂ ॥ ೫೬ ॥

ವಂಧ್ಯಾ ಸುಪುತ್ರಂ ಲಭತೇ ಸ್ವರ್ಣರೌಪ್ಯಾದಿದಾನತಃ ।
ಕೃತ್ತಿಕಾಶನಿವಾರೇಷು ದಿಕ್ಪಾಲಾನಾಂ ಚ ವಂದನಂ ॥ ೫೭ ॥

ದಿಗ್ಗಜಾನಾಂ ಚ ನಾಗಾನಾಂ ಸೇತುಪಾನಾಂ ಚ ಪೂಜನಂ ।
ತ್ರ್ಯಂಬಕಸ್ಯ ಚ ರುದ್ರಸ್ಯ ವಿಷ್ಣೋಃ ಪಾಪಹರಸ್ಯ ಚ ॥ ೫೮ ॥

---

೫೪. ಕಾರ್ತಿಕಮಾಸದ ಬುಧವಾರಗಳಲ್ಲಿ ವಿಷ್ಣುವನ್ನು ಪೂಜಿಸಬೇಕು, ಮೊಸರನ್ನವನ್ನು ದಾನಮಾಡಬೇಕು. ಅದರಿಂದ ಒಳ್ಳೆಯ ಸಂತಾನ (ಮಕ್ಕಳು) ವು ಲಭಿಸುವುದು.

೫೫. ಕಾರ್ತಿಕಮಾಸದ ಗುರುವಾರಗಳಲ್ಲಿ ಬ್ರಹ್ಮನನ್ನರ್ಚಿಸಿ ಧನ, ಜೇನುತುಪ್ಪ, ಚಿನ್ನ, ತುಪ್ಪ ಇವುಗಳನ್ನು ದಾನಮಾಡಿದರೆ ಭೋಗವು ಹೆಚ್ಚಾಗಿ ಲಭಿಸುವುದು.

೫೬. ಕಾರ್ತಿಕಮಾಸದ ಶುಕ್ರವಾರಗಳಲ್ಲಿ ಗಣಪತಿಯನ್ನು ಪೂಜಿಸುವುದರಿಂದಲೂ, ಗಂಧ, ಪುಷ್ಪ, ಅನ್ನ ಇವುಗಳ ದಾನದಿಂದಲೂ ಸಹ ಭೋಗವೃದ್ಧಿಯಾಗುವುದು. ಸುವರ್ಣ ಮತ್ತು ಬೆಳ್ಳಿಗಳನ್ನು ದಾನಮಾಡಿದರೆ ಬಂಜೆಯು ಸುಪುತ್ರನನ್ನು ಪಡೆಯುವಳು. ಭೋಗ್ಯವಸ್ತುವು ಹೆಚ್ಚಾಗಿ ಲಭಿಸುವುದು.

೫೭-೫೯. ಕಾರ್ತಿಕಮಾಸದ ಶನಿವಾರಗಳಲ್ಲಿ ದಿಕ್ಪಾಲಕರು, ದಿಗ್ಗಜಗಳು, ಸೇತುಪಾಲಕರು, ಮುಕ್ಕಣ್ಣನಾದ ರುದ್ರ, ಪಾಪನಾಶಕನಾದ ವಿಷ್ಣು, ಬ್ರಹ್ಮ, ಇವರನ್ನು ಪೂಜಿಸಿದರೆ ಬ್ರಹ್ಮಜ್ಞಾನವು ಲಭಿಸುವುದು. ಅಲ್ಲದೆ ಧನ್ವಂತರೀ ಅಶ್ವಿನೀ

ಜ್ಞಾನಸದಂ ಬ್ರಹ್ಮಣಶ್ಚೈವ ಧನ್ವಂತರ್ಯರ್ಶ್ವಿನೋಸ್ತಥಾ ।
ರೋಗಾಪಮೃತ್ಯುಹರಣಂ ತತ್ಕಾಲವ್ಯಾಧಿಶಾಂತಿದಂ ॥ ೫೯ ॥

ಲವಣಾಯಸತೈಲಾನಾಂ ಮಾಷಾದೀನಾಂ ಚ ದಾನತಃ ।
ತ್ರಿಕಟುಫಲಗಂಧಾನಾಂ ಜಲಾದೀನಾಂ ಚ ದಾನತಃ ॥ ೬೦ ॥

ದ್ರವಾಣಾಂ ಕಠಿಣಾನಾಂ ಚ ಪ್ರಸ್ಥೇನ ಫಲಮಾನತಃ ।
ಸ್ವರ್ಗಪ್ರಾಪ್ತಿರ್ಧನುರ್ಮಾಸೇ ಹ್ಯುಷಃಕಾಲೇ ಚ ಪೂಜನಂ ॥ ೬೧ ॥

ಶಿವಾದೀನಾಂ ಚ ಸರ್ವೇಷಾಂ ಕ್ರಮಾದ್ವೈ ಸರ್ವಸಿದ್ಧಯೇ ।
ಶಾಲ್ಯನ್ನಸ್ಯ ಹವಿಷ್ಯಸ್ಯ ನೈವೇದ್ಯಂ ಶಸ್ತಮುಚ್ಯತೇ ॥ ೬೨ ॥

ವಿವಿಧಾನ್ನಸ್ಯ ನೈವೇದ್ಯಂ ಧನುರ್ಮಾಸೇ ವಿಶಿಷ್ಯತೇ ।
ಮಾರ್ಗಶೀರ್ಷೇಽನ್ನದಸ್ಯೈವ ಸರ್ವಮಿಷ್ಟಫಲಂ ಲಭೇತ್ ॥ ೬೩ ॥

---

ದೇವತೆಗಳನ್ನು ಪೂಜಿಸಿದರೆ ಆಯಾಯು ಕಾಲಗಳಲ್ಲುದ್ಭವಿಸಿದ ರೋಗಗಳೂ ಮಹಾ ರೋಗಗಳೂ, ಅಪಮೃತ್ಯುವೂ ನಾಶವಾಗುವುವು.

೬೦-೬೧. ಉಪ್ಪು, ಎಣ್ಣೆ, ಲೋಹ, ಉದ್ದು ಮುಂತಾದ ಧಾನ್ಯಗಳು, ತಾರೇ ಕಾಯಿ, ಅಳಲೇಕಾಯಿ, ನೆಲ್ಲಿಕಾಯಿ, ಗಂಧ, ಜಲ, ಮುಂತಾದುವುಗಳನ್ನು ದಾನ ಮಾಡಿದರೆ ಮತ್ತು ಒಂದು ಪ್ರಸ್ಥಪರಿಮಿತವಾಗಿ ಮೃದುವಾದ ಮತ್ತು ಕಠಿಣವಾದ ವಸ್ತುಗಳನ್ನು ದಾನಮಾಡಿದರೆ ಸ್ವರ್ಗವು ಲಭಿಸುವುದು.

೬೨. ಧನುರ್ಮಾಸದ ಉಷಃಕಾಲದಲ್ಲಿ ಶಿವನೇ ಮೊದಲಾದ ದೇವತೆಗಳನ್ನು ಕ್ರಮವಾಗಿ ಪೂಜಿಸಿದರೆ ಸಕಲ ಇಷ್ಟಾರ್ಥಗಳು ಸಿದ್ಧಿಸುವುವು. ಶಾಲ್ಯನ್ನದ ನೈವೇದ್ಯವು ಪ್ರಶಸ್ತವಾದುದು.

೬೩. ಧನುರ್ಮಾಸದಲ್ಲಿ ಅನೇಕ ಬಗೆಯ ಅನ್ನಗಳನ್ನು ನಿವೇದಿಸುವುದು ಪ್ರಶಸ್ತವಾದುದು. ಮಾರ್ಗಶಿರಮಾಸದಲ್ಲಿ ಅನ್ನದಾನಮಾಡಿದರೆ ಬೇಕಾದಂತಹ ಫಲಗಳೆಲ್ಲವೂ ಸಿದ್ಧಿಸುವುವು.

ಪಾಪಕ್ಷಯಂ ಚೇಷ್ಟಸಿದ್ಧಿಂ ಚಾರೋಗ್ಯಂ ಧರ್ಮಮೇವ ಚ ।
ಸಮ್ಯಗ್ವೇದಪರಿಜ್ಞಾನಂ ಸದನುಷ್ಠಾನಮೇವ ಚ ॥ ೬೪ ॥

ಇಹಾಮುತ್ರ ಮಹಾಭೋಗಾನಂತೇ ಯೋಗಂ ಚ ಶಾಶ್ವತಂ ।
ವೇದಾಂತಜ್ಞಾನಸಿದ್ಧಿಂ ಚ ಮಾರ್ಗಶೀರ್ಷಾನ್ನದೋ ಲಭೇತ್ ॥ ೬೫ ॥

ಮಾರ್ಗಶೀರ್ಷೇ ಹ್ಯುಷಃಕಾಲೇ ದಿನತ್ರಯಮಥಾಪಿ ವಾ ।
ಯಜೇದ್ದೇವಾನ್ ಭೋಗಕಾಮೋ ನಾಧನುರ್ಮಾಸಿಕೋ ಭವೇತ್ ॥ ೬೬ ॥

ಯಾವತ್ಸಂಗವಕಾಲಂ ತು ಧನುರ್ಮಾಸೋ ವಿಧೀಯತೆ ।
ಧನುರ್ಮಾಸೇ ನಿರಾಹಾರೋ ಮಾಸಮಾತ್ರಂ ಜಿತೇಂದ್ರಿಯಃ ॥ ೬೭ ॥

ಆಮಧ್ಯಾಹ್ನಂ ಜಪೇದ್ವಿಪ್ರೋ ಗಾಯತ್ರೀಂ ವೇದಮಾತರಂ ।
ಪಂಚಾಕ್ಷರಾದಿಕಾನ್ಮಂತ್ರಾನ್ಸಪ್ತಾದಾಸುಪಿಕ್ತಂ ಜಪೇತ್ ॥ ೬೮ ॥

---

೬೪-೬೫. ಮಾರ್ಗಶಿರಮಾಸದಲ್ಲಿ ಅನ್ನದಾನಮಾಡಿದರೆ ಪಾಪನಾಶ, ಇಷ್ಟ ಸಿದ್ಧಿ, ಆರೋಗ್ಯ, ಧರ್ಮ, ವೇದಾರ್ಥಜ್ಞಾನ, ಒಳ್ಳೆಯ ಆಚಾರ, ಇಹಪರಗಳೆರಡರಲ್ಲಿ ಮಹಾಭೋಗಗಳು, ಕೊನೆಯಲ್ಲಿ ಶಾಶ್ವತವಾದ ಯೋಗ ಮತ್ತು ಬ್ರಹ್ಮಜ್ಞಾನ ಇವುಗಳು ಲಭಿಸುವುವು.

೬೬. ಮಾರ್ಗಶಿರಮಾಸದಲ್ಲಿ ಮೂರು ದಿನಗಳು ಉಷಃಕಾಲದಲ್ಲಿ ದೇವತೆಗಳನ್ನು ಭೋಗವನ್ನಪೇಕ್ಷಿಸುವವನು ಅರ್ಚಿಸಬೇಕು. ಆದರೆ ಆಗ ಧನುರ್ಮಾಸ ವಿದ್ದೇ ಇರಬೇಕು.

೬೭. ಧನುರ್ಮಾಸದಲ್ಲಿ ಪ್ರತಿದಿನವೂ ಸಂಗವಕಾಲ (ದಿನದ ಐದು ಭಾಗಗಳಲ್ಲಿ ಎರಡನೆಯು) ದವರೆಗೆ ಧನುರ್ಮಾಸವಿರುವುದು. ಇಂತಹ ಧನುರ್ಮಾಸಕಾಲದಲ್ಲಿ ಉಪವಾಸವಿದ್ದು ಜಿತೇಂದ್ರಿಯನಾಗಿ ಮಧ್ಯಾಹ್ನದವರೆಗೆ ವೇದಮಾತೆಯಾದ ಗಾಯತ್ರಿಯನ್ನು ಬ್ರಾಹ್ಮಣನು ಜಪಿಸಬೇಕು.

೬೮. ಮಧ್ಯಾಹ್ನದನಂತರ ರಾತ್ರಿ ಮಲಗುವವರೆಗೆ ಪಂಚಾಕ್ಷರೀಮಂತ್ರ ಮೊದಲಾದುವುಗಳನ್ನು ಜಪಿಸಬೇಕು. ಅದರಿಂದ ಜ್ಞಾನವನ್ನು ಪಡೆದು ಮರಣದನಂತರ ಮುಕ್ತಿಯನ್ನು ಪಡೆಯುವನು.

ಜ್ಞಾನಂ ಲಬ್ಧ್ವಾ ಚ ದೇಹಾಂತೇ ವಿಪ್ರೋ ಮುಕ್ತಿಮವಾಪ್ನುಯಾತ್ ।
ಅನ್ಯೇಷಾಂ ನರನಾರೀಣಾಂ ತ್ರಿಃಸ್ನಾನೇನ ಜಪೇನ ಚ ॥ ೧೯ ॥

ಸದಾ ಪಂಚಾಕ್ಷರಸ್ಯೈವ ವಿಶುದ್ಧಂ ಜ್ಞಾನಮಾಪ್ಯತೇ ।
ಇಷ್ಟಮಂತ್ರಾನ್ ಸದಾ ಜಪ್ತ್ವಾ ಮಹಾಪಾಪಕ್ಷಯಂ ಲಭೇತ್ ॥ ೨೦ ॥

ಧನುರ್ಮಾಸೇ ವಿಶೇಷೇಣ ಮಹಾನೈವೇದ್ಯಮಾಚರೇತ್ ।
ಶಾಲಿತಂಡುಲಭಾರೇಣ ಮರೀಚಪ್ರಸ್ಥಕೇನ ಚ ॥ ೨೧ ॥

ಗಣನಾ ದ್ವಾದಶಂ ಸರ್ವಂ ಮಧ್ವಾಜ್ಯಕುಡವೇನ ಹಿ ।
ದ್ರೋಣಯುಕ್ತೇನ ಮುದ್ಗೇನ ದ್ವಾದಶವ್ಯಂಜನೇನ ಚ ॥ ೨೨ ॥

ಘೃತಪಕ್ವೈರಪೂಪೈಶ್ಚ ಮೋದಕೈಃ ಶಾಲಿಕಾದಿಭಿಃ ।
ದ್ವಾದಶೈಶ್ಚ ದಧಿಕ್ಷೀರೈರ್ದ್ವಾದಶಪ್ರಸ್ಥಕೇನ ಚ ॥ ೨೩ ॥

ನಾರಿಕೇಳಫಲಾದೀನಾಂ ತಥಾ ಗಣನಯಾ ಸಹ ।
ದ್ವಾದಶಕ್ರಮುಕೈರ್ಯುಕ್ತಂ ಷಟ್ತ್ರಿಂಶತ್ಪತ್ರಕೈರ್ಯುತಂ ॥ ೨೪ ॥

---

೧೯-೨೦. ಮಿಕ್ಕ ಸ್ತ್ರೀಪುರುಷರು ನಿತ್ಯವೂ ಮೂರು ಸ್ನಾನ, ಪಂಚಾಕ್ಷರೀ ಮಂತ್ರಜಪ ಇವುಗಳಿಂದ ಶುದ್ಧವಾದ ಜ್ಞಾನವನ್ನು ಪಡೆಯುವರು. ತಮಗೆ ಇಷ್ಟವಾದಂತಹ ಮಂತ್ರಗಳನ್ನು ಸದಾ ಜಪಿಸಿದರೆ ಮಹಾಪಾಪಗಳು ನಾಶವಾಗುವುವು.

೨೧. ಧನುರ್ಮಾಸದಲ್ಲಿ ಒಂದು ಪ್ರಸ್ಥಪರಿಮಿತವಾದ, ಮೆಣಸು ಮಿಶ್ರಿತವಾದ ಶಾಲ್ಯನ್ನದಿಂದ ಮಹಾನೈವೇದ್ಯವನ್ನು ಮಾಡಬೇಕು.

೨೨-೨೫. ನೈವೇದ್ಯವೆಲ್ಲವೂ ಹನ್ನೆರಡು ವಿಧವಾಗಿರಬೇಕು. ಜೇನುತುಪ್ಪ ಮತ್ತು ತುಪ್ಪ, ಇವು ಹನ್ನೆರಡು ಕುಡವದಷ್ಟಿರಬೇಕು. ಹೆಸರು (ಪಾಯಸ ಮುಂತಾದುವು) ಹನ್ನೆರಡು ದ್ರೋಣಗಳು. ಹನ್ನೊಂದು ವ್ಯಂಜನ (ಮೇಲೋಗರ) ವಿರಬೇಕು. ತುಪ್ಪದಿಂದ ಕರಿದಿರುವ ಕರಿಗಡುಬು ಮತ್ತು ಮೋದಕಗಳು ಹನ್ನೆರಡು, ಶಾಲ್ಯನ್ನ ಮತ್ತು ಮೊಸರು, ಹಾಲು ಇವುಗಳು ಹನ್ನೆರಡು ಕುಡವದಷ್ಟಿರಬೇಕು. ತೆಂಗಿನಕಾಯಿ ಮುಂತಾದ ಫಲಗಳು ಹನ್ನೆರಡು, ಹನ್ನೆರಡು ಅಡಕೆ, ಮೂವತ್ತಾರು ವಿಳ್ಳೆಯದೆಲೆ, ಪಚ್ಚಕರ್ಪೂರ, ಮುಂತಾದ ಐದು ಸುಗಂಧದ್ರವ್ಯಗಳು

ಕರ್ಪೂರಖುರಚೂರ್ಣೇನ ಪಂಚಸೌಗಂಧಿಕೈರ್ಯುತಂ ।
ತಾಂಬೂಲಯುಕ್ತಂ ತು ಯದಾ ಮಹಾನೈವೇದ್ಯಲಕ್ಷಣಂ ॥ ೭೫ ॥

ಮಹಾನೈವೇದ್ಯಮೇತದ್ವೈ ದೇವತಾರ್ಪಣಪೂರ್ವಕಂ ।
ವರ್ಣಾನುಕ್ರಮಪೂರ್ವೇಣ ತದ್ಭಕ್ತೇಭ್ಯಃ ಪ್ರದಾಪಯೇತ್ ॥ ೭೬ ॥

ಏವಂ ಚೌದನನೈವೇದ್ಯಾದ್ಭೂಮೌ ರಾಷ್ಟ್ರಪತಿರ್ಭವೇತ್ ।
ಮಹಾನೈವೇದ್ಯದಾನೇನ ನರಃ ಸ್ವರ್ಗಮವಾಪ್ನುಯಾತ್ ॥ ೭೭ ॥

ಮಹಾನೈವೇದ್ಯದಾನೇನ ಸಹಸ್ರೇಣ ದ್ವಿಜರ್ಷಭಾಃ ।
ಸತ್ಯಲೋಕಂ ಚ ತಲ್ಲೋಕೇ ಪೂರ್ಣಮಾಯುರವಾಪ್ನುಯಾತ್ ॥ ೭೮ ॥

ಸಹಸ್ರಾಣಾಂ ಚ ತ್ರಿಂಶತ್ಯಾ ಮಹಾನೈವೇದ್ಯದಾನತಃ ।
ತದೂರ್ಧ್ವಲೋಕಮಾಪ್ಯೈವ ನ ಪುನರ್ಜನ್ಮಭಾಗ್ಭವೇತ್ ॥ ೭೯ ॥

---

ಇವುಗಳಿಂದ ಕೂಡಿದ ತಾಂಬೂಲ ಇವೆಲ್ಲವೂಸೇರಿದರೆ ಮಹಾನೈವೇದ್ಯವು. ಇಂತಹ ಮಹಾ ನೈವೇದ್ಯವನ್ನು ದೇವರಿಗೆ ನಿವೇದಿಸಬೇಕು.

೭೬. ದೇವರಿಗೆ ನಿವೇದಿಸಿದ ಮೇಲೆ ಆ ಮಹಾನೈವೇದ್ಯವನ್ನು ಅವರವರ ಜಾತಿಗನುಸಾರವಾಗಿ ಆಯಾಯ ದೇವಭಕ್ತರಿಗೆ ದಾನಮಾಡಬೇಕು.

೭೭. ಈ ರೀತಿಯಾಗಿ ಅನ್ನವನ್ನು ನೈವೇದ್ಯಮಾಡಿದರೆ ಭೂಲೋಕದಲ್ಲಿ ರಾಜನಾಗುವನು. ಆ ಮಹಾನೈವೇದ್ಯವನ್ನು ದಾನಮಾಡಿದರೆ ಸ್ವರ್ಗವನ್ನು ಪಡೆಯುವನು.

೭೮. ಎಲೈ ದ್ವಿಜೋತ್ತಮರೆ! ಹೀಗೆಯೇ ಸಾವಿರ ಮಹಾನೈವೇದ್ಯ ದಾನಗಳನ್ನು ಮಾಡಿದರೆ ಸತ್ಯಲೋಕವು ಲಭಿಸುವುದು ಮತ್ತು ಅಲ್ಲಿ ಪೂರ್ಣವಾದ ಆಯುಸ್ಸನ್ನು ಪಡೆಯುವನು.

೭೯. ಮೂವತ್ತು ಸಾವಿರ ಮಹಾನೈವೇದ್ಯದಾನಗಳನ್ನು ಮಾಡಿದವನು ಸತ್ಯಲೋಕಕ್ಕಿಂತಲೂ ಉತ್ಕೃಷ್ಟವಾದ ಲೋಕವನ್ನು ಪಡೆಯುವನು. ತಿರುಗಿ ಅವನಿಗೆ ಜನ್ಮವಿಲ್ಲವು. ಮುಕ್ತಿಯನ್ನು ಹೊಂದುವನು.

ಸಹಸ್ರಾಣಾಂ ಚ ಷಟ್ತ್ರಿಂಶಜ್ಜನ್ಮನೈವೇದ್ಯಮೀರಿತಂ ।
ತಾವನ್ನೈವೇದ್ಯದಾನಂ ತು ಮಹಾಪೂರ್ಣಂ ತದುಚ್ಯತೇ ॥ ೮೦ ॥

ಮಹಾಪೂರ್ಣಸ್ಯ ನೈವೇದ್ಯಂ ಜನ್ಮನೈವೇದ್ಯಮಿಷ್ಯತೇ ।
ಜನ್ಮನೈವೇದ್ಯದಾನೇನ ಪುನರ್ಜನ್ಮ ನ ವಿದ್ಯತೇ ॥ ೮೧ ॥

ಊರ್ಜೇ ಮಾಸಿ ದಿನೇ ಪುಣ್ಯೇ ಜನ್ಮನೈವೇದ್ಯಮಾಚರೇತ್ ।
ಸಂಕ್ರಾಂತಿಪಾತಜನ್ಮರ್ಕ್ಷಪೌರ್ಣಮಾಸ್ಯಾದಿಸಂಯುತೇ ॥ ೮೨ ॥

ಅಬ್ದಜನ್ಮದಿನೇ ಕುರ್ಯಾಜ್ಜನ್ಮನೈವೇದ್ಯಮುತ್ತಮಂ ।
ಮಾಸಾಂತರೇಷು ಜನ್ಮರ್ಕ್ಷಪೂರ್ಣಯೋಗದಿನೇಽಪಿ ಚ ॥ ೮೩ ॥

ಮೇಲನೇ ಚ ಶನೇರ್ವಾಪಿ ತಾವತ್ಸಾಹಸ್ರಮಾಚರೇತ್ ।
ಜನ್ಮನೈವೇದ್ಯದಾನೇನ ಜನ್ಮಾರ್ಪಣಫಲಂ ಲಭೇತ್ ॥ ೮೪ ॥

---

೮೦. ಮೂವತ್ತಾರು ಸಾವಿರ ಮಹಾನೈವೇದ್ಯಗಳಿಗೆ "ಜನ್ಮನೈವೇದ್ಯ"ವೆಂದು ಹೆಸರು. ಅಷ್ಟೇ ಜನ್ಮ ನೈವೇದ್ಯ ದಾನಕ್ಕೆ ಮಹಾಪೂರ್ಣವೆಂದು ಹೆಸರು.

೮೧. ಆದುದರಿಂದ ಮಹಾಪೂರ್ಣ ನೈವೇದ್ಯವೇ ಜನ್ಮನೈವೇದ್ಯವೆಂಬುದು. ಆ ಜನ್ಮನೈವೇದ್ಯವನ್ನು ದಾನಮಾಡಿದರೆ ಪುನರ್ಜನ್ಮವೇ ಇಲ್ಲ. ಮುಕ್ತಿಯು ಲಭಿಸುವುದು.

೮೨. ಕಾರ್ತಿಕಮಾಸದಲ್ಲಿ ಸಂಕ್ರಮಣ, ವ್ಯತೀಪಾತ, ಜನ್ಮನಕ್ಷತ್ರ ಮುಂತಾದುವುಗಳಿರುವ ಪುಣ್ಯದಿನಗಳಲ್ಲಿ ಮತ್ತು ಹುಣ್ಣಿಮೆಯಲ್ಲಿ ಈ ಜನ್ಮ ನೈವೇದ್ಯವನ್ನು ಮಾಡಬೇಕು.

೮೩. ಯುಗಾದಿದಿನದಲ್ಲಿ ಈ ಜನ್ಮನೈವೇದ್ಯವನ್ನು ಮಾಡಬೇಕು. ಮಿಕ್ಕ ಮಾಸಗಳಲ್ಲೂ ಸಹ ಜನ್ಮನಕ್ಷತ್ರವಿರುವ ದಿನ ಮತ್ತು ಪೌರ್ಣಿಮೆ ಈ ದಿನಗಳಲ್ಲಿ ಮಾಡಬೇಕು. ಶನಿಯ ಸಂಬಂಧವಿರುವ ದಿನ (ಶನಿವಾರ) ದಲ್ಲಿಯೂ ಮೂವತ್ತು ಸಾವಿರ ಜನ್ಮ ನೈವೇದ್ಯವನ್ನು ಮಾಡಬೇಕು.

೮೪-೮೫. ಜನ್ಮನೈವೇದ್ಯವನ್ನು ದಾನಮಾಡಿದರೆ ಜನ್ಮವನ್ನರ್ಪಿಸಿದ ಫಲವು

ಜನ್ಮಾರ್ಪಣಾಚ್ಛಿವಃ ಪ್ರೀತಃ ಸ್ವಸ್ವಾಯುಜ್ಯಂ ದದಾತಿ ಹಿ ।
ಇದಂ ತಜ್ಜನ್ಮನೈವೇದ್ಯಂ ಶಿವಸ್ಯೈವ ಪ್ರದಾಪಯೇತ್ ॥ ೮೫ ॥

ಯೋನಿಲಿಂಗಸ್ವರೂಪೇಣ ಶಿವೋ ಜನ್ಮನಿರೂಪಕಃ ।
ತಸ್ಮಾಜ್ಜನ್ಮನಿವೃತ್ತ್ಯರ್ಥಂ ಜನ್ಮಪೂಜಾ ಶಿವಸ್ಯ ಹಿ ॥ ೮೬ ॥

ಬಿಂದುನಾದಾತ್ಮಕಂ ಸರ್ವಂ ಜಗತ್ಸ್ಥಾವರಜಂಗಮಂ ।
ಬಿಂದುಃ ಶಕ್ತಿಃ ಶಿವೋ ನಾದಃ ಶಿವಶಕ್ತ್ಯಾತ್ಮಕಂ ಜಗತ್ ॥ ೮೭ ॥

ನಾದಾಧಾರಮಿದಂ ಬಿಂದುರ್ಬಿಂದ್ವಾಧಾರಮಿದಂ ಜಗತ್ ।
ಜಗದಾಧಾರಭೂತೌ ಹಿ ಬಿಂದುನಾದೌ ವ್ಯವಸ್ಥಿತೌ ॥ ೮೮ ॥

ಬಿಂದುನಾದಯುತಂ ಸರ್ವಂ ಸಕಲೀಕರಣಂ ಭವೇತ್ ।
ಸಕಲೀಕರಣಾಜ್ಜನ್ಮ ಜಗತ್ಪ್ರಾಪ್ನೋತ್ಯಸಂಶಯಂ ॥ ೮೯ ॥

---

ಲಭಿಸುವುದು. ಜನ್ಮವನ್ನರ್ಪಿಸಿದರೆ ಶಿವನು ಸುಪ್ರೀತವಾಗಿ ತನ್ನ ಲೋಕವನ್ನು ಕರುಣಿಸುವನು. ಈ ಜನ್ಮನೈವೇದ್ಯವನ್ನು ಶಿವನಿಗೆಮಾತ್ರ ಅರ್ಪಿಸಬೇಕು.

೮೬. ಕಾರಣವೇನೆಂದರೆ, ಕಾರಣವಾದ ಲಿಂಗಸ್ವರೂಪದಿಂದಿರುವ ಶಿವನೇ ಜನ್ಮವನ್ನು ಉಂಟುಮಾಡುವವನು, ಆದುದರಿಂದ ಜನ್ಮನಿವೃತ್ತಿ ಆಗಬೇಕಾದರೆ ಶಿವನಿಗೇನೆ ಜನ್ಮನೈವೇದ್ಯವನ್ನು ಮಾಡಬೇಕು.

೮೭. ಸ್ಥಿರ ಮತ್ತು ಚರ ರೂಪವಾಗಿರುವ ಈ ಜಗತ್ತೆಲ್ಲವೂ ಬಿಂದು ಮತ್ತು ನಾದಸ್ವರೂಪವಾದುದು. ಬಿಂದುವೆಂದರೆ (ಆದಿ) ಶಕ್ತಿಯು, ನಾದವೆಂದರೆ ಶಿವನು, ಆದುದರಿಂದ ಈ ಜಗತ್ತು ಶಿವ ಮತ್ತು ಶಕ್ತಿಸ್ವರೂಪವಾದುದು.

೮೮. ಬಿಂದುವಿಗೆ ಆಧಾರವು ನಾದವು. ಆ ಬಿಂದುವು ಜಗತ್ತಿಗೆ ಆಧಾರವು. ಹೀಗೆ ಬಿಂದುನಾದಗಳು ಸ್ಥಿರಚರಾತ್ಮಕವಾದ ಈ ಜಗತ್ತಿಗೆ ಆಧಾರವಾಗಿರುವುವು.

೮೯. ಜಗತ್ತು ಬಿಂದುನಾದಗಳಿಂದ ಕೂಡಿದುದೇ ಆದರೆ ಸಕಲೀಕರಣವು (ಸಂಪೂರ್ಣತೆಯು ಸೃಷ್ಟಿಮುಖವಾಗುವುದು) ಆಗುವುದು, ಆಸಕಲೀಕರಣದಿಂದ ಜಗತ್ತಿಗೆ ಉತ್ಪತ್ತಿಯಾಗುವುದು.

ಬಿಂದುನಾದಾತ್ಮಕಂ ಲಿಂಗಂ ಜಗತ್ಕಾರಣಮುಚ್ಯತೇ ।
ಬಿಂದುರ್ದೇವೀ ಶಿವೋ ನಾದಃ ಶಿವಲಿಂಗಂ ತು ಕಥ್ಯತೇ ॥ ೯೦ ॥

ತಸ್ಮಾಜ್ಜನ್ಮನಿವೃತ್ತ್ಯರ್ಥಂ ಶಿವಲಿಂಗಂ ಪ್ರಪೂಜಯೇತ್ ।
ಮಾತಾ ದೇವೀ ಬಿಂದುರೂಪಾ ನಾದರೂಪಃ ಶಿವಃ ಪಿತಾಃ ॥ ೯೧ ॥

ಪೂಜಿತಾಭ್ಯಾಂ ಪಿತೃಭ್ಯಾಂ ತು ಪರಮಾನಂದ ಏವ ಹಿ ।
ಪರಮಾನಂದಲಾಭಾರ್ಥಂ ಶಿವಲಿಂಗಂ ಪ್ರಪೂಜಯೇತ್ ॥ ೯೨ ॥

ಸಾ ದೇವೀ ಜಗತಾಂ ಮಾತಾ ಸ ಶಿವೋ ಜಗತಃ ಪಿತಾ ।
ಪಿತ್ರೋಃ ಶುಶ್ರೂಷಕೇ ನಿತ್ಯಂ ಕೃಪಾಧಿಕ್ಯಂ ಹಿ ವರ್ಧತೇ ॥ ೯೩ ॥

ಕೃಪಯಾಂತರ್ಗತೈಶ್ವರ್ಯಂ ಪೂಜಕಸ್ಯ ದದಾತಿ ಹಿ ।
ತಸ್ಮಾದಂತರ್ಗತಾನಂದಲಾಭಾರ್ಥಂ ಮುನಿಪುಂಗವಾಃ ॥ ೯೪ ॥

---

೯೦. ಆ ಬಿಂದುನಾದಗಳ ಸ್ವರೂಪವಾದುದು ಶಿವಲಿಂಗವು. ಬಿಂದುವು ದೇವಿಯು, ಶಿವನು ನಾದವು. ಆದುದರಿಂದ ಶಿವಲಿಂಗವೆಂದು ಲಿಂಗಕ್ಕೆ ಹೆಸರು. ಆದುದರಿಂದ ಜನ್ಮನಿವೃತ್ತಿಗಾಗಿ ಶಿವಲಿಂಗವನ್ನು ಪೂಜಿಸಬೇಕು.

೯೧-೯೨. ಬಿಂದುರೂಪಳಾದ ದೇವಿಯು ಜಗತ್ತಿಗೆ ಮಾತೆಯು, ನಾದರೂಪನಾದ ಶಿವನು ಜಗತ್ತಿಗೆ ಪಿತೃವು ತಂದೆಯು. ತಂದೆತಾಯಿಗಳನ್ನು ಪೂಜಿಸಿದರೆ ಪರಮಾನಂದವು ಲಭಿಸುವುದು. ಆದುದರಿಂದ ಶಿವಲಿಂಗವನ್ನು ಪರಮಾನಂದವನ್ನು ಪಡೆಯುವದಕ್ಕಾಗಿ ಪೂಜಿಸಬೇಕು.

೯೩. ಹೀಗೆ ಆ ದೇವಿ (ಪಾರ್ವತಿ) ಯು ಜಗತ್ತಿಗೆ ಮಾತೆಯು, ಶಿವನು ಪಿತೃವು ತಂದೆಯು. ತಂದೆತಾಯಿಗಳಿಗೆ, ಶುಶ್ರೂಷೆ ಮಾಡುವ ಪುತ್ರನಲ್ಲಿ ತುಂಬಾ ಕೃಪೆಯುಂಟಾಗುವುದು.

೯೪. ಆಗ ಕೃಪೆಯಿಂದ ತಂದೆತಾಯಿಗಳು ಗುಪ್ತವಾಗಿರುವ ಐಶ್ವರ್ಯವನ್ನು ಪುತ್ರನಿಗೆ ಕೊಡುವರು. ಆದುದರಿಂದ ಎಲೈ ಮುನಿಶ್ರೇಷ್ಠರೇ! ಗುಪ್ತವಾದ (ಪಡೆಯಲಸಾಧ್ಯವಾದ) ಆನಂದವನ್ನು ಪಡೆಯಲು ಜಗತ್ತಿನ ತಂದೆತಾಯಿಗಳಾದ, ಶಿವಶಕ್ತಿಯ ಸ್ವರೂಪದಿಂದ ಇರುವ ಶಿವಲಿಂಗವನ್ನು ಪೂಜಿಸಬೇಕು.

ಪಿತೃಮಾತೃಸ್ವರೂಪೇಣ ಶಿವಲಿಂಗಂ ಪ್ರಪೂಜಯೇತ್ ।
ಭರ್ಗಃ ಪುರುಷರೂಪೋ ಹಿ ಭರ್ಗಾ ಪ್ರಕೃತಿರುಚ್ಯತೇ ॥ ೯೫ ॥

ಅವ್ಯಕ್ತಾಂತರಧಿಷ್ಠಾನಂ ಗರ್ಭಃ ಪುರುಷ ಉಚ್ಯತೇ ।
ಸುವ್ಯಕ್ತಾಂತರಧಿಷ್ಠಾನಂ ಗರ್ಭಃ ಪ್ರಕೃತಿರುಚ್ಯತೇ ॥ ೯೬ ॥

ಪುರುಷಸ್ತ್ವಾದಿಗರ್ಭೋ ಹಿ ಗರ್ಭವಾನ್ ಜನಕೋ ಯತಃ ।
ಪುರುಷಾತ್ಪ್ರಕೃತೌ ಯುಕ್ತಂ ಪ್ರಥಮಂ ಜನ್ಮ ಕಥ್ಯತೇ ॥ ೯೭ ॥

ಪ್ರಕೃತೇರ್ವ್ಯಕ್ತತಾಂ ಯಾತಂ ದ್ವಿತೀಯಂ ಜನ್ಮ ಕಥ್ಯತೇ ।
ಜನ್ಮಜಂತುರ್ಮೃತ್ಯುಜನ್ಮ ಪುರುಷಾತ್ಪ್ರತಿಪದ್ಯತೇ ॥ ೯೮ ॥

ಅನ್ಯತೋ ಭಾವ್ಯತೇಽವಶ್ಯಂ ಮಾಯಯಾ ಜನ್ಮ ಕಥ್ಯತೇ ।
ಜೀರ್ಯತೇ ಜನ್ಮಕಾಲಾದ್ಯತ್ತಸ್ಮಾಜ್ಜೀವ ಇತಿ ಸ್ಮೃತಃ ॥ ೯೯ ॥

---

೯೫-೯೬. ಶಿವನು ಪುರುಷನು, ದೇವಿಯು ಪ್ರಕೃತಿಯು, ಅವ್ಯಕ್ತವಾದ (ಸ್ಫುಟವಲ್ಲದ) ವಸ್ತು (ಬೀಜ) ವಿಗೆ ಆಧಾರವಾದ ಗರ್ಭವುಳ್ಳವನು ಪುರುಷನು. ವ್ಯಕ್ತವಾದುದಕ್ಕೆ ಆಧಾರವಾದ ಗರ್ಭವು ಪ್ರಕೃತಿಯು.

೯೭. ಆದರಂತೆ ಭಗವಂತನಾದ ಶಿವನು ಈ ಜಗತ್ತಿಗೆ ಜನಕನಾದುದರಿಂದ ಅವ್ಯಕ್ತವಸ್ತುವಿಗೆ ಆಧಾರವಾದ ಗರ್ಭಸ್ವರೂಪನಾದ ಪುರುಷನು. ಪುರುಷನು ಪ್ರಕೃತಿಯಲ್ಲಿ ಸೇರುವಿಕೆಯು ಮೊದಲನೆಯ ಜನ್ಮವು.

೯೮. ಪ್ರಕೃತಿಯು ವ್ಯಕ್ತವಾಗಿ (ಕಾಣಿಸುವಂತೆ) ಪರಿಣಮಿಸುವುದು (ಜಗದ್ರೂಪವಾಗುವುದು) ಎರಡನೆಯ ಜನ್ಮವು. ಹೀಗೆ ಸಕಲ ಜಂತವೂ ಜನ್ಮವನ್ನೂ ಮೃತ್ಯುವನ್ನೂ ಸಹ ಪುರುಷನಿಂದಲೇ ಪಡೆಯುವುದು. ಆದರೆ ಜನಗಳು ಬೇರೆ ಯಾವಾವುದರಿಂದಲೋ ಜನ್ಮವು ಆಗುವುದೆಂದು ಹೇಳುವರು. ಹಾಗಲ್ಲ ಹಿಂದೆ ಹೇಳಿದಂತೆ ಪುರುಷನಿಂದ ಮಾಯೆ (ಪ್ರಕೃತಿಯು) ಮೂಲಕ ಜನ್ಮವು ಆಗುವುದು.

೯೯-೧೦೦. ಜನ್ಮಕಾಲದಿಂದ ಮೊದಲುಗೊಂಡು ಕಷ್ಟಪಡುವನಾ (ಅಥವಾ ಕ್ಷಯಿಸುವನಾ) ದುದರಿಂದ ಜೀವನೆಂದು ಜಂತುವಿಗೆ ಹೆಸರು. ಮತ್ತು ಜನ್ಮವನ್ನು

ಜನ್ಯತೇ ತನ್ಯತೇ ಪಾಶೈರ್ಜೀವಶಬ್ದಾರ್ಥ ಏವ ಹಿ ।
ಜನ್ಮಪಾಶನಿವೃತ್ತ್ಯರ್ಥಂ ಜನ್ಮಲಿಂಗಂ ಪ್ರಪೂಜಯೇತ್ ॥ ೧೦೦ ॥

ಭಂ ವೃದ್ಧಿಂ ಗಚ್ಛತೀತ್ಯರ್ಥಾದ್ಭಗಃ ಪ್ರಕೃತಿರುಚ್ಯತೇ ।
ಪ್ರಾಕೃತೈಃ ಶಬ್ದಮಾತ್ರಾದ್ಯೈಃ ಪ್ರಾಕೃತೇಂದ್ರಿಯಭೋಜನಾತ್ ॥ ೧೦೧ ॥

ಭಗಸ್ಯೇದಂ ಭೋಗಮಿತಿ ಶಬ್ದಾರ್ಥೋ ಮುಖ್ಯತಃ ಕೃತಃ ।
ಮುಖ್ಯೋ ಭಗಸ್ತು ಪ್ರಕೃತಿರ್ಭಗವಾನ್ ಶಿವ ಉಚ್ಯತೇ ॥ ೧೦೨ ॥

ಭಗವಾನ್ ಭೋಗದಾತಾ ಹಿ ನಾನ್ಯೋ ಭೋಗಪ್ರದಾಯಕಃ ।
ಭಗಸ್ವಾಮೀ ಚ ಭಗವಾನ್ ಭರ್ಗ ಇತ್ಯುಚ್ಯತೇ ಬುಧೈಃ ॥ ೧೦೩ ॥

ಭಗೇನ ಸಹಿತಂ ಲಿಂಗಂ ಭಗಂ ಲಿಂಗೇನ ಸಂಯುತಂ ।
ಇಹಾಮುತ್ರ ಚ ಭೋಗಾರ್ಥಂ ನಿತ್ಯಭೋಗಾರ್ಥಮೇವ ಹಿ ॥ ೧೦೪ ॥

---

ಹೊಂದಿ ಸಂಸಾರಪಾಶದಿಂದ ಬಂಧಿಸಲ್ಪಡುವುದರಿಂದಲೂ ಜೀವನೆಂದು ಹೆಸರು. ಆದುದರಿಂದ ಆ ಜನ್ಮ ಮತ್ತು ಸಂಸಾರಪಾಶಗಳ ನಿವೃತ್ತಿಗಾಗಿ ಜನ್ಮಲಿಂಗವನ್ನು ಪೂಜಿಸಬೇಕು. ಶಿವಲಿಂಗವನ್ನು ಜನ್ಮನೈವೇದ್ಯದಿಂದ ಅರ್ಚಿಸಬೇಕು.

೧೦೧. ಪ್ರಕೃತಿಸಂಬಂಧವಾದ ಶಬ್ದ ಮುಂತಾದ ವಿಷಯುಗಳಿಂದ ಅದೇ ಪ್ರಕೃತಿಮಯವಾದ ಇಂದ್ರಿಯಗಳಿಗೆ ಭೋಗವನ್ನುಂಟುಮಾಡುವುದರ ಮೂಲಕ ವೃದ್ಧಿಯನ್ನು ಹೊಂದುವುದರಿಂದ ಪ್ರಕೃತಿಗೆ ಭಗವೆಂದು ಹೆಸರು.

೧೦೨. ಆ ಪ್ರಕೃತಿರೂಪವಾದ ಭಗದಿಂದ ಜನಿಸುವಂತಹುದಕ್ಕೆ ಭೋಗವೆಂದು ಹೆಸರು. ಆದುದರಿಂದ ಪ್ರಧಾನವಾದ ಭಗವು ಪ್ರಕೃತಿಯು. ಅಂತಹ ಪ್ರಕೃತಿಯುಳ್ಳ ಶಿವನಿಗೆ " ಭಗವಂತ " ನೆಂದು ಹೆಸರು.

೧೦೩. ಭಗವಂತನೇ ಭೋಗವನ್ನು ಕೊಡುವವನು. ಇನ್ನಾರೂ ಕೊಡಲಾರರು. ಈ ರೀತಿಯಾಗಿ ಭಗ (ಪ್ರಕೃತಿ) ಕ್ಕೆ ಸ್ವಾಮಿಯಾದುದರಿಂದ ಭಗವಂತನನ್ನು ಭರ್ಗನೆಂದು ಪಂಡಿತರು ಹೇಳುವರು.

೧೦೪. ಅಂತಹ ಭಗದಿಂದ ಶಿವಲಿಂಗವು ಕೂಡಿರುವುದು. ಭಗವೂ ಸಹ ಲಿಂಗದೊಡನೆ ಸೇರಿರುವುದು. ಆದುದರಿಂದ ಇಹಪರಗಳೆರಡರಲ್ಲಿ ಭೋಗವು ಲಭಿಸುವುದಕ್ಕಾಗಿಯೂ, ನಿತ್ಯವೂ ಭೋಗವುಂಟಾಗುವುದಕ್ಕಾಗಿಯೂ ಭಗವಂತನಾದ ಮಹಾದೇವನ ಸ್ವರೂಪವಾದ ಶಿವಲಿಂಗವನ್ನು ಪೂಜಿಸಬೇಕು.

ಭಗವಂತಂ ಮಹಾದೇವಂ ಶಿವಲಿಂಗಂ ಪ್ರಪೂಜಯೇತ್ ।
ಲೋಕಪ್ರಸವಿತಾ ಸೂರ್ಯಸ್ತಚ್ಚಿಹ್ನಂ ಪ್ರಸವಾದ್ಭವೇತ್ ॥ ೧೦೫ ॥

ಲಿಂಗೇ ಪ್ರಸೂತಿಕರ್ತಾರಂ ಲಿಂಗಿನಂ ಪುರುಷೋ ಯಜೇತ್ ।
ಲಿಂಗಾರ್ಥಗಮಕಂ ಚಿಹ್ನಂ ಲಿಂಗಮಿತ್ಯಭಿಧೀಯತೇ ॥ ೧೦೬ ॥

ಲಿಂಗಮರ್ಥಂ ಹಿ ಪುರುಷಂ ಶಿವಂ ಗಮಯತೀತ್ಯದಃ ।
ಶಿವಶಕ್ತ್ಯೋಶ್ಚ ಚಿಹ್ನಸ್ಯ ಮೇಲನಂ ಲಿಂಗಮುಚ್ಯತೇ ॥ ೧೦೭ ॥

ಸ್ವಚಿಹ್ನಪೂಜನಾತ್ಪ್ರೀತಶ್ಚಿಹ್ನಕಾರ್ಯಂ ನ ವೀಯತೇ ।
ಜನ್ಮಾದಿ ಚಿಹ್ನಕಾರ್ಯಂ ಸ್ಯಾಜ್ಜನ್ಮಾದ್ಯಂ ವಿನಿವರ್ತತೇ ॥ ೧೦೮ ॥

ಪ್ರಾಕೃತೈಃ ಪುರುಷೈಶ್ಚಾಪಿ ಬಾಹ್ಯಾಭ್ಯಂತರಸಂಭವೈಃ ।
ಷೋಡಶೈರುಪಚಾರೈಶ್ಚ ಶಿವಲಿಂಗಂ ಪ್ರಪೂಜಯೇತ್ ॥ ೧೦೯ ॥

---

೧೦೫-೧೦೭. ಸೂರ್ಯನು ಲೋಕಪ್ರಸವಿತೃವು, (ಲೋಕ ಸೃಷ್ಟಿಕರ್ತೃವು) ಜಗತ್ತಿನ ಪ್ರಸವದಿಂದ ಸೂರ್ಯನೆ ಪ್ರಸವಕರ್ತನೆಂದು ತಿಳಿಯಬಹುದು. ಲಿಂಗದಲ್ಲಿ ಪ್ರಸವಕರ್ತನಾದ ಮತ್ತು ಶಿವರೂಪವಾದ ಸೂರ್ಯನನ್ನು ಪೂಜಿಸಬೇಕು. ಕಾರಣ ಭೂತವಾದ ವಸ್ತುವನ್ನು ಜ್ಞಾಪಿಸುವುದಕ್ಕೆ ಲಿಂಗವೆಂದು ಹೆಸರು. ಕಾರಣಭೂತವಾದ ವಸ್ತುವು ಶಿವನು. ಆ ಶಿವನನ್ನು ಶಿವಲಿಂಗವು ಜ್ಞಾಪಿಸುವುದು. ಶಿವ ಮತ್ತು ಶಕ್ತಿಯರ ಚಿಹ್ನಸ್ವರೂಪವು ಲಿಂಗವು.

೧೦೮. ತನ್ನ ಚಿಹ್ನವಾದ ಲಿಂಗವನ್ನು ಪೂಜಿಸಿದರೆ ಶಿವನು ಪ್ರೀತನಾಗಿ ತನ್ನ ಚಿಹ್ನದ ಕಾರ್ಯವನ್ನು ಭಕ್ತನಿಗೆ ಮಾಡುವುದಿಲ್ಲ. ಜನ್ಮ ಮುಂತಾದುದು ಚಿಹ್ನದ ಕಾರ್ಯವು. ಎಂದರೆ ಭಕ್ತನಿಗೆ ತಿರುಗಿ ಜನ್ಮವು ಬರದಂತೆ ಮುಕ್ತಿಯನ್ನು ಕರುಣಿಸುವನು.

೧೦೯. ತಿಳಿವಳಿಕೆಯಿಲ್ಲದ ಅನಾಗರಿಕ ಪುರುಷರೂ ಸಹ ಬಾಹ್ಯ ಮತ್ತು ಆಂತರಿಕವಾದ ಷೋಡಶೋಪಚಾರಗಳಿಂದ ಶಿವಲಿಂಗವನ್ನು ಪೂಜಿಸಬೇಕು.

ಏವಮಾ ದಿತ್ಯವಾರೇ ಹಿ ಪೂಜಾ ಜನ್ಮನಿವರ್ತಿಕಾ।
ಆದಿವಾರೇ ಮಹಾಲಿಂಗಂ ಪ್ರಣವೇನೈವ ಪೂಜಯೇತ್ ॥ ೧೧೦ ॥

ಆದಿವಾರೇ ಪಂಚಗವ್ಯೈರಭಿಷೇಕೋ ವಿಶಿಷ್ಯತೇ।
ಗೋಮಯಂ ಗೋಜಲಂ ಕ್ಷೀರಂ ದಧ್ಯಾಜ್ಯಂ ಪಂಚಗವ್ಯಕಂ ॥ ೧೧೧ ॥

ಕ್ಷೀರಾದ್ಯಂ ಚ ಪೃಥಕ್ಚೈವ ಮಧುನಾ ಚೇಕ್ಷುಸಾರಕೈಃ।
ಗವ್ಯಕ್ಷೀರಾನ್ನ ನೈವೇದ್ಯಂ ಪ್ರಣವೇನೈವ ಕಾರಯೇತ್ ॥ ೧೧೨ ॥

ಪ್ರಣವಂ ಧ್ವನಿಲಿಂಗಂ ತು ನಾದಲಿಂಗಂ ಸ್ವಯಂಭುವಃ।
ಬಿಂದುಲಿಂಗಂ ತು ಯಂತ್ರಂ ಸ್ಯಾನ್ಮಕಾರಂ ತು ಪ್ರತಿಷ್ಠಿತಂ ॥ ೧೧೩

ಉಕಾರಂ ಚರಲಿಂಗಂ ಸ್ಯಾದಕಾರಂ ಗುರುವಿಗ್ರಹಂ।
ಷಡ್ಲಿಂಗಪೂಜಯಾ ನಿತ್ಯಂ ಜೀವನ್ಮುಕ್ತೋ ನ ಸಂಶಯಃ ॥ ೧೧೪ ॥

---

೧೧೦. ಹೀಗೆಯೇ ಆದಿತ್ಯವಾರದಲ್ಲಿ ಶಿವಲಿಂಗವನ್ನು ಪೂಜಿಸಿದರೆ ಜನ್ಮವು ನಾಶವಾಗವುದು. ಮುಕ್ತಿಯು ಲಭಿಸುವುದು. ಆದಿತ್ಯವಾರದಲ್ಲಿ ಮಹಾಲಿಂಗೇಶ್ವರನನ್ನು ಓಂಕಾರದಿಂದಲೇ ಅರ್ಚಿಸಬೇಕು.

೧೧೧. ಆದಿತ್ಯವಾರದಲ್ಲಿ ಪಂಚಗವ್ಯಗಳಿಂದ ಅಭಿಷೇಕವನ್ನು ಮಾಡಬೇಕು. ಗೋಮಯ (ಸಗಣಿ) ಗೋಮೂತ್ರ, ಹಸುವಿನ ಹಾಲು, ಮೊಸರು, ತುಪ್ಪ, ಈ ಐದು ಪಂಚಗವ್ಯಗಳು.

೧೧೨. ಬೇರೆ ಬೇರೆಯಾಗಿ ಹಾಲು ಮೊಸರು ಮುಂತಾದುವುಗಳು. ಜೇನು ತುಪ್ಪ, ಬೆಲ್ಲ, ಹಸುವಿನ ಹಾಲಿನಿಂದ ಮಾಡಿದ ಪರಮಾನ್ನ ಇವುಗಳನ್ನು ಓಂಕಾರ ದಿಂದ ನೈವೇದ್ಯಮಾಡಬೇಕು.

೧೧೩-೧೧೪. ಓಂಕಾರವು (ಶಿವನ) ಧ್ವನಿಲಿಂಗವು. ಉದ್ಭವಿಸಿದ ಲಿಂಗವು ನಾದ ಲಿಂಗವು. ಯಂತ್ರವು ಬಿಂದುಲಿಂಗವು. (ಓಂಕಾರದಲ್ಲಿನ) ಮಕಾರವು ಪ್ರತಿಷ್ಠಿ ಸಿದಲಿಂಗವು. ಉಕಾರವು ಚರಲಿಂಗವು. ಅಕಾರವು ದೊಡ್ಡದಾದ ವಿಗ್ರಹವು (ಲಿಂಗವು). ಈ ಆರು ಲಿಂಗಗಳನ್ನು ಪೂಜಿಸಿದವನು ಜೀವಿಸಿರುವಂತೆಯೇ ಮುಕ್ತಿಯನ್ನು ಹೊಂದುವನು. ಸಂಸಾರದಿಂದ ಬಿಡುಗಡೆಯನ್ನು ಹೊಂದುವನು. ಇದರಲ್ಲಿ ಸಂಶಯ ವಿಲ್ಲ. ಶಿವನನ್ನು ಭಕ್ತಿಯಿಂದ ಪೂಜಿಸಿದರೆ ಉತ್ತಮವಾದ ಜನ್ಮ ಮತ್ತು ಮುಕ್ತಿ ಗಳು ನರರಿಗೆ ಲಭಿಸುವವು.

ಶಿವಸ್ಯ ಭಕ್ತ್ಯಾ ಪೂಜಾ ಹಿ ಜನ್ಮಮುಕ್ತಿಕರೀ ನೃಣಾಂ ।
ರುದ್ರಾಕ್ಷಧಾರಣಾತ್ಪಾದಮರ್ಧಂ ವೈ ಭೂತಿಧಾರಣಾತ್ ॥ ೧೧೫ ॥

ತ್ರಿಪಾದಂ ಮಂತ್ರಜಾಪ್ಯಾಚ್ಚ ಪೂಜಯಾ ಪೂರ್ಣಭಕ್ತಿಮಾನ್ ।
ಶಿವಲಿಂಗಂ ಚ ಭಕ್ತಂ ಚ ಪೂಜ್ಯ ಮೋಕ್ಷಂ ಲಭೇನ್ನರಃ ॥ ೧೧೬ ॥

ಯ ಇಮಂ ಪಠತೇಽಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ತಸ್ಯೈವ ಶಿವಭಕ್ತಿಶ್ಚ ವರ್ಧತೇ ಸುದೃಢಾ ದ್ವಿಜಾಃ ॥ ೧೧೭ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಷೋಡಶೋಽಧ್ಯಾಯಃ.

---

೧೧೫-೧೧೬. ರುದ್ರಾಕ್ಷಿಯನ್ನು ಧರಿಸುವುದರಿಂದ ಕಾಲುಭಾಗ ಭಕ್ತಿಯುಂಟಾಗುವುದು. ಭಸ್ಮವನ್ನು ಧರಿಸುವುದರಿಂದ ಅರ್ಧ ಭಕ್ತಿಯುಂಟಾಗುವುದು. ಪಂಚಾಕ್ಷರೀ ಮಂತ್ರವನ್ನು ಜಪಿಸುವುದರಿಂದ ಮುಕ್ಕಾಲುಭಾಗ ಭಕ್ತಿಯುಂಟಾಗುವುದು. ಶಿವನನ್ನು ಪೂಜಿಸುವುದರಿಂದ ಪೂರ್ಣವಾದ ಭಕ್ತಿಯು ಅವನಲ್ಲುಂಟಾಗುವುದು. ಶಿವಲಿಂಗವನ್ನೂ ಶಿವಭಕ್ತನನ್ನೂ ಶ್ರದ್ಧೆಯಿಂದ ಪೂಜಿಸಿದರೆ ಮುಕ್ತಿಯು ಲಭಿಸುವುದು.

೧೧೭. ಎಲೈ ಬ್ರಾಹ್ಮಣೋತ್ತಮರೇ! ಈ ಅಧ್ಯಾಯವನ್ನು ಯಾವನು ಸಾವಧಾನತೆಯಿಂದ ಕೇಳುವನೋ ಅವನಿಗೆ ದೃಢವಾಗಿ ಶಿವನಲ್ಲಿ ಭಕ್ತಿಯು ವೃದ್ಧಿ ಹೊಂದುವುದು.

ಇಲ್ಲಿಗೆ ಶಿವಮಹಾಪುರಾಣದ ವಿದ್ಯೇಶ್ವರಸಂಹಿತೆಯಲ್ಲಿ ಹದಿನಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಸಪ್ತದಶೋಽಧ್ಯಾಯಃ

---

॥ ಋಷಯ ಊಚುಃ ॥

ಪ್ರಣವಸ್ಯ ಚ ಮಾಹಾತ್ಮ್ಯಂ ಷಡ್ಲಿಂಗಸ್ಯ ಮಹಾಮುನೇ ।
ಶಿವಭಕ್ತಸ್ಯ ಪೂಜಾಂ ಚ ಕ್ರಮಶೋ ಬ್ರೂಹಿ ನಃ ಪ್ರಭೋ ॥ ೧ ॥

॥ ಸೂತ ಉವಾಚ ॥

ತಪೋಧನೈರ್ಭವದ್ಭಿಶ್ಚ ಸಮ್ಯಕ್ಪ್ರಶ್ನಸ್ತ್ವಯಂ ಕೃತಃ ।
ಅಸ್ಯೋತ್ತರಂ ಮಹಾದೇವೋ ಜಾನಾತಿ ಸ್ಮ ನ ಚಾಪರಃ ॥ ೨ ॥

---

## ಹದಿನೇಳನೆಯ ಅಧ್ಯಾಯವು.

೧. ಋಷಿಗಳು ಕೇಳಿದರು :—ಓ ಸೂತ ಮಹಾಮುನಿಯೆ! ಓಂಕಾರದ ಮತ್ತು ಆರು ಲಿಂಗಗಳ ಮಾಹಾತ್ಮ್ಯವನ್ನೂ, ಶಿವಭಕ್ತನ ಪೂಜೆಯನ್ನೂ ಸಹಕ್ರಮವಾಗಿ ಹೇಳುವವನಾಗು. ಈ ವಿಷಯವನ್ನು ನೀನೇ ಹೇಳಲು ಸಮರ್ಥನು ಎಂದರು.

೨. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ! ತಪಸ್ವಿಗಳಾದ ನೀವು ಚೆನ್ನಾಗಿರುವುದನ್ನೇ ಪ್ರಶ್ನಿಸಿರುವಿರಿ. ಈ ನಿಮ್ಮ ಪ್ರಶ್ನೆಗೆ ಉತ್ತರವನ್ನು ಮಹಾದೇವನೇ ತಿಳಿದಿರುವನು. ಇನ್ನಾರೂ ತಿಳಿದಿಲ್ಲವು.

ಅಥಾಪಿ ವಕ್ಷ್ಯೇ ತಮಹಂ ಶಿವಸ್ಯ ಕೃಪಯೈವ ಹಿ ।
ಶಿವೋಽಸ್ಮಾಕಂ ಚ ಯುಷ್ಮಾಕಂ ರಕ್ಷಾಂ ಗೃಹ್ಣಾತು ಭೂರಿಶಃ ॥ ೩ ॥

ಪ್ರೋ ಹಿ ಪ್ರಕೃತಿಜಾತಸ್ಯ ಸಂಸಾರಸ್ಯ ಮಹೋದಧೇಃ ।
ನವಂ ನಾವಾಂತರಮಿತಿ ಪ್ರಣವಂ ವೈ ವಿದುರ್ಬುಧಾಃ ॥ ೪ ॥

ಪ್ರಃ ಪ್ರಪಂಚೋ ನ ನಾಸ್ತಿ ವೋ ಯುಷ್ಮಾಕಂ ಪ್ರಣವಂ ವಿದುಃ ।
ಪ್ರಕರ್ಷೇಣ ನಯೇದ್ಯಸ್ಮಾನ್ಮೋಕ್ಷಂ ವಾ ಪ್ರಣವಂ ವಿದುಃ ॥ ೫ ॥

ಸ್ವಜಾಪಕಾನಾಂ ಯೋಗಿನಾಂ ಸ್ವಮಂತ್ರಪೂಜಕಸ್ಯ ಚ ।
ಸರ್ವಕರ್ಮಕ್ಷಯಂ ಕೃತ್ವಾ ದಿವ್ಯಜ್ಞಾನಂ ತು ನೂತನಂ ॥ ೬ ॥

ತಮೇವ ಮಾಯಾರಹಿತಂ ನೂತನಂ ಪರಿಚಕ್ಷತೇ ।
ಪ್ರಕರ್ಷೇಣ ಮಹಾತ್ಮಾನಂ ನವಂ ಶುದ್ಧಸ್ವರೂಪಕಂ ॥ ೭ ॥

---

೩. ಆದರೂ ಆ ಶಿವನ ಅನುಗ್ರಹದಿಂದಲೇ ನಾನು ನಿಮ್ಮ ಪ್ರಶ್ನೆಗೆ ಉತ್ತರವನ್ನು ಹೇಳುವೆನು. ಆ ಶಿವನು ಸದಾ ನಿಮ್ಮಗಳನ್ನೂ ನನ್ನನ್ನೂ ರಕ್ಷಿಸಲಿ.

೪. ಪ್ರಣವ (ಓಂಕಾರ) ದ ಅರ್ಥವು—ಪ್ರ ಎಂದರೆ ಪ್ರಕೃತಿ ಮೊದಲುಗೊಂಡು ಸಂಸಾರವೆಂದು ಅರ್ಥವು. " ನವ " ಎಂದರೆ ಆ ಸಂಸಾರ ಸಮುದ್ರವನ್ನು ದಾಟಿಸುವಂತಹ ಹೊಸ ನೌಕೆಯೆಂದು ಅರ್ಥವು. ಒಟ್ಟಿನಲ್ಲಿ ಸಂಸಾರ ಸಾಗರವನ್ನು ದಾಟಿಸುವುದು ಎಂದು ಪ್ರಣವದ ಅರ್ಥವು.

೫. ಅಥವಾ " ಪ್ರ " ಎಂದರೆ ಪ್ರಪಂಚವು, " ನ " ಎಂದರೆ ಇಲ್ಲವು. " ವಃ " ಎಂದರೆ ಬ್ರಹ್ಮಸ್ವರೂಪವಾದ ಜೀವನಿಗೆ ಎಂದು ಅರ್ಥವು. ಎಂದರೆ ನಮ್ಮ ಸ್ವರೂಪವಾದ ಬ್ರಹ್ಮವೊಂದೇ ಇರುವುದು. ಅದು ಸತ್ಯವಾದುದು. ಈ ಪ್ರಪಂಚವು ನಿಜವಾಗಿ ಇಲ್ಲವು. ನಮ್ಮ ಅಜ್ಞಾನದಿಂದ ಕಾಣಿಸುತ್ತಲಿರುವುದು ಎಂದು ಪ್ರಣವದ ಅರ್ಥವು. ಅವಶ್ಯವಾಗಿ ಮುಕ್ತಿಯನ್ನುಂಟುಮಾಡುವುದರಿಂದ ಪ್ರಣವವೆಂದು ಹೇಳಲ್ಪಡುವುದು.

೬-೭. ಮತ್ತು ಪ್ರಣವವು (ಓಂಕಾರವು) ತನ್ನನ್ನು ಜಪಿಸುವಂತಹ ಮತು ಸ್ವಸ್ವರೂಪವನ್ನು ಪೂಜಿಸುವಂತಹ ಯೋಗಿಗಳಿಗೆ ಸಕಲ ಕರ್ಮಗಳನ್ನೂ ನಾಶಮಾಡಿ ಹೊಸದಾಗಿ ದಿವ್ಯ (ಬ್ರಹ್ಮ) ಜ್ಞಾನವನ್ನುಂಟುಮಾಡಿ ಮಾಯೆಯ ಸಂಬಂಧವಿಲ್ಲದ, ನಿರ್ವಿಕಾರವಾದ, ವ್ಯಾಪಕವಾದ ಮತ್ತು ಶುದ್ಧವಾದ ಸ್ವರೂಪವುಳ್ಳಂತಹ ಬ್ರಹ್ಮವಸ್ತುವನ್ನುಂಟುಮಾಡುವುದು ಎಂದೂ ಪ್ರಣವದ ಅರ್ಥವನ್ನು ತಿಳಿದವರು ಹೇಳುವರು.

ಸೂತಸಂ ವೈ ಕರೋತೀತಿ ಪ್ರಣವಂ ತಂ ವಿದುರ್ಬುಧಾಃ ।
ಪ್ರಣವಂ ದ್ವಿವಿಧಂ ಪ್ರೋಕ್ತಂ ಸೂಕ್ಷ್ಮಸ್ಥೂಲಪ್ರಭೇದತಃ ॥ ೮ ॥

ಸೂಕ್ಷ್ಮಮೇಕಾಕ್ಷರಂ ವಿದ್ಯಾತ್ಸ್ಥೂಲಂ ಪಂಚಾಕ್ಷರಂ ವಿದುಃ ।
ಸೂಕ್ಷ್ಮಮವ್ಯಕ್ತಪಂಚಾರ್ಣಂ ಸುವ್ಯಕ್ತಾರ್ಣಂ ತಥೇತರತ್ ॥ ೯ ॥

ಜೀವನ್ಮುಕ್ತಸ್ಯ ಸೂಕ್ಷ್ಮಂ ಹಿ ಸರ್ವಸಾರಂ ಹಿ ತಸ್ಯ ಹಿ ।
ಮಂತ್ರೇಣಾರ್ಥಾನುಸಂಧಾನಂ ಸ್ವದೇಹವಿಲಯಾವಧಿ ॥ ೧೦ ॥

ಸ್ವದೇಹೇ ಗಲಿತೇ ಪೂರ್ಣಂ ಶಿವಂ ಪ್ರಾಪ್ನೋತ್ಯಸಂಶಯಂ ।
ಕೇವಲಂ ಮಂತ್ರಜಾಪೀ ತು ನಿಶ್ಚಯಂ ಯೋಗಮಾಪ್ನುಯಾತ್ ॥ ೧೧ ॥

ಷಟ್ತ್ರಿಂಶತ್ಕೋಟಿಜಾಪೀ ತು ನಿಶ್ಚಯಂ ಯೋಗಮಾಪ್ನುಯಾತ್ ।
ಸೂಕ್ಷ್ಮಂ ಚ ದ್ವಿವಿಧಂ ಜ್ಞೇಯಂ ಹ್ರಸ್ವದೀರ್ಘಪ್ರಭೇದತಃ ॥ ೧೨ ॥

---

೮. ಆ ಪ್ರಣವವು ಸ್ಥೂಲ, ಸೂಕ್ಷ್ಮ ಎಂದು ಎರಡು ವಿಧವಾಗಿರುವುದು. ಸೂಕ್ಷ್ಮ ಪ್ರಣವವು ಒಂದೇ ಓಂಕಾರವೆಂಬ ಅಕ್ಷರವುಳ್ಳದುದು. ಸ್ಥೂಲಪ್ರಣವವು ಐದು ಅಕ್ಷರಗಳುಳ್ಳದುದು.

೯-೧೦. ಸೂಕ್ಷ್ಮ ಪ್ರಣವವು, ಅವ್ಯಕ್ತವಾದ ಐದು ಅಕ್ಷರಗಳುಳ್ಳದುದು. ಸ್ಫುಟವಾಗಿ ಐದು ಅಕ್ಷರಗಳುಳ್ಳದುದು ಸ್ಥೂಲವು. ಜೀವನ್ಮುಕ್ತನಿಗೆ ಸರ್ವಶ್ರೇಷ್ಠವಾದ ಸೂಕ್ಷ್ಮಪ್ರಣವೇ ಪ್ರಶಸ್ತವಾದುದು. ಜೀವನ್ಮುಕ್ತನು ಮರಣ ಪರ್ಯಂತವಾಗಿ ಪ್ರಣವವನ್ನು ಉಚ್ಚರಿಸುತ್ತಾ ಅದರರ್ಥವನ್ನು ಅನುಸಂಧಾನ (ಸ್ಮರಣೆ) ಮಾಡುತ್ತಿರಬೇಕು.

೧೧. ಮರಣವಾದನಂತರ ಶಿವನನ್ನು ಪಡೆಯುವನು, ಕೇವಲ (ಅರ್ಥವನ್ನು ಸ್ಮರಿಸದೆ) ಮಂತ್ರವನ್ನು ಜಪಿಸಿದರೆ ಯೋಗವು ಲಭಿಸುವುದು.

೧೨. ಮೂವತ್ತಾರು ಕೋಟಿ ಬಾರಿ ಜಪಿಸಿದರೆ ನಿಶ್ಚಯವಾಗಿಯೂ ಯೋಗವು ಲಭಿಸುವುದು. ಆ ಸೂಕ್ಷ್ಮಪ್ರಣವವು. ಹ್ರಸ್ವ ಮತ್ತು ದೀರ್ಘವೆಂದು ಎರಡು ವಿಧವಾಗಿರುವುದು.

ಅಕಾರಶ್ಚ ಉಕಾರಶ್ಚ ಮಕಾರಶ್ಚ ತತಃ ಪರಂ ।
ಬಿಂದುನಾದಯುತಂ ತದ್ಧಿ ಶಬ್ದಕಾಲಕಲಾನ್ವಿತಂ ॥ ೧೩ ॥

ದೀರ್ಘಪ್ರಣವಮೇವಂ ಹಿ ಯೋಗಿನಾಮೇವ ಹೃದ್ಗತಂ ।
ಮಕಾರಂ ತಂತ್ರಿತತ್ವಂ ಹಿ ಹ್ರಸ್ವಪ್ರಣವ ಉಚ್ಯತೇ ॥ ೧೪ ॥

ಶಿವಃ ಶಕ್ತಿಸ್ತಯೋರೈಕ್ಯಂ ಮಕಾರಂ ತು ತ್ರಿಕಾತ್ಮಕಂ ।
ಹ್ರಸ್ವಮೇವಂ ಹಿ ಜಾಪ್ಯಂ ಸ್ಯಾತ್ಸರ್ವಪಾಪಕ್ಷಯೈಷಿಣಾಂ ॥ ೧೫ ॥

ಭೂವಾಯುಕನಕಾರ್ಣೋದ್ಯೋ ಶಬ್ದಾದ್ಯಾಶ್ಚ ತಥಾ ದಶ ।
ಆಶಾನ್ವಯೇ ದಶ ಪುನಃ ಪ್ರವೃತ್ತಾ ಇತಿ ಕಥ್ಯತೇ ॥ ೧೬ ॥

ಹ್ರಸ್ವಮೇವ ಪ್ರವೃತ್ತಾನಾಂ ನಿವೃತ್ತಾನಾಂ ತು ದೀರ್ಘಕಂ ।
ವ್ಯಾಹೃತ್ಯಾದೌ ಚ ಮಂತ್ರಾದೌ ಕಾಮಂ ಶಬ್ದಕಲಾಯುತಂ ॥ ೧೭ ॥

---

೧೩. ಅಕಾರ ಉಕಾರ ಮಕಾರ ಇವುಗಳೊಡನೆಯೂ ಬಿಂದು ನಾದಗಳೊಡನೆಯೂ ಕೂಡಿದ್ದು ಶಬ್ದಕಾಲ ಕಲೆ (ವಿಘಳಿಗೆ) ಗಳಿಂದ ಕೂಡಿರುವಂತಹ ಓಂಕಾರವು ದೀರ್ಘಪ್ರಣವವು. ಇದನ್ನು ಯೋಗಿಗಳು ಸದಾ ಹೃದಯದಲ್ಲಿ ಧ್ಯಾನಿಸುವರು.

೧೪. ಮೂರು ವಸ್ತುಗಳ ಸ್ವರೂಪವುಳ್ಳ ಮಕಾರವು ಹ್ರಸ್ವಪ್ರಣವವು ಶಿವ, ಶಕ್ತಿ ಮತ್ತು ಆ ಶಿವಶಕ್ತಿಯರ ಐಕ್ಯ ಇವುಗಳೇ ಆ ಮೂರು ವಸ್ತುಗಳು. ಮಕಾರವು ಆ ಮೂರು ವಸ್ತುಸ್ವರೂಪವಾದುದು. ಆದಕ್ಕೆ ಹ್ರಸ್ವಪ್ರಣವವೆಂದು ಹೆಸರು.

೧೫. ಸಕಲ ಪಾಪವು ಕ್ಷಯವಾಗಬೇಕೆಂದು ಅಪೇಕ್ಷಿಸುವವರು ಹ್ರಸ್ವಪ್ರಣವವನ್ನು ಜಪಿಸಬೇಕು.

೧೬. ಭೂಮಿ, ವಾಯು, ಸುವರ್ಣ, ಸಾಲ, ಸ್ವರ್ಗ, ಶಬ್ದವೇ ಮೊದಲಾದ ಹತ್ತು ಇಂದ್ರಿಯ ವಿಷಯಗಳು, ಹತ್ತು ದಿಕ್ಕುಗಳು ಇವುಗಳಿಗೆ ಪ್ರವೃತ್ತಗಳೆಂದು ಹೆಸರು.

೧೭. ಗೃಹಸ್ಥರು ಹ್ರಸ್ವಪ್ರಣವವನ್ನೇ ಜಪಿಸಬೇಕು. ವಿರಕ್ತರಾದಸನ್ಯಾಸಿಗಳು ದೀರ್ಘಪ್ರಣವವನ್ನುಚ್ಚರಿಸಬೇಕು. ವ್ಯಾಹೃತಿಯೇ ಮುಂತಾದ ಮಂತ್ರಗಳಲ್ಲಿ ಶಬ್ದಕಲೆಗಳಿಂದ ಕೂಡಿರುವ ಪ್ರಣವವನ್ನು ಉಚ್ಚರಿಸಬೇಕು.

ವೇದಾದೌ ಚ ಪ್ರಯೋಜ್ಯಂ ಸ್ಯಾದ್ವಂದನೇ ಸಂಧ್ಯಯೋರಪಿ ।
ನವಕೋಟಿಜಪಾರ್ ಜಪ್ತ್ವಾ ಸಂಶುದ್ಧಃ ಪುರುಷೋ ಭವೇತ್ ॥ ೧೮ ॥
ಪುನಶ್ಚ ನವಕೋಟ್ಯಾ ತು ಪೃಥಿವೀಜಯಮಾಪ್ನುಯಾತ್ ।
ಪುನಶ್ಚ ನವಕೋಟ್ಯಾ ತು ಹ್ಯಪಾಂ ಜಯಮವಾಪ್ನುಯಾತ್ ॥ ೧೯ ॥
ಪುನಶ್ಚ ನವಕೋಟ್ಯಾ ತು ತೇಜಸಾಂ ಜಯಮವಾಪ್ನುಯಾತ್ ।
ಪುನಶ್ಚ ನವಕೋಟ್ಯಾ ತು ವಾಯೋರ್ಜಯಮವಾಪ್ನುಯಾತ್ ॥ ೨೦ ॥
ಆಕಾಶಜಯಮಾಪ್ನೋತಿ ನವಕೋಟಿಜಪೇನ ವೈ ।
ಗಂಧಾದೀನಾಂ ಕ್ರಮೇಣೈವ ನವಕೋಟಿಜಪೇನ ವೈ ॥ ೨೧ ॥
ಅಹಂಕಾರಸ್ಯ ಚ ಪುನರ್ನವಕೋಟಿಜಪೇನ ವೈ ।
ಸಹಸ್ರಮಂತ್ರಜಪ್ತೇನ ನಿತ್ಯಶುದ್ಧೋ ಭವೇತ್ಪುಮಾರ್ ॥ ೨೨ ॥
ತತಃ ಪರಂ ಸ್ವಸಿದ್ಧ್ಯರ್ಥಂ ಜಪೋ ಭವತಿ ಹಿ ದ್ವಿಜಾಃ ।
ಏವಮಷ್ಟೋತ್ತರಶತಕೋಟಿಜಪ್ತೇನ ವೈ ಪುನಃ ॥ ೨೩ ॥
ಪ್ರಣವೇನ ಪ್ರಬುದ್ಧಸ್ತು ಶುದ್ಧಯೋಗಮವಾಪ್ನುಯಾತ್ ।
ಶುದ್ಧಯೋಗೇನ ಸಂಯುಕ್ತೋ ಜೀವನ್ಮುಕ್ತೋ ನ ಸಂಶಯಃ ॥ ೨೪ ॥

---

೧೮-೨೦. ವೇದಪಾರಾಯಣದ ಆದಿಯಲ್ಲೂ ಸಂಧ್ಯಾವಂದನೆಗಳಲ್ಲಿಯೂ ಸಹ ದೀರ್ಘಪ್ರಣವವನ್ನುಚ್ಚರಿಸಬೇಕು. ಒಂಭತ್ತುಕೋಟಿ ಪ್ರಣವ ಜಪಗಳನ್ನು ಮಾಡಿದ ಪುರುಷನು ಶುದ್ಧನಾಗುವನು. ತಿರುಗಿ ಒಂಭತ್ತುಕೋಟಿ ಜಪವನ್ನು ಮಾಡಿದರೆ ಪೃಥಿವಿಯನ್ನು ಜಯಿಸಬಹುದು. ತಿರುಗಿ ಒಂಭತ್ತುಕೋಟಿ ಜಪಗಳಿಂದ ವಾಯು ಜಯವನ್ನು ಪಡೆಯಬಹುದು.

೨೧-೨೨. ಇನ್ನೂ ಒಂಭತ್ತುಕೋಟಿ ಜಪಗಳನ್ನು ಮಾಡಿದರೆ ಆಕಾಶಜಯವು ಲಭಿಸುವುದು. ತಿರುಗಿ ಒಂಭತ್ತು ಕೋಟಿಜಪಗಳಿಂದ ಗಂಧ ಮುಂತಾದ ವಿಷಯ ಗಳ ಜಯವು ಲಭಿಸುವುದು. ಇನ್ನೂ ಒಂಭತ್ತು ಕೋಟಿ ಜಪಗಳಿಂದ ಅಹಂಕಾರ ಜಯವು ಆಗುವುದು. ಸಾವಿರ ಬಾರಿ ಮಂತ್ರಗಳನ್ನು ಜಪಿಸಿದರೆ ಪುರುಷನು ಸದಾ ಶುದ್ಧನಾಗುವನು. ಇದಕ್ಕಿಂತಲೂ ಹೆಚ್ಚಾಗಿ ಮಾಡುವ ಜಪವು ತನ್ನ ಇಷ್ಟಾರ್ಥಸಿದ್ಧಿ ಯನ್ನು ಕಲ್ಪಿಸುವುದು.

೨೩-೨೪. ಈ ರೀತಿಯಾಗಿಯೇ ನೂರೆಂಟು ಕೋಟಿ ಪ್ರಣವ ಜಪಗಳನ್ನು ಮಾಡಿದರೆ ಜ್ಞಾನವನ್ನು ಪಡೆದವನಾಗಿ ಶುದ್ಧ ಯೋಗವನ್ನು ಪಡೆಯುವನು. ಶುದ್ಧ ಯೋಗವನ್ನು ಪಡೆದವನು ಜೀವನ್ಮುಕ್ತನೇ ಆಗುವನು, ಇದರಲ್ಲಿ ಸಂಶಯವಿಲ್ಲ.

ಸದಾ ಜಪರ್ ಸದಾ ಧ್ಯಾಯರ್ ಶಿವಂ ಪ್ರಣವರೂಪಿಣಂ ।
ಸಮಾಧಿಸ್ಥೋ ಮಹಾಯೋಗೀ ಶಿವ ಏವ ನ ಸಂಶಯಃ ॥ ೨೫ ॥

ಋಷಿಶ್ಛಂದೋ ದೇವತಾದಿ ನ್ಯಸ್ಯ ದೇಹೇ ಪುನರ್ಜಪೇತ್ ।
ಪ್ರಣವಂ ಮಾತೃಕಾಯುಕ್ತಂ ದೇಹೇ ನ್ಯಸ್ಯ ಋಷಿರ್ಭವೇತ್ ॥ ೨೬ ॥

ದಶಮಾತೃಷಡಧ್ವಾದಿ ಸರ್ವಂ ನ್ಯಾಸಫಲಂ ಲಭೇತಃ ।
ಪ್ರವೃತ್ತಾನಾಂ ಚ ಮಿಶ್ರಾಣಾಂ ಸ್ಥೂಲಪ್ರಣವಮುಚ್ಯತೇ ॥ ೨೭ ॥

ಕ್ರಿಯಾತಪೋಜಪೈರ್ಯುಕ್ತಾ ಸ್ತ್ರಿವಿಧಾಃ ಶಿವಯೋಗಿನಃ ।
ಧನಾದಿವಿಭವೈಶ್ಚೈವ ಕರಾದ್ಯಂಗೈರ್ನಮಾದಿಭಿಃ ॥ ೨೮ ॥

ಕ್ರಿಯಯಾ ಪೂಜಯಾ ಯುಕ್ತಃ ಕ್ರಿಯಾಯೋಗೀತಿ ಕಥ್ಯತೇ ।
ಪೂಜಾಯುಕ್ತಶ್ಚ ಮಿತಭುಗ್ಬಾಹ್ಯೇಂದ್ರಿಯಜಯಾನ್ವಿತಃ ॥ ೨೯ ॥

ಪರದ್ರೋಹಾದಿರಹಿತಸ್ತಪೋಯೋಗೀತಿ ಕಥ್ಯತೇ ।
ಏಶ್ವೈರ್ಯುಕ್ತಃ ಸದಾ ಶುದ್ಧಃ ಸರ್ವಕಾಮಾದಿವರ್ಜಿತಃ ॥ ೩೦ ॥

---

೨೫. ಓಂಕಾರರೂಪಿಯಾದ ಶಿವನನ್ನು ಸದಾ ಜಪಿಸುತ್ತಾ ಮತ್ತು ಧ್ಯಾನಿಸುತ್ತಾ ಇದ್ದು ಸಮಾಧಿನಿಷ್ಠನಾಗುವ ಮಹಾಯೋಗಿಯು ಶಿವನೇ ಆಗುವನು. ಇದರಲ್ಲಿ ಸಂಶಯವಿಲ್ಲ.

೨೬. ಋಷಿ, ಛಂದಸ್ಸು ಮತ್ತು ದೇವತೆಗಳನ್ನು ದೇಹದಲ್ಲಿ ವಿನ್ಯಾಸಮಾಡಿ ಪುನಃ ಜಪಿಸಬೇಕು. ಮಾತೃಕಾಕ್ಷರಗಳಿಂದ ಕೂಡಿದ ಅಂಗನ್ಯಾಸ ಕರನ್ಯಾಸಗಳೊಡನೆ ಪ್ರಣವವನ್ನು ದೇಹದಲ್ಲಿ ವಿನ್ಯಾಸಮಾಡಿದರೆ ಋಷಿಯಾಗುವನು.

೨೭-೨೮. ಕ್ರಿಯಾಯುಕ್ತ, ತಪೋಯುಕ್ತ ಜಪಯುಕ್ತರೆಂದು ಶಿವಯೋಗಿಗಳು ಮೂರುವಿಧವಾಗಿರುವರು. ಧನ ಮುಂತಾದ ಐಶ್ವರ್ಯಗಳಿಂದಲೂ ಸಾಷ್ಟಾಂಗ ನಮಸ್ಕಾರ ಮುಂತಾದುವುಗಳಿಂದಲೂ ಕ್ರಿಯೆಯಿಂದ ಪೂಜಿಸುವವನು ಕ್ರಿಯಾಯೋಗಿಯು.

೨೯-೩೦. ಮಿತವಾದ ಆಹಾರವುಳ್ಳವನೂ, ಜಿತೇಂದ್ರಿಯನೂ, ಪರರಿಗೆ ದ್ರೋಹವನ್ನೆಣಿಸದೆ ಇರುವವನೂ ಆಗಿದ್ದು ಪೂಜಾಯುಕ್ತನಾದವನು "ತಪೋಯೋಗಿ"ಯು, ಈ ಮೇಲೆ ಹೇಳಿದ ಎಲ್ಲಾ ಗುಣಗಳುಳ್ಳವನೂ, ಸದಾ ಶುದ್ಧನೂ, ನಿಷ್ಕಾ

ಸದಾ ಜಪಪರಃ ಶಾಂತೋ ಜಪಯೋಗೀತಿ ತಂ ವಿದುಃ ।
ಉಪಚಾರೈಃ ಷೋಡಶಭಿಃ ಪೂಜಯಾ ಶಿವಯೋಗಿನಾಂ ॥ ೩೧ ॥

ಸಾಲೋಕ್ಯಾದಿಕ್ರಮಣೈವ ಶುದ್ಧೋ ಮುಕ್ತಿಂ ಲಭೇನ್ನರಃ ।
ಜಪಯೋಗಮಥೋ ವಕ್ಷ್ಯೇ ಗದತಃ ಶೃಣುತ ದ್ವಿಜಾಃ ॥ ೩೨ ॥

ತಪಃ ಕರ್ತುರ್ಜಪಃ ಪ್ರೋಕ್ತೋ ಯಜ್ಞರ್ಪ ಪರಿಮಾರ್ಜತೇ ।
ಶಿವನಾಮ ನಮಃಪೂರ್ವಂ ಚತುರ್ಥ್ಯಾಂ ಪಂಚತತ್ತ್ವಕಂ ॥ ೩೩ ॥

ಸ್ಥೂಲಪ್ರಣವರೂಪಂ ಹಿ ಶಿವಪಂಚಾಕ್ಷರಂ ದ್ವಿಜಾಃ ।
ಪಂಚಾಕ್ಷರಜಪೇನೈವ ಸರ್ವಸಿದ್ಧಿಂ ಲಭೇನ್ನರಃ ॥ ೩೪ ॥

ಪ್ರಣವೇನಾದಿಸಂಯುಕ್ತಂ ಸದಾ ಪಂಚಾಕ್ಷರಂ ಜಪೇತ್ ।
ಗುರೂಪದೇಶಂ ಸಂಗಮ್ಯ ಸುಖವಾಸೇ ಸುಭೂತಲೇ ॥ ೩೫ ॥

---

ಹನೂ, ಶಾಂತನೂ ಆಗಿದ್ದು ಸದಾ ಶಿವಮಂತ್ರ ನಾಮಗಳನ್ನು ಜಪಿಸುವವನು "ಜಪ ಯೋಗಿ" ಯೆಂದು ತಿಳಿದವರು ಹೇಳುವರು.

೩೧. ಹದಿನಾರು ಉಪಚಾರಗಳಿಂದ ಶಿವಯೋಗಿಗಳನ್ನು ಪೂಜಿಸಿ ಶುದ್ಧನಾದ ನರನು ಸಾಲೋಕ್ಯ ಮುಂತಾದ ಕ್ರಮದಿಂದ ಮುಕ್ತಿಯನ್ನು ಪಡೆಯುವನು.

೩೨. ಎಲೈ ವಿಪ್ರೋತ್ತಮರೇ, ಈಗ ಜಪಯೋಗವನ್ನು ಹೇಳುವೆನು ಕೇಳಿರಿ. ತಪಸ್ಸನ್ನಾಚರಿಸುವವನು ಅವಶ್ಯವಾಗಿ ಜಪವನ್ನು ಮಾಡಬೇಕು. ಜಪ ವನ್ನು ಮಾಡಿದರೆ ಚಿತ್ತವು ಶುದ್ಧಿಯಾಗುವುದು.

೩೩. ಚತುರ್ಥೀವಿಭಕ್ತ್ಯಂತವಾಗಿಯೂ, ಆದಿಯಲ್ಲಿ ನಮಃ ಪದವುಳ್ಳ ದಾಗಿಯೂ ಐದು ತತ್ತ್ವ (ಅಕ್ಷರ) ಗಳುಳ್ಳದಾಗಿಯೂ ಇರುವ ಶಿವನಾಮ (ಓಂ ನಮಃ ಶಿವಾಯ, ಮಂತ್ರವು ಸ್ಥೂಲಪ್ರಣವರೂಪವಾದ ಶಿವಪಂಚಾಕ್ಷರೀ ಮಂತ್ರವು.

೩೪. ಈ ಪಂಚಾಕ್ಷರಮಂತ್ರವನ್ನು ಜಪಿಸುವುದರಿಂದಲೇ ನರನು ಸಕಲ ಇಷ್ಟಾರ್ಥಸಿದ್ಧಿಯನ್ನು ಪಡೆಯುವನು. ಆದಿಯಲ್ಲಿ ಓಂಕಾರವನ್ನು ಸೇರಿಸಿ ಪಂಚಾ ಕ್ಷರಮಂತ್ರವನ್ನು ಜಪಿಸಬೇಕು.

೩೫-೩೬. ಗುರುಮುಖದಿಂದ ಮಂತ್ರದ ಉಪದೇಶವನ್ನು ಪಡೆದು ಯಾವ ತೊಂದರೆಯೂ ಇಲ್ಲದೆ ಸುಖವಾಗಿರುವ ಪ್ರದೇಶದಲ್ಲಿ ಕುಳಿತು ಶುಕ್ಲಪಕ್ಷದಲ್ಲಿ

ಪೂರ್ವಪಕ್ಷೇ ಸಮಾರಭ್ಯ ಕೃಷ್ಣಭೂತಾವಧಿ ದ್ವಿಜಾಃ ।
ಮಾಘಂ ಭಾದ್ರಂ ವಿಶಿಷ್ಟಂ ತು ಸರ್ವಕಾಲೋತ್ತಮೋತ್ತಮಂ ॥ ೩೬ ॥

ಏಕವಾರಂ ಮಿತಾಶೀ ತು ವಾಗ್ಯತೋ ನಿಯತೇಂದ್ರಿಯಃ ।
ಸ್ವಸ್ಯ ರಾಜಪಿತ್ರ್ಯಾಣಾಂ ಚ ಶುಶ್ರೂಷಣಂ ಚ ನಿತ್ಯಶಃ ॥ ೩೭ ॥

ಸಹಸ್ರಜಪಮಾತ್ರೇಣ ಭವೇಚ್ಛುದ್ಧೋ ನ ಚಾನ್ಯಥಾ ।
ಪಂಚಾಕ್ಷರಂ ಪಂಚಲಕ್ಷಂ ಜಪೇಚ್ಛಿವಮನುಸ್ಮರನ್ ॥ ೩೮ ॥

ಪದ್ಮಾಸನಸ್ಥಂ ಶಿವದಂ ಗಂಗಾಚಂದ್ರಕಲಾನ್ವಿತಂ ।
ವಾಮೋರುಸ್ಥಿತಶಕ್ತ್ಯಾ ಚ ವಿರಾಜಂತಂ ಮಹಾಗಣೈಃ ॥ ೩೯ ॥

ಮೃಗಟಂಕಧರಂ ದೇವಂ ವರದಾಭಯಪಾಣಿಕಂ ।
ಸದಾನುಗ್ರಹಕರ್ತಾರಂ ಸದಾಶಿವಮನುಸ್ಮರನ್ ॥ ೪೦ ॥

---

ಪ್ರಾರಂಭಿಸಿ ಕೃಷ್ಣಪಕ್ಷದವರೆಗೆ ಶಿವಪಂಚಾಕ್ಷರೀ ಜಪವನ್ನು ಮಾಡಬೇಕು. ಮಾಘ ಮಾಸ ಮತ್ತು ಭಾದ್ರಪದಮಾಸಗಳು ಶಿವಪಂಚಾಕ್ಷರೀಮಂತ್ರಜಪಕ್ಕೆ ಅತ್ಯುತ್ತಮ ವಾದ ಕಾಲವು.

೩೭. ನಿತ್ಯವೂ ಮಿತವಾದ ಆಹಾರವುಳ್ಳವನಾಗಿ ಜಿತೇಂದ್ರಿಯನಾಗಿದ್ದು ಮೌನದಿಂದ ಒಂದು ಬಾರಿ ಜಪಿಸಬೇಕು. ತನ್ನ ಮಾತಾಪಿತೃಗಳು ಮತ್ತು ರಾಜ ಇವರ ಸೇವೆಯನ್ನು ಮಾಡಬೇಕು.

೩೮. ಹಾಗೆ ಸಾವಿರ ಜಪಮಾಡಿದರೆ ಶುದ್ಧನಾಗುವನು. ಇಲ್ಲದಿದ್ದರೆ ಇಲ್ಲ ಪಂಚಾಕ್ಷರೀಮಂತ್ರವನ್ನು ಐದು ಲಕ್ಷ ಬಾರಿ ಮುಂದೆ ಹೇಳುವ ಸ್ವರೂಪವುಳ್ಳ ಶಿವ ನನ್ನು ಸ್ಮರಿಸುತ್ತಾ ಜಪಿಸಬೇಕು.

೩೯-೪೧. ಆ ಶಿವನು ಪದ್ಮಾಸನದಲ್ಲಿ ಕುಳಿತಿರುವನು. ಅವನ ಎಡತೊಡೆ ಯಲ್ಲಿ ಶಕ್ತಿ (ಪಾರ್ವತಿ) ಯು ವಿರಾಜಿಸುತ್ತಿರುಳು. ಶಿರಸ್ಸಿನಲ್ಲಿ ಗಂಗೆ ಮತ್ತು ಚಂದ್ರ ಕಲೆಗಳನ್ನು ಧರಿಸಿರುವನು, ಮಂಗಳವನ್ನುಂಟುಮಾಡುವವನು. ಪ್ರಮಥಗಣಗಳು ಸುತ್ತಲೂ ನೆರೆದಿರುವರು. ಮೃಗ (ಜಿಂಕೆ) ಶಿಶುವನ್ನು ಕೈನಲ್ಲಿ ಹಿಡಿದಿರುವನು. ವರದ ಮುದ್ರೆ ಮತ್ತು ಅಭಯಮುದ್ರೆಗಳನ್ನು ಪ್ರದರ್ಶಿಸುತ್ತಲಿರುವನು. ಸದಾ ಭಕ್ತರಿಗೆ ಅನುಗ್ರಹವನ್ನುಂಟುಮಾಡುವನು. ಇಂತಹ ಶಿವನನ್ನು ಸ್ಮರಿಸುತ್ತಾ ಶುದ್ಧವಾದ ಆಚಾರವುಳ್ಳವನಾಗಿದ್ದು ಮೊದಲು ಮನಸ್ಸಿನಿಂದ ಹೃದಯ ಅಥವಾ ಸೂರ್ಯಮಂಡಲ

ಸಂಪೂಜ್ಯ ಮನಸಾ ಪೂರ್ವಂ ಹೃದಿ ವಾ ಸೂರ್ಯಮಂಡಲೇ ।
ಜಪೇತ್ಪಂಚಾಕ್ಷರೀಂ ವಿದ್ಯಾಂ ಪ್ರಾಂಙ್ಮುಖಃ ಶುದ್ಧಕರ್ಮಕೃತ್ ॥ ೪೧ ॥

ಪ್ರಾತಃ ಕೃಷ್ಣಚತುರ್ದಶ್ಯಾಂ ನಿತ್ಯಕರ್ಮ ಸಮಾಪ್ಯ ಚ ।
ಮನೋರಮೇ ಶುಚೌ ದೇಶೇ ನಿಯತಃ ಶುದ್ಧಮಾನಸಃ ॥ ೪೨ ॥

ಪಂಚಾಕ್ಷರಸ್ಯ ಮಂತ್ರಸ್ಯ ಸಹಸ್ರಂ ದ್ವಾದಶಂ ಜಪೇತ್ ।
ವರಯೇಚ್ಚ ಸಪತ್ನೀಕಾನ್ ಶೈವಾನ್ ವೈ ಬ್ರಾಹ್ಮಣೋತ್ತಮಾನ್ ॥ ೪೩ ॥

ಏಕಂ ಗುರುವರಂ ಶಿಷ್ಟಂ ವರಯೇತ್ಸಾಂಬಮೂರ್ತಿಕಂ ।
ಈಶಾನಂ ಚಾಥ ಪುರುಷಮಘೋರಂ ವಾಮಮೇವ ಚ ॥ ೪೪ ॥

ಸದ್ಯೋಜಾತಂ ಚ ಪಂಚೈವ ಶಿವಭಕ್ತಾನ್ ದ್ವಿಜೋತ್ತಮಾನ್ ।
ಪೂಜಾದ್ರವ್ಯಾಣಿ ಸಂಪಾದ್ಯ ಶಿವಪೂಜಾಂ ಸಮಾರಭೇತ್ ॥ ೪೫ ॥

---

ದಲ್ಲಿ ಪೂಜಿಸಿ ಬಳಿಕ ಪೂರ್ವಮುಖವಾಗಿ ಕುಳಿತುಕೊಂಡು ಪಂಚಾಕ್ಷರೀಮಂತ್ರವನ್ನು ಜಪಿಸಬೇಕು.

೪೨. ಕೃಷ್ಣಚತುರ್ದಶಿಯಲ್ಲಿ ಪ್ರಾತಃಕಾಲ ಜಿತೇಂದ್ರಿಯನೂ, ಶುದ್ಧವಾದ ಮನಸ್ಸುಳ್ಳವನೂ ಆಗಿ ನಿತ್ಯಕರ್ಮಗಳನ್ನು ಮುಗಿಸಿ, ಬಳಿಕ ಮನೋಹರವೂ, ಶುದ್ಧವೂ ಆದಂತಹ ಪ್ರದೇಶದಲ್ಲಿಕುಳಿತು ಹನ್ನೆರಡುಸಾವಿರ ಶಿವಪಂಚಾಕ್ಷರೀಮಂತ್ರದ ಜಪವನ್ನು ಮಾಡಬೇಕು.

೪೩-೪೪. ಆಮೇಲೆ ಪೂಜೆಗಾಗಿ, ಶಿವಭಕ್ತರಾಗಿರುವ ಬ್ರಾಹ್ಮಣ ದಂಪತಿಗಳನ್ನು ಆಹ್ವಾನಮಾಡಬೇಕು. ಸಾಂಬ (ಶಿವ) ಮೂರ್ತಿಸ್ವರೂಪನಾದ ಗುರುವನ್ನು (ಗುರುಪತ್ನಿಯೊಡನೆ) ಆಹ್ವಾನಿಸಿ ಪೂಜೆಗಾಗಿ ಪ್ರಾರ್ಥಿಸಿ ನಿಯಮಿಸಿಕೊಳ್ಳಬೇಕು ಮತ್ತು ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಈಶಾನ ಈ ಐದು ಶಿವಮೂರ್ತಿಗಳ ಪೂಜೆಗಾಗಿ ಐದು ಜನ ಶಿವಭಕ್ತರಾದ ಬ್ರಾಹ್ಮಣರನ್ನು ವರಿಸಿ ನಿಯಮಿಸಬೇಕು.

೪೫-೪೬. ಬಳಿಕ ಪೂಜಾಸಾಮಗ್ರಿಗಳನ್ನು ಸಂಪಾದಿಸಿ ಶಿವಪೂಜೆಯನ್ನು ಪ್ರಾರಂಭಿಸಬೇಕು. ಶಿವಪೂಜೆಯನ್ನು ವಿಧಿವತ್ತಾಗಿ ಮಾಡಿ ಆಮೇಲೆ ಹೋಮವನ್ನು

ಶಿವಪೂಜಾಂ ಚ ವಿಧಿವತ್ಕೃತ್ವಾ ಹೋಮಂ ಸಮಾಚರೇತ್ ।
ಮುಖಾಂತಂ ಚ ಸ್ವಸೂತ್ರೇಣ ಕೃತ್ವಾ ಹೋಮಂ ಸಮಾಚರೇತ್ ॥ ೪೬ ॥

ದಶೈಕಂ ವಾ ಶತೈಕಂ ವಾ ಸಹಸ್ರೈಕಮಥಾಪಿ ವಾ ।
ಕಾಪಿಲೇನ ಘೃತೇನೈವ ಜುಹುಯಾತ್ಸ್ವಯಮೇವ ಹಿ ॥ ೪೭ ॥

ಕಾರಯೇಚ್ಛಿವಭಕ್ತೈರ್ವಾಪ್ಯಷ್ಟೋತ್ತರಶತಂ ಬುಧಃ ।
ಹೋಮಾಂತೇ ದಕ್ಷಿಣಾ ದೇಯಾ ಗುರೋರ್ಗೋಮಿಥುನಂ ತಥಾ ॥ ೪೮ ॥

ಈಶಾನಾದಿಸ್ವರೂಪಾಂಸ್ತಾನ್ ಗುರುಂ ಸಾಂಬಂ ವಿಭಾವ್ಯ ಚ ।
ತೇಷಾಂ ಪತ್ಸಿಕ್ತತೋಯೇನ ಸಶಿರಃ ಸ್ನಾನಮಾಚರೇತ್ ॥ ೪೯ ॥

ಷಟ್ತ್ರಿಂಶತ್ಕೋಟಿತೀರ್ಥೇಷು ಸದ್ಯಃ ಸ್ನಾನಫಲಂ ಲಭೇತ್ ।
ದಶಾಂಗಮನ್ನಂ ತೇಷಾಂ ವೈ ದದ್ಯಾದ್ವೈ ಭಕ್ತಿಪೂರ್ವಕಂ ॥ ೫೦ ॥

ಪರಾಬುದ್ಧ್ಯಾ ಗುರೋಃ ಪತ್ನೀಮೀಶಾನಾದಿಕ್ರಮೇಣ ತು ।
ಪರಮಾನ್ನೇನ ಸಂಪೂಜ್ಯ ಯಥಾವಿಭವವಿಸ್ತರಂ ॥ ೫೧ ॥

---

ಮಾಡಬೇಕು. ಅಗ್ನಿಮುಖಪರ್ಯಂತವಾಗಿ ತನ್ನ ಸೂತ್ರದಂತೆಯೇ ಆಚರಿಸಿ ಹೋಮವನ್ನು ಮಾಡಬೇಕು.

೪೭. ಕಪಿಲ ಹಸುವಿನ ತುಪ್ಪದಿಂದ ಹತ್ತು, ಅಥವಾ ನೂರು, ಅಥವಾ ಸಾವಿರ ಆಹುತಿಗಳನ್ನು ತಾನೇ ಅರ್ಪಿಸಬೇಕು.

೪೮-೪೯. ಅಥವಾ ಶಿವಭಕ್ತರಾದವರಿಂದ ನೂರೆಂಟು ಹೋಮಗಳನ್ನು ಮಾಡಿಸಬಹುದು. ಹೋಮವಾದ ಮೇಲೆ ಮಾಡಿದವರಿಗೆ ದಕ್ಷಿಣೆಯನ್ನು ಕೊಡಬೇಕು. ಗುರುವಿಗೆ ಎರಡು ಹಸುಗಳನ್ನು ದಾನಮಾಡಬೇಕು. ಗುರುವು ಈಶಾನಾದಿ ಪಂಚಬ್ರಹ್ಮ ಸ್ವರೂಪನೆಂದೂ ಸಾಂಬಶಿವಸ್ವರೂಪನೆಂದೂ ತಿಳಿದು ಅವನ ಪಾದ ತೊಳೆದ ಜಲದಲ್ಲಿ ಸ್ನಾನ ಮಾಡಬೇಕು. ಹಾಗೆ ಮಾಡಿದರೆ ಮೂವತ್ತಾರು ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವು ಲಭಿಸುವುದು.

೫೦-೫೧. ಗುರುಗಳಿಗೆ ಹಿಂದೆ ಹೇಳಿದ ಹತ್ತು ಅಂಗಗಳೊಡನೆ ಅನ್ನವನ್ನು ಭಕ್ತಿಯಿಂದ ದಾನಮಾಡಬೇಕು. " ಪಾರ್ವತೀ " ಯೆಂಬ ಬುದ್ಧಿಯಿಂದ ಗುರುಪತ್ನಿಯನ್ನು ಪೂಜಿಸಬೇಕು. ಹೀಗೆ ಈಶಾನ ಮೊದಲುಗೊಂಡು ಕ್ರಮವಾಗಿ ಪರಮಾನ್ನ

ರುದ್ರಾಕ್ಷವಸ್ತ್ರಪೂರ್ವಂ ಚ ವಟಕಾಪೂಪಕೈರ್ಯುತಂ ।
ಬಲಿದಾನಂ ತತಃ ಕೃತ್ವಾ ಭೂರಿಭೋಜನಮಾಚರೇತ್ ॥ ೫೨ ॥

ತತಃ ಸಂಪ್ರಾರ್ಥ್ಯ ದೇವೇಶಂ ಜಪಂ ತಾವತ್ಸಮಾಪಯೇತ್ ।
ಪುರಶ್ಚರಣಮೇವಂ ತು ಕೃತ್ವಾ ಮಂತ್ರೀ ಭವೇನ್ನರಃ ॥ ೫೩ ॥

ಪುನಶ್ಚ ಪಂಚಲಕ್ಷೇಣ ಸರ್ವಪಾಪಕ್ಷಯೋ ಭವೇತ್ ।
ಅತಲಾದಿ ಸಮಾರಭ್ಯ ಸತ್ಯಲೋಕಾವಧಿ ಕ್ರಮಾತ್ ॥ ೫೪ ॥

ಪಂಚಲಕ್ಷಜಪಾತ್ತತ್ತಲ್ಲೋಕೈಶ್ವರ್ಯಮಾಪ್ನುಯಾತ್ ।
ಮಧ್ಯೇ ಮೃತಶ್ಚೇದ್ಭೋಗಾಂತೇ ಭೂಮೌ ತಜ್ಜಾಪಕೋ ಭವೇತ್ ॥ ೫೫ ॥

ಪುನಶ್ಚ ಪಂಚಲಕ್ಷೇಣ ಬ್ರಹ್ಮಸಾಮೀಪ್ಯಮಾಪ್ನುಯಾತ್ ।
ಪುನಶ್ಚ ಪಂಚಲಕ್ಷೇಣ ಸಾರೂಪ್ಯೈಶ್ವರ್ಯಮಾಪ್ನುಯಾತ್ ॥ ೫೬ ॥

---

ವನ್ನು ಅರ್ಪಿಸಿ ತನ್ನ ಐಶ್ವರ್ಯಕ್ಕನುಸಾರವಾಗಿ ಪೂಜಿಸಿ, ರುದ್ರಾಕ್ಷಿ ಮತ್ತು ವಸ್ತ್ರಗಳನ್ನೂ ಅರ್ಪಿಸಿ, ವಡೆ, ಹೋಳಿಗೆಗಳೊಡನೆ ಬಲಿಯನ್ನು ಮಾಡಿ, ಬಳಿಕ ಗುರುಜನಗಳಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಿ ಭೂರಿ ದಕ್ಷಿಣೆಯನ್ನು ಕೊಡಬೇಕು.

೫೩. ಬಳಿಕ ದೇವದೇವನಾದ ಶಿವನನ್ನು ಪ್ರಾರ್ಥಿಸಿ ಜಪವನ್ನು ಮುಗಿಯಿಸಬೇಕು. ಹೀಗೆ ಪುರಶ್ಚರಣ (ಜಪ)ವನ್ನು ಮಾಡಿದವನು ಮಂತ್ರಜ್ಞನಾಗುವನು. ಇನ್ನೂ ಐದುಲಕ್ಷ ಮಂತ್ರಜಪಗಳನ್ನು ಮಾಡಿದರೆ ಸಕಲ ಪಾಪಗಳೂ ನಾಶವಾಗುವವು.

೫೪. ಮತ್ತು ಆ ಪಂಚಲಕ್ಷ ಜಪದಿಂದ ಅತಲಲೋಕ ಮೊದಲುಗೊಂಡು ಸತ್ಯಲೋಕ ಪರ್ಯಂತವಾಗಿರುವ ಲೋಕಗಳ ಐಶ್ವರ್ಯ (ಭೋಗ) ವನ್ನು ಪಡೆಯುವನು.

೫೫-೫೬. ಜಪದ ಮಧ್ಯದಲ್ಲಿಯೇ ಮೃತನಾದರೆ ಆ ಜಪದ ಪುಣ್ಯವನ್ನು ಸ್ವರ್ಗಾದಿಗಳಲ್ಲಿ ಅನುಭವಿಸಿ ಬಳಿಕ ಭೂಮಿಯಲ್ಲಿ ಆ ಮಂತ್ರವನ್ನು ಜಪಿಸುವವನೇ ಆಗುವನು. ಇನ್ನೂ ಲಕ್ಷ ಬಾರಿ ಜಪಿಸಿದರೆ ಬ್ರಹ್ಮನ ಸಮೀಪವು ಲಭಿಸುವುದು. ಇನ್ನೂ ಐದುಲಕ್ಷ ಜಪಗಳಿಂದ ಬ್ರಹ್ಮನಿಗೆ ಸಮಾನವಾದ ರೂಪವು ಲಭಿಸುವುದು. ಒಟ್ಟು ನೂರು ಲಕ್ಷ(ಒಂದು ಕೋಟಿ) ಜಪಗಳಿಂದ ಸಾಕ್ಷಾತ್ ಬ್ರಹ್ಮನ ಸಮನೇ ಆಗುವನು.

ಆಹತ್ಯ ಶತಲಕ್ಷೇಣ ಸಾಕ್ಷಾದ್ಬ್ರಹ್ಮಸಮೋ ಭವೇತ್ ।
ಕಾರ್ಯಬ್ರಹ್ಮಣ ಏವಂ ಹಿ ಸಾಯುಜ್ಯಂ ಪ್ರತಿಪದ್ಯ ವೈ ॥ ೫೭ ॥

ಯಥೇಷ್ಟಂ ಭೋಗಮಾಪ್ನೋತಿ ತದ್ಬ್ರಹ್ಮ ಪ್ರಲಯಾವಧಿ ।
ಪುನಃ ಕಲ್ಪಾಂತರೇ ವೃತ್ತೇ ಬ್ರಹ್ಮಪುತ್ರಃ ಸ ಜಾಯತೇ ॥ ೫೮ ॥

ಪುನಶ್ಚ ತಪಸಾ ದೀಪ್ತಃ ಕ್ರಮಾನ್ಮುಕ್ತೋ ಭವಿಷ್ಯತಿ ।
ಪೃಥ್ವ್ಯಾದಿಕಾರ್ಯಭೂತೇಭ್ಯೋ ಲೋಕಾ ವೈ ನಿರ್ಮಿತಾಃ ಕ್ರಮಾತ್ ॥

ಪಾತಾಲಾದಿ ಚ ಸತ್ಯಾಂತಂ ಬ್ರಹ್ಮಲೋಕಾಶ್ಚತುರ್ದಶ ।
ಸತ್ಯಾದೂರ್ಧ್ವಂ ಕ್ಷಮಾಂತಂ ವೈ ವಿಷ್ಣುಲೋಕಾಶ್ಚತುರ್ದಶ ॥ ೬೦ ॥

ಕ್ಷಮಾಲೋಕೇ ಕಾರ್ಯವಿಷ್ಣುರ್ವೈಕುಂಠೇ ವರಪತ್ತನೇ ।
ಕಾರ್ಯಲಕ್ಷ್ಮ್ಯಾ ಮಹಾಭೋಗಿರಕ್ಷಾಂ ಕೃತ್ವಾಧಿತಿಷ್ಠತಿ ॥ ೬೧ ॥

---

೫೭. ಹೀಗೆ ಕಾರ್ಯಬ್ರಹ್ಮ(ಚತುರ್ಮುಖಬ್ರಹ್ಮ)ನ ಸಾಯುಜ್ಯವನ್ನು ಪಡೆದು ಆ ಬ್ರಹ್ಮನಿರುವ ಪರ್ಯಂತ ಯಥೇಷ್ಟವಾಗಿ ಭೋಗವನ್ನು ಪಡೆಯುವನು.

೫೮. ತಿರುಗಿ ಇನ್ನೊಂದು ಕಲ್ಪವು ಪ್ರಾರಂಭವಾಗಲು ಬ್ರಹ್ಮಪುತ್ರನಾಗಿ (ಬ್ರಾಹ್ಮಣನಾಗಿ) ಜನಿಸುವನು. ತಿರುಗಿ ತಪಸ್ಸನ್ನಾಚರಿಸಿ, ಕ್ರಮವಾಗಿ ಮುಕ್ತಿಯನ್ನು ಪಡೆಯುವನು.

೫೯. ಪೃಥಿವೀ ಮೊದಲಾದ ಮಹಾಭೂತಗಳಿಂದ ಈ ಲೋಕಗಳು ನಿರ್ಮಿಸಲ್ಪಟ್ಟಿರುವವು. ಪಾತಾಲ ಮೊದಲುಗೊಂಡು ಸತ್ಯಲೋಕ ಪರ್ಯಂತವಾಗಿರುವ ಹದಿನಾಲ್ಕು ಲೋಕಗಳು ಬ್ರಹ್ಮಲೋಕಗಳು.

೬೦-೬೧. ಸತ್ಯಲೋಕದಿಂದ ಮೇಲೆ ಕ್ಷಮಾಲೋಕದವರೆಗೆ ಹದಿನಾಲ್ಕು ವಿಷ್ಣುಲೋಕಗಳಿರುವವು. ಕ್ಷಮಾಲೋಕದಲ್ಲಿ ಕಾರ್ಯ (ಕಲ್ಪಾಂತದಲ್ಲಿ ಪ್ರಲಯವನ್ನು ಹೊಂದುವಂತಹ)ವೈಕುಂಠವೆಂಬ ವರನಗರದಲ್ಲಿ ವಿಷ್ಣುವು ಲಕ್ಷ್ಮೀದೇವಿಯೊಡನೆ ಆದಿಶೇಷನನ್ನು ರಕ್ಷಿಸುತ್ತಾ ಅವನಮೇಲೆ ಮಲಗಿರುವನು.

ತದೂರ್ಧ್ವಗಾಶ್ಚ ಶುಚ್ಯಂತಾ ಲೋಕಾಷ್ಟಾವಿಂಶತಿಃ ಸ್ಥಿತಾಃ ।
ಶುಚೌ ಲೋಕೇ ತು ಕೈಲಾಸೇ ರುದ್ರೋ ವೈ ಭೂತಹೃತ್ಸ್ಥಿತಃ ॥ ೬೨ ॥

ಷಡುತ್ತರಾಶ್ಚ ಪಂಚಾಶದಹಿಂಸಾಂತಾಸ್ತದೂರ್ಧ್ವಗಾಃ ।
ಅಹಿಂಸಾಲೋಕಮಾಸ್ಥಾಯ ಜ್ಞಾನಕೈಲಾಸಕೇ ಪುರೇ ॥ ೬೩ ॥

ಕಾರ್ಯೇಶ್ವರಸ್ತಿರೋಭಾವಂ ಸರ್ವಾಣ ಕೃತ್ವಾಧಿತಿಷ್ಠತಿ ।
ತದಂತೇ ಕಾಲಚಕ್ರಂ ಹಿ ಕಾಲಾತೀತಸ್ತತಃ ಪರಂ ॥ ೬೪ ॥

ಶಿವೇನಾಧಿಷ್ಠಿತಸ್ತತ್ರ ಕಾಲಶ್ಚಕ್ರೇಶ್ವರಾಹ್ವಯಃ ।
ಮಾಹಿಷಂ ಧರ್ಮಮಾಸ್ಥಾಯ ಸರ್ವಾನ್ಕಾಲೇನ ಯುಂಜತಿ ।
ಅಸತ್ಯಶ್ಚಾಶುಚಿಶ್ಚೈವ ಹಿಂಸಾ ಚೈವಾಥ ನಿರ್ಘೃಣಾ ॥ ೬೫ ॥

ಅಸತ್ಯಾದಿಚತುಷ್ಪಾದಃ ಸರ್ವಾಂಶಃ ಕಾಮರೂಪಧೃಕ್ ।
ನಾಸ್ತಿಕ್ಯಲಕ್ಷ್ಮೀರ್ದುಸ್ಸಂಗೋ ವೇದಬಾಹ್ಯಧ್ವನಿಃ ಸದಾ ॥ ೬೬ ॥

---

೬೨. ಆ ವೈಕುಂಠಕ್ಕಿಂತಲೂ ಮೇಲೆ ಶುಚಿಲೋಕ ಪರ್ಯಂತವಾಗಿ ಇಪ್ಪತ್ತೆಂಟು ಲೋಕಗಳು ಇರುವವು. ಶುಚಿಲೋಕದಲ್ಲಿ ಭೂತನಾಥನಾದ ರುದ್ರನು ಕೈಲಾಸದಲ್ಲಿರುವನು.

೬೩. ಆ ಕೈಲಾಸಕ್ಕಿಂತಲೂ ಮೇಲೆ ಅಹಿಂಸಾಲೋಕ ಪರ್ಯಂತವಾಗಿ ಐವತ್ತಾರು ಲೋಕಗಳಿರುವವು. ಅಹಿಂಸಾಲೋಕದಲ್ಲಿ ಜ್ಞಾನಕೈಲಾಸವೆಂಬ ನಗರದಲ್ಲಿ ಕಾರ್ಯೇಶ್ವರನು ಎಲ್ಲ ವಸ್ತುವನ್ನೂ ನಾಶಮಾಡುತ್ತಾ ಇರುವನು.

೬೪. ಲೋಕದ ಕೊನೆಯಲ್ಲಿ ಕಾಲಚಕ್ರವಿರುವುದು, ಅದರ ಮುಂದೆ ಕಾಲಾತೀತವೆಂಬ ಲೋಕವಿರುವುದು. ಆ ಲೋಕದಲ್ಲಿ ಶಿವನಿಂದ ನಿಯಮಿಸಲ್ಪಟ್ಟ (ಶಿವಸ್ವರೂಪನಾದ) ಚಕ್ರೇಶ್ವರನೆಂಬ ಕಾಲನು ಮಾಹಿಷ (ಮಹಿಷರೂಪನಾದ ಈಶ್ವರ) ಧರ್ಮವನ್ನು ಅನುಸರಿಸಿ ಎಲ್ಲರನ್ನೂ ಸಹ ಕಾಲನೊಡನೆ ಸೇರಿಸುವನು, ಎಂದರೆ ಸಂಹಾರಮಾಡುವನು.

೬೫-೬೭. ಮಹಿಷರೂಪವಾದ ಈಶ್ವರನಿಗೆ ಅಸತ್ಯ, ಅಶುಚಿ, ಹಿಂಸೆ ನಿರ್ಘೃಣಾ (ಕ್ರೂರತೆ) ಇವು ನಾಲ್ಕು ಪಾದಗಳು ಇರುವವು. ಇವನು ಸರ್ವವಿಧವಾಗಿ ಬೇಕುಬೇಕಾದ ರೂಪುಗಳನ್ನು ಧರಿಸುವನು. ನಾಸ್ತಿಕತೆಯ ಅತಿಶಯವುಳ್ಳವನು, ಕೆಟ್ಟ

ಕ್ರೋಧಸಂಗಃ ಕೃಷ್ಣವರ್ಣೋ ಮಹಾಮಹಿಷವೇಷವಾನ್ ।
ಕಾಲಾನ್ಮಹೇಶ್ವರಃ ಪ್ರೋಕ್ತಸ್ತಿರೋಧಾಸ್ತಾವದೇವ ಹಿ ॥ ೧೭ ॥

ತದರ್ವಾಕ್ಕರ್ಮಭೋಗೋ ಹಿ ತದೂರ್ಧ್ವಂ ಜ್ಞಾನಭೋಗಕಂ ।
ತದರ್ವಾಕ್ಕರ್ಮಮಾಯಾ ಹಿ ಜ್ಞಾನಮಾಯಾ ತದೂರ್ಧ್ವಕಂ ॥ ೧೮ ॥

ಮಾ ಲಕ್ಷ್ಮೀಃ ಕರ್ಮಭೋಗೋ ವೈ ಯಾತಿ ಮಾಯೇತಿ ಕಥ್ಯತೇ ।
ಮಾ ಲಕ್ಷ್ಮೀರ್ಜ್ಞಾನಭೋಗೋ ವೈ ಯಾತಿ ಮಾಯೇತಿ ಕಥ್ಯತೇ ॥ ೧೯ ॥

ತದೂರ್ಧ್ವಂ ನಿತ್ಯಭೋಗೋ ಹಿ ತದರ್ವಾಙ್ನಶ್ವರಂ ವಿದುಃ ।
ತದರ್ವಾಕ್ಚ ತಿರೋಧಾನಂ ತದೂರ್ಧ್ವಂ ನ ತಿರೋಧನಂ ॥ ೨೦ ॥

ತದರ್ವಾಕ್ಪಾಶಬಂಧೋ ಹಿ ತದೂರ್ಧ್ವಂ ನ ಹಿ ಬಂಧನಂ ।
ತದರ್ವಾಕ್ಪರಿವರ್ತಂತೇ ಕಾಮ್ಯಕರ್ಮಾನುಸಾರಿಣಃ ॥ ೨೧ ॥

---

ಸಹವಾಸ, ಸದಾ ವೇದಬಾಹ್ಯವಾದ ಶಬ್ದ, ಕೋಪ, ಇವುಗಳಿಂದ ಕೂಡಿರುವನು. ಕರಿಯ ವರ್ಣವುಳ್ಳವನು, ದೊಡ್ಡ ಮಹಿಷ (ಕೋಣ) ದ ವೇಷವುಳ್ಳವನು. ಹೀಗಿರುವ ಮಹೇಶ್ವರನು ಕಾಲಾತೀತಲೋಕದಲ್ಲಿರುವನು. ಅವನೇ ಸಕಲವನ್ನೂ ನಾಶಮಾಡುವವನು.

೧೮. ಆ ಲೋಕದ ಕೆಳಗಿನ ಲೋಕಗಳಲ್ಲಿ ಕರ್ಮಭೋಗವು, ಮೇಲೆ ಜ್ಞಾನ ಭೋಗವು, ಮುಕ್ತಿಯು ಲಭಿಸುವುದು. ಮತ್ತು ಆ ಕಾಲಾತೀತಲೋಕದ ಕೆಳಗಿನ ಲೋಕಗಳಲ್ಲಿ ಕರ್ಮಮಾಯೆಯೂ, ಮೇಲೆ ಜ್ಞಾನಮಾಯೆಯೂ ಇರುವವು.

೧೯. "ಕರ್ಮಮಾಯೆ" ಯೆಂದರೆ ಹೆಚ್ಚಾಗಿ ಕರ್ಮಾನುಭವವನ್ನುಂಟು ಮಾಡುವುದೆಂದು ಅರ್ಥವು. "ಜ್ಞಾನಮಾಯೆ" ಯೆಂದರೆ ಜ್ಞಾನಸಂಪತ್ತು ಹೆಚ್ಚಾಗಿರುವುದು ಎಂದು ಅರ್ಥವು.

೨೦. ಕಾಲಾತೀತಲೋಕಕ್ಕಿಂತ ಮೇಲೆ ನಿತ್ಯವಾದ ಆನಂದವಿರುವುದು. ಅದಕ್ಕೆ ಕೆಳಗಿನ ಲೋಕಗಳಲ್ಲಿರುವವೆಲ್ಲವೂ ಅನಿತ್ಯವಾದುವುಗಳು, ಎಲ್ಲವೂ ನಾಶವಾಗುವವು, ಅದರ ಮೇಲೆ ನಾಶವಿಲ್ಲವು.

೨೧. ಕೆಳಗಿನ ಲೋಕಗಳಲ್ಲಿ ಸಂಸಾರಪಾಶಬಂಧನವೂ ಮತ್ತು ಯಮಪಾಶ ಬಂಧನವೂ ಇರುವವು. ಆದರೆ ಆ ಮೇಲಿನ ಲೋಕದಲ್ಲಿ ಆ ಬಂಧನಗಳಿರುವದಿಲ್ಲ. ಕಾಮ್ಯಕರ್ಮಗಳನ್ನು ಮಾಡಿದವರು ಕೆಳಗಿನ ಲೋಕಗಳಲ್ಲಿ ಕರ್ಮಫಲಭೋಗಕ್ಕಾಗಿ ಸಂಚರಿಸುವರು. ಆದರೆ ನಿಷ್ಕಾಮಕರ್ಮ ಭೋಗದಿಂದ ಮೇಲಿನ ಲೋಕದಲ್ಲಿ ಪುನರಾವೃತ್ತಿಯಿಲ್ಲದಂತಹ ಮುಕ್ತಿಯು ಲಭಿಸುವುದು.

ನಿಷ್ಕಾಮಕರ್ಮಭೋಗಸ್ತು ತದೂರ್ಧ್ವಂ ಪರಿಕೀರ್ತಿತಃ ।
ತದರ್ವಾಕ್ಪರಿವರ್ತಂತೇ ಬಿಂದುಪೂಜಾಪರಾಯಣಾಃ ॥ ೭೨ ॥

ತದೂರ್ಧ್ವಂ ಹಿ ವ್ರಜಂತ್ಯೇವ ನಿಷ್ಕಾಮಾ ಲಿಂಗಪೂಜಕಾಃ ।
ತದರ್ವಾಕ್ಪರಿವರ್ತಂತೇ ಶಿವಾನ್ಯಸುರಪೂಜಕಾಃ ॥ ೭೩ ॥

ಶಿವೈಕನಿರತಾ ಯೇ ಚ ತದೂರ್ಧ್ವಂ ಸಂಪ್ರಯಾಂತಿ ತೇ ।
ತದರ್ವಾಗ್ಜೀವಕೋಟಿಃ ಸ್ಯಾತ್ತದೂರ್ಧ್ವಂ ಪರಕೋಟಿಕಾ ॥ ೭೪ ॥

ಸಾಂಸಾರಿಕಾಸ್ತದರ್ವಾಕ್ಚ ಮುಕ್ತಾಃ ಖಲು ತದೂರ್ಧ್ವಗಾಃ ।
ತದರ್ವಾಕ್ಪರಿವರ್ತಂತೇ ಪ್ರಾಕೃತದ್ರವ್ಯಪೂಜಕಾಃ ॥ ೭೫ ॥

ತದೂರ್ಧ್ವಂ ಹಿ ವ್ರಜಂತ್ಯೇತೇ ಪೌರುಷದ್ರವ್ಯಪೂಜಕಾಃ ।
ತದರ್ವಾಕ್ಛಕ್ತಿಲಿಂಗಂ ತು ಶಿವಲಿಂಗಂ ತದೂರ್ಧ್ವಕಂ ॥ ೭೬ ॥

ತದರ್ವಾಗಾವೃತಂ ಲಿಂಗಂ ತದೂರ್ಧ್ವಂ ಹಿ ನಿರಾವೃತಿ ।
ತದರ್ವಾಕ್ಕಲ್ಪಿತಂ ಲಿಂಗಂ ತದೂರ್ಧ್ವಂ ವೈ ನ ಕಲ್ಪಿತಂ ॥ ೭೭ ॥

---

೭೨-೭೩. ಕೆಳಗಿನ ಲೋಕಗಳಲ್ಲಿಯೇ ಬಿಂದು-(ಲಿಂಗ) ಪೂಜೆಯನ್ನು ಮಾಡುವರು ಸಂಚರಿಸುವರು. ಫಲೇಚ್ಛೆಯಿಲ್ಲದೆ ಶಿವಲಿಂಗವನ್ನು ಪೂಜಿಸಿದವರು ಆ ಮೇಲಿನ ಲೋಕಕ್ಕೆ ಹೋಗುವರು. ಶಿವನಲ್ಲದೆ ಬೇರೆ ದೇವತೆಗಳನ್ನು ಪೂಜಿಸುವವರು ಆ ಕೆಳಗಿನ ಲೋಕಗಳಲ್ಲಿಯೇ ಸಂಚರಿಸುವರು. ಶಿವನನ್ನೇ ಅಸಾಧಾರಣವಾದ ಭಕ್ತಿಯಿಂದ ಪೂಜಿಸುವರು ಆ ಮೇಲಿನ ಲೋಕಕ್ಕೆ ಹೋಗುವರು.

೭೪-೭೬. ಕಾಲಾತೀತಲೋಕಕ್ಕಿಂತ ಕೆಳಗಿನ ಲೋಕಗಳಲ್ಲಿರುವವರೆಲ್ಲರೂ ಜೀವರು. ಮೇಲಿನ ಲೋಕದಲ್ಲಿರುವವನು ಪರಮೇಶ್ವರನು. ಆ ಕೆಳಗಿನ ಲೋಕಗಳಲ್ಲಿರುವವರು ಸಂಸಾರಿಕರು. ಮೇಲಿನ ಲೋಕದಲ್ಲಿ ಮುಕ್ತರು ಇರುವರು. ಪ್ರಕೃತಿಮಯವಾದ ಅನಿತ್ಯದ್ರವ್ಯಗಳಿಂದ ಶಿವನನ್ನು ಪೂಜಿಸುವರು ಕೆಳಗಿನ ಲೋಕಗಳಲ್ಲಿರುವರು. ಪೌರುಷದ್ರವ್ಯವಾದ ತಪಸ್ಸು ಜ್ಞಾನಗಳಿಂದ ಪೂಜಿಸಿದವರು ಆ ಮೇಲಿನ ಲೋಕವನ್ನು ಪಡೆಯುವರು. ಕೆಳಗಿನ ಲೋಕಗಳಲ್ಲಿ ಶಕ್ತಿಲಿಂಗವೂ ಮೇಲೆ ಶಿವಲಿಂಗವೂ ಇರುವುದು.

೭೭-೭೮. ಕೆಳಗಿನ ಲೋಕಗಳಲ್ಲಿ ಲಿಂಗದ ಸ್ವರೂಪವು ಮುಚ್ಚಲ್ಪಟ್ಟಿರುವುದು. ಮೇಲಿನ ಲೋಕದಲ್ಲಿ ಮುಚ್ಚಲ್ಪಟ್ಟಿಲ್ಲವು, ಸ್ವಯಂಪ್ರಕಾಶವಾಗಿರುವುದು. ಶಿಲಾದಿ

ತದವಾರ್ಗ್ಬಾಹ್ಯಲಿಂಗಂ ಸ್ಯಾದಂತರಂಗಂ ತದೂರ್ಧ್ವಕಂ ।
ತದವಾರ್ಚ್ಛಕ್ತಿಲೋಕಾ ಹಿ ಶತಂ ವೈ ದ್ವಾದಶಾಧಿಕಂ ॥ ೭೮ ॥

ತದವಾರ್ಗ್ಬಿಂದುರೂಪಂ ಹಿ ನಾದರೂಪಂ ತದುತ್ತರಂ ।
ತದವಾರ್ಕ್ಕರ್ಮಲೋಕಸ್ತು ತದೂರ್ಧ್ವಂ ಜ್ಞಾನಲೋಕಕಃ ॥ ೭೯ ॥

ನಮಸ್ಕಾರಸ್ತದೂರ್ಧ್ವಂ ಹಿ ಮದಾಹಂಕಾರನಾಶನಃ ।
ಜನಿಜಂ ವೈ ತಿರೋಧಾನಂ ನಾನಿಷಿದ್ಧ್ಯಾತತೇ ಇತಿ ॥ ೮೦ ॥

ಜ್ಞಾನಶಬ್ದಾರ್ಥ ಏವಂ ಹಿ ತಿರೋಧಾನನಿವಾರಣಾತ್ ।
ತದವಾರ್ಕ್ಪರಿವರ್ತಂತೇ ಹ್ಯಾಧಿಭೌತಿಕಪೂಜಕಾಃ ॥ ೮೧ ॥

---

ಗಳಿಂದ ಮನುಷ್ಯಕಲ್ಪಿತವಾದ ಲಿಂಗವು ಕೆಳಗಿನ ಲೋಕಗಳಲ್ಲಿರುವುದು. ಮೇಲಿನ ಲೋಕದಲ್ಲಿ ಕಲ್ಪಿತವಲ್ಲದ ನಿತ್ಯವಾದ ಲಿಂಗ (ಬ್ರಹ್ಮ) ವು ಇರುವುದು. ಕೆಳಗಿನ ಲೋಕಗಳಲ್ಲಿ ಬಹಿರಂಗವಾದ ಲಿಂಗಗಳಿರುವವು. ಮೇಲಿನ ಲೋಕದಲ್ಲಿ ಅಂತರಂಗವಾದ (ಚರ್ಮಚಕ್ಷುಸ್ಸುಗಳಿಗೆ ಕಾಣಿಸಿದ) ಲಿಂಗ (ಸ್ವರೂಪ) ವು ಇರುವುದು. ನೂರ ಹನ್ನೆರಡು ಶಕ್ತಿಲೋಕಗಳು ಆ ಕಾಲೀತೀತಲೋಕದ ಕೆಳಗೆ ಇರುವುವು.

೭೯. ಕೆಳಗಿನ ಲೋಕಗಳಲ್ಲಿ ಬಿಂದುಲಿಂಗವು ಇರುವುದು. ನಾದಲಿಂಗವು ಮೇಲಿನ ಲೋಕದಲ್ಲಿರುವುದು. ಕೆಳಗಿನ ಲೋಕಗಳು ಕರ್ಮಲೋಕಗಳು. ಅಲ್ಲಿ ಕರ್ಮವನ್ನನುಭವಿಸಬೇಕು. ಮೇಲಿನ ಲೋಕವು ಜ್ಞಾನಲೋಕವು. ಮದ ಅಹಂಕಾರಗಳನ್ನು ನಾಶಗೊಳಿಸುವ ನಮಸ್ಕಾರಲೋಕವು ಅದಕ್ಕೂ ಮೇಲಿರುವುದು.

೮೦. ಜನ್ಮನಿಮಿತ್ತವಾದ ತಿರೋಧಾನ (ನಾಶ) ವನ್ನು ನಿವಾರಿಸುವುದು ಎಂದು ಜ್ಞಾನಶಬ್ದಕ್ಕೆ ಅರ್ಥವನ್ನು ತಿಳಿದವರು ವರ್ಣಿಸಿರುವರು.

೮೧. ಪಂಚಮಹಾಭೂತಗಳನ್ನು ಪೂಜಿಸುವವರು ಆ ಕೆಳಗಿನ ಲೋಕಗಳಲ್ಲಿಯೇ ಪರಿವರ್ತನೆಯನ್ನು ಮಾಡುವರು. ಚೈತನ್ಯಸ್ವರೂಪವನ್ನು ಪೂಜಿಸುವವರು ಆ ಮೇಲಿನ ಲೋಕವನ್ನು ಪಡೆಯುವರು.

ಆಧ್ಯಾತ್ಮಿಕಾರ್ಚಕಾ ಏವ ತದೂರ್ಧ್ವಂ ಸಂಪ್ರಯಾಂತಿ ವೈ ।
ತಾವದ್ವೈ ವೇದಿಭಾಗಂ ತನ್ಮಹಾಲೋಕಾತ್ಮಲಿಂಗಕೇ ॥ ೮೨ ॥

ಪ್ರಕೃತ್ಯಾದ್ಯಷ್ಟಬಂಧೋऽಪಿ ವೇದ್ಯಂತೇ ಸಂಪ್ರತಿಷ್ಠಿತಃ ।
ಏವಮೇತಾದೃಶಂ ಜ್ಞೇಯಂ ಸರ್ವಂ ವೈದಿಕಲೌಕಿಕಂ ॥ ೮೩ ॥

ಅಧರ್ಮಮಹಿಷಾರೂಢಂ ಕಾಲಚಕ್ರಂ ತರಂತಿ ತೇ ।
ಸತ್ಯಾದಿಧರ್ಮಯುಕ್ತಾ ಯೇ ಶಿವಪೂಜಾಪರಾಶ್ಚ ಯೇ ॥ ೮೪ ॥

ತದೂರ್ಧ್ವಂ ವೃಷಭೋ ಧರ್ಮೋ ಬ್ರಹ್ಮಚರ್ಯಸ್ವರೂಪಧೃಕ್ ।
ಸತ್ಯಾದಿಪಾದಯುಕ್ತಸ್ತು ಶಿವಲೋಕಾಗ್ರತಃ ಸ್ಥಿತಃ ॥ ೮೫ ॥

ಕ್ಷಮಾಶೃಂಗಃ ಶಮಶ್ರೋತ್ರೋ ವೇದಧ್ವನಿವಿಭೂಷಿತಃ ।
ಆಸ್ತಿಕ್ಯಚಕ್ಷುರ್ನಿಶ್ವಾಸಗುರುಬುದ್ಧಿಮನಾ ವೃಷಃ ॥ ೮೬ ॥

---

೮೨. ಆ ಮೇಲಿನ ಲೋಕದಲ್ಲಿ ಆತ್ಮಲಿಂಗದಲ್ಲಿ ವೇದಿಭಾಗವು ಇರುವುದು. ಆ ವೇದಿಯ ಕೊನೆಯಲ್ಲಿ ಪ್ರಕೃತಿಯೇ ಮೊದಲಾದ ಎಂಟು ಬಂಧಗಳು ಪ್ರತಿಷ್ಠಿಸಲ್ಪಟ್ಟಿರುವವು.

೮೩. ಹೀಗೆ ಈರೀತಿಯಾಗಿ ವೈದಿಕ ಮತ್ತು ಲೌಕಿಕ ಕರ್ಮವನ್ನೆಲ್ಲಾ ಸಂಪೂರ್ಣವಾಗಿ ತಿಳಿದವನು. ಅಧರ್ಮವೆಂಬ ಮಹಿಷವನ್ನೇರಿರುವ ಕಾಲಚಕ್ರವನ್ನು ದಾಟುವರು ಎಂದರೆ ಮುಕ್ತರಾಗುವರು.

೮೪. ಸತ್ಯ ಮೊದಲಾದ ಧರ್ಮನಿರತರಾಗಿದ್ದು ಶಿವಪೂಜೆಯನ್ನು ಮಾಡುವವರೂ ಸಹ ಕಾಲಚಕ್ರವನ್ನು ದಾಟುವರು.

೮೫. ಆ ಮೇಲಿನ ಲೋಕದಲ್ಲಿ ವೃಷಭ (ಎತ್ತು) ರೂಪವಾಗಿರುವ ಧರ್ಮವು, ಬ್ರಹ್ಮಚರ್ಯದ ಸ್ವರೂಪವನ್ನು ಧರಿಸಿ ಸತ್ಯ ಮೊದಲಾದ ನಾಲ್ಕು ಪಾದಗಳನ್ನು ಧರಿಸಿ ಶಿವಲೋಕದ ಮೇಲ್ಭಾಗದಲ್ಲಿರುವುದು.

೮೬. ಧರ್ಮರೂಪವಾದ ವೃಷಭಕ್ಕೆ ಕ್ಷಮೆಯೇ ಶೃಂಗವು, ಶಾಂತಿಯೇ ಕಿವಿಗಳು, ವೇದಧ್ವನಿಯೇ ಶಬ್ದವು. ಆಸ್ತಿಕತೆಯೇ ಚಕ್ಷುಸ್ಸು, ನಿಶ್ವಾಸವೇಅಚಲವಾದ ಮನಸ್ಸು.

ಕ್ರಿಯಾದಿವೃಷಭಾ ಜ್ಞೇಯಾಃ ಕಾರಣಾದಿಷು ಸರ್ವದಾ ।
ತಂ ಕ್ರಿಯಾವೃಷಭಂ ಧರ್ಮಂ ಕಾಲಾತೀತೋಽಧಿತಿಷ್ಠತಿ ॥ ೮೭ ॥

ಬ್ರಹ್ಮವಿಷ್ಣುಮಹೇಶಾನಾಂ ಸ್ವಸ್ವಾಯುರ್ದಿನಮುಚ್ಯತೇ ।
ತದೂರ್ಧ್ವಂ ನ ದಿನಂ ರಾತ್ರಿರ್ನ ಜನ್ಮಮರಣಾದಿಕಂ ॥ ೮೮ ॥

ಪುನಃ ಕಾರಣಸತ್ಯಾಂತಾಃ ಕಾರಣಬ್ರಹ್ಮಣಸ್ತಥಾ ।
ಗಂಧಾದಿಭ್ಯಸ್ತು ಭೂತೇಭ್ಯಸ್ತದೂರ್ಧ್ವಂ ನಿರ್ಮಿತಾಃ ಸದಾ ॥ ೮೯ ॥

ಸೂಕ್ಷ್ಮಗಂಧಸ್ವರೂಪಾ ಹಿ ಸ್ಥಿತಾ ಲೋಕಾಶ್ಚತುರ್ದಶ ।
ಪುನಃ ಕಾರಣವಿಷ್ಣೋರ್ವೈ ಸ್ಥಿತಾ ಲೋಕಾಶ್ಚತುರ್ದಶ ॥ ೯೦ ॥

ಪುನಃ ಕಾರಣರುದ್ರಸ್ಯ ಲೋಕಾಷ್ಟಾವಿಂಶಕಾ ಮತಾಃ ।
ಪುನಶ್ಚ ಕಾರಣೇಶಸ್ಯ ಷಟ್ಪಂಚಾಶತ್ತದೂರ್ಧ್ವಗಾಃ ॥ ೯೧ ॥

---

೮೭. ಕರ್ಮಫಲವನ್ನುಂಟುಮಾಡುವುದು ಸದಾ ಕ್ರಿಯಾ (ಕರ್ಮ) ವೃಷಭ (ಧರ್ಮ) ವೆಂದು ತಿಳಿಯಬೇಕು. ಈ ಕ್ರಿಯಾವೃಷಭರೂಪವಾದ ಧರ್ಮವನ್ನು ಕಾಲಾತೀತೇಶ್ವರನು ಏರುವನು, ನಿಯಮಿಸುವನು.

೮೮. ಬ್ರಹ್ಮ, ವಿಷ್ಣು ಮತ್ತು ಶಿವರ ಆಯುಸ್ಸಿಗೆ ದಿನವೆಂದು ಹೆಸರು. ಆದರ ಮೇಲೆ ದಿನವಾಗಲೀ, ರಾತ್ರಿಯಾಗಲೀ, ಜನ್ಮಮರಣಗಳಾಗಲೀ ಇಲ್ಲ.

೮೯. ಮತ್ತು ಕಾರಣಸತ್ಯಲೋಕ ಪರ್ಯಂತವಾಗಿ ಗಂಧ ಮುಂತಾದ ಸೂಕ್ಷ್ಮ ಭೂತಗಳಿಂದ ನಿರ್ಮಿಸಿದ ಸೂಕ್ಷ್ಮ ಗಂಧಾದಿಸ್ವರೂಪಗಳಾದ ಹದಿನಾಲ್ಕು ಕಾರಣ ಬ್ರಹ್ಮಲೋಕಗಳು ಆ ಕಾಲಾತೀತಲೋಕದ ಮೇಲೆ ಇರುವವು.

೯೦-೯೧. ಅಲ್ಲದೆ, ಇದರಮೇಲೆ ಕಾರಣ ವಿಷ್ಣುವಿನ ಹದಿನಾಲ್ಕು ಲೋಕಗಳಿರುವವು. ಅದಕ್ಕೆ ಮೇಲೆ ಇಪ್ಪತೆಂಟು, ಕಾರಣ ರುದ್ರನ ಲೋಕಗಳಿರುವವು. ಅದಕ್ಕೂ ಮೇಲೆ ಐವತ್ತಾರು ಕಾರಣೇಶ್ವರ ಲೋಕಗಳಿರುವವು. ಅದಕ್ಕೆ ಮೇಲೆ ಶಿವನಿಗೆ ಪ್ರಿಯವಾದ "ಬ್ರಹ್ಮಚರ್ಯ" ವೆಂಬ ಲೋಕವು ಇರುವುದು.

ತತಃ ಪರಂ ಬ್ರಹ್ಮಚರ್ಯಲೋಕಾಖ್ಯಂ ಶಿವಸಮ್ಮತಂ ।
ತತ್ರೈವ ಜ್ಞಾನಕೈಲಾಸೇ ಪಂಚಾವರಣಸಂಯುತೇ ॥ ೯೨ ॥

ಪಂಚಮಂಡಸಂಯುಕ್ತಂ ಪಂಚಬ್ರಹ್ಮಸಮನ್ವಿತಂ ।
ಆದಿಶಕಿಸಮಾಯುಕ್ತಂ ಆದಿಲಿಂಗಂ ತು ತತ್ರ ವೈ ॥ ೯೩ ॥

ಶಿವಾಲಯಮಿದಂ ಪ್ರೋಕ್ತಂ ಶಿವಸ್ಯ ಪರಮಾತ್ಮನಃ ।
ಪರಶಕ್ತ್ಯಾ ಸಮಾಯುಕ್ತಸ್ತತ್ರೈವ ಪರಮೇಶ್ವರಃ ॥ ೯೪ ॥

ಸೃಷ್ಟಿಃ ಸ್ಥಿತಿಶ್ಚ ಸಂಹಾರಸ್ತಿರೋಭಾವೋऽಪ್ಯನುಗ್ರಹಃ ।
ಪಂಚಕೃತ್ಯಪ್ರವೀಣೋऽಸೌ ಸಚ್ಚಿದಾನಂದವಿಗ್ರಹಃ ॥ ೯೫ ॥

ಧ್ಯಾನಧರ್ಮಃ ಸದಾ ಯಸ್ಯ ಸದಾನುಗ್ರಹತತ್ಪರಃ ।
ಸಮಾಧ್ಯಾಸನಮಾಸೀನಃ ಸ್ವಾತ್ಮಾರಾಮೋ ವಿರಾಜತೇ ॥ ೯೬ ॥

---

೯೨-೯೩. ಆ ಬ್ರಹ್ಮಚರ್ಯಲೋಕದಲ್ಲಿ ಐದು ಪ್ರಾಕಾರಗಳಿಂದ ಕೂಡಿದ ಜ್ಞಾನಕೈಲಾಸದಲ್ಲಿ ಐದು ಮಂಡಲಸಹಿತವಾಗಿ ಐದು ಬ್ರಹ್ಮರಿರುವಂತಹ ಲಿಂಗವು ಆದಿಶಕ್ತಿಯೊಡನೆ ಇರುವುದು.

೯೪. ಈ ಜ್ಞಾನಕೈಲಾಸವೇ ಪರಮಾತ್ಮನಾದ ಶಿವನ ಮಂಗಳಕರವಾದ ಆಲಯವು. ಅಲ್ಲಿ ಪರಮೇಶ್ವರನು ಪರಶಕ್ತಿಯೊಡನೆ ಕೂಡಿಕೊಂಡಿರುವನು.

೯೫. ಆ ಪರಮೇಶ್ವರನು, ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ, ಅನುಗ್ರಹ ಈ ಐದು ಕೃತ್ಯಗಳನ್ನು ಮಾಡುವನು. ಸತ್ಯವೂ, ಜ್ಞಾನಸ್ವರೂಪವೂ, ಆನಂದ ಸ್ವರೂಪವೂ ಆದಂತಹ ಶರೀರವುಳ್ಳವನು.

೯೬. ಮತ್ತು ಅವನು ಸದಾ ಧ್ಯಾನದಿಂದ ಪಡೆಯಲ್ಪಡತಕ್ಕವನು. ಸದಾ ಅನುಗ್ರಹನಿರತನು. ಆಸನದಲ್ಲಿ ಸಮಾಧಿಯಿಂದ ಕುಳಿತು ಆತ್ಮಾರಾಮ (ತನ್ನಲ್ಲಿಯೇ ವಿಹರಿಸುವವನು) ನಾಗಿ ಪ್ರಕಾಶಿಸುತ್ತಲಿರುವನು.

ತಸ್ಯ ಸಂದರ್ಶನಂ ಸಾಧ್ಯಂ ಕರ್ಮಧ್ಯಾನಾದಿಭಿಃ ಕ್ರಮಾತ್ ।
ನಿತ್ಯಾದಿಕರ್ಮಯಜನಾಚ್ಛಿವಕರ್ಮಮತಿರ್ಭವೇತ್ ॥ ೯೭ ॥

ಕ್ರಿಯಾದಿಶಿವಕರ್ಮಭ್ಯಃ ಶಿವಜ್ಞಾನಂ ಪ್ರಸಾಧಯೇತ್ ।
ತದ್ದರ್ಶನಗತಾ ಏವ ಸರ್ವೇ ಮುಕ್ತಾ ನ ಸಂಶಯಃ ॥ ೯೮ ॥

ಮುಕ್ತಿರಾತ್ಮಸ್ವರೂಪೇಣ ಸ್ವಾತ್ಮಾರಾಮತ್ವಮೇವ ಹಿ ।
ಕ್ರಿಯಾತಪೋಜಪಜ್ಞಾನಧ್ಯಾನಧರ್ಮೇಷು ಸುಸ್ಥಿತಃ ॥ ೯೯ ॥

ಶಿವಸ್ಯ ದರ್ಶನಂ ಲಬ್ಧ್ವಾ ಸ್ವಾತ್ಮಾರಾಮತ್ವಮೇವ ಹಿ ।
ಯಥಾ ರವಿಃ ಸ್ವಕಿರಣಾದಶುದ್ಧಿಮಪನೇಷ್ಯತಿ ॥ ೧೦೦ ॥

---

೯೭. ಕರ್ಮ ಮತ್ತು ಧ್ಯಾನ ಮುಂತಾದುವುಗಳಿಂದ ಕ್ರಮವಾಗಿ ಆ ಶಿವನನ್ನು ಸಾಕ್ಷಾತ್ಕರಿಸಬಹುದು. ನಿತ್ಯಕರ್ಮ ಮುಂತಾದುವುಗಳನ್ನು ಮಾಡಿದರೆ ಆ ಶಿವನ ಪೂಜಾ ಮುಂತಾದ ಕರ್ಮಗಳಲ್ಲಿ (ಮಾಡಬೇಕೆಂಬ) ಬುದ್ಧಿಯು ಜನಿಸುವುದು.

೯೮. ಪೂಜೆ ಮುಂತಾದ ಶಿವಕರ್ಮಗಳಿಂದ ಶಿವಜ್ಞಾನವನ್ನು ಪಡೆಯಬೇಕು. ತನ್ಮೂಲಕ ಶಿವದರ್ಶನವು ಲಭಿಸುವುದು. ಶಿವನನ್ನು ದರ್ಶನಮಾಡಿದವರು ಮುಕ್ತಿಯನ್ನೇ ಹೊಂದಿರುವರು. ಇದರಲ್ಲಿ ಸಂಶಯವಿಲ್ಲ

೯೯. ತನ್ನ ಆತ್ಮಸ್ವರೂಪವನ್ನು ತಿಳಿದು ಆನಂದಸ್ವರೂಪವಾದ ತನ್ನಲ್ಲಿಯೇ ವಿಹರಿಸುವುದೇ ಮುಕ್ತಿಯು. ಆತ್ಮಸ್ವರೂಪವು ಹೊರತು ಪ್ರಪಂಚದಲ್ಲಿ ಬೇರೆ ಇನ್ನೊಂದು ವಿಹರಿಸುವಂತಹ ಆನಂದದಾಯಕವಾದ ವಸ್ತುವು ಇರುವುದಿಲ್ಲ. ಕರ್ಮ, ತಪಸ್ಸು, ಜಪ, ಜ್ಞಾನ, ಧ್ಯಾನ ಮುಂತಾದ ಧರ್ಮನಿರತನಾಗಿದ್ದು ಶಿವನ ದರ್ಶನವನ್ನು ಪಡೆದರೆ ಆತ್ಮಾರಾಮತೆಯೇ ಲಭಿಸುವುದು. ಪರಬ್ರಹ್ಮಸ್ವರೂಪನಾದ ಶಿವನೇ ಆತ್ಮಸ್ವರೂಪನಾದುದರಿಂದ ಆ ಶಿವನ ದರ್ಶನ (ಜ್ಞಾನ) ವನ್ನು ಪಡೆದರೆ ತನ್ನ ಸ್ವರೂಪವನ್ನೇ ತಿಳಿದಂತಾಗಿ, ಅಜ್ಞಾನವು ತೊಲಗಿ, ತಾನು ಹೊರತು ಇನ್ನಾವುದೂ ನಿತ್ಯವಾದ ವಸ್ತುವು ಪ್ರಪಂಚದಲ್ಲಿಲ್ಲ. "ಅಹಂಬ್ರಹ್ಮಾಸ್ಮಿ" ನಾನೇ ಬ್ರಹ್ಮಸ್ವರೂಪನು ಎಂದು ತಿಳಿದು ಆತ್ಮಾರಾಮನಾಗುವನು.

೧೦೦. ರವಿಯು ಹೇಗೆ ತನ್ನ ಕಿರಣಗಳಿಂದ ಅಶುದ್ಧಿಯನ್ನು ಹೋಗಲಾಡಿಸುವನೋ ಅದರಂತೆಯೇ ಶಿವನೂ ಸಹ ತನ್ನನ್ನು ಸೇವಿಸುವುವರ ಅಜ್ಞಾನವನ್ನು ಕೃಪಾದೃಷ್ಟಿಯಿಂದ ಹೋಗಲಾಡಿಸುವನು.

ಕೃಪಾವಿಚಕ್ಷಣಃ ಶಂಭುರಜ್ಞಾನಮುಪನೇಷ್ಯತಿ ।
ಅಜ್ಞಾನವಿನಿವೃತ್ತೌ ತು ಶಿವಜ್ಞಾನಂ ಪ್ರವರ್ತತೇ ॥ ೧೦೧ ॥

ಶಿವಜ್ಞಾನಾತ್ಸ್ವಸ್ವರೂಪಮಾತ್ಮಾರಾಮತ್ವಮೇಷ್ಯತಿ ।
ಆತ್ಮಾರಾಮತ್ವಸಂಸಿದ್ಧೌ ಕೃತಕೃತ್ಯೋ ಭವೇನ್ನರಃ ॥ ೧೦೨ ॥

ಪುನಶ್ಚ ಶತಲಕ್ಷೇಣ ಬ್ರಹ್ಮಣಃ ಪದಮಾಪ್ನುಯಾತ್ ।
ಪುನಶ್ಚ ಶತಲಕ್ಷೇಣ ವಿಷ್ಣೋಃ ಪದಮವಾಪ್ನುಯಾತ್ ॥ ೧೦೩ ॥

ಪುನಶ್ಚ ಶತಲಕ್ಷೇಣ ರುದ್ರಸ್ಯ ಪದಮಾಪ್ನುಯಾತ್ ।
ಪುನಶ್ಚ ಶತಲಕ್ಷೇಣ ಐಶ್ವರ್ಯಪದಮಾಪ್ನುಯಾತ್ ॥ ೧೦೪ ॥

ಪುನಶ್ಚೈವಂ ವಿಧೇನೈವ ಜಪೇನ ಸುಸಮಾಹಿತಃ ।
ಶಿವಲೋಕಾದಿಭೂತಂ ಹಿ ಕಾಲಚಕ್ರಮವಾಪ್ನುಯಾತ್ ॥ ೧೦೫ ॥

ಕಾಲಚಕ್ರಂ ಪಂಚಚಕ್ರಮೇಕೈಕೇನ ಕ್ರಮೋತ್ತರೇ ।
ದೃಷ್ಟಿಮೋಹೌ ಬ್ರಹ್ಮಚಕ್ರಂ ಭೋಗಮೋಹೌ ತು ವೈಷ್ಣವಂ ॥ ೧೦೬ ॥

---

೧೦೧-೧೦೨. ಅಜ್ಞಾನವು ತೊಲಗಿದ ಮೇಲೆ ಶಿವನಸ್ವರೂಪವು ತಿಳಿಯುವುದು. ಶಿವಸ್ವರೂಪಜ್ಞಾನದಿಂದ ಸ್ವಸ್ವರೂಪವು ತಿಳಿಯುವುದು. ಮುಂದೆ ಆತ್ಮಾರಾಮನು (ಮುಕ್ತನು) ಆಗುವನು. ಆತ್ಮಾರಾಮತೆಯು ಸಿದ್ಧಿಸಿದರೆ ನರನು ಕೃತಕೃತ್ಯನಾಗುವನು.

೧೦೩-೧೦೪. ತಿರುಗಿ ಇನ್ನೂ ಲಕ್ಷ (ಕೋಟಿ) ಪಂಚಾಕ್ಷರೀಮಂತ್ರ ಜಪಗಳನ್ನು ಮಾಡಿದರೆ ಬ್ರಹ್ಮಪದವಿಯು ಲಭಿಸುವುದು. ಮತ್ತೂ ಕೋಟಿ ಜಪಗಳನ್ನು ಮಾಡಿದರೆ ರುದ್ರಪದವು ಲಭಿಸುವುದು. ಇನ್ನೂ ಕೋಟಿ ಜಪಗಳನ್ನು ಮಾಡಿದರೆ ಈಶ್ವರಪದವು ಲಭಿಸುವುದು.

೧೦೫. ಮತ್ತೂ ಕೋಟಿ ಜಪಗಳನ್ನು ನಿಶ್ಚಲವಾದ ಮನಸ್ಸಿನಿಂದ ಮಾಡಿದರೆ ಶಿವಲೋಕಕ್ಕೂ ಮೂಲವಾದ ಕಾಲಚಕ್ರವನ್ನು ಪಡೆಯುವನು. ಆ ಕಾಲಚಕ್ರವು ಐದು ವಿಧವಾಗಿರುವುದು. ಹಿಂದಿನಕ್ಕಿಂತಲೂ ಮುಂದಿನದು ಶ್ರೇಷ್ಠವಾದುದು.

೧೦೬-೧೦೭. ಬ್ರಹ್ಮಚಕ್ರ, ವಿಷ್ಣುಚಕ್ರ, ರುದ್ರಚಕ್ರ, ಈಶ್ವರಚಕ್ರ, ಶಿವಚಕ್ರ ಇವುಗಳೇ ಐದು ಚಕ್ರಗಳು. ದೃಷ್ಟಿ ಮತ್ತು ಮೋಹಗಳು ಬ್ರಹ್ಮಚಕ್ರವು.

ಕೋಪಮೋಹೌ ರೌದ್ರಚಕ್ರಂ ಭ್ರಮಣಂ ಚೈಶ್ವರಂ ವಿದುಃ ।
ಶಿವಚಕ್ರಂ ಜ್ಞಾನಮೋಹೌ ಪಂಚಚಕ್ರಂ ವಿದುರ್ಬುಧಾಃ ॥ ೧೦೭ ॥

ಪುನಶ್ಚ ದಶಕೋಟ್ಯಾ ಹಿ ಕಾರಣಬ್ರಹ್ಮಣಃ ಪದಂ ।
ಪುನಶ್ಚ ದಶಕೋಟ್ಯಾ ಹಿ ತತ್ಪದೈಶ್ವರ್ಯಮಾಪ್ನುಯಾತ್ ॥ ೧೦೮ ॥

ಏವಂ ಕ್ರಮೇಣ ವಿಷ್ಣ್ವಾದೇಃ ಪದಂ ಲಬ್ಧ್ವಾ ಮಹೌಜಸಃ ।
ಕ್ರಮೇಣ ತತ್ಪದೈಶ್ವರ್ಯಂ ಲಬ್ಧ್ವಾ ಚೈವ ಮಹಾತ್ಮನಃ ॥ ೧೦೯ ॥

ಶತಕೋಟಿಮನುಂ ಜಪ್ತ್ವಾ ಪಂಚೋತ್ತರಮತಂದ್ರಿತಃ ।
ಶಿವಲೋಕಮವಾಪ್ನೋತಿ ಪಂಚಮಾವರಣಾದ್ಬಹಿಃ ॥ ೧೧೦ ॥

ರಾಜಸಂ ಮಂಡಪಂ ತತ್ರ ನಂದೀಸಂಸ್ಥಾನಮುತ್ತಮಂ ।
ತಪೋರೂಪಶ್ಚ ವೃಷಭಸ್ತತ್ರೈವ ಪರಿದೃಶ್ಯತೇ ॥ ೧೧೧ ॥

---

ಭೋಗ ಮತ್ತು ಮೋಹಗಳು ವಿಷ್ಣುಚಕ್ರವು. ಕೋಪ ಮತ್ತು ಮೋಹಗಳು ರುದ್ರ ಚಕ್ರವು. ಜಗತ್ತಿನ ಭ್ರಮಣ (ತಿರುಗುವಿಕೆ) ವು ಈಶ್ವರಚಕ್ರವು. ಜ್ಞಾನ ಮತ್ತು ಮೋಹಗಳು ಶಿವಚಕ್ರವು ಎಂದು ತಿಳಿದವರು ಆ ಐದು ಚಕ್ರಗಳ ಸ್ವರೂಪವನ್ನು ವರ್ಣಿಸುವರು.

೧೦೮. ಮತ್ತು ಹತ್ತುಕೋಟಿ ಜಪಗಳನ್ನು ಮಾಡಿದರೆ ಕಾರಣಬ್ರಹ್ಮನ ಪದವನ್ನು ಪಡೆಯಬಹುದು. ಮತ್ತೂ ಹತ್ತುಕೋಟಿ ಜಪಗಳಿಂದ ಆ ಬ್ರಹ್ಮಪದದ ಐಶ್ವರ್ಯವು ಲಭಿಸುವುದು.

೧೦೯-೧೧೦. ಇದೇ ಕ್ರಮದಿಂದ ವಿಷ್ಣು ಮುಂತಾದವರ ಲೋಕವನ್ನೂ ಆ ಲೋಕಗಳ ಐಶ್ವರ್ಯವನ್ನೂ ಪಡೆದು ಆಮೇಲೆ ನೂರೈದುಕೋಟಿ ಜಪಗಳನ್ನು ಮಾಡಿದರೆ ಶಿವಲೋಕದಲ್ಲಿ ಐದನೆಯ ಪ್ರಾಕಾರದ ಹೊರಪ್ರದೇಶವನ್ನು ಪಡೆಯುವನು.

೧೧೧. ಶಿವಲೋಕದ ಐದನೆಯ ಪ್ರಕಾರದ ಹೊರಪ್ರದೇಶದಲ್ಲಿ ರಾಜಸವಾದ ಮಂಡಪವು ಇರುವುದು. ಅಲ್ಲಿಯೇ ನಂದಿಕೇಶ್ವರನೂ ಇರುವನು. ತಪೋರೂಪವಾದ ವೃಷಭವು ಅಲ್ಲಿಯೇ ಇರುವುದು.

ಸದ್ಯೋಜಾತಸ್ಯ ತತ್ಸ್ಥಾನಂ ಪಂಚಮಾವರಣಂ ಪರಂ ।
ವಾಮದೇವಸ್ಯ ತತ್ಸ್ಥಾನಂ ಚತುರ್ಥಾವರಣಂ ಪುನಃ ॥ ೧೧೨ ॥

ಅಘೋರನಿಲಯಂ ಪಶ್ಚಾತ್ತೃತೀಯಾವರಣಂ ಮತಂ ।
ಪುರುಷಸ್ಯೈವ ಸಾಂಬಸ್ಯ ದ್ವಿತೀಯಾವರಣಂ ಶುಭಂ ॥ ೧೧೩ ॥

ಈಶಾನಸ್ಯ ಪರಸ್ಯೈವ ಪ್ರಥಮಾವರಣಂ ತತಃ ।
ಧ್ಯಾನಧರ್ಮಸ್ಯ ಚ ಸ್ಥಾನಂ ಪಂಚಮಂ ಮಂಡಪಂ ತತಃ ॥ ೧೧೪ ॥

ಬಲಿನಾಥಸ್ಯ ಸಂಸ್ಥಾನಂ ತತ್ರ ಪೂರ್ಣಾಮೃತಪ್ರದಂ ।
ಚತುರ್ಥಂ ಮಂಡಪಂ ಪಶ್ಚಾಚ್ಚಂದ್ರಶೇಖರಮೂರ್ತಿಮತ್ ॥ ೧೧೫ ॥

ಸೋಮಸ್ಕಂದಸ್ಯ ಚ ಸ್ಥಾನಂ ತೃತೀಯಂ ಮಂಡಪಂ ಪರಂ ।
ದ್ವಿತೀಯಂ ಮಂಡಪಂ ನೃತ್ಯಮಂಡಪಂ ಪ್ರಾಹುರಾಸ್ತಿಕಾಃ ॥ ೧೧೬ ॥

ಪ್ರಥಮಂ ಮೂಲಮಾಯಾಯಾಃ ಸ್ಥಾನಂ ತತ್ರೈವ ಶೋಭನಂ ।
ತತಃ ಪರಂ ಗರ್ಭಗೃಹಂ ಲಿಂಗಸ್ಥಾನಂ ಪರಂ ಶುಭಂ ॥ ೧೧೭ ॥

---

೧೧೨-೧೧೩. ಐದನೆಯ ಪ್ರಾಕಾರವು ಸದ್ಯೋಜಾತಮೂರ್ತಿಯ ಸ್ಥಾನವು. ನಾಲ್ಕನೆಯ ಪ್ರಾಕಾರವು ವಾಮದೇವಮೂರ್ತಿಯ ಸ್ಥಾನವು. ಮೂರನೆಯ ಪ್ರಾಕಾರದಲ್ಲಿ ಅಘೋರಮೂರ್ತಿಯು ಇರುವನು. ಮುಂದಕ್ಕೆ ಎರಡನೆಯ ಪ್ರಾಕಾರದಲ್ಲಿ ಸಾಂಬಮೂರ್ತಿಯಾದ ತತ್ಪುರುಷನ ಸ್ಥಾನವು ಇರುವುದು. ಮೊದಲನೆಯ ಪ್ರಾಕಾರವು ಪರಮೇಶ್ವರನ ಸ್ಥಾನವು.

೧೧೪-೧೧೫. ಆ ಐದು ಪ್ರಾಕಾರಗಳಲ್ಲಿ ಐದು ಮಂಡಪಗಳಿರುವವು. ಅವುಗಳಲ್ಲಿ ಮೊದಲನೆಯ ಮಂಡಪದಲ್ಲಿರುವ ಸದ್ಯೋಜಾತನು ಧ್ಯಾನದಿಂದ ಪಡೆಯಲ್ಪಡತಕ್ಕವನು ಮತ್ತು ಅಲ್ಲಿ ಪೂರ್ಣವಾದ ಅಮೃತವನ್ನು ಕೊಡುವ ಬಲಿನಾಥನು ನೆಲಸಿರುವನು. ನಾಲ್ಕನೆಯ ಮಂಡಪದಲ್ಲಿ ಚಂದ್ರಶೇಖರಮೂರ್ತಿಯು ಇರುವುದು.

೧೧೬. ಮೂರನೆಯ ಮಂಡಪದಲ್ಲಿ ಸೋಮಸ್ಕಂದೇಶ್ವರನು ಇರುವನು. ಎರಡನೆಯ ಮಂಡಪವು ನರ್ತನರಂಗವೆಂದು ಆಸ್ತಿಕರು ಹೇಳುವರು.

೧೧೭. ಮೊದಲನೆಯ ಮಂಡಪದಲ್ಲಿ ಆದಿಮಾಯೆಯು ಇರುವಳು. ಅವಕ್ಕೆ ಮುಂದೆ ಗರ್ಭಗುಡಿಯು ಇರುವುದು. ಅದರಲ್ಲಿ ಮಹಾಲಿಂಗವು ಇರುವುದು.

ನಂದೀಸಂಸ್ಥಾನತಃ ಪಶ್ಚಾನ್ನವಿದುಃ ಶಿವವೈಭವಂ ।
ನಂದೀಶ್ವರೋ ಬಹಿಸ್ತಿಷ್ಠನ್ ಪಂಚಾಕ್ಷರಮುಪಾಸತೇ ॥ ೧೧೮ ॥

ಏವಂ ಗುರುಕ್ರಮಾಲ್ಲಬ್ಧಂ ನಂದೀಶಾಚ್ಚ ಮಯಾ ಪುನಃ ।
ತತಃ ಪರಂ ಸ್ವಸಂವೇದ್ಯಂ ಶಿವೇನೈವಾನುಭಾವಿತಂ ॥ ೧೧೯ ॥

ಶಿವಸ್ಯ ಕೃಪಯಾ ಸಾಕ್ಷಾಚ್ಛಿವಲೋಕಸ್ಯ ವೈಭವಂ ।
ವಿಜ್ಞಾತುಂ ಶಕ್ಯತೇ ಸರ್ವೈರ್ನಾನ್ಯಥೇತ್ಯಾಹುರಾಸ್ತಿಕಾಃ ॥ ೧೨೦ ॥

ಏವಂ ಕ್ರಮೇಣ ಮುಕ್ತಾಃ ಸ್ಯುರ್ಬ್ರಾಹ್ಮಣಾ ವೈ ಜಿತೇಂದ್ರಿಯಾಃ ।
ಅನ್ಯೇಷಾಂ ಚ ಕ್ರಮಂ ವಕ್ಷ್ಯೇ ಗದತಃ ಶೃಣುತಾಽಽದರಾತ್ ॥ ೧೨೧ ॥

ಗುರೂಪದೇಶಾಜ್ಜಾಪ್ಯಂ ವೈ ಬ್ರಾಹ್ಮಣಾನಾಂ ನಮೋಂತಕಂ ।
ಪಂಚಾಕ್ಷರಂ ಪಂಚಲಕ್ಷಮಾಯುಷ್ಯಂ ಪ್ರಜಪೇದ್ದ್ವಿಜಃ ॥ ೧೨೨ ॥

---

೧೧೮. ನಂದಿಕೇಶ್ವರನ ಮೂರ್ತಿಯಿರುವ ಸ್ಥಾನಕ್ಕಿಂತ ಮುಂದಿನ ಶಿವವೈಭವ (ಮಹಿಮೆ) ವನ್ನು ಯಾರೂ ತಿಳಿದಿಲ್ಲ. ನಂದಿಕೇಶ್ವರನೂ ಸಹ ಪ್ರಾಕಾರದ ಹೊರಪ್ರದೇಶದಲ್ಲಿಯೇ ಇರುತ್ತಾ ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಲಿರುವನು.

೧೧೯. ಈರೀತಿಯಾಗಿ ನಾನು (ಸೂತಮುನಿಯು) ಗುರುಮುಖದಿಂದಲೂ, ನಂದಿಕೇಶ್ವರನಿಂದಲೂ ಶಿವವೈಭವವನ್ನು ಕೇಳಿ ತಿಳಿದಿರುವೆನು. ನಂದಿಕೇಶ್ವರನಿಂದ ಮುಂದಿರುವ ಶಿವವೈಭವವನ್ನು ಶಿವನೊಬ್ಬನೇ ತಿಳಿದಿರುವನು.

೧೨೦. ಆದರೆ ಶಿವನ ಅನುಗ್ರಹದಿಂದ ಶಿವಲೋಕದ ವೈಭವವನ್ನು ಸಾಕ್ಷಾತ್ತಾಗಿ ಎಲ್ಲರೂ ನೋಡಬಹುದು. ಇನ್ನಾವ ರೀತಿಯಿಂದಲೂ ನೋಡಲು ಸಾಧ್ಯವಿಲ್ಲವೆಂದು ಆಸ್ತಿಕರು ಹೇಳಿರುವರು.

೧೨೧. ಎಲೈ ಮುನಿಗಳೇ! ಈಗ ನಾನು ಹೇಳಿದ ಕ್ರಮದಂತೆ ಜಿತೇಂದ್ರಿಯರಾದ ಬ್ರಾಹ್ಮಣರು ಮುಕ್ತಿಯನ್ನು ಹೊಂದುವರು. ಮಿಕ್ಕ ವರ್ಣದವರು ಅನುಸರಿಸಬೇಕಾದ ಕ್ರಮವನ್ನು ಹೇಳುವೆನು. ಎಲ್ಲರೂ ಆದರದಿಂದ ಕೇಳಿರಿ!

೧೨೨. ನಮಃಪದವು ಕೊನೆಯಲ್ಲಿರುವ ಪಂಚಾಕ್ಷರೀಮಂತ್ರವನ್ನು ಬ್ರಾಹ್ಮಣಗುರುಗಳಿಂದ ಉಪದೇಶ ಹೊಂದಿ ಐದು ಲಕ್ಷ ಜಪವನ್ನು ಮಾಡಬೇಕು. ಆದರಿಂದ ಹೆಚ್ಚಾದ ಆಯುಸ್ಸು ಲಭಿಸುವುದು.

ಸ್ತ್ರೀತ್ವಾಪನಯನಾರ್ಥಂ ತು ಪಂಚಲಕ್ಷಂ ಜಪೇತ್ಪುನಃ ।
ಮಂತ್ರೇಣ ಪುರುಷೋ ಭೂತ್ವಾ ಕ್ರಮಾನ್ಮುಕ್ತೋ ಭವೇದ್ಬುಧಃ ॥೧೨೩॥

ಕ್ಷತ್ರಿಯಃ ಪಂಚಲಕ್ಷೇಣ ಕ್ಷತ್ರತ್ವಮುಪನೇಷ್ಯತಿ ।
ಪುನಶ್ಚ ಪಂಚಲಕ್ಷೇಣ ಕ್ಷತ್ರಿಯೋ ಬ್ರಾಹ್ಮಣೋ ಭವೇತ್ ॥ ೧೨೪ ॥

ಮಂತ್ರಸಿದ್ಧಿರ್ಜಪಾಚ್ಚೈವ ಕ್ರಮಾನ್ಮುಕ್ತೋ ಭವಿಷ್ಯತಿ ।
ವೈಶ್ಯಸ್ತು ಪಂಚಲಕ್ಷೇಣ ವೈಶ್ಯತ್ವಮುಪನೇಷ್ಯತಿ ॥ ೧೨೫ ॥

ಪುನಶ್ಚ ಪಂಚಲಕ್ಷೇಣ ಮಂತ್ರಕ್ಷತ್ರಿಯ ಉಚ್ಯತೇ ।
ಪುನಶ್ಚ ಪಂಚಲಕ್ಷೇಣ ಕ್ಷತ್ರತ್ವಮುಪನೇಷ್ಯತಿ ॥ ೧೨೬ ॥

ಪುನಶ್ಚ ಪಂಚಲಕ್ಷೇಣ ಮಂತ್ರಬ್ರಾಹ್ಮಣ ಉಚ್ಯತೇ ।
ಶೂದ್ರಶ್ಚೈವ ನಮೋಂತೇನ ಪಂಚವಿಂಶತಿಲಕ್ಷತಃ ॥ ೧೨೭ ॥

---

೧೨೩. ಸ್ತ್ರೀಯರು ತಮ್ಮ ಸ್ತ್ರೀತ್ವವು ಹೋಗುವುದಕ್ಕಾಗಿ ಐದು ಲಕ್ಷ ಪಂಚಾಕ್ಷರ ಜಪವನ್ನು ಮಾಡಬೇಕು. ಹಾಗೆ ಮಾಡಿದರೆ ಜನ್ಮಾಂತರದಲ್ಲಿ ಪಂಡಿತನಾದ ಪುರುಷರಾಗಿ ಜನಿಸಿ ಕ್ರಮವಾಗಿ ಮುಕ್ತಿಯನ್ನು ಪಡೆಯುವರು.

೧೨೪. ಕ್ಷತ್ರಿಯನು ಐದು ಲಕ್ಷ ಜಪಗಳನ್ನು ಮಾಡಿದರೆ ಅವನ ಕ್ಷತ್ರಿಯತ್ವವು ಹೋಗುವುದು. ಇನ್ನೂ ಐದುಲಕ್ಷ ಜಪಮಾಡಿದರೆ ಜನ್ಮಾಂತರದಲ್ಲಿ ಬ್ರಾಹ್ಮಣನಾಗಿ ಜನಿಸುವನು.

೧೨೫-೧೨೬. ಮತ್ತು ಆ ಜನ್ಮದಲ್ಲಿ ತಿರುಗಿ ಜಪಿಸಿ ಮಂತ್ರಸಿದ್ಧಿಯನ್ನು ಪಡೆದು ಕ್ರಮವಾಗಿ ಮುಕ್ತನಾಗುವನು. ವೈಶ್ಯನು ಐದುಲಕ್ಷ ಜಪಗಳನ್ನು ಮಾಡಿದರೆ ವೈಶ್ಯತ್ವವನ್ನು ನೀಗಿಕೊಳ್ಳುವನು. ತಿರುಗಿ ಐದುಲಕ್ಷ ಜಪಮಾಡಿದರೆ ಮಂತ್ರ ಕ್ಷತ್ರಿಯನು ಆಗುವನು. ಆಮೇಲೆ ತಿರುಗಿ ಐದುಲಕ್ಷ ಜಪಗಳಿಂದ ಆ ಕ್ಷತ್ರಿಯತ್ವವನ್ನು ಕಳೆದುಕೊಳ್ಳುವನು ಮತ್ತು ಐದುಲಕ್ಷ ಜಪಗಳಿಂದ ಮಂತ್ರಬ್ರಾಹ್ಮಣನಾಗುವನು.

೧೨೭. ಶೂದ್ರನೂ ಸಹ ನಮಃಪದಾಂತವಾದ ಪಂಚಾಕ್ಷರಮಂತ್ರವನ್ನು ಇಪ್ಪತ್ತೈದುಲಕ್ಷ ಬಾರಿ ಜಪಿಸಿದರೆ ಮಂತ್ರಬ್ರಾಹ್ಮಣನಾಗಿ ಬಳಿಕ ಜನ್ಮಾಂತರದಲ್ಲಿ ನಿಜವಾದ ಬ್ರಾಹ್ಮಣನಾಗಿ ಜನಿಸುವನು.

ಮಂತ್ರವಿಪ್ರತ್ವಮಾಪದ್ಯ ಪಶ್ಚಾಚ್ಛುದ್ಧೋ ಭವೇದ್ದ್ವಿಜಃ ।
ನಾರೀ ವಾಥ ನರೋ ವಾಥ ಬ್ರಾಹ್ಮಣೋ ವಾನ್ಯ ಏವ ವಾ ॥ ೧೨೮ ॥

ನಮೋಂತಂ ವಾ ನಮಃ ಪೂರ್ವಮಾತುರಃ ಸರ್ವದಾ ಜಪೇತ್ ।
ತತ್ರ ಸ್ತ್ರೀಣಾಂ ತಥೈವೋಹ್ಯ ಗುರುರ್ನಿರ್ದರ್ಶಯೇತ್ ಕ್ರಮಾತ್ ॥೧೨೯॥

ಸಾಧಕಃ ಪಂಚಲಕ್ಷಾಂತೇ ಶಿವಪ್ರೀತ್ಯರ್ಥಮೇವ ಹಿ ।
ಮಹಾಭಿಷೇಕನೈವೇದ್ಯಂ ಕೃತ್ವಾ ಭಕ್ತಾಂಶ್ಚ ಪೂಜಯೇತ್ ॥ ೧೩೦ ॥

ಪೂಜಯಾ ಶಿವಭಕ್ತಸ್ಯ ಶಿವಃ ಪ್ರೀತತರೋ ಭವೇತ್ ।
ಶಿವಸ್ಯ ಶಿವಭಕ್ತಸ್ಯ ಭೇದೋ ನಾಸ್ತಿ ಶಿವೋ ಹಿ ಸಃ ॥ ೧೩೧ ॥

ಶಿವಸ್ವರೂಪಮಂತ್ರಸ್ಯ ಧಾರಣಾಚ್ಛಿವ ಏವ ಹಿ ।
ಶಿವಭಕ್ತಶರೀರೇ ಹಿ ಶಿವೇ ತತ್ಪರಮೋ ಭವೇತ್ ॥ ೧೩೨ ॥

---

೧೨೮-೧೨೯. ಸ್ತ್ರೀಯಾಗಲೀ, ಪುರುಷನಾಗಲೀ, ಬ್ರಾಹ್ಮಣನಾಗಲೀ, ಮಿಕ್ಕ ವರ್ಣದವನಾಗಲೀ ಆತುರನಾದವನು ನಮಃಪದವನ್ನು ಪೂರ್ವದಲ್ಲಿಯಾಗಲೀ, ಕೊನೆಯಲ್ಲಾಗಲೀ ಉಚ್ಚರಿಸಿ ಸದಾ ಜಪಿಸಬೇಕು. ವಿವಾಹಿತಸ್ತ್ರೀಯರಿಗೂ ಸಹ ಅದರಂತೆಯೇ ಗುರುವು ಕ್ರಮವನ್ನು ನಿರ್ದೇಶಿಸಬೇಕು.

೧೩೦. ಐದುಲಕ್ಷ ಜಪದ ಕೊನೆಯಲ್ಲಿ ಸಾಧಕನು ಶಿವನ ಪ್ರೀತಿಗಾಗಿ ಮಹಾಭಿಷೇಕ ಮತ್ತು ನೈವೇದ್ಯಗಳನ್ನು ಮಾಡಿ ಬಳಿಕ ಶಿವಭಕ್ತರನ್ನು ಪೂಜಿಸಬೇಕು.

೧೩೧. ಶಿವಭಕ್ತನನ್ನು ಪೂಜಿಸಿದರೆ ಶಿವನು ಸುಪ್ರೀತನಾಗುವನು. ಶಿವಭಕ್ತನಿಗೂ ಶಿವನಿಗೂ ಭೇದವಿಲ್ಲ. ಶಿವಭಕ್ತನು ಶಿವಸ್ವರೂಪನು.

೧೩೨. ಶಿವನ ಸ್ವರೂಪವಾದ ಮಂತ್ರವನ್ನು ಹೃದಯದಲ್ಲಿ ಶಿವಭಕ್ತನು ಧರಿಸುವುದರಿಂದ ಅವನು ಶಿವನೇ ಆಗಿರುವನು. ಮಂಗಳರೂಪವಾದ ಶಿವಭಕ್ತನ ಶರೀರದಲ್ಲಿ ಶಿವನು (ಅವನ ರಕ್ಷಣೆಗಾಗಿ) ನೆಲಸಿರುವನು.

ಶಿವಭಕ್ತಾಃ ಕ್ರಿಯಾಃ ಸರ್ವಾ ವೇದಸರ್ವಕ್ರಿಯಾಂ ವಿದುಃ ।
ಯಾವದ್ಯಾವಚ್ಛಿವಮಂತ್ರಂ ಯೇನ ಜಪ್ತಂ ಭವೇತ್ಕ್ರಮಾತ್ ॥ ೧೩೩ ॥

ತಾವದ್ವೈ ಶಿವಸಾನ್ನಿಧ್ಯಂ ತಸ್ಮಿನ್ ದೇಹೇ ನ ಸಂಶಯಃ ।
ದೇವೀಲಿಂಗಂ ಭವೇದ್ರೂಪಂ ಶಿವಭಕ್ತಸ್ತ್ರಿಯಾಸ್ತಥಾ ॥ ೧೩೪ ॥

ಯಾವನ್ಮಂತ್ರಂ ಜಪೇದ್ದೇವ್ಯಾಸ್ತಾವತ್ಸಾನ್ನಿಧ್ಯಮಸ್ತಿ ಹಿ ।
ಶಿವಂ ಸಂಪೂಜಯೇದ್ಧೀಮಾನ್ಸ್ವಯಂ ವೈ ಶಬ್ದರೂಪಧೃಕ್ ॥ ೧೩೫ ॥

ಸ್ವಯಂ ಚೈವ ಶಿವೋ ಭೂತ್ವಾ ಪರಾಂ ಶಕ್ತಿಂ ಪ್ರಪೂಜಯೇತ್ ।
ಶಕ್ತಿಂ ಬೇರಂ ಚ ಲಿಂಗಂ ಚ ಹ್ಯಾಲೇಖ್ಯಾ ಮಾಯಯಾ ಯಜೇತ್ ॥

ಶಿವಲಿಂಗಂ ಶಿವಂ ಮತ್ವಾ ಸ್ವಾತ್ಮಾನಂ ಶಕ್ತಿರೂಪಕಂ ।
ಶಕ್ತಿಲಿಂಗಂ ಚ ದೇವೀಂ ಚ ಮತ್ವಾ ಸ್ವಂ ಶಿವರೂಪಕಂ ॥ ೧೩೭ ॥

ಶಿವಲಿಂಗಂ ನಾದರೂಪಂ ಬಿಂದುರೂಪಂ ಚ ಶಕ್ತಿಕಂ ।
ಉಪಪ್ರಧಾನಭಾವೇನ ಅನ್ಯೋನ್ಯಾಸಕ್ತಲಿಂಗಕಂ ॥ ೧೩೮ ॥

---

೧೩೩. ಶಿವಭಕ್ತರು ಲೌಕಿಕ ಮತ್ತು ವೈದಿಕ ಕ್ರಿಯೆಗಳೆಲ್ಲವನ್ನೂ ಬಲ್ಲವರು. ಎಲ್ಲಿಯವರೆಗೆ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುವರೋ ಅಲ್ಲಿಯವರೆಗೂ ಶಿವ ಭಕ್ತರ ಶರೀರದಲ್ಲಿ ಶಿವನ ಸಾನ್ನಿಧ್ಯವು ಇರುವುದು. ಇದರಲ್ಲಿ ಸಂಶಯವಿಲ್ಲ.

೧೩೪. ಶಿವಭಕ್ತಳಾದ ಸ್ತ್ರೀಯಳ ಸ್ವರೂಪವು ದೇವೀರೂಪವಾದುದು. ಮಂತ್ರ ವನ್ನು ಜಪಿಸುವವರೆಗೆ ದೇವಿಯು ಸಾನ್ನಿಧ್ಯವು ಶಿವಭಕ್ತಳ ಶರೀರದಲ್ಲಿರುವುದು.

೧೩೫-೧೩೬. ಶಿವನ ಶಬ್ದ (ಶಿವೋಹಂ ಎಂಬ ಶಬ್ದ) ಮತ್ತು ರೂಪಗಳನ್ನು ಧರಿಸಿ ತಾನೂ ಶಿವನಾಗಿ (ಶಿವನೆಂದು ತಿಳಿದುಕೊಂಡು) ಪರಶಕ್ತಿಯನ್ನು ಪೂಜಿಸ ಬೇಕು. ಶಕ್ತಿ, ಮೂರ್ತಿ, ಲಿಂಗ, ಇವುಗಳನ್ನು ಬರೆದು ನಿಷ್ಕಪಟವಾಗಿ ಪೂಜಿಸ ಬೇಕು.

೧೩೭-೧೩೮. ಶಿವಲಿಂಗವು ಶಿವಸ್ವರೂಪವೆಂದೂ, ತಾನು ಶಕ್ತಿರೂಪನೆಂದೂ, ಶಕ್ತಿಲಿಂಗವೂ, ದೇವಿಯೂ ತಾನೂ ಸಹ ಶಿವಸ್ವರೂಪವೆಂದೂ, ನಾದರೂಪವಾದ ಮತ್ತು ಬಿಂದುರೂಪವಾದ ಶಿವಲಿಂಗವನ್ನೂ, ಪ್ರಧಾನ ಮತ್ತು ಅಪ್ರಧಾನವಾಗಿ (ಶಿವ ಲಿಂಗವು ಪ್ರಧಾನವಾದುದು. ಶಕ್ತಿಲಿಂಗವು ಅಪ್ರಧಾನವು) ಒಂದು ಮತ್ತೊಂದಕ್ಕೆ

ಪೂಜಯೇಚ್ಚ ಶಿವಂ ಶಕ್ತಿಂ ಸ ಶಿವೋ ಮೂಲಭಾವನಾತ್ ।
ಶಿವಭಕ್ತಾಂ ಶಿವಮಂತ್ರರೂಪಕಾಂ ಶಿವರೂಪಕಾಂ ॥ ೧೪೯ ॥

ಷೋಡಶೈರುಪಚಾರೈಶ್ಚ ಪೂಜಯೇದಿಷ್ಟಮಾಪ್ನುಯಾತ್ ।
ಯೇನ ಶುಶ್ರೂಷಣಾದ್ಯೈಶ್ಚ ಶಿವಭಕ್ತಸ್ಯ ಲಿಂಗಿನಃ ॥ ೧೫೦ ॥

ಆನಂದಂ ಜನಯೇದ್ವಿದ್ವಾನ್ ಶಿವಃ ಪ್ರೀತತರೋ ಭವೇತ್ ।
ಶಿವಭಕ್ತಾಂ ಸಪತ್ನಿಕಾಂ ಪತ್ನ್ಯಾ ಸಹ ಸದೈವ ತತ್ ॥ ೧೫೧ ॥

ಪೂಜಯೇದ್ಭೋಜನಾದ್ಯೈಶ್ಚ ಪಂಚ ವಾ ದಶ ವಾ ಶತಂ ।
ಧನೇ ದೇಹೇ ಚ ಮಂತ್ರೇ ಚ ಭಾವನಾಯಾಮವಂಚಕಃ ॥ ೧೫೨ ॥

ಶಿವಶಕ್ತಿಸ್ವರೂಪೇಣ ನ ಪುನರ್ಜಾಯತೇ ಭುವಿ ।
ನಾಭೇರಧೋ ಬ್ರಹ್ಮಭಾಗಮಾಕಂಠಂ ವಿಷ್ಣುಭಾಗಕಂ ॥ ೧೫೩ ॥

---

ಅಂಗವೆಂದೂ ಭಾವಿಸಿ ಮೂಲಮಂತ್ರವನ್ನು ಭಾವಿಸುತ್ತಾ ಶಿವನನ್ನೂ, ಶಕ್ತಿಯನ್ನೂ ಪೂಜಿಸಬೇಕು.

೧೪೯. ಶಿವಮಂತ್ರಸ್ವರೂಪರೂ, ಶಿವಸ್ವರೂಪರೂ ಆದಂತಹ ಶಿವಭಕ್ತರನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಅದರಿಂದ ಇಷ್ಟವು ಸಿದ್ಧಿಸುವುದು.

೧೫೦. ಶಿವಸ್ವರೂಪನಾದ ಶಿವಭಕ್ತನನ್ನು ಶುಶ್ರೂಷಣಾದಿಗಳಿಂದ ಸಂತೋಷ ಗೊಳಿಸಬೇಕು. ಶಿವನು ಅದರಿಂದ ಸಂತುಷ್ಟನಾಗುವನು.

೧೫೧-೧೫೨. ಶಿವಭಕ್ತರಾದ ದಂಪತಿಗಳನ್ನು ಹತ್ತುಜನಗಳನ್ನಾಗಲೀ ನೂರು ಜನಗಳನ್ನಾಗಲೀ, ಧನ ಶರೀರ ಪ್ರಯತ್ನ ಮತ್ತು ಮಂತ್ರಭಾವನೆಗಳಲ್ಲಿ ಲೋಪ ಮಾಡದೆ ಶಿವ ಮತ್ತು ಶಕ್ತಿರೂಪರೆಂದು ತಿಳಿದು ಭೋಜನಾದಿಗಳಿಂದ ಪೂಜಿಸಬೇಕು. ಅದರಿಂದ ಮುಕ್ತಿಯನ್ನು ಹೊಂದುವರು.

೧೫೩. ನಾಭಿಯ ಕೆಳಗಿನ ಭಾಗವು ಬ್ರಹ್ಮಸ್ವರೂಪವಾದುದು. ನಾಭಿಯಿಂದ ಕತ್ತಿನವರೆಗಿನ ಭಾಗವು ವಿಷ್ಣುಸ್ವರೂಪವಾದುದು. ಮುಖವು ಶಿವಸ್ವರೂಪವಾದುದು. ಹೀಗೆ ಶಿವಭಕ್ತನ ಶರೀರವು ತ್ರಿಮೂರ್ತಿಸ್ವರೂಪವಾದುದು.

ಮುಖಂ ಲಿಂಗಮಿತಿ ಪ್ರೋಕ್ತಂ ಶಿವಭಕ್ತಶರೀರಕಂ ।
ಮೃತಾನ್ ದಾಹಾದಿಯುಕ್ತಾನ್ ವಾ ದಾಹಾದಿರಹಿತಾನ್ ಮೃತಾನ್ ॥ ೧೪೪ ॥

ಉದ್ದಿಶ್ಯ ಪೂಜಯೇದಾದಿಪಿತರಂ ಶಿವಮೇವ ಹಿ ।
ಪೂಜಾಂ ಕೃತ್ವಾದಿಮಾತುಶ್ಚ ಶಿವಭಕ್ತಾಂಶ್ಚ ಪೂಜಯೇತ್ ॥ ೧೪೫ ॥

ಪಿತೃಲೋಕಂ ಸಮಾಸಾದ್ಯ ಕ್ರಮಾನ್ಮುಕ್ತೋ ಭವೇನ್ಮೃತಃ ।
ಕ್ರಿಯಾಯುಕ್ತದಶಭ್ಯಶ್ಚ ತಪೋಯುಕ್ತೋ ವಿಶಿಷ್ಯತೇ ॥ ೧೪೬ ॥

ತಪೋಯುಕ್ತಶತೇಭ್ಯಶ್ಚ ಜಪಯುಕ್ತೋ ವಿಶಿಷ್ಯತೇ ।
ಜಪಯುಕ್ತಸಹಸ್ರೇಭ್ಯಃ ಶಿವಜ್ಞಾನೀ ವಿಶಿಷ್ಯತೇ ॥ ೧೪೭ ॥

ಶಿವಜ್ಞಾನಿಷು ಲಕ್ಷೇಷು ಧ್ಯಾನಯುಕ್ತೋ ವಿಶಿಷ್ಯತೇ ।
ಧ್ಯಾನಯುಕ್ತೇಷು ಕೋಟಿಭ್ಯಃ ಸಮಾಧಿಸ್ಥೋ ವಿಶಿಷ್ಯತೇ ॥ ೧೪೮ ॥

---

೧೪೪-೧೪೫. ಮರಣಹೊಂದಿ ದಹನಸಂಸ್ಕಾರವನ್ನು ಪಡೆದ ಮತ್ತು ದಹನಾದಿಸಂಸ್ಕಾರವಿಲ್ಲದೆ ಮೃತರಾದಂತಹ ಪಿತೃಗಳನ್ನೂ, ಜಗತ್ತಿಗೆ ಆದಿಪಿತೃವಾದ ಶಿವನನ್ನೂ, ಆದಿಮಾತೆಯಾದ ದೇವಿಯನ್ನೂ ಉದ್ದೇಶಿಸಿ ಪೂಜಿಸಬೇಕು. ಬಳಿಕ ಶಿವಭಕ್ತರನ್ನೂ ಪೂಜಿಸಬೇಕು.

೧೪೬. ಹಾಗೆ ಪೂಜಿಸಿದರೆ ಮೃತನಾದವನು ಪಿತೃಲೋಕವನ್ನು ಪಡೆದು ಕ್ರಮವಾಗಿ ಮುಕ್ತಿಯನ್ನು ಪಡೆಯುವನು. ಶಿವಭಕ್ತರಲ್ಲಿ ಕ್ರಿಯಾಯುಕ್ತ (ಕರ್ಮನಿಷ್ಠ) ರಾದ ಹತ್ತು ಯೋಗಿಗಳಿಗಿಂತಲೂ ತಪೋನಿಷ್ಠನಾದ ಒಬ್ಬ ಯೋಗಿಯು ಶ್ರೇಷ್ಠನು.

೧೪೭-೧೪೮. ಶಿವಭಕ್ತರಲ್ಲಿ ತಪೋನಿಷ್ಠರಾದ ನೂರು ಯೋಗಿಗಳಿಗಿಂತಲೂ ಜಪನಿಷ್ಠನಾದ ಓರ್ವನು ಶ್ರೇಷ್ಠನು. ಸಾವಿರ ಜಪಯುಕ್ತರಿಗಿಂತಲೂ ಓರ್ವ ಶಿವಜ್ಞಾನಿಯು ಶ್ರೇಷ್ಠನು. ಲಕ್ಷ ಶಿವಜ್ಞಾನಿಗಳಿಗಿಂತಲೂ ಓರ್ವ ಧ್ಯಾನನಿಷ್ಠನು ಶ್ರೇಷ್ಠನು. ಧ್ಯಾನನಿಷ್ಠರಾದ ಕೋಟಿ ಯೋಗಿಗಳಿಗಿಂತಲೂ ಓರ್ವ ಸಮಾಧಿನಿಷ್ಠನು ಶ್ರೇಷ್ಠನು.

ಉತ್ತರೋತ್ತರವೈಶಿಷ್ಟ್ಯಾತ್ಪೂಜಾಯಾಮುತ್ತರೋತ್ತರಂ ।
ಫಲಂ ವೈಶಿಷ್ಟ್ಯರೂಪಂ ಚ ದುರ್ವಿಜ್ಞೇಯಂ ಮನೀಷಿಭಿಃ ॥ ೧೪೯ ॥

ತಸ್ಮಾದ್ವೈ ಶಿವಭಕ್ತಸ್ಯ ಮಾಹಾತ್ಮ್ಯಂ ವೇತ್ತಿ ಕೋ ನರಃ ।
ಶಿವಶಕ್ತ್ಯೋಃ ಪೂಜನಂ ಚ ಶಿವಭಕ್ತಸ್ಯ ಪೂಜನಂ ॥ ೧೫೦ ॥

ಕುರುತೇ ಯೋ ನರೋ ಭಕ್ತ್ಯಾ ಸ ಶಿವಃ ಶಿವಮೇಧತೇ ।
ಯ ಇಮಂ ಪಠತೇಽಧ್ಯಾಯಮರ್ಥವದ್ವೇದಸಮ್ಮಿತಂ ॥ ೧೫೧ ॥

ಶಿವಜ್ಞಾನೀ ಭವೇದ್ವಿಪ್ರಃ ಶಿವೇನ ಸಹ ಮೋದತೇ ।
ಶ್ರಾವಯೇಚ್ಛಿವಭಕ್ತಾಂಶ್ಚ ವಿಶೇಷಜ್ಞೋ ಮುನೀಶ್ವರಾಃ ॥ ೧೫೨ ॥

ಶಿವಪ್ರಸಾದಸಿದ್ಧಿಃ ಸ್ಯಾಚ್ಛಿವಸ್ಯ ಕೃಪಯಾ ಬುಧಾಃ ।

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಸಪ್ತದಶೋಽಧ್ಯಾಯಃ.

---

೧೪೯. ಇವರಲ್ಲಿ ಹಿಂದಿನವರಿಗಿಂತಲೂ ಮುಂದಿನವರು ಶ್ರೇಷ್ಠರಾದುದರಿಂದ ಅವರನ್ನು ಪೂಜಿಸಿದರೆ ಪಂಡಿತರೂ ಊಹಿಸಲಶಕ್ಯವಾದಂತಹ ಫಲವು ಲಭಿಸುವುದು. ಒಟ್ಟಿನಲ್ಲಿ ಒಂದಕ್ಕಿಂತಲೂ ಹೆಚ್ಚಾದ ಫಲವು ಲಭಿಸುವುದು. ಆದುದರಿಂದ ಶಿವಭಕ್ತನ ಮಾಹಾತ್ಮ್ಯವನ್ನು ಯಾವ ನರನು ತಾನೇ ತಿಳಿಯಬಲ್ಲನು ? ಒಬ್ಬನೂ ತಿಳಿಯಲಾರನು.

೧೫೦. ಶಿವ ಮತ್ತು ಶಕ್ತಿ, ಶಿವಭಕ್ತ ಇವರ ಪೂಜೆಯನ್ನು ನಿತ್ಯವೂ ಯಾವನು ಭಕ್ತಿಯಿಂದ ಮಾಡುವನೋ ಅವನು ಶಿವಸ್ವರೂಪವನ್ನು ಪಡೆದು ಮಂಗಳವನ್ನು ಪಡೆಯುವನು.

೧೫೧. ವೇದದಂತೆ ಪವಿತ್ರವಾದ ಈ ಅಧ್ಯಾಯವನ್ನು ಯಾವ ಪುರುಷನು ಅರ್ಥವತ್ತಾಗಿ ಪಠಿಸುವನೋ ಅವನು ಶಿವಜ್ಞಾನಿಯಾಗಿ ಶಿವನೊಡನೆ ವಿಹರಿಸುವನು.

೧೫೨. ಹೆಚ್ಚಾಗಿ ತಿಳಿದಂತಹ ವಿಪ್ರನು ಶಿವಭಕ್ತಗೆ ಈ ಅಧ್ಯಾಯವನ್ನು ಹೇಳಬೇಕು. ಎಲೈ ಮುನಿಶ್ರೇಷ್ಠರೇ ! ಅದರಿಂದ ಶಿವನ ಅನುಗ್ರಹವು ಲಭಿಸುವುದು.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಅಷ್ಟಾದಶೋಽಧ್ಯಾಯಃ

॥ ಋಷಯ ಊಚುಃ ॥

ಬಂಧಮೋಕ್ಷಸ್ವರೂಪಂ ಹಿ ಬ್ರೂಹಿ ಸರ್ವಾರ್ಥವಿತ್ತಮ ।

॥ ಸೂತ ಉವಾಚ ॥

ಬಂಧಮೋಕ್ಷಂ ತಥೋಪಾಯಂ ವಕ್ಷ್ಯೇಽಹಂ ಶೃಣುತಾದರಾತ್ ॥ ೧ ॥

ಪ್ರಕೃತ್ಯಾದ್ಯಷ್ಟಬಂಧೇನ ಬದ್ಧೋ ಜೀವಃ ಸ ಉಚ್ಯತೇ ।
ಪ್ರಕೃತ್ಯಾದ್ಯಷ್ಟಬಂಧೇನ ನಿರ್ಮುಕ್ತೋ ಮುಕ್ತ ಉಚ್ಯತೇ ॥ ೨ ॥

---

## ಹದಿನೆಂಟನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು :—ಓ ಸೂತಮುನಿ, ನೀನು ಎಲ್ಲಾ ವಿಷಯಗಳನ್ನೂ ತಿಳಿದಿರುವೆ. ಈಗ ನಮಗೆ ಬಂಧ ಮತ್ತು ಮೋಕ್ಷಗಳ ಸ್ವರೂಪವನ್ನು ಹೇಳು ಎಂದು ಕೇಳಲು, ಸೂತಮುನಿಯು ಹೇಳಿದನು—ಎಲೈ ಮುನಿಗಳೇ! ಬಂಧಮೋಕ್ಷಸ್ವರೂಪವನ್ನೂ ಮತ್ತು ಅದರ ನಿವಾರಣೋಪಾಯಗಳನ್ನೂ ಹೇಳುವೆನು ಕೇಳಿರಿ. ಪ್ರಕೃತಿಯೇ ಮೊದಲಾದ ಎಂಟು ಬಂಧಗಳಿಂದ ಬದ್ಧನಾದವನಿಗೆ ಜೀವನೆಂದು ಹೆಸರು ಆ ಎಂಟು ಬಂಧಗಳಿಂದ ಬಿಡಲ್ಪಟ್ಟವನಿಗೆ ಮುಕ್ತನೆಂದು ಹೆಸರು.

ಪ್ರಕೃತ್ಯಾದಿವಶೀಕಾರೋ ಮೋಕ್ಷ ಇತ್ಯುಚ್ಯತೇ ಸ್ವತಃ ।
ಬದ್ಧಜೀವಸ್ತು ನಿರ್ಮುಕ್ತೋ ಮುಕ್ತಜೀವಸ್ಸ ಕಥ್ಯತೇ ॥ ೩ ॥

ಪ್ರಕೃತ್ಯಗ್ರೇ ತತೋ ಬುದ್ಧಿರಹಂಕಾರೋ ಗುಣಾತ್ಮಕಃ ।
ಪಂಚತನ್ಮಾತ್ರಮಿತ್ಯೇತತ್ಪ್ರಕೃತ್ಯಾದ್ಯಷ್ಟಕಂ ವಿದುಃ ॥ ೪ ॥

ಪ್ರಕೃತ್ಯಾದ್ಯಷ್ಟಜೋ ದೇಹೋ ದೇಹಜಂ ಕರ್ಮ ಉಚ್ಯತೇ ।
ಪುನಶ್ಚ ಕರ್ಮಜೋ ದೇಹೋ ಜನ್ಮಕರ್ಮ ಪುನಃ ಪುನಃ ॥ ೫ ॥

ಶರೀರಂ ತ್ರಿವಿಧಂ ಜ್ಞೇಯಂ ಸ್ಥೂಲಂ ಸೂಕ್ಷ್ಮಂ ಚ ಕಾರಣಂ ।
ಸ್ಥೂಲಂ ವ್ಯಾಪಾರದಂ ಪ್ರೋಕ್ತಂ ಸೂಕ್ಷ್ಮಮಿಂದ್ರಿಯಭೋಗದಂ ॥ ೬ ॥

ಕಾರಣಂ ತ್ವಾತ್ಮಭೋಗಾರ್ಥಂ ಜೀವಕರ್ಮಾನುರೂಪತಃ ।
ಸುಖಂ ದುಃಖಂ ಪುಣ್ಯಪಾಪೈಃ ಕರ್ಮಭಿಃ ಫಲಮುಶ್ನುತೇ ॥ ೭ ॥

---

೩. ಆ ಪ್ರಕೃತಿ ಮುಂತಾದ ಬಂಧಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವುದೇ ಮೋಕ್ಷವು. ಬದ್ಧಜೀವನು ಬಂಧಗಳಿಂದ ಬಿಡಲ್ಪಟ್ಟರೆ ಅವನಿಗೆ ಮುಕ್ತಜೀವನೆಂದು ಹೆಸರು.

೪. ಪ್ರಕೃತಿಯು ಮೊದಲದೆಯದು, ಆಮೇಲೆ ಬುದ್ಧಿ, ಆ ಮೇಲೆ ತ್ರಿಗುಣ ಮಯವಾದ ಅಹಂಕಾರ, ನಂತರ ಐದು ಸೂಕ್ಷ್ಮಭೂತಗಳು, ಇವುಗಳೇ ಎಂಟು ಬಂಧಗಳು.

೫. ಪ್ರಕೃತಿ ಮೊದಲಾದ ಎಂಟು ಬಂಧಗಳಿಂದ ದೇಹವು ಜನಿಸುವದು. ಆ ದೇಹದಿಂದ ಕರ್ಮವು ಆಗುವದು. ತಿರುಗಿ ಆ ಕರ್ಮದಿಂದ ದೇಹವು ಜನಿಸುವದು. ಎಂದರೆ ಕರ್ಮಾಧೀನವಾಗಿ ಪುನರ್ಜನ್ಮವು ಲಭಿಸುವದು. ಹೀಗೆ ಜನ್ಮ ಮತ್ತು ಕರ್ಮಗಳು ಪುನಃ ಪುನಃ ಆಗುತ್ತಲಿರುವವು.

೬-೭. ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರಗಳೆಂದು ಶರೀರವು ಮೂರು ವಿಧವಾಗಿರುವದು. ಸ್ಥೂಲವು ಪ್ರತ್ಯಕ್ಷವಾದ ಲೌಕಿಕವ್ಯಾಪಾರವನ್ನು ಮಾಡುವದು. ಇಂದ್ರಿಯಭೋಗವನ್ನುಂಟುಮಾಡುವಂತಹದು ಸೂಕ್ಷ್ಮಶರೀರವು. ಕಾರಣಶರೀರವು ಜೀವನ ಕರ್ಮಕ್ಕನುಸಾರವಾಗಿ ಆತ್ಮನಿಗೆ ಭೋಗವನ್ನುಂಟುಮಾಡುವದು. ಪುಣ್ಯ ಮತ್ತು ಪಾಪಕರ್ಮಗಳಿಂದ ಮಾಡಿದ ಸುಖದುಃಖಗಳನ್ನು ಜೀವನು ಅನುಭವಿಸುವನು.

ತಸ್ಮಾದ್ಧಿ ಕರ್ಮರಜ್ಜ್ವಾ ಹಿ ಬದ್ಧೋ ಜೀವಃ ಪುನಃ ಪುನಃ ।
ಶರೀರತ್ರಯಕರ್ಮಾಭ್ಯಾಂ ಚಕ್ರವದ್ಭ್ರಾಮ್ಯತೇ ಸದಾ ॥ ೮ ॥

ಚಕ್ರಭ್ರಮನಿವೃತ್ತ್ಯರ್ಥಂ ಚಕ್ರಕರ್ತಾರಮೀಡಯೇತ್ ।
ಪ್ರಕೃತ್ಯಾದಿಮಹಾಚಕ್ರಂ ಪ್ರಕೃತೇಃ ಪರತಃ ಶಿವಃ ॥ ೯ ॥

ಚಕ್ರಕರ್ತಾ ಮಹೇಶೋ ಹಿ ಪ್ರಕೃತೇಃ ಪರತೋ ಯತಃ ।
ಪಿಬತಿ ವಾಥ ವಮತಿ ಜೀವಾನ್ ಬಾಲೋ ಜಲಂ ಯಥಾ ॥ ೧೦ ॥

ಶಿವಸ್ತಥಾ ಪ್ರಕೃತ್ಯಾದಿ ವಶೀಕೃತ್ಯಾಧಿತಿಷ್ಠತಿ ।
ಸರ್ವಂ ವಶೀಕೃತಂ ಯಸ್ಮಾತ್ತಸ್ಮಾಚ್ಛಿವ ಇತಿ ಸ್ಮೃತಃ

ಶಿವ ಏವ ಹಿ ಸರ್ವಜ್ಞಃ ಪರಿಪೂರ್ಣಶ್ಚ ನಿಸ್ಪೃಹಃ । ॥ ೧೧ ॥
ಸರ್ವಜ್ಞತಾ ತೃಪ್ತಿರನಾದಿಬೋಧಃ
ಸ್ವತಂತ್ರತಾ ನಿತ್ಯಮಲುಪ್ತಶಕ್ತಿಃ ।

---

೮. ಆದುದರಿಂದ ಜೀವನು ಕರ್ಮವೆಂಬ ಹಗ್ಗದಿಂದ ಪುನಃ ಪುನಃ ಬಂಧಿಸಲ್ಪಟ್ಟು ಹಿಂದೆ ಹೇಳಿದ ಮೂರು ಶರೀರಗಳ ಕರ್ಮಗಳಿಂದ ಸದಾ ಬದ್ಧನಾಗಿ ಪ್ರಕೃತಿಯೇ ಮೊದಲಾದ ಸಂಸಾರಚಕ್ರದಲ್ಲಿ ಸುತ್ತುತ್ತಿರುವನು.

೯ ಆ ಚಕ್ರಭ್ರಮಣವು ನಾಶವಾಗುವದಕ್ಕಾಗಿ ಆ ಚಕ್ರಕರ್ತನನ್ನೇ ಸ್ತುತಿಸಬೇಕು. ಪ್ರಕೃತಿ ಮೊದಲಾದುದೇ ಮಹತ್ತಾದ ಚಕ್ರವು. ಶಿವನು ಆ ಪ್ರಕೃತಿಗಿಂತಲೂ ಪರದಲ್ಲಿರುವನು, ಪ್ರಕೃತಿ ಸಂಬಂಧವಿಲ್ಲದೆ ಬೇರೆಯಾಗಿರುವನು. ಆದುದರಿಂದ ಶಿವನೇ ಪ್ರಕೃತ್ಯಾದಿರೂಪವಾದ ಚಕ್ರಕ್ಕೆ ಕರ್ತನು. ಲೋಕವ್ಯವಹಾರದಲ್ಲಿಯೂ ಚಕ್ರವನ್ನು ನಿರ್ಮಿಸಿದವನು ಚಕ್ರಕ್ಕಿಂತಲೂ ಬೇರೆಯಾಗಿರುವನಷ್ಟೆ ?

೧೦-೧೧. ಬಾಲಕನು ನೀರನ್ನು ಕುಡಿದು, ತಿರುಗಿ ಉಗುಳುವಂತೆ ಶಿವನು ಜೀವರನ್ನೂ ಪ್ರಕೃತ್ಯಾದಿಗಳನ್ನೂ ಕುಡಿಯುವನು ಅಥವಾ ನಾಶಮಾಡುವನು ಎಂದರೆ ತನ್ನಲ್ಲಿಯೇ ಅಡಗಿಸಿಕೊಂಡಿದ್ದು ತಿರುಗಿ ಉಗುಳುವನು (ಸೃಷ್ಟಿಸುವನು) ಹೀಗೆ ಸಕಲವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವನು. ಹೀಗೆ ಸರ್ವವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವದರಿಂದಲೇ ಅವನಿಗೆ ಶಿವನೆಂದು ಹೆಸರು. ಆ ಶಿವನೇ ಸರ್ವಜ್ಞನು, ಪರಿಪೂರ್ಣನು, ನಿತ್ಯತೃಪ್ತನು. ಆದುದರಿಂದಲೇ ಯಾವ ಆಶೆಯೂ ಇಲ್ಲದವನು, ಪೂರ್ಣಕಾಮನು.

ಅನಂತಶಕ್ತಿಶ್ಚ ಮಹೇಶ್ವರಸ್ಯ
ಯನ್ಮಾನಸೈಶ್ವರ್ಯಮನುವೈತಿ ವೇದಃ ॥ ೧೨ ॥

ಅತಃ ಶಿವಪ್ರಸಾದೇನ ಪ್ರಕೃತ್ಯಾದಿ ವಶಂ ಭವೇತ್ ।
ಶಿವಪ್ರಸಾದಲಾಭಾರ್ಥಂ ಶಿವಮೇವ ಪ್ರಪೂಜಯೇತ್ ॥ ೧೩ ॥

ನಿಃಸ್ಪೃಹಸ್ಯ ಚ ಪೂರ್ಣಸ್ಯ ತಸ್ಯ ಪೂಜಾ ಕಥಂ ಭವೇತ್ ।
ಶಿವೋದ್ದೇಶಕೃತಂ ಕರ್ಮ ಪ್ರಸಾದಜನಕಂ ಭವೇತ್ ॥ ೧೪ ॥

ಲಿಂಗೇ ಬೇರೇ ಭಕ್ತಜನೇ ಶಿವಮುದ್ದಿಶ್ಯ ಪೂಜಯೇತ್ ।
ಕಾಯೇನ ಮನಸಾ ವಾಚಾ ಧನೇನಾಪಿ ಪ್ರಪೂಜಯೇತ್ ॥ ೧೫ ॥

ಪೂಜಯಾ ತು ಮಹೇಶೋ ಹಿ ಪ್ರಕೃತೇಃ ಪರಮಃ ಶಿವಃ ।
ಪ್ರಸಾದಂ ಕುರುತೇ ಸತ್ಯಂ ಪೂಜಕಸ್ಯ ವಿಶೇಷತಃ ॥ ೧೬ ॥

---

೧೨. ಸರ್ವಜ್ಞತೆ, ತೃಪ್ತಿ, ಅನಾದಿಯಾದ ಸ್ವರೂಪಜ್ಞಾನ, ಸ್ವಾತಂತ್ರ್ಯ, ಅಪ್ರತಿಹತವಾದ ಶಕ್ತಿ ಮತ್ತು ಅಪರಿಮಿತವಾದ ಶಕ್ತಿ ಇವುಗಳು ಈಶ್ವರನ ಮಾನಸ ವಾದ ಐಶ್ವರ್ಯಗಳು ಎಂದು ವೇದದಲ್ಲಿ ಹೇಳಿರುವದು.

೧೩. ಆದುದರಿಂದ ಶಿವನ ಅನುಗ್ರಹದಿಂದಲೇ ಪ್ರಕೃತ್ಯಾದಿ ಚಕ್ರವನ್ನು ವಶ ಮಾಡಿಕೊಳ್ಳಬಹುದು. ಶಿವನ ಅನುಗ್ರಹವು ಲಭಿಸಬೇಕಾದರೆ ಶಿವನನ್ನೇ ಪೂಜಿಸ ಬೇಕು.

೧೪. ನಿಸ್ಪೃಹನೂ, ಪರಿಪೂರ್ಣನೂ ಆದ ಆ ಶಿವನನ್ನು ಪೂಜಿಸುವದು ಹೇಗೆ? ಎಂದರೆ, ಶಿವನನ್ನುದ್ದೇಶಿಸಿ ಕರ್ಮವನ್ನು ಮಾಡಬೇಕು. ಅದರಿಂದ ಶಿವನ ಪ್ರಸಾದವು ಲಭಿಸುವದು.

೧೫. ಲಿಂಗದಲ್ಲಿಯೂ, ವಿಗ್ರಹದಲ್ಲಿಯೂ, ಶಿವಭಕ್ತರಲ್ಲಿಯೂ, ಶಿವನನ್ನು ಉದ್ದೇಶಿಸಿ ಪೂಜಿಸಬೇಕು. ಶರೀರ, ಮನಸ್ಸು, ವಾಕ್ಕು ಈ ತ್ರಿಕರಣಗಳಿಂದಲೂ, ಧನದಿಂದಲೂ ಶಿವನನ್ನು ಪೂಜಿಸಬೇಕು.

೧೬. ಹಾಗೆ ಪೂಜಿಸಿದರೆ ಪ್ರಕೃತಿಗಿಂತಲೂ ಬೇರೆಯಾಗಿರುವ ಆ ಪರಮೇಶ್ವರನು ಸಂತುಷ್ಟನಾಗಿ ಹೆಚ್ಚಾದ ಅನುಗ್ರಹವನ್ನು ಮಾಡುವನು.

ಶಿವಪ್ರಸಾದಾತ್ಕರ್ಮಾದ್ಯಂ ಕ್ರಮೇಣ ಸ್ವವಶಂ ಭವೇತ್ ।
ಕರ್ಮಾರಭ್ಯ ಪ್ರಕೃತ್ಯಂತಂ ಯದಾ ಸರ್ವಂ ವಶೀಭವೇತ್ ॥ ೧೭ ॥

ತದಾ ಮುಕ್ತ ಇತಿ ಪ್ರೋಕ್ತಃ ಸ್ವಾತ್ಮಾರಾಮೋ ವಿರಾಜತೇ ।
ಪ್ರಸಾದಾತ್ಪರಮೇಶಸ್ಯ ಕರ್ಮದೇಹೋ ಯದಾ ವಶಃ ॥ ೧೮ ॥

ತದಾ ವೈ ಶಿವಲೋಕೇ ತು ವಾಸಃ ಸಾಲೋಕ್ಯಮುಚ್ಯತೇ ।
ಸಾಮೀಪ್ಯಂ ಯಾತಿ ಸಾಂಬಸ್ಯ ತನ್ಮಾತ್ರೇ ಸ್ವವಶಂ ಗತೇ ॥ ೧೯ ॥

ತದಾ ತು ಶಿವಸಾಯುಜ್ಯಮಾಯುಧಾದ್ಯೈಃ ಕ್ರಿಯಾದಿಭಿಃ ।
ಮಹಾಪ್ರಸಾದಲಾಭೇ ಚ ಬುದ್ಧಿಶ್ಚಾಪಿ ವಶಾ ಭವೇತ್ ॥ ೨೦ ॥

ಬುದ್ಧಿಸ್ತು ಕಾರ್ಯಂ ಪ್ರಕೃತೇಸ್ತತ್ಸಾರ್ಷ್ಟಿರಿತಿ ಕಥ್ಯತೇ ।
ಪುನರ್ಮಹಾಪ್ರಸಾದೇನ ಪ್ರಕೃತಿರ್ವಶಮೇಷ್ಯತಿ ॥ ೨೧ ॥

---

೧೭. ಶಿವನ ಆ ಅನುಗ್ರಹದಿಂದ ಕರ್ಮ ಮೊದಲಾದ ಬಂಧವೆಲ್ಲವೂ ನಿವಾರಣೆಯಾಗಿ, ತನ್ನ ಹಿಡಿತಕ್ಕೆ ಸಿಗುವದು. ಕರ್ಮ ಮೊದಲುಗೊಂಡು ಪ್ರಕೃತಿಯವರೆಗಿರುವ ವಸ್ತುವೆಲ್ಲವೂ ತನ್ನ ಅಧೀನವಾದರೆ ಆಗ ಅವನಿಗೆ ಮುಕ್ತನೆಂದು ಹೆಸರು. ಅವನು ಆತ್ಮಸ್ವರೂಪದಲ್ಲಿ ವಿಹರಿಸುವ ಆತ್ಮಾರಾಮನಾಗುವನು.

೧೮. ಪರಮೇಶ್ವರನ ಅನುಗ್ರಹದಿಂದ ಕರ್ಮಮಯವಾದ ದೇಹವು ಸ್ವಾಧೀನವಾದರೆ ಆಗ ಶಿವಲೋಕದಲ್ಲಿ ವಾಸವು ಲಭಿಸುವದು. ಅದಕ್ಕೆ "ಸಾಲೋಕ್ಯ" ಮುಕ್ತಿಯೆಂದು ಹೆಸರು.

೧೯. ಸೂಕ್ಷ್ಮಭೂತಗಳು ಸ್ವಾಧೀನವಾದರೆ ಶಿವನ ಸಮೀಪವು ಲಭಿಸವುದು. ಇದಕ್ಕೆ ಸಾಮೀಪ್ಯ ಮುಕ್ತಿಯೆಂದು ಹೆಸರು. ಆಗ ಶಿವನಂತೆ ಆಯುಧ ಕ್ರಿಯೆ ಮುಂತಾದುವುಗಳನ್ನುಳ್ಳವನಾಗುವನು, ಇದಕ್ಕೆ ಸಾಯುಜ್ಯವೆಂದು ಹೆಸರು.

೨೦. ಮಹತ್ತಾದ ಶಿವನ ಪ್ರಸಾದವು ಲಭಿಸಿದರೆ ಬುದ್ಧಿಯೂ ಸಹ ಸ್ವಾಧೀನವಾಗುವದು. ಬುದ್ಧಿಯು ಪ್ರಕೃತಿಯಿಂದ ಜನಿಸಿದುದು. ಈ ಬುದ್ಧಿಸ್ವಾಧೀನಕ್ಕೆ "ಸಾರ್ಷ್ಟಿಯೆಂದು" ಹೆಸರು.

೨೧-೨೨. ಇನ್ನೂ ಹೆಚ್ಚಾಗಿ ಶಿವನ ಅನುಗ್ರಹವನ್ನು ಸಂಪಾದಿಸಿದರೆ ಪ್ರಕೃತಿಯು ಸ್ವಾಧೀನವಾಗುದು. ಆಗ ಯತ್ನವಿಲ್ಲದೆಯೇ ಶಿವನ ಸರ್ವಜ್ಞತೆ ಮುಂತಾದ

ಶಿವಸ್ಯ ಮಾನಸೈಶ್ವರ್ಯಂ ತದಾ ಯತ್ನಂ ಭವಿಷ್ಯತಿ ।
ಸರ್ವಜ್ಞಾದ್ಯಂ ಶಿವೈಶ್ವರ್ಯಂ ಲಬ್ಧ್ವಾ ಸ್ವಾತ್ಮನಿ ರಾಜತೇ ॥ ೨೨ ॥

ತತ್ಸಾಯುಜ್ಯಮಿತಿ ಪ್ರಾಹುರ್ವೇದಾಗಮಪರಾಯಣಾಃ ।
ಏವಂ ಕ್ರಮೇಣ ಮುಕ್ತಿಃ ಸ್ಯಾಲ್ಲಿಂಗಾದೌ ಪೂಜಯಾ ಸ್ವತಃ ॥ ೨೩ ॥

ಅತಃ ಶಿವಪ್ರಸಾದಾರ್ಥಂ ಕ್ರಿಯಾದ್ಯೈಃ ಪೂಜಯೇಚ್ಛಿವಂ ।
ಶಿವಕ್ರಿಯಾ ಶಿವತಪಃ ಶಿವಮಂತ್ರಜಪಃ ಸದಾ ॥ ೨೪ ॥

ಶಿವಜ್ಞಾನಂ ಶಿವಧ್ಯಾನಮುತ್ತರೋತ್ತರಮಭ್ಯಸೇತ್ ।
ಆಸುಪ್ತೇರಾಮೃತೇಃ ಕಾಲಂ ನಯೇದ್ವೈ ಶಿವಚಿಂತಯಾ ॥ ೨೫ ॥

ಸದ್ಯಾದಿಭಿಶ್ಚ ಕುಸುಮೈರರ್ಚಯೇಚ್ಛಿವಮೇಷ್ಯತಿ ।
॥ ಋಷಯ ಊಚುಃ ॥
ಲಿಂಗಾದೌ ಶಿವಪೂಜಾಯಾ ವಿಧಾನಂ ಬ್ರೂಹಿ ಸುವ್ರತ ॥ ೨೬ ॥

---

ಮಾನಸ ಐಶ್ವರ್ಯಗಳು ಲಭಿಸುವವು. ಆ ಐಶ್ವರ್ಯಗಳನ್ನು ಪಡೆದು ತನ್ನಲ್ಲಿ ವಿರಾಜಿಸುವನು. ಇದಕ್ಕೆ "ಸಾಯುಜ್ಯಮುಕ್ತಿ" ಯೆಂದು ವೇದ ಮತ್ತು ಆಗಮಗಳನ್ನು ತಿಳಿದವರು ಹೇಳುವರು.

೨೩. ಈ ಕ್ರಮದಿಂದ ಲಿಂಗ ಮುಂತಾದುವುಗಳಲ್ಲಿ ಶಿವನನ್ನು ಪೂಜಿಸಿದರೆ ಮುಕ್ತಿಯು ಲಭಿಸುವದು. ಆದುದರಿಂದ ಶಿವನ ಅನುಗ್ರಹವನ್ನು ಪಡೆಯಲು ಶಿವನನ್ನು ಕ್ರಿಯಾದಿಗಳಿಂದ ಪೂಜಿಸಬೇಕು.

೨೪. ಶಿವನನ್ನುದ್ದೇಶಿಸಿ ಕ್ರಿಯೆ, ಪೂಜೆ, ತಪಸ್ಸು, ಶಿವಪಂಚಾಕ್ಷರೀಮಂತ್ರ, ಜಪ, ಶಿವಜ್ಞಾನ, ಶಿವನಧ್ಯಾನ ಇವುಗಳನ್ನು ಒಂದಾದ ಮೇಲೆ ಮತ್ತೊಂದನ್ನು ಹೆಚ್ಚು ಹೆಚ್ಚಾಗಿ ಅಭ್ಯಸಿಸಬೇಕು, ಮಾಡಬೇಕು.

೨೫. ಪ್ರತಿ ದಿನವೂ ಮಲಗುವ ಪರ್ಯಂತ ಶಿವನನ್ನು ಧ್ಯಾನಿಸುತ್ತಾ ಜೀವಿಸಿರುವವರೆಗೂ ಕಾಲವನ್ನು ಕಳೆಯಬೇಕು. ಸದ್ಯೋಜಾತ ಮುಂತಾದ ಶಿವಸ್ವರೂಪಗಳನ್ನು ಕುಸುಮಗಳಿಂದ ಅರ್ಚಿಸಬೇಕು, ಹಾಗೆ ಮಾಡಿದರೆ ಶಿವನನ್ನು ಪಡೆಯುವನು.

೨೬. ಋಷಿಗಳು ಪ್ರಶ್ನಿಸಿದರು :—ತಪಸ್ವಿಯಾದ ಓ ಸೂತಮುನಿ! ಲಿಂಗ ಮುಂತಾದುವುಗಳಲ್ಲಿ ಶಿವನನ್ನು ಪೂಜಿಸುವ ವಿಧಾನವನ್ನು ಹೇಳು ಎಂದು ಕೇಳಲು,

॥ ಸೂತ ಉವಾಚ ॥

ಲಿಂಗಾನಾಂ ಚ ಕ್ರಮಂ ವಕ್ಷ್ಯೇ ಯಥಾವಚ್ಛೃಣುತ ದ್ವಿಜಾಃ ।
ತದೇವಲಿಂಗಂ ಪ್ರಥಮಂ ಪ್ರಣವಂ ಸಾರ್ವಕಾಮಿಕಂ ॥ ೨೭ ॥

ಸೂಕ್ಷ್ಮಪ್ರಣವರೂಪಂ ಹಿ ಸೂಕ್ಷ್ಮರೂಪಂ ತು ನಿಷ್ಕಲಂ ।
ಸ್ಥೂಲಲಿಂಗಂ ಹಿ ಸಕಲಂ ತತ್ಪಂಚಾಕ್ಷರಮುಚ್ಯತೇ ॥ ೨೮ ॥

ತಯೋಃ ಪೂಜಾ ತಪಃ ಪ್ರೋಕ್ತಂ ಸಾಕ್ಷಾನ್ಮೋಕ್ಷಪ್ರದೇ ಉಭೇ ।
ಪೌರುಷಪ್ರಕೃತಿಭೂತಾನಿ ಲಿಂಗಾನಿ ಸುಬಹೂನಿ ಚ ॥ ೨೯ ॥

ತಾನಿ ವಿಸ್ತರತೋ ವಕ್ತುಂ ಶಿವೋ ವೇತ್ತಿ ನ ಚಾಪರಃ ।
ಭೂವಿಕಾರಾಣಿ ಲಿಂಗಾನಿ ಜ್ಞಾತಾನಿ ಪ್ರಬ್ರವೀಮಿ ವಃ ॥ ೩೦ ॥

ಸ್ವಯಂಭೂಲಿಂಗಂ ಪ್ರಥಮಂ ಬಿಂದುಲಿಂಗಂ ದ್ವಿತೀಯಕಂ ।
ಪ್ರತಿಷ್ಠಿತಂ ಚರಂ ಚೈವ ಗುರುಲಿಂಗಂ ತು ಪಂಚಮಂ ॥ ೩೧ ॥

---

೨೭. ಸೂತಮುನಿಯು ಹೇಳಿದನು :—ಎಲೇ ! ವಿಪ್ರೋತ್ತಮರೆ, ಯಥಾವತ್ತಾಗಿ ಲಿಂಗಗಳ ಕ್ರಮವನ್ನು ಕೇಳಿರಿ. ಓಂಕಾರವೆಂದು ಪ್ರಸಿದ್ಧವಾಗಿರುವ ಪ್ರಣವವೇ ಮೊದಲನೆಯ ಲಿಂಗವು. ಅದು ಸಕಲ ಇಷ್ಟಾರ್ಥಗಳನ್ನುಂಟುಮಾಡುವದು.

೨೮. ಸೂಕ್ಷ್ಮಪ್ರಣವರೂಪವಾದುದು ಸೂಕ್ಷ್ಮಲಿಂಗವು, ಅದು ನಿರಾಕಾರವಾದುದು ; ಸಾಕಾರವಾದುದು ಸ್ಥೂಲಲಿಂಗವು. ಅದು ಪಂಚಾಕ್ಷರಮಂತ್ರವು.

೨೯-೩೦. ಆ ಸೂಕ್ಷ್ಮಲಿಂಗ ಮತ್ತು ಸ್ಥೂಲಲಿಂಗಗಳನ್ನು ಪೂಜಿಸು (ಜಪಿಸು) ವುದೇ ತಪಸ್ಸು. ಅವುಗಳೆರಡೂ ಸಾಕ್ಷಾತ್ತಾಗಿ ಮುಕ್ತಿಯನ್ನುಂಟುಮಾಡುವವು. ಪ್ರಯತ್ನದಿಂದ ನಿರ್ಮಿಸುವಂತಹ ಅನೇಕ ಲಿಂಗಗಳಿರುವವು. ಅವುಗಳನ್ನು ವಿಸ್ತಾರವಾಗಿ ಹೇಳಲು ಶಿವನೊಬ್ಬನೇ ಸಮರ್ಥನು. ಇನ್ನಾರಿಗೂ ಆ ಶಕ್ತಿಯಿಲ್ಲ. ನನಗೆ ತಿಳಿದಮಟ್ಟಿಗೆ ಪ್ರಥಿವೀವಿಕಾರವಾದಂತಹ (ಪಾರ್ಥಿವ) ಕೆಲವು ಲಿಂಗಗಳನ್ನು ನಿಮಗೆ ಹೇಳುವೆನು.

೩೧. ಸ್ವಯಂಭೂಲಿಂಗವು ಮೊದಲನೆಯದು ; ಬಿಂದುಲಿಂಗವು ಎರಡನೆಯದು ; ಪ್ರತಿಷ್ಠಿತ ಮತ್ತು "ಚರ" ಲಿಂಗಗಳು ಮೂರು ಮತ್ತು ನಾಲ್ಕನೆಯ ಲಿಂಗಗಳು ; ಗುರುಲಿಂಗವು ಐದನೆಯದು.

ದೇವರ್ಷಿತಪಸಾ ತುಷ್ಟಃ ಸಾನ್ನಿಧ್ಯಾರ್ಥಂ ತು ತತ್ರ ವೈ ।
ಪೃಥಿವ್ಯಂತರ್ಗತಃ ಶರ್ವೋ ಬೀಜಂ ವೈ ನಾದರೂಪತಃ ॥ ೩೨ ॥

ಸ್ಥಾವರಾಂಕುರವದ್ಭೂಮಿಮುದ್ಭಿದ್ಯ ವ್ಯಕ್ತ ಏವ ಸಃ ।
ಸ್ವಯಂಭೂತಜಾತಮಿತಿ ಸ್ವಯಂಭೂರಿತಿ ತಂ ವಿದುಃ ॥ ೩೩ ॥

ತಲ್ಲಿಂಗಪೂಜಯಾ ಜ್ಞಾನಂ ಸ್ವಯಮೇವ ಪ್ರವರ್ಧತೇ ।
ಸುವರ್ಣರಜತಾದೌ ವಾ ಪೃಥಿವ್ಯಾಂ ಸ್ಥಂಡಿಲೇಽಪಿ ವಾ ॥ ೩೪ ॥

ಸ್ವಹಸ್ತಾಲ್ಲಿಖಿತಂ ಲಿಂಗಂ ಶುದ್ಧಪ್ರಣವಮಂತ್ರಕಂ ।
ಯತ್ರ ಲಿಂಗಂ ಸಮಾಲಿಖ್ಯ ಪ್ರತಿಷ್ಠಾವಾಹನಂ ಚರೇತ್ ॥ ೩೫ ॥

ಬಿಂದುನಾದಮಯಂ ಲಿಂಗಂ ಸ್ಥಾವರಂ ಜಂಗಮಂ ಚ ಯತ್ ।
ಭಾವನಾಮಯಮೇತದ್ಧಿ ಶಿವದೃಷ್ಟಂ ನ ಸಂಶಯಃ ॥ ೩೬ ॥

---

೩೨-೩೩. ದೇವತೆಗಳ ಮತ್ತು ಋಷಿಗಳ ತಪಸ್ಸಿನಿಂದ ಸಂತುಷ್ಟನಾಗಿ ಶಿವನು ಭೂಮಿಯಲ್ಲಿ ಸಾನ್ನಿಧ್ಯವನ್ನು ಕಲ್ಪಿಸಲೋಸುಗ ಪೃಥಿವಿಯಲ್ಲಿ ಅಂತರ್ಗತನಾಗಿ, ಮೊಳಕೆಯು ಬೀಜವನ್ನು ಒಡೆದು ಮೇಲೆ ತಾನಾಗಿ ಬರುವಂತೆ ನಾದರೂಪದಿಂದ ಭೂಮಿಯನ್ನು ಒಡೆದು ತಾನಾಗಿಯೇ ಲಿಂಗರೂಪವಾಗಿ ಉದ್ಭವಿಸಿದರೆ ಆ ಲಿಂಗಕ್ಕೆ ಸ್ವಯಂಭೂಲಿಂಗವೆಂದು ಹೆಸರು. ಆ ಸ್ವಯಂಭೂ (ಉದ್ಭವ) ಲಿಂಗವನ್ನು ಪೂಜಿಸಿದರೆ ಜ್ಞಾನವು ತಾನಾಗಿ ಅಭಿವೃದ್ಧಿಯಾಗುವುದು.

೩೪-೩೫. ಚಿನ್ನ ಮತ್ತು ಬೆಳ್ಳಿ ಮುಂತಾದುವುಗಳಲ್ಲಿ ಮತ್ತು ಭೂಮಿಯಲ್ಲಿ ಸ್ಥಂಡಿಲ (ಮಂಡಲ) ದಲ್ಲಿ ಶುದ್ಧವಾಗಿ ಓಂಕಾರದೊಡನೆ ಲಿಂಗವನ್ನು ಬರೆದು ಅದರ ಮೇಲೆ ಲಿಂಗಪ್ರತಿಷ್ಠೆ ಮತ್ತು ಆವಾಹನಾದಿಗಳನ್ನು ಮಾಡಬೇಕು; ಇದಕ್ಕೆ ಬಿಂದು ಲಿಂಗವೆಂದು ಹೆಸರು.

೩೬. ಚಲಿಸದಿರುವ ಪರ್ವತಾದಿಗಳು ಬಿಂದು ಲಿಂಗಗಳು; ಚಲಿಸುವ ಪ್ರಾಣಿ ಮೊದಲಾದವು ನಾದಲಿಂಗಗಳು. ಈ ಚರಾಚರ ವಸ್ತುಗಳೆಲ್ಲವೂ ಶಿವಸ್ವರೂಪಗಳೆಂದು ಅವುಗಳಲ್ಲಿ ಶಿವಭಾವನೆಯನ್ನು ಮಾಡಬೇಕು.

ಯತ್ರ ವಿಶ್ವಸ್ಯತೇ ಶಂಭುಸ್ತತ್ರ ತಸ್ಮೈ ಫಲಪ್ರದಃ ।
ಸ್ವಹಸ್ತಾಲ್ಲಿಖಿತೇ ಯಂತ್ರೇ ಸ್ಥಾವರಾದಾವಕೃತ್ರಿಮೇ ॥ ೩೭ ॥

ಆವಾಹ್ಯ ಪೂಜಯೇಚ್ಛಂಭುಂ ಷೋಡಶೈರುಪಚಾರಕೈಃ ।
ಸ್ವಯಮೈಶ್ವರ್ಯಮಾಪ್ನೋತಿ ಜ್ಞಾನಮಭ್ಯಾಸತೋ ಭವೇತ್ ॥ ೩೮ ॥

ದೇವೈಶ್ಚ ಋಷಿಭಿಶ್ಚಾಪಿ ಸ್ವಾತ್ಮಸಿದ್ಧ್ಯರ್ಥಮೇವ ಹಿ ।
ಸಮಂತ್ರೇಣಾತ್ಮಹಸ್ತೇನ ಕೃತಂ ಯಚ್ಛುದ್ಧಮಂಡಲೇ ॥ ೩೯ ॥

ಶುದ್ಧಭಾವನಯಾ ಚೈವ ಸ್ಥಾಪಿತಂ ಲಿಂಗಮುತ್ತಮಂ ।
ತಲ್ಲಿಂಗಂ ಪೌರುಷಂ ಪ್ರಾಹುಸ್ತತ್ಪ್ರತಿಷ್ಠಿತಮುಚ್ಯತೇ ॥ ೪೦ ॥

ತಲ್ಲಿಂಗಪೂಜಯಾ ನಿತ್ಯಂ ಪೌರುಷೈಶ್ವರ್ಯಮಾಪ್ನುಯಾತ್ ।
ಮಹದ್ಭಿರ್ಬ್ರಾಹ್ಮಣೈಶ್ಚಾಪಿ ರಾಜಭಿಶ್ಚ ಮಹಾಧನೈಃ ॥ ೪೧ ॥

ಶಿಲ್ಪಿನಾ ಕಲ್ಪಿತಂ ಲಿಂಗಂ ಮಂತ್ರೇಣ ಸ್ಥಾಪಿತಂ ಚ ಯತ್ ।
ಪ್ರತಿಷ್ಠಿತಂ ಪ್ರಾಕೃತಂ ಹಿ ಪ್ರಾಕೃತೈಶ್ವರ್ಯಭೋಗದಂ ॥ ೪೨ ॥

---

೩೭-೩೮. ಶಿವನು ಎಲ್ಲಿ ಹೆಚ್ಚಾದ ಪ್ರೀತಿವುಳ್ಳವನೋ ಆ ಸ್ಥಳದಲ್ಲಿ ಅವನನ್ನು ಪೂಜಿಸಿದರೆ ಸಂಪೂರ್ಣವಾಗಿ ಫಲವನ್ನು ಕೊಡುವನು, ಮತ್ತು ತನ್ನ ಕೈನಿಂದ ಬರೆದಂತಹ ಯಂತ್ರ , ಸ್ಥಿರವಾದ ಲಿಂಗ, ಮುಂತಾದುವುಗಳಲ್ಲಿ ಶಿವನನ್ನು ಆವಾಹನೆ ಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಆದರಿಂದ ತಾನು ಐಶ್ವರ್ಯ ವನ್ನೂ, ಅಭ್ಯಾಸದಿಂದ ಜ್ಞಾನವನ್ನೂ ಪಡೆಯುವನು.

೩೯-೪೦. ದೇವತೆಗಳಾಗಲೀ, ಋಷಿಗಳಾಗಲೀ, ಆತ್ಮಸ್ವರೂಪಸಿದ್ಧಿಗಾಗಿ ಶುದ್ಧವಾದ ಮಂಡಲದಲ್ಲಿ ಶುದ್ಧವಾದ ಭಾವನಾಪೂರ್ವಕವಾಗಿಯೂ ಮತ್ತು ಮಂತ್ರ ಪೂರ್ವಕವಾಗಿಯೂ ಸ್ವಹಸ್ತದಿಂದ ಪ್ರತಿಷ್ಠಿಸಿದ ಲಿಂಗಕ್ಕೆ ಪೌರುಷಲಿಂಗವೆಂದೂ ಪ್ರತಿಷ್ಠಿತಲಿಂಗವೆಂದೂ ಹೆಸರು. ಆ ಲಿಂಗವನ್ನು ನಿತ್ಯವೂ ಪೂಜಿಸಿದರೆ ಈ ಲೋಕದ ಎಲ್ಲಾ ಐಶ್ವರ್ಯಗಳನ್ನೂ ಪಡೆಯುವನು.

೪೧-೪೨. ಮಹಾತ್ಮರುಗಳಿಂದಲೂ, ಬ್ರಾಹ್ಮಣರಿಂದಲೂ, ಐಶ್ವರ್ಯವಂತ ರಾದ ರಾಜರುಗಳಿಂದಲೂ ಸಹ ಶಿಲ್ಪಿಯ ಮೂಲಕ ನಿರ್ಮಿಸಿ ಮಂತ್ರದಿಂದ ಸ್ಥಾಪಿಸ

ಯದೂರ್ಜಿತಂ ಚ ನಿತ್ಯಂ ತದ್ಧಿ ಪೌರುಷಮುಚ್ಯತೇ ।
ಯದ್ದುರ್ಬಲಮನಿತ್ಯಂ ಚ ತದ್ಧಿ ಪ್ರಾಕೃತಮುಚ್ಯತೇ ॥ ೪೩ ॥

ಲಿಂಗಂ ನಾಭಿಸ್ತಥಾ ಜಿಹ್ವಾ ನಾಸಾಗ್ರಂ ಶಿಖಾ ಕ್ರಮಾತ್ ।
ಕಟ್ಯಾದಿಷು ತ್ರಿಲೋಕೇಷು ಲಿಂಗಮಾಧ್ಯಾತ್ಮಿಕಂ ಚರಂ ॥ ೪೪ ॥

ಪರ್ವತಂ ಪೌರುಷಂ ಪ್ರೋಕ್ತಂ ಭೂತಲಂ ಪ್ರಾಕೃತಂ ವಿದುಃ ।
ವೃಕ್ಷಾದಿ ಪೌರುಷಂ ಜ್ಞೇಯಂ ಗುಲ್ಮಾದಿ ಪ್ರಾಕೃತಂ ವಿದುಃ ॥ ೪೫ ॥

ಪೌಷ್ಟಿಕಂ ಪ್ರಾಕೃತಂ ಜ್ಞೇಯಂ ಶಾಲಿಗೋಧೂಮಪೌರುಷಂ ।
ಐಶ್ವರ್ಯಂ ಪೌರುಷಂ ವಿದ್ಯಾದಣಿಮಾದ್ಯಷ್ಟಸಿದ್ಧಿದಂ ॥ ೪೬ ॥

---

ಲ್ಪಟ್ಟ ಲಿಂಗವು ಪ್ರಾಕೃತಲಿಂಗವು. ಅದು ಪ್ರಕೃತಿಯ ಸಂಬಂಧವಾದ ಅಂದರೆ ಭೂಲೋಕದಲ್ಲಿನ ಐಶ್ವರ್ಯಸುಖವನ್ನುಂಟುಮಾಡುವದು.

೪೩. ಅತ್ಯುತ್ಕೃಷ್ಟವೂ, ಬಹಳ ಕಾಲವಿರವಂತಹದೂ ಆದಂತಹ ಲಿಂಗವು ಪೌರುಷಲಿಂಗವು; ಅತಿ ದುರ್ಬಲವೂ, ಹೆಚ್ಚು ಕಾಲವಿಲ್ಲದಿರುವಂತಹುದೂ ಆದ ಲಿಂಗವು ಪ್ರಾಕೃತವು.

೪೪. ಶರೀರದಲ್ಲಿ ನಾಭಿ, ಜಿಹ್ವಾ (ನಾಲಿಗೆ) ಮೂಗಿನ ಕೊನೆ, ಶಿಖೆ, ಕಟಿ, (ಸೊಂಟ) ಮುಖ, ಲಲಾಟಸ್ಥಾನ, ಶಿರಸ್ಸು ಇವುಗಳೆಲ್ಲವೂ ಆಧ್ಯಾತ್ಮಿಕವಾದ ಚರ ಲಿಂಗಗಳು.

೪೫. ಪರ್ವತವು ಪೌರುಷಲಿಂಗವು; ಭೂಮಿಯು ಪ್ರಾಕೃತಲಿಂಗವು; ಮರ ಮುಂತಾದುವುಗಳು ಪೌರುಷಲಿಂಗವು; ಲತಾಸಮೂಹ ಮುಂತಾದುವುಗಳು ಪ್ರಾಕೃತಲಿಂಗವು.

೪೬. ಅಕ್ಕಿಹಿಟ್ಟು ಮುಂತಾದವುಗಳಿಂದ ಮಾಡಿದ ಲಿಂಗವು ಪ್ರಾಕೃತಲಿಂಗವು; ನವಣೆ ಗೋಧಿಗಳಿಂದ ಮಾಡಿದ ಲಿಂಗವು ಪೌರುಷಲಿಂಗವು; ಈ ಪೌರುಷಲಿಂಗವು "ಅಣಿಮ" ಮುಂತಾದ ಎಂಟು ಐಶ್ವರ್ಯಗಳನ್ನುಂಟುಮಾಡುವುದು ಮತ್ತು ಪ್ರಾಕೃತಲಿಂಗವು ಒಳ್ಳೆಯ ಸ್ತ್ರೀ ಮತ್ತು ಧನ ಮುಂತಾದುವುಗಳನ್ನು ಉಂಟುಮಾಡುವುದು, ಎಂದು ಹಿಂದಿನವರು ಹೇಳಿರುವರು.

ಸುಸ್ತ್ರೀಧನಾದಿವಿಷಯಂ ಪ್ರಾಕೃತಂ ಪ್ರಾಹುರಾಸ್ತಿಕಾಃ ।
ಪ್ರಥಮಂ ಚರಲಿಂಗೇಷು ರಸಲಿಂಗಂ ಪ್ರಕಥ್ಯತೇ ॥ ೪೭ ॥

ರಸಲಿಂಗಂ ಬ್ರಾಹ್ಮಣಾನಾಂ ಸರ್ವಾಭೀಷ್ಟಪ್ರದಂ ಭವೇತ್ ।
ಬಾಣಲಿಂಗಂ ಕ್ಷತ್ರಿಯಾಣಾಂ ಮಹಾರಾಜ್ಯಪ್ರದಂ ಶುಭಂ ॥ ೪೮ ॥

ಸ್ವರ್ಣಲಿಂಗಂ ತು ವೈಶ್ಯಾನಾಂ ಮಹಾಧನಪತಿತ್ವದಂ ।
ಶಿಲಾಲಿಂಗಂ ತು ಶೂದ್ರಾಣಾಂ ಮಹಾಶುದ್ಧಿಕರಂ ಪರಂ ॥ ೪೯ ॥

ಸ್ಫಾಟಿಕಂ ಬಾಣಲಿಂಗಂ ಚ ಸರ್ವೇಷಾಂ ಸರ್ವಕಾಮದಂ ।
ಸ್ವೀಯಾಭಾವೇಽನ್ಯದೀಯಂ ಪೂಜಾಯಾಂ ನ ನಿಷಿಧ್ಯತೇ ॥ ೫೦ ॥

ಸ್ತ್ರೀಣಾಂ ತು ಪಾರ್ಥಿವಂ ಲಿಂಗಂ ಸಭರ್ತ್ರೂಣಾಂ ವಿಶೇಷತಃ ।
ವಿಧವಾನಾಂ ಪ್ರವೃತ್ತಾನಾಂ ಸ್ಫಾಟಿಕಂ ಪರಿಕೀರ್ತಿತಂ ॥ ೫೧ ॥

---

೪೭. ಚರಲಿಂಗಗಳಲ್ಲಿ ರಸಲಿಂಗವು ಮೊದಲನೆಯದು ಮತ್ತು ಪ್ರಶಸ್ತವಾದುದು. ಈ ರಸಲಿಂಗವು ಬ್ರಾಹ್ಮಣರಿಗೆ ವಿಹಿತವಾದುದು. ಸಕಲ ಇಷ್ಟಾರ್ಥಗಳನ್ನು ಉಂಟುಮಾಡುವದು.

೪೮. ಬಾಣರೂಪವಾಗಿರುವ ಲಿಂಗವು ಕ್ಷತ್ರಿಯರಿಗೆ ವಿಹಿತವು. ಅದು ಮಹಾರಾಜ್ಯವನ್ನುಂಟುಮಾಡುವದು. ಚಿನ್ನದಿಂದ ನಿರ್ಮಿಸಿದ ಲಿಂಗವು ವೈಶ್ಯರಿಗೆ ವಿಹಿತವು. ಅದು ಹೆಚ್ಚಾದ ಐಶ್ವರ್ಯವನ್ನುಂಟುಮಾಡುವದು.

೪೯-೫೦. ಶಿಲೆಯಲಿಂಗವು ಶೂದ್ರರಿಗೆ ಮಹತ್ತಾದ ಶುದ್ಧಿಯನ್ನುಂಟುಮಾಡುವುದು. ಮತ್ತು ಶುಭವಾದುದು ತನ್ನಲ್ಲಿ ಲಿಂಗವಿಲ್ಲದಿದ್ದರೆ ಇನ್ನೊಬ್ಬರ ಲಿಂಗವನ್ನಾದರೂ ಪೂಜಿಸಬಹುದು. ಅದು ನಿಷೇಧವಲ್ಲ. ಸ್ಫಟಿಕಮಯವಾದ ಬಾಣಲಿಂಗವು ಎಲ್ಲರಿಗೂ ಶುಭವಾದುದು, ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡುವದು.

೫೧. ಸುಮಂಗಲಿಯರಾದ ಸ್ತ್ರೀಯರಿಗೆ ಪಾರ್ಥಿವ (ಪೃಥಿವೀ ಸಂಬಂಧವಾದ ಶಿಲಾ ಮುಂತಾದುದರ) ಲಿಂಗವು ಶುಭವಾದುದು. ವಿರಕ್ತರಲ್ಲದ ವಿಧವೆಯರಿಗೆ ಸ್ಫಟಿಕ ನಿರ್ಮಿತವಾದ ಲಿಂಗವು ಶುಭವಾದುದು.

ವಿಧವಾನಾಂ ನಿವೃತ್ತಾನಾಂ ರಸಲಿಂಗಂ ವಿಶಿಷ್ಯತೇ ।
ಬಾಲ್ಯೇ ವಾ ಯೌವನೇ ವಾಪಿ ವಾರ್ಧಕೇ ವಾಪಿ ಸುವ್ರತಾಃ ॥ ೫೨ ॥

ಶುದ್ಧಸ್ಫಾಟಿಕಲಿಂಗಂ ತು ಸ್ತ್ರೀಣಾಂ ತತ್ಸರ್ವಭೋಗದಂ।
ಪ್ರವೃತ್ತಾನಾಂ ಪೀಠಪೂಜಾ ಸರ್ವಾಭೀಷ್ಟಪ್ರದಾ ಭುವಿ ॥ ೫೩ ॥

ಪಾತ್ರೇಣೈವ ಪ್ರವೃತ್ತಸ್ತು ಸರ್ವಪೂಜಾಂ ಸಮಾಚರೇತ್ ।
ಅಭಿಷೇಕಾಂತೇ ಚ ನೈವೇದ್ಯಂ ಶಾಲ್ಯನ್ನೇನ ಸಮಾಚರೇತ್ ॥ ೫೪ ॥

ಪೂಜಾಂತೇ ಸ್ಥಾಪಯೇಲ್ಲಿಂಗಂ ಸಂಪುಟೇಷು ಪೃಥಗ್ಗೃಹೇ ।
ಕರಪೂಜಾನಿವೃತ್ತಾನಾಂ ಸ್ವಭೋಜ್ಯಂ ತು ನಿವೇದಯೇತ್ ॥ ೫೫ ॥

ನಿವೃತ್ತಾನಾಂ ಪರಂ ಸೂಕ್ಷ್ಮಂ ಲಿಂಗಮೇವ ವಿಶಿಷ್ಯತೇ ।
ವಿಭೂತ್ಯಭ್ಯರ್ಚನಂ ಕುರ್ಯಾದ್ವಿಭೂತಿಂ ಚ ನಿವೇದಯೇತ್ ॥ ೫೬ ॥

---

೫೨-೫೩. ವಿರಕ್ತರಾದ ವಿಧವೆಯರಿಗೆ ರಸಲಿಂಗವು ಶುಭವಾದುದು. ಬಾಲ್ಯದಲ್ಲಿಯಾಗಲಿ ಯೌವನದಲ್ಲಾಗಲಿ ಮತ್ತು ಮುಪ್ಪಿನಲ್ಲಾಗಲಿ ಸ್ತ್ರೀಯರು ಶಿವಲಿಂಗವನ್ನು ಪೂಜಿಸಬೇಕು. ಶುದ್ಧವಾದ ಸ್ಫಟಿಕದ ಲಿಂಗವು ಸ್ತ್ರೀಯರಿಗೆ ಸಕಲ ಇಷ್ಟಾರ್ಥಗಳನ್ನುಂಟುಮಾಡುವದು. ವಿರಕ್ತರಲ್ಲದ ಸ್ತ್ರೀಯರಿಗೆ ಪೀಠಪೂಜೆಯು ವಿಹಿತವಾದುದು. ಮತ್ತು ಸಕಲ ಇಷ್ಟಾರ್ಥಗಳನ್ನುಂಟುಮಾಡುವದು.

೫೪. ಗೃಹಸ್ಥನು ಪಾತ್ರೆಗಳಿಂದಲೇ ಪೂಜೆಯನ್ನು ಮಾಡಬೇಕು, ಅಭಿಷೇಕದ ನಂತರ ಶಾಲ್ಯನ್ನವನ್ನು ನೈವೇದ್ಯಮಾಡಬೇಕು.

೫೫. ಪೂಜೆಯ ಕೊನೆಯಲ್ಲಿ ಲಿಂಗವನ್ನು ಮನೆಯಲ್ಲಿ ಬೇರೆಯಾಗಿ ಸಂಪುಟಗಳಲ್ಲಿ ಸ್ಥಾಪಿಸಬೇಕು. ವಿರಕ್ತರಾದ ಸನ್ಯಾಸಿಗಳು ಕರ (ಕೈ) ಗಳಿಂದಲೇ ಪೂಜಿಸಬೇಕು, ತಾವು ತಿನ್ನುವ ಆಹಾರವನ್ನು ದೇವನಿಗೆ ನಿವೇದಿಸಬೇಕು.

೫೬. ಸನ್ಯಾಸಿಗಳಿಗೆ ಸೂಕ್ಷ್ಮಲಿಂಗವೇ ಶುಭವಾದುದು. ವಿಭೂತಿಯಿಂದಲೂ ಅರ್ಚಿಸಬಹುದು, ಆ ವಿಭೂತಿಯನ್ನು ನಿವೇದಿಸಿ, ಪೂಜೆಯಾದ ನಂತರ ಆ ಲಿಂಗವನ್ನು ಶಿರಸ್ಸಿನಲ್ಲಿ ಧರಿಸಬೇಕು.

ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ಸದಾ ।
ವಿಭೂತಿಸ್ತ್ರಿವಿಧಾ ಪ್ರೋಕ್ತಾ ಲೋಕವೇದಶಿವಾಗ್ನಿಭಿಃ ॥ ೫೭ ॥

ಲೋಕಾಗ್ನಿಜಮಥೋ ಭಸ್ಮ ದ್ರವ್ಯಶುದ್ಧ್ಯರ್ಥಮಾವಹೇತ್ ।
ಮೃದ್ದಾರುಲೋಹರೂಪಾಣಾಂ ಧಾನ್ಯಾನಾಂ ಚ ತಥೈವ ಚ ॥ ೫೮ ॥

ತಿಲಾದೀನಾಂ ಚ ದ್ರವ್ಯಾಣಾಂ ವಸ್ತ್ರಾದೀನಾಂ ತಥೈವ ಚ ।
ತಥಾ ಪರ್ಯುಷಿತಾನಾಂ ಚ ಭಸ್ಮನಾ ಶುದ್ಧಿರಿಷ್ಯತೇ ॥ ೫೯ ॥

ಶ್ವಾದಿಭಿರ್ದೂಷಿತಾನಾಂ ಚ ಭಸ್ಮನಾ ಶುದ್ಧಿರಿಷ್ಯತೇ ।
ಸಜಲಂ ನಿರ್ಜಲಂ ಭಸ್ಮ ಯಥಾಯೋಗ್ಯಂ ತು ಯೋಜಯೇತ್ ॥ ೬೦ ॥

ವೇದಾಗ್ನಿಜಂ ತಥಾ ಭಸ್ಮ ತತ್ಕರ್ಮಾಂತೇಷು ಧಾರಯೇತ್ ।
ಮಂತ್ರೇಣ ಕ್ರಿಯಯಾ ಜನ್ಯಂ ಕರ್ಮಾಗ್ನೌ ಭಸ್ಮರೂಪಧೃಕ್ ॥ ೬೧ ॥

---

೫೭. ಲೋಕಾಗ್ನಿ, ವೇದಾಗ್ನಿ, ಶಿವಾಗ್ನಿಗಳೆಂದು ವಿಭೂತಿಯು ಮೂರು ವಿಧವಾಗಿರುವದು. ಲೋಕಾಗ್ನಿ (ಲೋಕದಲ್ಲಿರುವ ಸಾಮಾನ್ಯವಾದ ಬೆಂಕಿ) ಯಿಂದ ಆದಂತಹ ವಿಭೂತಿಯನ್ನು ದ್ರವ್ಯಶುದ್ಧಿಗಾಗಿ ಸ್ವೀಕರಿಸಬೇಕು.

೫೮-೫೯. ಮಣ್ಣು, ಲೋಹ, ಮರ, ಇವುಗಳಿಂದ ಮಾಡಿದ ಪಾತ್ರೆಗಳು. ತಿಲ ಮುಂತಾದ ಧಾನ್ಯಗಳು, ವಸ್ತ್ರ ಮುಂತಾದ ದ್ರವ್ಯಗಳು, ತಂಗಳು ಪದಾರ್ಥಗಳು (ನಿರ್ಮಾಲ್ಯಗಳು) ಇವುಗಳೆಲ್ಲವೂ ಭಸ್ಮದಿಂದ ಶುದ್ಧಿಯಾಗುವವು. ನಾಯಿ ಮುಂತಾದುವುಗಳ ಸ್ಪರ್ಶದಿಂದ ಅಪವಿತ್ರವಾದ ವಸ್ತುಗಳೂ ಸಹ ಭಸ್ಮದಿಂದ ಶುದ್ಧಿಯನ್ನು ಹೊಂದುವವು.

೬೦. ನೀರಿನಿಂದ ಕಲಸಿಯಾಗಲೀ ಕಲಸದೆಯಾಗಲೀ ಭಸ್ಮವನ್ನು ಯೋಗ್ಯವಾಗಿ ಧರಿಸಬಹುದು. ಯಾಗ ಮುಂತಾದ ವೈದಿಕಕರ್ಮಗಳಲ್ಲಿನ ಅಗ್ನಿಯಿಂದಾದ ಭಸ್ಮವನ್ನು ಆ ಕರ್ಮಗಳು ಮುಗಿದನಂತರ ಧರಿಸಬೇಕು.

೬೧. ಹೋಮಾದಿಕರ್ಮಗಳಲ್ಲಿ ಅಗ್ನಿಯಿಂದ ಆಗುವ ಭಸ್ಮವು ವೇದಾಗ್ನಿಜ ಭಸ್ಮವೆನಿಸುದು. ಆ ಭಸ್ಮವನ್ನು ಧರಿಸಿದರೆ ನಾವು ಮಾಡಿದ ವೈದಿಕಕರ್ಮವು ನಮ್ಮಲ್ಲಿ ಆರೋಪಿಸಲ್ಪಡುವದು.

ತದ್ಭಸ್ಮಧಾರಣಾತ್ಕರ್ಮ ಸ್ವಾತ್ಮನ್ಯಾರೋಪಿತಂ ಭವೇತ್ ।
ಅಘೋರೇಣಾತ್ಮಮಂತ್ರೇಣ ಬಿಲ್ವಕಾಷ್ಠಂ ಪ್ರದಾಹಯೇತ್ ॥ ೬೨ ॥

ಶಿವಾಗ್ನಿರಿತಿಸಂಪ್ರೋಕ್ತಸ್ತೇನ ದಗ್ಧಂ ಶಿವಾಗ್ನಿಜಂ ।
ಕಪಿಲಾಗೋಮಯಂ ಪೂರ್ವಂ ಕೇವಲಂ ಗವ್ಯಮೇವ ವಾ ॥ ೬೩ ॥

ಶಮ್ಯಶ್ವತ್ಥಪಲಾಶಾ ವಾ ವಟಾರಗ್ವಧಬಿಲ್ವಕಾ ।
ಶಿವಾಗ್ನಿನಾ ದಹೇಚ್ಛುದ್ಧಂ ತದ್ವೈ ಭಸ್ಮ ಶಿವಾಗ್ನಿಜಂ ॥ ೬೪ ॥

ದರ್ಭಾಗ್ನೌ ವಾ ದಹೇತ್ಕಾಷ್ಠಂ ಶಿವಮಂತ್ರಂ ಸಮುಚ್ಚರನ್ ।
ಸಮ್ಯಕ್ಸಂಶೋಧ್ಯ ವಸ್ತ್ರೇಣ ನವಕುಂಭೇ ನಿಧಾಪಯೇತ್ ॥ ೬೫ ॥

ದೀಪ್ತ್ಯರ್ಥಂ ತತ್ತು ಸಂಗ್ರಾಹ್ಯಂ ಮನ್ಯತೇ ಪೂಜ್ಯತೇಽಪಿ ಚ ।
ಭಸ್ಮಶಬ್ದಾರ್ಥ ಏವಂ ಹಿ ಶಿವಃ ಪೂರ್ವಂ ತಥಾಕರೋತ್ ॥ ೬೬ ॥

---

೬೨. ಈಗ ಭಸ್ಮಮಾಡುವ ವಿಧಾನವನ್ನು ಹೇಳುವೆನು :-"ಅಘೋರೇಭ್ಯೋ" ಎಂಬ ಶಿವಮಂತ್ರದಿಂದ ಬಿಲ್ವವೃಕ್ಷದ ಕಾಷ್ಠವನ್ನು ಸುಡಬೇಕು. ಆ ಅಗ್ನಿಗೆ ಶಿವಾಗ್ನಿಯೆಂದು ಹೆಸರು. ಅದರಿಂದಾದ ಭಸ್ಮವು ಶಿವಾಗ್ನಿಜಭಸ್ಮವೆನಿಸುವದು.

೬೩-೬೪. ಕಪಿಲವರ್ಣದ ಹಸುವಿನ ಸಗಣಿ ಅಥವಾ ಯಾವುದಾದರೂ ಹಸುವಿನ ಸಗಣಿ, ಶಮಿ ಅಶ್ವತ್ಥ, ಮುತ್ತುಗ, ಆಲ, ಆರಗ್ವಧ ಬಿಲ್ವ ಇವುಗಳ ಕಾಷ್ಠವನ್ನು ಶಿವಾಗ್ನಿಯಿಂದ ಸುಡಬೇಕು. ಅದರಿಂದಾದ ಭಸ್ಮಕ್ಕೆ ಶಿವಾಗ್ನಿಜಭಸ್ಮವೆಂದು ಹೆಸರು.

೬೫. ದರ್ಭೆಯಿಂದ ಹೊತ್ತಿಸಿದ ಅಗ್ನಿಯಲ್ಲಿ ಹಿಂದೆ ಹೇಳಿದಂತ ಸೌದೆಗಳನ್ನು ಶಿವಮಂತ್ರವನ್ನುಚ್ಚರಿಸಿ ಸುಟ್ಟು ಭಸ್ಮವನ್ನು ಮಾಡಬೇಕು. ಚನ್ನಾಗಿ ಬಟ್ಟೆಯಿಂದ ಶೋಧಿಸಿ ಹೊಸ ಮಡಕೆಯಲ್ಲಿರಿಸಬೇಕು.

೬೬. ಭಸ್ಮವೆಂದರೆ ದೀಪ್ತಿ (ಪ್ರಕಾಶವ) ನ್ನುಂಟುಮಾಡುವದು, ಜ್ಞಾನವನ್ನುಂಟುಮಾಡುವದು, ತುಂಬಾ ಪವಿತ್ರವಾದುದರಿಂದ ಪೂಜಿಸಲರ್ಹವಾದುದು, ಎಂದು ಭಸ್ಮಶಬ್ದಕ್ಕೆ ಅರ್ಥವನ್ನು ಹಿಂದೆಯೇ ಈಶ್ವರನು ಕಲ್ಪಿಸಿರುವನು.

ಯಥಾ ಸ್ವವಿಷಯೇ ರಾಜಾ ಸಾರಂ ಗೃಹ್ಣಾತಿ ಯತ್ಕರಂ ।
ಯಥಾ ಮನುಷ್ಯಾಃ ಸಸ್ಯಾದೀ಼ ದಗ್ಧ್ವಾ ಸಾರಂ ಭಜಂತಿ ವೈ ॥ ೬೭ ॥

ಯಥಾ ಹಿ ಜಾಠರಾಗ್ನಿಶ್ಚ ಭಕ್ಷ್ಯಾದೀ಼ ವಿವಿಧಾ಼ ಬಹೂ಼ ।
ದಗ್ಧ್ವಾ ಸಾರತರಂ ಸಾರಾತ್ಸ್ವದೇಹಂ ಪರಿಪುಷ್ಯತಿ ॥ ೬೮ ॥

ತಥಾ ಪ್ರಪಂಚಕರ್ತಾ಼ಽಪಿ ಸ ಶಿವಃ ಪರಮೇಶ್ವರಃ ।
ಸ್ವಾಧಿಷ್ಠೇಯಪ್ರಪಂಚಸ್ಯ ದಗ್ಧ್ವಾ ಸಾರಂ ಗೃಹೀತವಾ಼ ॥ ೬೯ ॥

ದಗ್ಧ್ವಾ ಪ್ರಪಂಚಂ ತದ್ಭಸ್ಮ ಸ್ವಾತ್ಮನ್ಯಾರೋಪಯಚ್ಛಿವಃ ।
ಉದ್ಧೂಲನಸ್ಯ ವ್ಯಾಜೇನ ಜಗತ್ಸಾರಂ ಗೃಹೀತವಾ಼ ॥ ೭೦ ॥

ಸ್ವರತ್ನಂ ಸ್ಥಾಪಯಾಮಾಸ ಸ್ವಕೀಯೇ ಹಿ ಶರೀರಕೇ ।
ಕೇಶಮಾಕಾಶಸಾರೇಣ ವಾಯುಸಾರೇಣ ವೈ ಮುಖಂ ॥ ೭೧ ॥

---

೬೭-೬೯. ಲೋಕದಲ್ಲಿ ರಾಜನು ತನ್ನ ದೇಶದಲ್ಲಿ (ಪ್ರಜೆಗಳಿಂದ) ಸಾರವಾದ ಕಂದಾಯವನ್ನು ತೆಗೆದುಕೊಳ್ಳುವನು. ಮತ್ತು ಮನುಷ್ಯರು ಸಸ್ಯ ಕಬ್ಬು ಮುಂತಾದುವುಗಳನ್ನು ಸುಟ್ಟು ಅದರ ಸಾರವನ್ನು ತೆಗೆದುಕೊಳ್ಳುವರು. ಜಾಠರಾಗ್ನಿಯು ಅಂದರೆ ಹೊಟ್ಟೆಯಲ್ಲಿರುವ ಅಗ್ನಿಯು ಅನೇಕ ಬಗೆಯ ಭಕ್ಷ್ಯಗಳನ್ನು ಪಚನಮಾಡಿ ಅವುಗಳಲ್ಲಿನ ಸಾರದಲ್ಲಿಯೂ ಸಾರತರವಾದುದನ್ನು ತೆಗೆದುಕೊಂಡು ದೇಹವನ್ನು ಪೋಷಿಸುವುದು ಅದರಂತೆ ಪ್ರಪಂಚಕರ್ತೃವಾದ ಆ ಪರಮೇಶ್ವರನೂ ಸಹ ಪ್ರಳಯ ಕಾಲದಲ್ಲಿ ತನ್ನಲ್ಲಿರುವ ಪ್ರಪಂಚವನ್ನು ಸುಟ್ಟು ಅದರಲ್ಲಿನ ಸಾರವನ್ನು ಸ್ವೀಕರಿಸುವನು.

೭೦. ಹೀಗೆ ಜಗತ್ತನ್ನು ಸುಟ್ಟು ಅದರ ಭಸ್ಮವನ್ನು ತನ್ನಲ್ಲಿ ಆರೋಪಿಸಿಕೊಂಡನು. ಮತ್ತು ಆ ಭಸ್ಮವನ್ನು ಲೇಪಿಸಿಕೊಳ್ಳುವ ನೆವದಿಂದ ಜಗತ್ತಿನ ಸಾರವೆಲ್ಲವನ್ನೂ ತೆಗೆದುಕೊಂಡನು.

೭೧-೭೬. ಹೀಗೆ ತನ್ನ ಸಾರವನ್ನು ಸ್ವೀಕರಿಸುವ ಮೂಲಕ ತನ್ನ ರತ್ನವನ್ನೆಲ್ಲಾ ತನ್ನ ಶರೀರದಲ್ಲಿಯೇ ಸ್ಥಾಪಿಸಿಕೊಂಡನು. ಆಕಾಶದ ಸಾರದಿಂದ ಅವನ ಕೇಶವು ಆಯಿತು. ವಾಯುವಿನ ಸಾರದಿಂದ ಮುಖವಾಯಿತು. ಹೃದಯವು ಅಗ್ನಿಯ ಸಾರದಿಂದ ಆದುದು. ಜಲಸಾರದಿಂದ ಕಟಿ (ಸೊಂಟ) ಯು ಆಯಿತು. ಮೊಳಕಾಲು

ಹೃದಯಂ ಚಾಗ್ನಿಸಾರೇಣ ತ್ರಪಾಂ ಸಾರೇಣ ವೈ ಕಟಿಂ
ಜಾನು ಚಾವನಿಸಾರೇಣ ತದ್ವತ್ಸರ್ವಂ ತದಂಗಕಂ ॥ ೭೨ ॥

ಬ್ರಹ್ಮವಿಷ್ಣ್ವೋರ್ಶ್ಚ ರುದ್ರಾಣಾಂ ಸಾರಂ ಚೈವ ತ್ರಿಪುಂಡ್ರಕಂ ।
ತಥಾ ತಿಲಕರೂಪೇಣ ಲಲಾಟಾಂತೇ ಮಹೇಶ್ವರಃ ॥ ೭೩ ॥

ಭವೃದ್ಧ್ಯಾ ಸರ್ವಮೇತದ್ಧಿ ಮನ್ಯತೇ ಸ್ವಯಮಿತ್ಯಸೌ ।
ಪ್ರಪಂಚಸಾರಸರ್ವಸ್ವಮನೇನೈವ ವಶೀಕೃತಂ ॥ ೭೪ ॥

ತಸ್ಮಾದಸ್ಯ ವಶೀಕರ್ತಾ ನಾಸ್ತೀತಿ ಸ ಶಿವಃ ಸ್ಮೃತಃ ।
ಯಥಾ ಸರ್ವಮೃಗಾಣಾಂ ಚ ಹಿಂಸಕೋ ಮೃಗಹಿಂಸಕಃ ॥ ೭೫ ॥

ಅಸ್ಯ ಹಿಂಸಾಮೃಗೋ ನಾಸ್ತಿ ತಸ್ಮಾತ್ಸಿಂಹ ಇತೀರಿತಃ ।
ಶಂ ನಿತ್ಯಂ ಸುಖಮಾನಂದಮಿಕಾರಃ ಪುರುಷಃ ಸ್ಮೃತಃ ॥ ೭೬ ॥

---

ಭೂಮಿಯ ಸಾರಸ್ವರೂಪವಾದುದು. ಹೀಗೆಯೇ ಆಯಾಯ ಸಾರಗಳಿಂದ ಅವನ ಎಲ್ಲಾ ಅವಯವಗಳೂ ಆದುವು.

೭೩. ಬ್ರಹ್ಮ ವಿಷ್ಣು ಮತ್ತು ರುದ್ರರ ಸಾರವೇ ತ್ರಿಪುಂಡ್ರವು. ಎಂದರೆ ಹಣೆಯಲ್ಲಿನ ಮೂರು ಭಸ್ಮದ ಪಟ್ಟಿಗಳು. ತಿಲಕದ ರೂಪದಿಂದ ಲಲಾಟಮಧ್ಯದಲ್ಲಿ ಮಹೇಶ್ವರನಿರುವನು. ಎಂದರೆ ಮಹೇಶ್ವರನ ಸಾರದಿಂದ ಲಲಾಟವು ಆದುದು. (ಇದೇ ವಿರಾಟ್ ಸ್ವರೂಪವು.)

೭೪. ಆ ಭಸ್ಮವನ್ನು ಧರಿಸಿರುವದರಿಂದ ಶಿವನು ಪ್ರಕಾಶಾತಿಶಯದಿಂದ ಸಕಲವನ್ನೂ ತಿಳಿಯುವನು, ಸರ್ವಜ್ಞನು. ಪ್ರಪಂಚದ ಸಾರವೆಲ್ಲವನ್ನೂ ತನ್ನ ವಶವಾಗಿ ಮಾಡಿಕೊಂಡಿರುವರು.

೭೫. ಈ ಶಿವನನ್ನು ವಶೀಕರಣಮಾಡಿಕೊಳ್ಳುವವರು ಯಾರೂ ಇಲ್ಲ. ಆದುದರಿಂದಲೇ ಅವನಿಗೆ ಶಿವ (ವಶೀ) ನೆಂದು ಹೆಸರು. ಅದು ಹೇಗೆಂದರೆ? ಸಿಂಹವು ಮಿಕ್ಕ ಮೃಗಗನ್ನೆಲ್ಲಾ ಹಿಂಸಿಸುವದು. ಆದರೆ ಸಿಂಹವನ್ನು ಹಿಂಸಿಸುವ ಮೃಗವಿಲ್ಲ. ಆದುದರಿಂದ ಅದಕ್ಕೆ ಸಿಂಹವೆಂದು ಹೆಸರು. ಆದರಂತೆ ಶಿವನನ್ನು ವಶವಾಗಿರಿಸುವವರು ಯಾರೂ ಇಲ್ಲದಿಂದ ಅವನು ಶಿವನು (ವಶಿ) ಎಂದೆನಿಸುವನು.

೭೬-೭೭. ಶಿವಶಬ್ದ ಅರ್ಥವು—"ಶ" ಎಂದರೆ ಸುಖವೂ, ಆನಂದವೂ ಎಂದು ಅರ್ಥವು. "ಇ" ಎಂದರೆ ಪುರುಷ ಎಂದರ್ಥವು. ವಕಾರಕ್ಕೆ ಶಕ್ತಿಯು ಅರ್ಥವು.

ವಕಾರಃ ಶಕ್ತಿರಮೃತಂ ಮೇಲನಂ ಶಿವ ಉಚ್ಯತೇ ।
ತಸ್ಮಾದೇವಂ ಸ್ವಮಾತ್ಮಾನಂ ಶಿವಂ ಕೃತ್ವಾರ್ಚಯೇಚ್ಛಿವಂ ॥ ೭೭ ॥

ತಸ್ಮಾದುದ್ಧೂಲನಂ ಪೂರ್ವಂ ತ್ರಿಪುಂಡ್ರಂ ಧಾರಯೇತ್ಪರಂ ।
ಪೂಜಾಕಾಲೇ ತು ಸಜಲಂ ಶುದ್ಧ್ಯರ್ಥಂ ನಿರ್ಜಲಂ ಭವೇತ್ ॥ ೭೮ ॥

ದಿವಾ ವಾ ಯದಿ ವಾ ರಾತ್ರೌ ನಾರೀ ವಾಥ ನರೋಽಪಿ ವಾ ।
ಪೂಜಾರ್ಥಂ ಸಜಲಂ ಭಸ್ಮ ತ್ರಿಪುಂಡ್ರೇಣೈವ ಧಾರಯೇತ್ ॥ ೭೯ ॥

ತ್ರಿಪುಂಡ್ರಂ ಸಜಲಂ ಭಸ್ಮ ಧೃತ್ವಾ ಪೂಜಾಂ ಕರೋತಿ ಯಃ ।
ಶಿವಪೂಜಾಫಲಂ ಸಾಂಗಂ ತಸ್ಯೈವ ಹಿ ಸುನಿಶ್ಚಿತಂ ॥ ೮೦ ॥

ಭಸ್ಮ ವೈ ಶಿವಮಂತ್ರೇಣ ಧೃತ್ವಾ ಹ್ಯತ್ಯಾಶ್ರಮೀ ಭವೇತ್ ।
ಶಿವಾಶ್ರಮೀತಿ ಸಂಪ್ರೋಕ್ತಃ ಶಿವೈಕಪರಮೋ ಯತಃ ॥ ೮೧ ॥

---

ಅಕಾರಕ್ಕೆ ಅಮೃತವು ಅರ್ಥವು. ಎಂದರೆ ಶಿವಶಬ್ದವು ಆನಂದರೂಪ ಮತ್ತು ಸುಖ ಸ್ವರೂಪವಾದ ಪುರುಷ (ಪರಮಾತ್ಮ), ನಿತ್ಯವಾದ ಶಕ್ತಿ ಇವರೀರ್ವರ ಮೇಲನವನ್ನು ಬೋಧಿಸುವದು. ಶಿವನೂ ಶಕ್ತಿಯೂ ಶಿವಶಬ್ದಕ್ಕೆ ಅರ್ಥವು. ಆದುದರಿಂದ ತಾನೂ ಆ ಶಿವಸ್ವರೂಪನೆಂದು (ಸೋಹಂಭಾವೇನ) ಭಾವಿಸಿ ಶಿವನನ್ನು ಪೂಜಿಸಬೇಕು.

೭೮. ಆದುದರಿಂದ ಮೊದಲು ಭಸ್ಮವನ್ನು ಸುಮ್ಮನೆ ಮೇಲೆ ಲೇಪಿಸಬೇಕು. ಆಮೇಲೆ ಮೂರು ಪುಂಡ್ರ (ಪಟ್ಟೆ) ಗಳನ್ನಿಡಬೇಕು, ಪೂಜೆಯ ಕಾಲದಲ್ಲಿ ನೀರಿನಿಂದ ಕಲಸಿ ಹಚ್ಚಬೇಕು. ಮಿಕ್ಕಕಾಲದಲ್ಲಿ ಶುದ್ಧಿಗಾಗಿ ಹಾಗೆಯೇ ಹಚ್ಚಬೇಕು.

೭೯. ಹಗಲಲ್ಲಿಯಾಗಲಿ ರಾತ್ರಿಯಾಗಲಿ ಸ್ತ್ರೀಪುರುಷರು ಪೂಜೆಯ ಕಾಲದಲ್ಲಿ ನೀರಿನಿಂದ ಭಸ್ಮವನ್ನು ಕಲಿಸಿ ಮೂರು ಪುಂಡ್ರಗಳಾಗಿಯೇ ಹಚ್ಚಿಕೊಳ್ಳಬೇಕು.

೮೦. ಭಸ್ಮವನ್ನು ನೀರಿನಿಂದ ಕಲಿಸಿ ಹಣೆ ಮುಂತಾದುವುಗಳಲ್ಲಿ ಮೂರು ಪಟ್ಟೆಗಳನ್ನು ಹಚ್ಚಿಕೊಂಡು ಪೂಜೆಮಾಡಿದರೆ ಶಿವಪೂಜೆಯ ಫಲವು ಸಂಪೂರ್ಣವಾಗಿ ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

೮೧. ಶಿವಪಂಚಾಕ್ಷರ ಮಂತ್ರದಿಂದ ಭಸ್ಮವನ್ನು ಧರಿಸಿದರೆ ಅವನು ಮಿಕ್ಕ ಎಲ್ಲಾ ಆಶ್ರಮಿಗಳಿಗಿಂತಲೂ ಪವಿತ್ರನಾಗುವನು. ಶಿವನಲ್ಲಿಯೇ ಭಕ್ತಿಯಿಂದ ನಿರತ

ಶಿವವ್ರತೈಕನಿಷ್ಠಸ್ಯ ನಾಶೌಚಂ ನ ಚ ಸೂತಕಂ ।
ಲಲಾಟೇಽಗ್ರೇ ಸಿತಂ ಭಸ್ಮ ತಿಲಕಂ ಧಾರಯೇನ್ಮೃದಾ ॥ ೮೨ ॥

ಸ್ವಹಸ್ತಾದ್ಗುರುಹಸ್ತಾದ್ವಾ ಶಿವಭಕ್ತಸ್ಯ ಲಕ್ಷಣಂ ।
ಗುರ್ಣಾನ್ ರುಂಧ ಇತಿ ಪ್ರೋಕ್ತೋ ಗುರುಶಬ್ದಸ್ಯ ವಿಗ್ರಹಃ ॥ ೮೩ ॥

ಸವಿಕಾರಾನ್ ರಾಜಸಾದೀನ್ ಗುರ್ಣಾನ್ ರುಂಧೇ ವ್ಯಪೋಹತಿ ।
ಗುಣಾತೀತಃ ಪರಶಿವೋ ಗುರುರೂಪಂ ಸಮಾಶ್ರಿತಃ ॥ ೮೪ ॥

ಗುಣತ್ರಯಂ ವ್ಯಪೋಹ್ಯಾಗ್ರೇ ಶಿವಂ ಬೋಧಯತೀತಿ ಸಃ ।
ವಿಶ್ವಸ್ತಾನಾಂ ತು ಶಿಷ್ಯಾಣಾಂ ಗುರುರಿತ್ಯಭಿಧೀಯತೇ ॥ ೮೫ ॥

ತಸ್ಮಾದ್ಗುರುಶರೀರಂ ತು ಗುರುಲಿಂಗಂ ಭವೇದ್ಬುಧಃ ।
ಗುರುಲಿಂಗಸ್ಯ ಪೂಜಾ ತು ಗುರುಶುಶ್ರೂಷಣಂ ಭವೇತ್ ॥ ೮೬ ॥

---

ನಾದ ಅವನಿಗೆ ಶಿವಾಶ್ರಮಿ ಎಂದು ಹೆಸರು. ತನ್ನ ಹಸ್ತದಿಂದಲಾಗಲೀ ಗುರುಗಳ ಹಸ್ತದಿಂದಲಾಗಲಿ ಭಸ್ಮ ಮತ್ತು ತಿಲಕಗಳನ್ನು ಇರಿಸಿಕೊಳ್ಳಬೇಕು. ಮೇಲೆ ಹೇಳಿದುದೆಲ್ಲವೂ ಶಿವಭಕ್ತನ ಲಕ್ಷಣಗಳು.

೮೨. ಪೂಜೆ, ಜಪ ಮೊದಲಾದ ಶಿವನ ವ್ರತಾನುಷ್ಠಾನವಲ್ಲಿ ನಿರತನಾದವನಿಗೆ ಮೃತಾಶೌಚ (ಸತ್ತಸೂತಕ) ಮತ್ತು ಜಾತಾಶೌಚ (ಪುರುಡು) ಇವುಗಳಿಲ್ಲ. ಹಣೆಯ ಮೇಲೆ ಶುಭ್ರವಾದ ಭಸ್ಮವನ್ನೂ ಮಣ್ಣಿನ ತಿಲಕವನ್ನೂ ಇಡಬೇಕು.

೮೩. ಗುಣಗಳನ್ನು ರೋಧಿಸುವವನು ಗುರುವು. ಎಂದರೆ ಗುರುವು ರಾಜಸವಾದ ಕೋಪ ಮುಂತಾದ ಗುಣಗಳನ್ನು ನಾಶಮಾಡುವನು ಎಂದರ್ಥವು.

೮೪-೮೫. ಪರಮೇಶ್ವರನು ಗುಣಾತೀತನು. ಸಾತ್ವಿಕಾದಿ ಯಾವ ಗುಣಗಳೂ ಇಲ್ಲದವನು, ಆ ಪರಶಿವನೇ ಗುರುರೂಪವನ್ನು ಧರಿಸಿರುವನು. ಆದುದರಿಂದ ಶಿವ ಸ್ವರೂಪನಾದ ಆ ಗುರುವು ಶ್ರದ್ಧಾಭಕ್ತಿಯಿಂದಿರುವ ಶಿಷ್ಯರಿಗೆ ಸಾತ್ವಿಕ, ರಾಜಸ ತಾಮಸಗುಣಗಳನ್ನು ಹೋಗಲಾಡಿಸಿ ಶಿವಸ್ವರೂಪವನ್ನು ಬೋಧಿಸುವವನು. ಅಂತಹ ವನಿಗೇ ಗುರುವೆಂದು ಹೆಸರು.

೮೬. ಆದುದರಿಂದ ಗುರುವಿನ ಶರೀರವೇ ಗುರುಲಿಂಗವು. ಗುರುವಿನ ಸೇವೆಯೇ ಗುರುಲಿಂಗದ ಪೂಜೆಯು.

ಶ್ರುತಂ ಕರೋತಿ ಶುಶ್ರೂಷಾ ಕಾಯೇನ ಮನಸಾ ಗಿರಾ ।
ಉಕ್ತಂ ಯದ್ಗುರುಣಾ ಸರ್ವಂ ಶಕ್ಯಂ ವಾಽಶಕ್ಯಮೇವ ವಾ ॥ ೮೭ ॥

ಕರೋತ್ಯೇವ ಹಿ ಪೂತಾತ್ಮಾ ಪ್ರಾಣೈರಪಿ ಧನೈರಪಿ ।
ತಸ್ಮಾದ್ವೈ ಶಾಸನೇ ಯೋಗ್ಯಃ ಶಿಷ್ಯ ಇತ್ಯಭಿಧೀಯತೇ ॥ ೮೮ ॥

ಶರೀರಾದ್ಯರ್ಥಕಂ ಸರ್ವಂ ಗುರೋರ್ದತ್ವಾ ಸುಶಿಷ್ಯಕಃ ।
ಅಗ್ರಪಾಕಂ ನಿವೇದ್ಯಾಗ್ರೇ ಭುಂಜೀಯಾದ್ಗುರ್ವನುಜ್ಞಯಾ ॥ ೮೯ ॥

ಶಿಷ್ಯಃ ಪುತ್ರ ಇತಿ ಪ್ರೋಕ್ತಃ ಸದಾ ಶಿಷ್ಯತ್ವಯೋಗತಃ ।
ಜಿಹ್ವಾಲಿಂಗಾನ್ಮಂತ್ರಶುಕ್ರಂ ಕರ್ಣಯೋನೌ ನಿಷಿಚ್ಯ ವೈ ॥ ೯೦ ॥

ಜಾತಃ ಪುತ್ರೋ ಮಂತ್ರಪುತ್ರಃ ಪಿತರಂ ಪೂಜಯೇದ್ಗುರುಂ ।
ನಿಮಜ್ಜಯತಿ ಪುತ್ರಂ ವೈ ಸಂಸಾರೇ ಜನಕಃ ಪಿತಾ ॥ ೯೧ ॥

---

೮೭-೮೮. ಗುರುವು ಹೇಳಿದುದನ್ನು ಶರೀರ, ಮನಸ್ಸು, ವಾಕ್ಕು ಈ ತ್ರಿಕರಣಗಳಿಂದ ಶುದ್ಧನಾಗಿ ನಿರ್ವಹಿಸುವುದೇ ಶುಶ್ರೂಷೆಯು. ತ್ರಿಕರಣಶುದ್ಧನಾದ ಶಿಷ್ಯನು, ಗುರುವು ಹೇಳಿದುದನ್ನು ಅದು ಸಾಧ್ಯವಾಗಿರಲಿ, ಅಸಾಧ್ಯವಾಗಿರಲಿ ಧನವ್ಯಯದಿಂದಲಾಗಲಿ ಪ್ರಾಣವ್ಯಯದಿಂದಲಾಗಲಿ. ಮಾಡಿಯೇ ಮಾಡುವನು. ಆದುದರಿಂದ ಹಿತೋಪದೇಶದಿಂದ ಶಿಕ್ಷಿಸಲು ಯೋಗ್ಯನಾದವನಿಗೆ ಶಿಷ್ಯನೆಂದು ಹೆಸರು.

೮೯. ಶರೀರರಕ್ಷಣೆಗಾಗಿ ಭಿಕ್ಷೆಯನ್ನೆತ್ತಿ ತಂದಿರುವ ಪಾಕವೆಲ್ಲವನ್ನೂ ಮೊದಲು ಗುರುವಿಗೆ ಸಮರ್ಪಿಸಿ ಬಳಿಕ ಅವನ ಅನುಜ್ಞೆಯಿಂದ ಭೋಜನಮಾಡಬೇಕು.

೯೦-೯೧. ಸದಾ ಶಿಷ್ಯನು ಗುರುವಿಗೆ ಶಿಷ್ಯತ್ವವುಳ್ಳವನಾದುದರಿಂದ ಪುತ್ರನು ಎಂದರೆ ಪುತ್ರಸದೃಶನು ಎಂದು ಹೇಳಿರುವದು. ಅದು ಹೇಗೆಂದರೆ, ಪ್ರಸಿದ್ಧ ತಂದೆಯಂತೆ ಗುರುವೂ ಸಹ ನಾಲಿಗೆಯೆಂಬ ಲಿಂಗ (ಜನನೇಂದ್ರಿಯ) ದಿಂದ ಮಂತ್ರವೆಂಬ ರೇತಸ್ಸನ್ನು ಶಿಷ್ಯನ ಕಿವಿಯೆಂಬ ಯೋನಿ (ಸ್ತ್ರೀಯ ಜನನೇಂದ್ರಿಯ) ಯಲ್ಲಿ ನಿಷೇಕಿಸಿದ ಮಂತ್ರಪುತ್ರನೇ. ಶಿಷ್ಯನು.

ಸಂತಾರಯತಿ ಸಂಸಾರಾದ್ಗುರುರ್ವೈ ಬೋಧಕಃ ಪಿತಾ ।
ಉಭಯೋರಂತರಂ ಜ್ಞಾತ್ವಾ ಪಿತರಂ ಗುರುಮರ್ಚಯೇತ್ ॥ ೯೨ ॥

ಅಂಗಶುಶ್ರೂಷಯಾ ಚಾಪಿ ಧನಾದ್ಯೈಃ ಸ್ವಾರ್ಜಿತೈರ್ಗುರುಂ ।
ಪಾದಾದಿಕೇಶಪರ್ಯಂತಂ ಲಿಂಗಾನ್ಯಂಗಾನಿ ಯದ್ಗುರೋಃ ॥ ೯೩ ॥

ಧನರೂಪೈಃ ಪಾದುಕಾದ್ಯೈಃ ಪಾದಸಂಗ್ರಹಣಾದಿಭಿಃ ।
ಸ್ನಾನಾಭಿಷೇಕನೈವೇದ್ಯೈರ್ಭೋಜನೈಶ್ಚ ಪ್ರಪೂಜಯೇತ್ ॥ ೯೪ ॥

ಗುರುಪೂಜೈವ ಪೂಜಾ ಸ್ಯಾಚ್ಛಿವಸ್ಯ ಪರಮಾತ್ಮನಃ ।
ಗುರುಶೇಷಂ ತು ಯತ್ಸರ್ವಮಾತ್ಮಶುದ್ಧಿಕರಂ ಭವೇತ್ ॥ ೯೫ ॥

ಗುರೋಃ ಶೇಷಃ ಶಿವೋಚ್ಛಿಷ್ಟಂ ಜಲಮನ್ನಾದಿನಿರ್ಮಿತಂ ।
ಶಿಷ್ಯಾಣಾಂ ಶಿವಭಕ್ತಾನಾಂ ಗ್ರಾಹ್ಯಂ ಭೋಜ್ಯಂ ಭವೇದ್ದ್ವಿಜಾಃ ॥ ೯೬ ॥

---

೯೨. ಜನಕನಾದ ತಂದೆಯು ಪುತ್ರನನ್ನು ಸಂಸಾರದಲ್ಲಿ ಮುಳುಗಿಸುವನು. ಆದರೆ ಜ್ಞಾನಜನಕನಾದ ಗುರುವೆಂಬ ತಂದೆಯು ಶಿಷ್ಯನೆಂಬ ಪುತ್ರನನ್ನು ಸಂಸಾರ ದಿಂದ ಉದ್ಧರಿಸುವನು.

೯೩. ಹೀಗೆ, ಜನಕಪಿತೃವಿಗೂ ಬೋಧಕಪಿತೃವಿಗೂ (ಗುರುವಿಗೂ) ಇರುವ ಭೇದವನ್ನು ತಿಳಿದು ಉತ್ತಮಪಿತೃವಾದ ಗುರುವನ್ನು ಶರೀರಸೇವೆಯಿಂದಲೂ ಸ್ವಾರ್ಜಿತವಾದ ಧನಗಳಿಂದಲೂ ಪೂಜಿಸಬೇಕು.

೯೪. ಗುರುವಿನ ಕಾಲುಮೊದಲುಗೊಂಡು ಶಿರಸ್ಸಿನ ಪರ್ಯಂತವಾದ ಅಂಗ ಗಳು ಲಿಂಗಗಳು. ಅವುಗಳನ್ನು ಧನಗಳಿಂದಲೂ ಆವುಗೆ ಮುಂತಾದುವುಗಳಿಂದಲೂ ಪಾದಸೇವನೆ (ಕಾಲೊತ್ತುವಿಕೆ) ಮುಂತಾದುವುಗಳಿಂದಲೂ ಮತ್ತು ಸ್ನಾನ, ಅಭಿಷೇಕ, ನೈವೇದ್ಯ, ಭೋಜನ ಇವುಗಳಿಂದಲೂ ಪೂಜಿಸಬೇಕು.

೯೫. ಗುರುಪೂಜೆಯೇ ಪರಮಾತ್ಮನಾದ ಶಿವನ ಪೂಜೆಯು. ಗುರುವು ಸ್ವೀಕರಿಸಿಬಿಟ್ಟ ಆಹಾರಾದಿಗಳೆಲ್ಲವೂ ಆತ್ಮಶುದ್ಧಿಯನ್ನುಂಟುಮಾಡುವವು.

೯೬. ಗುರುವಿನ ಉಚ್ಛಿಷ್ಟವು (ತಿಂದುಳಿದುದು) ಶಿವನ ಶೇಷವು. ಆದುದ ರಿಂದ ಎಲೈ ಬ್ರಾಹ್ಮಣರೇ! ಶಿವಭಕ್ತರಾದ ಶಿಷ್ಯರು ಗುರುವಿನ ಉಚ್ಛಿಷ್ಟವಾದ ಅನ್ನ ನೀರು ಮುಂತಾದುವುಗಳನ್ನು ಭಕ್ತಿಯಿಂದ ಸ್ವೀಕರಿಸಬೇಕು. ಗುರುವಿನ ಅನುಜ್ಞೆ ಯಿಲ್ಲದೆ ಮಾಡಿದುದೆಲ್ಲವೂ ಕಳ್ಳತನದಂತೆ ಅನಿಷ್ಟದಾಯಕವಾದುದು.

ಗುರ್ವನುಜ್ಞಾವಿರಹಿತಂ ಚೋರವತ್ಸಕಲಂ ಭವೇತ್ ।
ಗುರೋರಪಿ ವಿಶೇಷಜ್ಞಂ ಯತ್ನಾದ್ಗೃಹ್ಣೀತ ವೈ ಗುರುಂ　　॥ ೯೭ ॥

ಅಜ್ಞಾನಮೋಚನಂ ಸಾಧ್ಯಂ ವಿಶೇಷಜ್ಞೋ ಹಿ ಮೋಚಕಃ ।
ಆದೌ ಚ ವಿಘ್ನಶಮನಂ ಕರ್ತವ್ಯಂ ಕರ್ಮಪೂರ್ತಯೇ　　॥ ೯೮ ॥

ನಿರ್ವಿಘ್ನೇನ ಕೃತಂ ಸಾಂಗಂ ಕರ್ಮ ವೈ ಸಫಲಂ ಭವೇತ್ ।
ತಸ್ಮಾತ್ಸಕಲಕರ್ಮಾದೌ ವಿಘ್ನೇಶಂ ಪೂಜಯೇದ್ಬುಧಃ　　॥ ೯೯ ॥

ಸರ್ವಬಾಧಾನಿವೃತ್ತ್ಯರ್ಥಂ ಸರ್ವಾನ್ ದೇವಾನ್ ಯಜೇದ್ಬುಧಃ ।
ಜ್ವರಾದಿಗ್ರಂಥಿರೋಗಾಶ್ಚ ಬಾಧಾ ಹ್ಯಾಧ್ಯಾತ್ಮಿಕೀ ಮತಾ　　॥ ೧೦೦ ॥

ಪಿಶಾಚಜಂಬುಕಾದೀನಾಂ ವಲ್ಮೀಕಾದ್ಯುದ್ಭವೇ ತಥಾ ।
ಅಕಸ್ಮಾದೇವ ಗೋಧಾದಿಜಂತೂನಾಂ ಪತನೇಽಪಿ ಚ　　॥ ೧೦೧ ॥

---

೯೭. ಗುರುಗಳಲ್ಲಿಯೂ ವಿಶೇಷವಾಗಿ ತಿಳಿದಂತಹ ಜ್ಞಾನಗುರುವನ್ನೇ ಯತ್ನದಿಂದ ಆಶ್ರಯಿಸಬೇಕು. ಗುರುವನ್ನಾಶ್ರಯಿಸಿ ನಮ್ಮ ಅಜ್ಞಾನವನ್ನು ಕಳೆದುಕೊಳ್ಳಬೇಕು. ಅಜ್ಞಾನವನ್ನು ಕಳೆಯಲು ವಿಶೇಷವಾಗಿ ತಿಳಿದಿರುವ ಆತ್ಮಜ್ಞಾನಗುರುವೇ ಸಮರ್ಥನು.

೯೮. ಕರ್ಮಪೂರ್ತಿಯಾಗಲು ಮೊದಲು ವಿಘ್ನಶಾಂತಿಯನ್ನು ಮಾಡಬೇಕು. ವಿಘ್ನಶಾಂತಿಪೂರ್ವಕವಾಗಿ ಮಾಡಿದ ಕರ್ಮವು ಸಾಂಗವಾಗಿ ಫಲವನ್ನು ಉಂಟು ಮಾಡಬೇಕು.

೯೯-೧೦೦. ಆದುದರಿಂದ ಎಲ್ಲಾ ಕರ್ಮಗಳ ಆದಿಯಲ್ಲಿ ವಿಘ್ನೇಶನಾದ ಗಣಪತಿಯನ್ನು ಪೂಜಿಸಬೇಕು. ಮತ್ತು ಎಲ್ಲಾ ಬಾಧೆಗಳೂ ನಾಶವಾಗಲು ಎಲ್ಲಾ ದೇವತೆಗಳನ್ನೂ ಪೂಜಿಸಬೇಕು. ಜ್ವರ ಮತ್ತು ಗೆಡ್ಡೆ ಮುಂತಾದ ರೋಗಗಳು ಆಧ್ಯಾತ್ಮಿಕವಾದ (ಶರೀರ ಸಂಬಂಧವಾದ) ಬಾಧೆಯು.

೧೦೧-೧೦೩. ಮನೆಯಲ್ಲಿ ಪಿಶಾಚಿ, ನರಿ ಇವುಗಳು ಬರುವುದು, ಹುತ್ತವು ಉದ್ಭವಿಸುವದು, ಅಕಸ್ಮಾತ್ ಉಡು, ಹಲ್ಲಿ ಮುಂತಾದುವುಗಳು ಬೀಳುವದು, ಆಮೆ, ಹೆಣ್ಣುನಾಗರಹಾವು, ದುರ್ಜನ ಇವರು ಬಂದುಸೇರುವದು, ಇವುಗಳು ಸಂಭವಿಸಿದರೆ,

ಗೃಹೇ ಕಚ್ಛಪಸಸರ್ಪಸ್ತ್ರೀದುರ್ಜನಾದರ್ಶನೇಽಪಿ ಚ ।
ವೃಕ್ಷನಾರೀಗವಾದೀನಾಂ ಪ್ರಸೂತಿವಿಷಯೇಽಪಿ ಚ ॥ ೧೦೨ ॥

ಭಾವಿದುಃಖಂ ಸಮಾಯಾತಿ ತಸ್ಮಾತ್ತೇ ಭೌತಿಕಾ ಮತಾಃ ।
ಅಮೇಧ್ಯಾಶನಿಪಾತಶ್ಚ ಮಹಾಮಾರೀ ತಥೈವ ಚ ॥ ೧೦೩ ॥

ಜ್ವರಮಾರೀ ವಿಷೂಚಿಶ್ಚ ಗೋಮಾರೀ ಚ ಮಸೂರಿಕಾ ।
ಜನ್ಮರ್ಕ್ಷಗ್ರಹಸಂಕ್ರಾಂತಿಗ್ರಹಯೋಗಾಃ ಸ್ವರಾಶಿಕೇ ॥ ೧೦೪ ॥

ದುಃಸ್ವಪ್ನದರ್ಶನಾದ್ಯಾಶ್ಚ ಮತಾ ವೈ ಹ್ಯಾಧಿದೈವಿಕಾಃ ।
ಶವಚಾಂಡಾಲಪತಿತಸ್ಪರ್ಶಾಂದಂತರ್ಗೃಹೇ ಗತೇ ॥ ೧೦೫ ॥

ಏತಾದೃಶೇ ಸಮುತ್ಪನ್ನೇ ಭಾವಿದುಃಖಸ್ಯ ಸೂಚಕೇ ।
ಶಾಂತಿಯಜ್ಞಂ ತು ಮತಿಮಾನ್ಕುರ್ಯಾತ್ತದ್ದೋಷಶಾಂತಯೇ ॥ ೧೦೬ ॥

---

ಮರ, ಸ್ತ್ರೀಯರು, ಹಸುಗಳು ಮುಂತಾದುವುಗಳಿಗೆ ಫಲಬಿಡುವದು, ಪ್ರಸವ ಮುಂತಾದ ವಿಷಯಗಳಲ್ಲಿ ಮುಂದೆ ದುಃಖವು ಬರುವದು.

೧೦೩-೧೦೪. ಮತ್ತು ಮನೆಯಲ್ಲಿ ಅಪವಿತ್ರವಾದ ವಸ್ತು, ಸಿಡಿಲು ಬೀಳುವುದು, ಮಹಾಮಾರೀರೋಗವು ಬರುವದು, ಜ್ವರ ಮುಂತಾದ ರೋಗವು ಬರುವದು, ವಿಷೂಚಿ, ಹಸುಗಳ ಮಹಾರೋಗ, ಮಸೂರಿಕಾ, (ಸಿಡುಬು) ಮುಂತಾದ ರೋಗಗಳು ಬರುವದು, ಜನ್ಮನಕ್ಷತ್ರ ಮತ್ತು ರಾಶಿಗಳಲ್ಲಿ ಪಾಪಗ್ರಹಗಳ ಸಂಬಂಧ, ಸಂಕ್ರಮಣ, ಗ್ರಹಣ, ಮುಂತಾದುವುಗಳಾಗುವದು, ಕೆಟ್ಟಸ್ವಪ್ನಗಳಾಗುವದು, ಇವುಗಳೆಲ್ಲಾ ಆಧಿದೈವಿಕ ಬಾಧೆಗಳು.

೧೦೫-೧೦೬. ಒಳಮನೆಯಲ್ಲಿ ಶವ, ಚಂಡಾಲ, ಪಾಪಿಗಳು ಇವರ ಸ್ಪರ್ಶವಾಗುವದು, ಇವೆಲ್ಲವೂ ಮುಂದೆ ಬರುವ ದುಃಖಕ್ಕೆ ಸೂಚಕಗಳು. ಇವುಗಳ ದೋಷಶಾಂತಿಗಾಗಿ ತಿಳಿದವನು ಶಾಂತಿಕರ್ಮವನ್ನು ಮಾಡಬೇಕು.

ದೇವಾಲಯೇಽಥಗೋಷ್ಠೇ ವಾ ಚೈತ್ಯೇ ವಾಪಿ ಗೃಹಾಂಗಣೇ ।
ಪ್ರಾದೇಶೋನ್ನತಥಿಷ್ಣ್ಯೇ ವೈ ದ್ವಿಹಸ್ತೇ ಚ ಸ್ವಲಂಕೃತೇ ॥ ೧೦೭ ॥

ಭಾರಮಾತ್ರವ್ರಿಹಿಧಾನ್ಯೇ ಪ್ರಸ್ಥಾಪ್ಯ ಪರಿಸೃತ್ಯ ಚ ।
ಮಧ್ಯೇ ವಿಲಿಖ್ಯ ಕಮಲಂ ತಥಾ ದಿಕ್ಷು ವಿಲಿಖ್ಯ ವೈ ॥ ೧೦೮ ॥

ತಂತುನಾ ವೇಷ್ಟಿತಂ ಕುಂಭಂ ನವಗುಗ್ಗುಲಧೂಪಿತಂ ।
ಮಧ್ಯೇ ವಿಲಿಖ್ಯ ಕಮಲಂ ತಥಾ ದಿಕ್ಷ್ವಪಿ ವಿನ್ಯಸೇತ್ ॥ ೧೦೯ ॥

ಸನಾಲಾಮ್ರಕಕೂರ್ಚಾದೀಂ ಕಲಶಾಂಶ್ಚ ತಥಾಷ್ಟಸು ।
ಪೂರಯೇನ್ಮಂತ್ರಪೂತೇನ ಪಂಚದ್ರವ್ಯಯುತೇನ ಚ ॥ ೧೧೦ ॥

ಪ್ರಕ್ಷಿಪೇನ್ನವರತ್ನಾನಿ ನೀಲಾದೀನ್ಕ್ರಮಶಸ್ತಥಾ ।
ಕರ್ಮಜ್ಞಂ ಸಪತ್ನೀಕಮಾಚಾರ್ಯಂ ವರಯೇದ್ಬುಧಃ ॥ ೧೧೧ ॥

---

೧೦೭-೧೦೯. ಶಾಂತಿಕರ್ಮದ ವಿಧಾನವು - ದೇವಾಲಯ, ಗೋಶಾಲೆ, ಯಜ್ಞ ಶಾಲಾಸ್ಥಾನ, ಅಥವಾ ಮನೆಯ ಅಂಗಣ ಇವುಗಳಲ್ಲಿ ಯಾವುದಾದರೊಂದು ಸ್ಥಳದಲ್ಲಿ ಎರಡು ಹಸ್ತ ಪ್ರಮಾಣವುಳ್ಳದುದೂ, ಚೋಟುದ್ದ ಉತ್ತರವಾದುದೂ ಆದಂತಹ ವೇದಿಕೆಯುನ್ನು ರಚಿಸಿ, ಅದರಲ್ಲಿ ಒಂದು ಭಾರ (ಕೊಳಗ) ಭತ್ತವನ್ನು ಸಮವಾಗಿ ಹರವಿ ಮಧ್ಯದಲ್ಲಿಯೂ ಮಿಕ್ಕ ಎಂಟು ದಿಕ್ಕುಗಳಲ್ಲಿಯೂ ಕಮಲವನ್ನು ಬರೆಯ ಬೇಕು. ಆ ದಿಕ್ಕುಗಳಲ್ಲಿ ಧೂಪದಿಂದ ವಾಸಿತವಾದ ಕಲಶಗಳನ್ನು ಇರಿಸಬೇಕು, ಮಧ್ಯದಲ್ಲಿ ದೊಡ್ಡದೊಂದು ಕಲಶವಿರಬೇಕು. ಎಲ್ಲ ಕಲಶಗಳನ್ನೂ ಹಸಿಯ ನೂಲಿ ನಿಂದ ಸುತ್ತಬೇಕು.

೧೧೦. ಕಲಶಗಳಲ್ಲಿ ಮಾವಿನಎಲೆ, ದರ್ಭೆಯಕೂರ್ಚೆ, ಮುಂತಾದುವು ಗಳನ್ನೂ ಇರಿಸಬೇಕು. ಮಂತ್ರಪೂತವಾಗಿರುವಂತಹ ಪಂಚಗವ್ಯಗಳನ್ನು ಕಲಶ ದೊಳಗೆ ಹಾಕಬೇಕು.

೧೧೧. ಮತ್ತು ನೀಲ ಮುಂತಾದ ಒಂಭತ್ತು ರತ್ನಗಳನ್ನು ಒಂಭತ್ತು ಕಲಶ ಗಳಲ್ಲಿ ಕ್ರಮವಾಗಿ ಹಾಕಬೇಕು. ವಿವಾಹಿತನಾಗಿ ಪತ್ನಿಯು ಮೃತಳಾಗಿದ್ದರೆ ಅವನಿಗೆ ವಿಧುರನೆಂದು ಹೆಸರು. ಗುರುವೂ ಆಚಾರ್ಯನೂ ಆಗಿರುವವನು ಅಂತಹ ವಿಧುರ

ಸುವರ್ಣಪ್ರತಿಮಾಂ ವಿಷ್ಣೋರಿಂದ್ರಾದೀನಾಂ ಚ ನಿಕ್ಷಿಪೇತ್ ।
ಸಶಿರಸ್ಕೇ ಮಧ್ಯಕುಂಭೇ ವಿಷ್ಣುಮಾವಾಹ್ಯ ಪೂಜಯೇತ್ ॥ ೧೧೩ ॥

ಪ್ರಾಗಾದಿಷು ಯಥಾಮಂತ್ರಮಿಂದ್ರಾದೀನ್ ಕ್ರಮಶೋ ಯಜೇತ್ ।
ತತ್ತನ್ನಾಮ್ನಾ ಚತುರ್ಥ್ಯಾ ಚ ನಮೋಂತೇನ ಯಥಾಕ್ರಮಂ ॥ ೧೧೪ ॥

ಆವಾಹನಾದಿಕಂ ಸರ್ವಮಾಚಾರ್ಯೇಣೈವ ಕಾರಯೇತ್ ।
ಆಚಾರ್ಯ ಋತ್ವಿಜಾ ಸಾರ್ಧಂ ತನ್ಮಂತ್ರಾನ್ ಸಂಜಪೇಚ್ಛತಂ ॥ ೧೧೫ ॥

ಕುಂಭಸ್ಯ ಪಶ್ಚಿಮೇ ಭಾಗೇ ಜಪಾಂತೇ ಹೋಮಮಾಚರೇತ್ ।
ಕೋಟಿಂ ಲಕ್ಷಂ ಸಹಸ್ರಂ ವಾ ಶತಮಷ್ಟೋತ್ತರಂ ಬುಧಾಃ ॥ ೧೧೬ ॥

---

ನಾಗಿರಬಾರದು. ಆದುದರಿಂದ ಸಪತ್ನೀಕನು, ಯೋಗ್ಯನೂ ಆದ ಗುರುವನ್ನು ತನಗೆ ಪುರೋಹಿತನನ್ನಾಗಿ ಆ ಕರ್ಮಕ್ಕೆ ನಿಯಮಿಸಿಕೊಳ್ಳಬೇಕು.

೧೧೩. ವಿಷ್ಣು ಮತ್ತು ಇಂದ್ರಾದಿಗಳ ಪ್ರತಿಮೆಯನ್ನು ಆಯಾಯ ಕುಂಭಗಳಲ್ಲಿರಿಸಬೇಕು. ಆ ಕಲಶಗಳ ಮೇಲೆ ಶಿರಸ್ಸುಳ್ಳ (ಜುಟ್ಟುಳ್ಳ ತೆಂಗಿನಕಾಯಿಗಳನ್ನಿರಿಸಬೇಕು.) ಮಧ್ಯದ ಕಲಶದಲ್ಲಿ ವಿಷ್ಣುವನ್ನು ಆವಾಹನೆಮಾಡಿ ಪೂಜಿಸಬೇಕು.

೧೧೪. ಪೂರ್ವಾದಿದಿಕ್ಕುಗಳಲ್ಲಿ ಕಲಶಗಳಲ್ಲಿ ಇಂದ್ರಾದಿದೇವತೆಗಳನ್ನು. ಅವರವರ ಮಂತ್ರಗಳಿಂದಲೂ ಚತುರ್ಥ್ಯಂತವೂ ನಮಃಪದಯುಕ್ತವೂ ಆದಂತಹ ಅವರವರ ನಾಮಗಳಿಂದಲೂ ಎಂದರೆ ಇಂದ್ರಾಯನಮಃ ಎಂದು ಮುಂತಾಗಿ ಕ್ರಮವಾಗಿ ಪೂಜಿಸಬೇಕು.

೧೧೫. ಆವಾಹನೆ ಮುಂತಾದುವುಗಳನ್ನು ಆಚಾರ್ಯನಿಂದಲೇ ಮಾಡಿಸಬೇಕು. ಆಚಾರ್ಯನು ಋತ್ವಿಕ್ಕುಗಳೊಂದಿಗೆ ಆಯಾಯ ದೇವತೆಗಳ ಮಂತ್ರಗಳನ್ನು ಜಪಿಸಬೇಕು.

೧೧೬. ಜಪವಾದ ಮೇಲೆ ಕಲಶಗಳ ಪಶ್ಚಿಮದಿಕ್ಕಿನಲ್ಲಿ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ, ಕೋಟಿ ಅಥವಾ ಲಕ್ಷ ಅಥವಾ ಸಾವಿರ ಇಲ್ಲವೇ ನೂರೆಂಟು ಹೋಮಗಳನ್ನು ಮಾಡಬೇಕು.

ಏಕಾಹಂ ವಾ ನವಾಹಂ ವಾ ತಥಾ ಮಂಡಲಮೇವ ವಾ ।
ಯಥಾಯೋಗ್ಯಂ ಪ್ರಕುರ್ವೀತ ಕಾಲದೇಶಾನುಸಾರತಃ ॥ ೧೧೬ ॥

ಶಮೀಹೋಮಶ್ಚ ಶಾಂತ್ಯರ್ಥೇ ವೃತ್ತ್ಯರ್ಥೇ ಚ ಪಲಾಶಕಂ ।
ಸಮಿದನ್ನಾಜ್ಯಕೈ ರ್ದ್ರವ್ಯೈರ್ನಾಮ್ನಾ ಮಂತ್ರೇಣ ವಾ ಹುನೇತ್ ॥

ಪ್ರಾರಂಭೇ ಯತ್ಕೃತಂ ದ್ರವ್ಯಂ ತತ್ಕ್ರಿಯಾಂತಂ ಸಮಾಚರೇತ್ ।
ಪುಣ್ಯಾಹಂ ವಾಚಯಿತ್ವಾ ತೇ ದಿನೇ ಸಂಪ್ರೋಕ್ಷಯೇಜ್ಜಲೈಃ ॥ ೧೧೮ ॥

ಬ್ರಾಹ್ಮಣಾನ್ ಭೋಜಯೇತ್ಪಶ್ಚಾದ್ಯಾವದಾಹುತಿಸಂಖ್ಯಯಾ ।
ಆಚಾರ್ಯಶ್ಚ ಹವಿಷ್ಯಾಶೀ ಋತ್ವಿಜಶ್ಚ ಭವೇದ್ದ್ವಿಜಾಃ ॥ ೧೧೯ ॥

ಆದಿತ್ಯಾದಿಗ್ರಹಾನಿಷ್ಟ್ವಾ ಸರ್ವಹೋಮಾಂತ ಏವ ಹಿ ।
ಋತ್ವಿಗ್ಭ್ಯೋ ದಕ್ಷಿಣಾಂ ದದ್ಯಾನ್ನವರತ್ನಂ ಯಥಾಕ್ರಮಂ ॥ ೧೨೦ ॥

---

೧೧೬. ಹೀಗೆ ಶಾಂತಿಕರ್ಮವನ್ನು ಒಂದು ದಿನವಾಗಲಿ, ಇಲ್ಲವೇ ಒಂಭತ್ತು ದಿನಗಳಾಗಲಿ, ಅಥವಾ ೪೮ ದಿನಗಳ ಒಂದು ಮಂಡಲವಾಗಲಿ, ದೇಶಕಾಲಾನುಗುಣವಾಗಿ ಮಾಡಬೇಕು.

೧೧೭. ಶಾಂತಿಗಾಗಿ ಶಮೀ ವೃಕ್ಷದ ಸಮಿತ್ತಿನ ಹೋಮವನ್ನೂ, ಜೀವನ ವೃತ್ತಿಗಾಗಿ ಪಲಾಶ (ಮುತ್ತಗ) ಸಮಿತ್ತಿನ ಹೋಮವನ್ನೂ ಮಾಡಬೇಕು. ಸಮಿತ್ತು ಹವಿಸ್ಸು, ತುಪ್ಪ ಇವುಗಳನ್ನು ಆಯಾಯ ದೇವತೆಗಳ ಮಂತ್ರದಿಂದ ಅಥವಾ ನಾಮಗಳಿಂದ ಹೋಮಮಾಡಬೇಕು.

೧೧೮. ಕರ್ಮಪ್ರಾರಂಭದಲ್ಲಿ ಯಾವ ರೀತಿ ದ್ರವ್ಯವಿನಿಯೋಗವನ್ನು ಮಾಡಿರುವುದೋ ಅದರಂತೆ ಕೊನೆಯವರೆಗೂ ವಿನಿಯೋಗಮಾಡಬೇಕು. ಋತ್ವಿಕ್ಕುಗಳು ಪುಣ್ಯಾಹವಾಚನೆಯನ್ನು ಮಾಡಿ ಜಲದಿಂದ ಮನೆಯನ್ನೆಲ್ಲಾ ಸಂಪ್ರೋಕ್ಷಿಸಬೇಕು.

೧೧೯. ಬಳಿಕ ಹೋಮವೆಷ್ಟು ಮಾಡಿರುವುದೋ ಅಷ್ಟು ಜನ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಆಚಾರ್ಯನೂ ಋತ್ವಿಕ್ಕುಗಳೂ ಸಹ ಹೋಮ ಶೇಷವಾದ ಹವಿಸ್ಸನ್ನು ಭಕ್ಷಿಸಬೇಕು.

೧೨೦. ಎಲ್ಲಾ ಹೋಮಗಳ ಕೊನೆಯಲ್ಲಿ ಆದಿತ್ಯ ಮೊದಲಾದ ನವಗ್ರಹಗಳನ್ನು ಅರ್ಚಿಸಿ, ಋತ್ವಿಕ್ಕುಗಳಿಗೆ ನವರತ್ನಗಳನ್ನು ಕ್ರಮವಾಗಿ ಒಬ್ಬರಿಗೊಂದನ್ನು

ದಶದಾನಂ ತತಃ ಕುರ್ಯಾದ್ಭೂರಿದಾನಂ ತತಃ ಪರಂ ।
ಬಾಲಾನಾಮುಪನೀತಾಂ ಗೃಹಿಣಾಂ ವನಿನಾಂ ಧನಂ ॥ ೧೨೧ ॥

ಕನ್ಯಾನಾಂ ಚ ಸಭರ್ತೃಕಾಣಾಂ ವಿಧವಾನಾಂ ತತಃ ಪರಂ ।
ತಂತ್ರೋಪಕರಣಂ ಸರ್ವಮಾಚಾರ್ಯಾಯ ನಿವೇದಯೇತ್ ॥ ೧೨೨ ॥

ಉತ್ಪಾತಾನಾಂ ಚ ಮಾರೀಣಾಂ ದುಃಖಸ್ವಾಮಿ ಯಮಃ ಸ್ಮೃತಃ ।
ತಸ್ಮಾದ್ಯಮಸ್ಯ ಪ್ರೀತ್ಯರ್ಥಂ ಕಾಲದಾನಂ ಪ್ರದಾಪಯೇತ್ ॥ ೧೨೩ ॥

ಶತನಿಷ್ಕೇಣ ವಾ ಕುರ್ಯಾದ್ದಶನಿಷ್ಕೇಣ ವಾ ಪುನಃ ।
ಪಾಶಾಂಕುಶಧರಂ ಕಾಲಂ ಕುರ್ಯಾತ್ಪುರುಷರೂಪಿಣಂ ॥ ೧೨೪ ॥

ತತ್ಸ್ವರ್ಣಪ್ರತಿಮಾದಾನಂ ಕುರ್ಯಾದ್ದಕ್ಷಿಣಯಾ ಸಹ ।
ತಿಲದಾನಂ ತತಃ ಕುರ್ಯಾತ್ಪೂರ್ಣಾಯುಷ್ಯಪ್ರಸಿದ್ಧಯೇ ॥ ೧೨೫ ॥

---

ದಕ್ಷಿಣೆಯಾಗಿ ಕೊಡಬೇಕು. ಬಳಿಕ ದಶದಾನವನ್ನೂ ಎಲ್ಲರಿಗೂ ಭೂರಿದಾನವನ್ನೂ ಕೊಡಬೇಕು.

೧೨೧. ಬಾಲಕರಿಗೂ, ಬ್ರಹ್ಮಚಾರಿಗಳೂ, ಗೃಹಸ್ಥರಿಗೂ, ವಾನಪ್ರಸ್ಥರಿಗೂ, ಕನ್ಯೆಯರಿಗೂ, ಸುಮಂಗಲಿಯರಿಗೂ ವಿಧವೆಯರಿಗೂ ಧನವನ್ನು ದಾನಮಾಡಬೇಕು.

೧೨೨. ಆ ಕರ್ಮಕ್ಕಾಗಿ ಸಂಗ್ರಹಿಸಿದ ಸಾಮಗ್ರಿಗಳನ್ನೆಲ್ಲಾ ಆಚಾರ್ಯನಿಗೆ ಕೊಡಬೇಕು.

೧೨೩. ಉತ್ಪಾತಗಳಿಗೂ, ಮಾರಿಗಳಿಗೂ, ದುಃಖಕ್ಕೂ ಯಮನೇ ಸ್ವಾಮಿಯು. ಆದುದರಿಂದ ಯಮನ ಪ್ರೀತಿಗಾಗಿ ಕಾಲ (ಯಮ) ಪ್ರತಿಮೆಯನ್ನು ದಾನಮಾಡಬೇಕು.

೧೨೪-೧೨೫. ನೂರು ಚಿನ್ನದ ನಾಣ್ಯಗಳಿಂದಲಾಗಲಿ ಹತ್ತು ನಾಣ್ಯಗಳಿಂದಲಾಗಲಿ ಪುರುಷಾಕೃತಿಯಿಂದ ಪಾಶ ಮತ್ತು ಅಂಕುಶಗಳನ್ನು ಧರಿಸಿರುವಂತಹ ಕಾಲಪ್ರತಿಮೆಯನ್ನು ಮಾಡಿಸಿ ಆ ಚಿನ್ನದ ಕಾಲಪ್ರತಿಮೆಯನ್ನು ದಕ್ಷಿಣೆಯೊಡನೆ ದಾನಮಾಡಬೇಕು. ಬಳಿಕ ಪೂರ್ಣವಾದ ಆಯುಸ್ಸು ಲಭಿಸಲು ಎಳ್ಳನ್ನು ದಾನ ಮಾಡಬೇಕು.

ಆಜ್ಯಾವೇಕ್ಷಣದಾನಂ ಚ ಕುರ್ಯಾದ್ವ್ಯಾಧಿನಿವೃತ್ತಯೇ ।
ಸಹಸ್ರಂ ಭೋಜಯೇದ್ವಿಪ್ರಾನ್ ದರಿದ್ರಃ ಶತಮೇವ ವಾ ॥ ೧೨೬ ॥

ವಿತ್ತಾಭಾವೇ ದರಿದ್ರಸ್ತು ಯಥಾಶಕ್ತಿ ಸಮಾಚರೇತ್ ।
ಭೈರವಸ್ಯ ತಥಾ ಪೂಜಾಂ ಕುರ್ಯಾದ್ಭೂತಾದಿಶಾಂತಯೇ ॥ ೧೨೭ ॥

ಮಹಾಭಿಷೇಕಂ ನೈವೇದ್ಯಂ ಶಿವಸ್ಯಾಂತೇ ತು ಕಾರಯೇತ್ ।
ಬ್ರಾಹ್ಮಣಾನ್ ಭೋಜಯೇತ್ಪಶ್ಚಾದ್ಭೂರಿಭೋಜನರೂಪತಃ ॥ ೧೨೮ ॥

ಏವಂ ಕೃತೇನ ಯಜ್ಞೇನ ದೋಷಶಾಂತಿಮವಾಪ್ನುಯಾತ್ ।
ಶಾಂತಿಯಜ್ಞಮಿಮಂ ಕುರ್ಯಾದ್ವರ್ಷೇ ವರ್ಷೇ ಚ ಫಾಲ್ಗುನೇ ॥ ೧೨೯ ॥

ದುರ್ದರ್ಶನಾದೌ ಸದ್ಯೋ ವೈ ಮಾಸಮಾತ್ರೇ ಸಮಾಚರೇತ್ ।
ಮಹಾಪಾಪಾದಿಸಂಪ್ರಾಪ್ತೌ ಕುರ್ಯಾದ್ಭೈರವಪೂಜನಂ ॥ ೧೩೦ ॥

---

೧೨೬. ರೋಗನಿವೃತ್ತಿಗಾಗಿ ತುಪ್ಪದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು ಆ ತುಪ್ಪವನ್ನು ದಾನಮಾಡಬೇಕು. ವೇದಾಧ್ಯಯನಮಾಡಿದ ಸಾವಿರ ಬ್ರಾಹ್ಮಣರಿಗೆ ಸಂತರ್ಪಣೆಮಾಡಿಸಬೇಕು. ದರಿದ್ರನು ನೂರು ಜನಗಳಿಗಾದರೂ ಭೋಜನವನ್ನು ಮಾಡಿಸಬೇಕು.

೧೨೭. ಧನವಿಲ್ಲದಿದ್ದರೆ ದರಿದ್ರನು ಶಕ್ತಿಯಿದ್ದಷ್ಟು ಮಾಡಬೇಕು. ಭೂತಾದಿಗಳ ಭಯನಿವೃತ್ತಿಗಾಗಿ ಭೈರವನ ಪೂಜೆಯನ್ನು ಮಾಡಬೇಕು.

೧೨೮. ಕೊನೆಯಲ್ಲಿ ಶಿವನಿಗೆ ಮಹಾಭಿಷೇಕ ಮತ್ತು ನೈವೇದ್ಯಗಳನ್ನು ಮಾಡಬೇಕು. ಬಳಿಕ ಭೂರಿಭೋಜನರೂಪವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೧೨೯. ಈ ರೀತಿಯಾಗಿ ಶಾಂತಿಕರ್ಮವನ್ನು ಮಾಡಿದರೆ ದೋಷಶಾಂತಿಯಾಗುವುದು. ಈ ಶಾಂತಿಕರ್ಮವನ್ನು ಪ್ರತಿವರ್ಷವೂ ಫಾಲ್ಗುಣಮಾಸದಲ್ಲಿ ಮಾಡಬೇಕು.

೧೩೦. ಉತ್ಪಾತಾದಿ ಅನಿಷ್ಟಗಳನ್ನು ನೋಡಿದರೆ ಕೂಡಲೇ ಒಂದು ತಿಂಗಳೊಳಗಾಗಿ ಶಾಂತಿಕರ್ಮವನ್ನು ಮಾಡಬೇಕು. ಮಹಾಪಾಪಗಳು ಪ್ರಾಪ್ತವಾದರೆ ಭೈರವನನ್ನು ಪೂಜಿಸಬೇಕು.

ಮಹಾವ್ಯಾಧಿಸಮುತ್ಪತ್ತೌ ಸಂಕಲ್ಪಂ ಪುನರಾಚರೇತ್ ।
ಸರ್ವಾಭಾವೇ ದರಿದ್ರಸ್ತು ದೀಪದಾನಮಥಾಚರೇತ್ ॥ ೧೩೧ ॥

ತದಪ್ಯಶಕ್ತಃ ಸ್ನಾತ್ವಾ ವೈ ಯತ್ಕಿಂಚಿದ್ದಾನಮಾಚರೇತ್ ।
ದಿವಾಕರಂ ನಮಸ್ಕುರ್ಯಾನ್ಮಂತ್ರೇಣಾಷ್ಟೋತ್ತರಂ ಶತಂ ॥ ೧೩೨ ॥

ಸಹಸ್ರಮಯುತಂ ಲಕ್ಷಂ ಕೋಟಿಂ ವಾ ಕಾರಯೇದ್ಬುಧಃ ।
ನಮಸ್ಕಾರಾತ್ಮಯಜ್ಞೇನ ತುಷ್ಟಾಃ ಸ್ಯುಃ ಸರ್ವದೇವತಾಃ ॥ ೧೩೩ ॥

ತ್ವತ್ಸ್ವರೂಪೇಽರ್ಪಿತಾ ಬುದ್ಧಿರ್ನ ತೇಽಶೂನ್ಯೇಽಪಿ ರೋಚತೇ ।
ಯಾ ಚಾಸ್ತ್ಯಸ್ಮದಹಂತೇತಿ ತ್ವಯಿ ದೃಷ್ಟೇ ವಿವರ್ಜಿತಾ ॥ ೧೩೪ ॥

ನಮ್ರೋಽಹಂ ಹಿ ಸ್ವದೇಹೇನ ಭೋ ಮಹಾಂಸ್ತ್ವಮಸಿ ಪ್ರಭೋ ।
ನ ಶೂನ್ಯೋ ಮತ್ಸ್ವರೂಪೋ ವೈ ದಾಸೋಽಸ್ಮಿ ತವ ಸಾಂಪ್ರತಂ ॥ ೧೩೫ ॥

---

೧೩೧. ಮಹಾರೋಗಗಳು ಉತ್ಪತ್ತಿಯಾದರೆ ತಿರುಗಿ ಸಂಕಲ್ಪವನ್ನು ಮಾಡಬೇಕು. ಏನೂ ಇಲ್ಲದ ದರಿದ್ರನು ದೀಪದಾನವನ್ನು ಮಾಡಬೇಕು.

೧೩೨. ದೀಪದಾನವನ್ನು ಮಾಡಲು ಅಶಕ್ತನಾದವನು ಸ್ನಾನಮಾಡಿ ಯಾವುದಾದರೂ ಸಾಧ್ಯವಾದುದನ್ನು ದಾನಮಾಡಬೇಕು. ಮತ್ತು ಮಂತ್ರಪೂರ್ವಕವಾಗಿ ನೂರೆಂಟು ಸೂರ್ಯ ನಮಸ್ಕಾರಗಳನ್ನು ಮಾಡಬೇಕು.

೧೩೩. ಸಾಧ್ಯವಾದರೆ ಸಾವಿರ ಅಥವಾ ಹತ್ತು ಸಾವಿರ ಅಥವಾ ಲಕ್ಷ ಇಲ್ಲವೆ ಕೋಟಿ ಸೂರ್ಯ ನಮಸ್ಕಾರಗಳನ್ನು ಮಾಡಬೇಕು. ನಮಸ್ಕಾರವೆಂಬ ಯಜ್ಞದಿಂದ ಸರ್ವದೇವತೆಗಳೂ ಸಂತುಷ್ಟರಾಗುವರು.

೧೩೪-೧೩೫. ಓ ಪ್ರಭುವೇ! ನಿನ್ನ ಸ್ವರೂಪದಲ್ಲಿ ನನ್ನ ಬುದ್ಧಿಯು ನೆಲಸಿರುವುದು. ನಿನ್ನ ಹೊರತು ಇನ್ನಾವ ಅಶೂನ್ಯ (ಸ್ಥಿರ) ವಾದ ವಸ್ತುವನ್ನೂ ನನ್ನ ಬುದ್ಧಿಯು ಅಪೇಕ್ಷಿಸುವುದಿಲ್ಲ. ನನ್ನಲ್ಲಿರುವ ಅಹಂಕಾರವು ನಿನ್ನ ದರ್ಶನವಾದೊಡನೆಯೇ ನಷ್ಟವಾಯಿತು. ನಾನು ದೇಹದೊಡನೆ ನಿನಗೆ ನಮ್ರನಾಗಿರುವೆನು. ನೀನು ಮಹಾಪುರುಷನು, ನನ್ನ ಸ್ವರೂಪವು ಶೂನ್ಯವಾದುದಲ್ಲ. ನಿನಗೆ ನಾನು ದಾಸನಾಗಿರುವೆನು ಎಂದು ಪ್ರಾರ್ಥಿಸಿ ಈ ರೀತಿಯಾಗಿ ನಾನು ನಿನ್ನ ದಾಸನು ಎಂಬ ಆತ್ಮಯಜ್ಞರೂಪವಾದ ನಮಸ್ಕಾರವನ್ನು ಮಾಡಬೇಕು.

ಯಥಾಯೋಗ್ಯಂ ಸ್ವಾತ್ಮಯಜ್ಞಂ ನಮಸ್ಕಾರಂ ಪ್ರಕಲ್ಪಯೇತ್ ।
ಅಥಾತ್ರ ಶಿವನೈವೇದ್ಯಂ ದತ್ವಾ ತಾಂಬೂಲಮಾಹರೇತ್ ॥ ೧೩೬ ॥

ಶಿವಪ್ರದಕ್ಷಿಣಂ ಕುರ್ಯಾತ್ಸ್ವಯಮಷ್ಟೋತ್ತರಂ ಶತಂ ।
ಸಹಸ್ರಮಯುತಂ ಲಕ್ಷಂ ಕೋಟಿಮನ್ಯೇನ ಕಾರಯೇತ್ ॥ ೧೩೭ ॥

ಶಿವಪ್ರದಕ್ಷಿಣಾತ್ಸರ್ವಂ ಪಾತಕಂ ನಶ್ಯತಿ ಕ್ಷಣಾತ್ ।
ದುಃಖಸ್ಯ ಮೂಲಂ ವ್ಯಾಧಿರ್ಹಿ ವ್ಯಾಧೇರ್ಮೂಲಂ ಹಿ ಪಾತಕಂ ॥ ೧೩೮ ॥

ಧರ್ಮೇಣೈವ ಹಿ ಪಾಪಾನಾಮುಪನೋದನಮೀರಿತಂ ,
ಶಿವೋದ್ದೇಶಕೃತೋ ಧರ್ಮಃ ಕ್ಷಮಃ ಪಾಪವಿನೋದನೇ ॥ ೧೩೯ ॥

ಅಧ್ಯಕ್ಷಂ ಶಿವಧರ್ಮೇಷು ಪ್ರದಕ್ಷಿಣಮಿತೀರಿತಂ ।
ಕ್ರಿಯಯಾ ಜಪರೂಪಂ ಹಿ ಪ್ರಣವಂ ತು ಪ್ರದಕ್ಷಿಣಂ ॥ ೧೪೦ ॥

---

೧೩೬-೧೩೭. ಆಮೇಲೆ ಶಾಂತಿಕರ್ಮದಲ್ಲಿ ಶಿವನಿಗೆ ನೈವೇದ್ಯವನ್ನು ಮಾಡಿ ತಾಂಬೂಲವನ್ನರ್ಪಿಸಬೇಕು. ಬಳಿಕ ತಾನೇ ನೂರೆಂಟು ಪ್ರದಕ್ಷಿಣ ನಮಸ್ಕಾರಗಳನ್ನು ಶಿವನಿಗೆ ಮಾಡಬೇಕು. ಸಾವಿರ, ಹತ್ತು ಸಾವಿರ ಇಲ್ಲವೆ ಲಕ್ಷ, ಅಥವಾ ಕೋಟಿ ನಮಸ್ಕಾರಗಳನ್ನು ಇನ್ನೊಬ್ಬರಿಂದ ಮಾಡಿಸಬೇಕು.

೧೩೮. ಶಿವನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿದರೆ ಸಕಲ ಪಾಪಗಳೂ ನಾಶವಾಗುವವು. ದುಃಖಕ್ಕೆ ರೋಗವೇ ಕಾರಣ. ಆ ರೋಗಕ್ಕೆ ಪಾಪವು ಕಾರಣ.

೧೩೯. ಧರ್ಮದಿಂದಲೇ ಪಾಪಗಳು ನಾಶವಾಗುವವು. ಶಿವನನ್ನುದ್ದೇಶಿಸಿ ಮಾಡುವಂತಹ ಪ್ರದಕ್ಷಿಣ ಮುಂತಾದ ಧರ್ಮಗಳು ಪಾಪಗಳನ್ನು ಹೋಗಲಾಡಿಸುವವು.

೧೪೦. ಶಿವನನ್ನುದ್ದೇಶಿಸಿ ಮಾಡುವಂತಹ ಧರ್ಮಗಳಲ್ಲಿ ಪ್ರದಕ್ಷಿಣ ನಮಸ್ಕಾರವು ಶ್ರೇಷ್ಠವಾದುದು. ಜಪರೂಪವಾದ (ಜಪಿಸಲ್ಪಡುವ) ಪ್ರಣವವೂ ಸಹ ಕ್ರಿಯಾರೂಪ ಪ್ರದಕ್ಷಿಣವು.

ಜನನಂ ಮರಣಂ ದ್ವಂದ್ವಂ ಮಾಯಾಚಕ್ರಮಿತೀರಿತಂ ।
ಶಿವಸ್ಯ ಮಾಯಾಚಕ್ರಂ ಹಿ ಬಲಿಪೀಠಂ ತದುಚ್ಯತೇ ॥ ೧೪೧ ॥

ಬಲಿಪೀಠಂ ಸಮಾರಭ್ಯ ಪ್ರಾದಕ್ಷಿಣ್ಯಕ್ರಮೇಣ ವೈ ।
ಪದೇ ಪದಾಂತರಂ ಗತ್ವಾ ಬಲಿಪೀಠಂ ಸಮಾವಿಶೇತ್ ॥ ೧೪೨ ॥

ನಮಸ್ಕಾರಂ ತತಃ ಕುರ್ಯಾತ್ಪ್ರದಕ್ಷಿಣಮಿತೀರಿತಂ ।
ನಿರ್ಗಮಾಜ್ಜನನಂ ಪ್ರಾಪ್ತಂ ನಮಸ್ತ್ವಾತ್ಮಸಮರ್ಪಣಂ ॥ ೧೪೩ ॥

ಜನನಂ ಮರಣಂ ದ್ವಂದ್ವಂ ಶಿವಮಾಯಾಸಮರ್ಪಿತಂ ।
ಶಿವಮಾಯಾರ್ಪಿತದ್ವಂದ್ವೋ ನ ಪುನಸ್ತ್ವಾತ್ಮಭಾಗ್ಭವೇತ್ ॥ ೧೪೪ ॥

ಯಾವದ್ದೇಹಂ ಕ್ರಿಯಾಧೀನಃ ಸ ಜೀವೋ ಬದ್ಧ ಉಚ್ಯತೇ ।
ದೇಹತ್ರಯವಶೀಕಾರೇ ಮೋಕ್ಷ ಇತ್ಯುಚ್ಯತೇ ಬುಧೈಃ ॥ ೧೪೫ ॥

---

೧೪೧. ಪ್ರಾಣಿಗಳಿಗೆ ಒದಗುತ್ತಿರುವ ಜನನ ಮತ್ತು ಮರಣಗಳಿಗೆ ಮಾಯಾ ಚಕ್ರವೆಂದು ಹೆಸರು. ಶಿವನ ಬಲಿಪೀಠವು ಆ ಮಾಯಾಚಕ್ರದ ಸ್ವರೂಪವಾದುದು.

೧೪೨. ಬಲಿಪೀಠದಿಂದ ಪ್ರಾರಂಭಿಸಿ ಶಿವಾದೇವಾಲಯವನ್ನು ಒಂದು ಸುತ್ತು ಬಂದು ತಿರುಗಿ ಬಲಿಪೀಠದ ಬಳಿಗೆ ಬಂದು ಬಳಿಕ ನಮಸ್ಕಾರವನ್ನು ಮಾಡಬೇಕು. ಇದಕ್ಕೆಪ್ರದಕ್ಷಿಣವೆಂದು ಹೆಸರು.

೧೪೩. ಮಾತೃಗರ್ಭದಿಂದ ಜನಿಸುವುದೇ ಜನನವು. ನಮಸ್ಕಾರವು, ಆತ್ಮ ಸ್ವರೂಪವನ್ನು ಶಿವನಲ್ಲಿ ಅರ್ಪಿಸುವದು ಎಂದರೆ ಶಿವನೊಡನೆ ಐಕ್ಯವಾಗುವದು. ಜನನ ಮತ್ತು ಮರಣ ಎಂಬ ಈ ದ್ವಂದ್ವ (ಜೊತೆ) ವು ಶಿವನ ಮಾಯೆಯಿಂದ ನಿರ್ಮಿತ ವಾಗಿರುವದು.

೧೪೪-೧೪೫. ಶಿವನ ಮಾಯೆಯಿಂದ ಬದ್ಧನಾಗಿ ಜನನಮರಣವುಳ್ಳವನು ತಿರುಗಿ ಆತ್ಮಸ್ವರೂಪವನ್ನು ಪಡೆಯುವದು ಕಷ್ಟವು. ಅವನು ದೇಹವಿರುವ ಪರ್ಯಂತವೂ ಕ್ರಿಯೆಗಳಿಗೆ ಅಧೀನನಾಗಿಯೇ ಇರುವನು. ಅವನಿಗೆ ಬದ್ಧಜೀವನೆಂದು ಹೆಸರು. ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಈ ಮೂರು ಶರೀರಗಳನ್ನು ವಶವಲ್ಲಿಟ್ಟು ಕೊಂಡಿರುವವನು ಮುಕ್ತನು.

ಮಾಯಾಚಕ್ರಪ್ರಣೇತಾ ಹಿ ಶಿವಃ ಪರಮಕಾರಣಂ ।
ಶಿವಮಾಯಾರ್ಪಿತದ್ವಂದ್ವಂ ಶಿವಸ್ತು ಪರಿಮಾರ್ಜತಿ ॥ ೧೪೬ ॥

ಶಿವೇನ ಕಲ್ಪಿತಂ ದ್ವಂದ್ವಂ ತಸ್ಮಿನ್ನೇವ ಸಮರ್ಪಯೇತ್ ।
ಶಿವಸ್ಯಾತಿಪ್ರಿಯಂ ವಿದ್ಯಾತ್ಪ್ರದಕ್ಷಿಣಂ ನಮೋ ಬುಧಾಃ ॥ ೧೪೭ ॥

ಪ್ರದಕ್ಷಿಣನಮಸ್ಕಾರೈಃ ಶಿವಸ್ಯ ಪರಮಾತ್ಮನಃ ।
ಷೋಡಶೈರುಪಚಾರೈಶ್ಚ ಕೃತಾ ಪೂಜಾ ಫಲಪ್ರದಾ ॥ ೧೪೮ ॥

ಪ್ರದಕ್ಷಿಣಾವಿನಾಶ್ಯಂ ಹಿ ಪಾತಕಂ ನಾಸ್ತಿ ಭೂತಲೇ ।
ತಸ್ಮಾತ್ಪ್ರದಕ್ಷಿಣೇನೈವ ಸರ್ವಪಾಪಂ ವಿನಾಶಯೇತ್ ॥ ೧೪೯ ॥

ಶಿವಪೂಜಾಪರೋ ಮೌನೀ ಸತ್ಯಾದಿಗುಣಸಂಯುತಃ ।
ಕ್ರಿಯಾತಪೋಜಪಜ್ಞಾನಧ್ಯಾನೇಷ್ವೇಕೈಕಮಾಚರೇತ್ ॥ ೧೫೦ ॥

---

೧೪೬. ಜಗತ್ತಿಗೆ ಪರಮಕಾರಣನಾದ ಶಿವನು ಜನ್ಮಮರಣರೂಪವಾದ ಈ ಮಾಯಾಚಕ್ರವನ್ನು ನಿರ್ಮಿಸಿರುವನು. ಶಿವಮಾಯೆಯಿಂದ ಬಂದಿರುವ ಜನನ ಮರಣಗಳನ್ನು ಶಿವನೊಬ್ಬನು ಮಾತ್ರ ಹೋಗಲಾಡಿಸಲು ಸಮರ್ಥನು.

೧೪೭. ಶಿವನು ನಿರ್ಮಿಸಿರುವ ಜನನಮರಣಗಳನ್ನು ಅವನಲ್ಲಿಯೇಸಮರ್ಪಿಸ ಬೇಕು. ಎಲೈ ಪಂಡಿತರಾದ ಬ್ರಾಹ್ಮಣರೇ, ಪ್ರದಕ್ಷಿಣ ನಮಸ್ಕಾರವು ಶಿವನಿಗೆ ತುಂಬಾ ಪ್ರಿಯವಾದುದು.

೧೪೮. ಪ್ರದಕ್ಷಿಣ ನಮಸ್ಕಾರಗಳೊಡನೆ ಷೋಡಶೋಪಚಾರಗಳಿಂದ ಪರ ಮಾತ್ಮನಾದ ಶಿವನಿಗೆ ಪೂಜೆಯನ್ನು ಮಾಡಿದರೆ ನಿಶ್ಚಯವಾಗಿಯೂ ಫಲವು ಲಭಿಸುವದು.

೧೪೯. ಪ್ರದಕ್ಷಿಣ ನಮಸ್ಕಾರಗಳಿಂದ ಹೋಗದಿರುವಂತಹ ಪಾಪವೇ ಭೂಮಿ ಯಲ್ಲಿಲ್ಲ. ಆದುದರಿಂದ ಪ್ರದಕ್ಷಿಣದಿಂದಲೇ ಸಕಲ ಪಾಪಗಳನ್ನು ನಾಶಮಾಡಿ ಕೊಳ್ಳಬೇಕು.

೧೫೦. ಶಿವಪೂಜೆಯಲ್ಲಿ ನಿರತನಾದವನು, ಮೌನಿಯೂ, ಸತ್ಯ, ಅಸ್ತೇಯ ಮುಂತಾದ ಗುಣಗಳುಳ್ಳವನೂ ಆಗಿದ್ದು, ಕ್ರಿಯೆ, ತಪಸ್ಸು, ಜಪ, ಜ್ಞಾನ, ಧ್ಯಾನ ಇವುಗಳಲ್ಲಿ ಒಂದೊಂದನ್ನೂ ಬಿಡದೆ ಆಚರಿಸಬೇಕು.

ಐಶ್ವರ್ಯಂ ದಿವ್ಯದೇಹಶ್ಚ ಜ್ಞಾನಮಜ್ಞಾನಸಂಕ್ಷಯಃ ।
ಶಿವಸಾನ್ನಿಧ್ಯಮಿತ್ಯೇ ತತ್ಕ್ರಿಯಾದೀನಾಂ ಫಲಂ ಭವೇತ್ ॥ ೧೫೧ ॥

ಕರಣೇನ ಫಲಂ ಯಾತಿ ತಮಸಃ ಪರಿಹಾಪನಾತ್ ।
ಜನ್ಮನಃ ಪರಿಮಾರ್ಜಿತ್ವಾಜ್ಞ್ಞಾಬುದ್ಧ್ಯಾ ಜನಿತಾನಿವ ॥ ೧೫೨ ॥

ಯಥಾದೇಶಂ ಯಥಾಕಾಲಂ ಯಥಾದೇಹಂ ಯಥಾಧನಂ ।
ಯಥಾಯೋಗ್ಯಂ ಪ್ರಕುರ್ವೀತ ಕ್ರಿಯಾದೀರ್ಞ ಶಿವಭಕ್ತಿಮಾರ್ನ ॥ ೧೫೩ ॥

ನ್ಯಾಯಾರ್ಜಿತಸುವಿತ್ತೇನ ವಸೇತ್ಪ್ರಾಜ್ಞಃ ಶಿವಸ್ಥಲೇ ।
ಪಂಚಾಕ್ಷರೇಣ ಜಪ್ತಂ ಚ ತೋಯಮನ್ನಂ ವಿದುರ್ಬುಧಾಃ ॥ ೧೫೪ ॥

ಜೀವಹಿಂಸಾದಿರಹಿತಮತಿಕ್ಲೇಶವಿವರ್ಜಿತಂ ।
ಅಥವಾಹುರ್ದರಿದ್ರಸ್ಯ ಭಿಕ್ಷಾನ್ನಂ ಜ್ಞಾನದಂ ಭವೇತ್ ॥ ೧೫೫ ॥

---

೧೫೧. ಶಿವನ ಕ್ರಿಯೆಗೆ ಐಶ್ವರ್ಯವು ಫಲವು. ಮತ್ತು ತಪಸ್ಸಿಗೆ ದಿವ್ಯವಾದ ದೇಹ, ಜಪಕ್ಕೆ ಜ್ಞಾನ, ಜ್ಞಾನಕ್ಕೆ ಅಜ್ಞಾನನಾಶ, ಧ್ಯಾನಕ್ಕೆ ಶಿವನ ಸಾನಿಧ್ಯ ಇವುಗಳು ಫಲಗಳು.

೧೫೨. ಮೇಲೆ ಹೇಳಿದ ಐದು ಸಾಧನಗಳಿಂದ ಅಜ್ಞಾನವನ್ನು ಕಳೆದುಕೊಂಡು ತಿರುಗಿ ಜನ್ಮವನ್ನು ಪಡೆಯದೆ, ತತ್ತ್ವಜ್ಞಾನವುಳ್ಳವನಾಗಿ ಉತ್ತಮವಾದ ಫಲ (ಮುಕ್ತಿ) ವನ್ನು ಪಡೆಯುವನು.

೧೫೩. ಕಾಲ ಮತ್ತು ದೇಶಗಳಿಗೆ ಅನುಗುಣವಾಗಿಯೂ ಮತ್ತು ತನ್ನ ಶರೀರ, ಧನಗಳಿಗೆ ಅನುಗುಣವಾಗಿಯೂ ಕ್ರಿಯೆ ಮುಂತಾದ ಮುಕ್ತಿ ಸಾಧನಗಳನ್ನು ಶಿವಭಕ್ತನು ಯೋಗ್ಯತೆಯನ್ನು ಮೀರದೆ ಆಚರಿಸಬೇಕು.

೧೫೪-೧೫೫. ನ್ಯಾಯವಾಗಿ ಸಂಪಾದಿಸಿದ ಧನದಿಂದ ಶಿವಕ್ಷೇತ್ರದಲ್ಲಿ ವಾಸಮಾಡಬೇಕು. ಜೀವಹಿಂಸೆಯಾಗದಿರುವಂತಹ ಮತ್ತು ಹೆಚ್ಚು ಕ್ಲೇಶಸಾಧ್ಯವಲ್ಲದಂತಹ ಆಹಾರವನ್ನು ಪಂಚಾಕ್ಷರಮಂತ್ರದಿಂದ ಜಪಿಸಿ ಸೇವಿಸಿದರೆ ಸುಖವಾಗುವುದು. ಅಥವಾ ದರಿದ್ರನಿಗೆ ಭಿಕ್ಷಾನ್ನವು ಜ್ಞಾನಪ್ರದವಾದುದು. ದರಿದ್ರನು ಭಿಕ್ಷಾನ್ನವನ್ನು ತಂದು ಸೇವಿಸಬಹುದು.

ಶಿವಭಕ್ತಸ್ಯ ಭಿಕ್ಷಾನ್ನಂ ಶಿವಭಕ್ತಿವಿವರ್ಧನಂ ।
ಶಂಭುಸತ್ರಮಿತಿ ಪ್ರಾಹುರ್ಭಿಕ್ಷಾನ್ನಂ ಶಿವಯೋಗಿನಃ　　॥ ೧೫೬ ॥

ಯೇನ ಕೇನಾಪ್ಯುಪಾಯೇನ ಯತ್ರ ಕುತ್ರಾಪಿ ಭೂತಲೇ ।
ಶುದ್ಧಾನ್ನಭುಕ್ಸದಾ ಮೌನೀ ರಹಸ್ಯಂ ನ ಪ್ರಕಾಶಯೇತ್　　॥ ೧೫೭ ॥

ಪ್ರಕಾಶಯೇತ್ತು ಭಕ್ತಾನಾಂ ಶಿವಮಾಹಾತ್ಮ್ಯಮೇವ ಚ ।
ರಹಸ್ಯಂ ಶಿವಮಂತ್ರಸ್ಯ ಶಿವೋ ಜಾನಾತಿ ನಾಪರಃ　　॥ ೧೫೮ ॥

ಶಿವಭಕ್ತೋ ವಸೇನ್ನಿತ್ಯಂ ಶಿವಲಿಂಗಂ ಸಮಾಶ್ರಿತಃ ।
ಸ್ಥಾಣುಲಿಂಗಾಶ್ರಯೇಣೈವ ಸ್ಥಾಣುರ್ಭವತಿ ಭೂಸುರಾಃ　　॥ ೧೫೯ ॥

ಪೂಜಯಾ ಚರಲಿಂಗಸ್ಯ ಕ್ರಮಾನ್ಮುಕ್ತೋ ಭವೇದ್ಧ್ರುವಂ ।
ಸರ್ವಮುಕ್ತಿಂ ಸಮಾಸೇನ ಸಾಧ್ಯಸಾಧನಮುತ್ತಮಂ　　॥ ೧೬೦ ॥

ವ್ಯಾಸೇನ ಯತ್ಪುರಾ ಪ್ರೋಕ್ತಂ ಯಚ್ಛ್ರುತಂ ಹಿ ಮಯಾ ಪುರಾ ।
ಭದ್ರಮಸ್ತು ಹಿ ವೋಽಸ್ಮಾಕಂ ಶಿವಭಕ್ತಿರ್ದೃಢಾಸ್ತು ಸಾ　　॥ ೧೬೧ ॥

---

೧೫೬. ಶಿವಭಕ್ತಿಯಿಂದ ತಂದ ಭಿಕ್ಷಾನ್ನವು ಶಿವಭಕ್ತಿಯನ್ನು ಹೆಚ್ಚಿಸುವದು. ಭಿಕ್ಷಾನ್ನವು ಶಂಭುವಿನ "ಸತ್ರ" (ಛತ್ರ) ವೆಂದು ಶಿವಯೋಗಿಗಳು ಹೇಳಿರುವರು.

೧೫೭. ಯಾವುದಾದರೂ ಶುದ್ಧವಾದ ಪ್ರದೇಶದಲ್ಲಿ ಕುಳಿತು ಯಾರಿಗೂ ಕಾಣಿಸದಂತೆ ಮೌನವಾಗಿ ಶುದ್ಧವಾದ ಅನ್ನವನ್ನು ಸೇವಿಸಬೇಕು. ಬಹಿರಂಗವಾಗಿ ಸೇವಿಸಬಾರದು.

೧೫೮. ಶಿವಭಕ್ತರಿಗೆ ಶಿವಮಾಹಾತ್ಮ್ಯವನ್ನು ಹೇಳಬೇಕು. ಶಿವಮಂತ್ರದ ರಹಸ್ಯವನ್ನು ಶಿವನೇ ಬಲ್ಲವನು. ಇನ್ನಾವನಿಗೂ ತಿಳಿಯದು.

೧೫೯. ಶಿವಭಕ್ತನು ನಿತ್ಯವೂ ಶಿವಲಿಂಗವನ್ನಾಶ್ರಯಿಸಿ ಇರಬೇಕು. ಎಲೈ ಬ್ರಾಹ್ಮಣೋತ್ತಮರೇ! ಆರೀತಿ ಶಿವಲಿಂಗವನ್ನಾಶ್ರಯಿಸಿರುವವನು, ಶಿವಸ್ವರೂಪವನ್ನು ಪಡೆಯುವನು. ಚರವಾದ ಶಿವಲಿಂಗವನ್ನರ್ಚಿಸಿದರೆ ಕ್ರಮವಾಗಿ ಮುಕ್ತಿಯು ಲಭಿಸುವದು.

೧೬೦-೧೬೧. ಎಲೈ ವಿಪ್ರೋತ್ತಮರೇ! ಹಿಂದೆ ವ್ಯಾಸಮುನಿಯು ನನಗೆ ಯಾವುದನ್ನು ಹೇಳಿದ್ದನೋ ಅದೆಲ್ಲವನ್ನೂ ಎಂದರೆ ಸಾಧ್ಯ (ಫಲ) ಮತ್ತು ಸಾಧನ

ಯ ಇಮಂ ಪಠತೇಽಧ್ಯಾಯಂ ಯಃ ಶೃಣೋತಿ ನರಃ ಸದಾ ।
ಶಿವಜ್ಞಾನಂ ಸ ಲಭತೇ ಶಿವಸ್ಯ ಕೃಪಯಾ ಬುಧಾಃ ॥ ೧೬೨ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಶಿವಲಿಂಗಮಾಹಾತ್ಮ್ಯವರ್ಣನಂ ನಾಮಾಷ್ಟಾ
ದಶೋಽಧ್ಯಾಯಃ.

---

ಗಳನ್ನು ಸಂಕ್ಷೇಪವಾಗಿ ನಿಮಗೆ ಹೇಳಿರುವೆನು. ಶಿವನು ನಮ್ಮೆಲ್ಲರಿಗೂ ಮಂಗಳವನ್ನುಂಟುಮಾಡಲಿ, ಶಿವಭಕ್ತಿಯು ನಮ್ಮಲ್ಲಿ ದೃಢವಾಗಿರಲಿ.

೧೬೨. ಎಲೈ ಪಂಡಿತೋತ್ತಮರೇ! ಈ ಅಧ್ಯಾಯವನ್ನು ಪಠಿಸುವವನೂ ಕೇಳುವವನೂ ಸಹ ಶಿವನ ಅನುಗ್ರಹಕ್ಕೆ ಪಾತ್ರನಾಗಿ ಶಿವಸ್ವರೂಪಜ್ಞಾನವನ್ನು ಪಡೆಯುವನು.

ಇಲ್ಲಿಗೆ ಶ್ರೀಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರಸಂಹಿತೆಯಲ್ಲಿ
ಶಿವಲಿಂಗಮಾಹಾತ್ಮ್ಯವರ್ಣನವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಏಕೋನವಿಂಶೋಽಧ್ಯಾಯಃ

---

|| ಋಷಯ ಊಚುಃ ||

ಸೂತ ಸೂತ ಚಿರಂಜೀವ ಧನ್ಯಸ್ತ್ವಂ ಶಿವಭಕ್ತಿಮಾನ್ ।
ಸಮ್ಯಗುಕ್ತಸ್ತ್ವಯಾ ಲಿಂಗಮಹಿಮಾ ಸತ್ಫಲಪ್ರದಃ || ೧ ||

ಯತ್ರ ಪಾರ್ಥಿವಮಾಹೇಶಲಿಂಗಸ್ಯ ಮಹಿಮಾಽಧುನಾ ।
ಸರ್ವೋತ್ಕೃಷ್ಟಶ್ಚ ಕಥಿತೋ ವ್ಯಾಸತೋ ಬ್ರೂಹಿ ತಂ ಪುನಃ || ೨ ||

|| ಸೂತ ಉವಾಚ ||

ಶೃಣುಧ್ವಮೃಷಯಃ ಸರ್ವೇ ಸದ್ಭಕ್ತ್ಯಾದರತೋಽಖಿಲಾಃ ।
ಶಿವಪಾರ್ಥಿವಲಿಂಗಸ್ಯ ಮಹಿಮಾ ಪ್ರೋಚ್ಯತೇ ಮಯಾ || ೩ ||

---

### ಹತ್ತೊಂಭತ್ತನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು :—ಓ ಸೂತಮುನಿ, ನೀನು ಬಹಳ ಕಾಲ ಬದುಕುವವನಾಗು ! ಶಿವಭಕ್ತಿಯುಳ್ಳ ನೀನೇ ಧನ್ಯನು. ಒಳ್ಳೆಯ ಫಲಗಳನ್ನು ಕೊಡುವಂತಹ ಲಿಂಗಮಹಿಮೆಯನ್ನು ಚನ್ನಾಗಿ ವಿವರಿಸಿರುವೆಯಷ್ಟೆ. ಈಗ ವ್ಯಾಸಮುನಿಯು ನಿನಗೆ ಉಪದೇಶಿಸಿರುವ ಸರ್ವೋತ್ಕೃಷ್ಟವಾದ ಪರಮೇಶ್ವರನ ಪಾರ್ಥಿವಲಿಂಗದ ಮಹಿಮೆಯನ್ನು ನಮಗೆ ಹೇಳು ಎಂದು ಪ್ರಾರ್ಥಿಸಲು,

೩. ಸೂತಮುನಿಯು ಹೇಳಿದನು :—ಎಲೈ ಋಷಿಗಳೇ ! ಶಿವನ ಪಾರ್ಥಿವ ಲಿಂಗದ ಮಾಹಾತ್ಮ್ಯವನ್ನು ಹೇಳುವೆನು. ಆದರದಿಂದ ಕೇಳಿರಿ.

ಉಕ್ತೇಷ್ವೇತೇಷು ಲಿಂಗೇಷು ಪಾರ್ಥಿವಂ ಲಿಂಗಮುತ್ತಮಂ।
ತಸ್ಯ ಪೂಜನತೋ ವಿಪ್ರಾ ಬಹವಃ ಸಿದ್ಧಿಮಾಗತಾಃ ॥ ೪ ॥

ಹರಿಬ್ರ್ಹ್ಮಾ ಚ ಋಷಯಃ ಸಪ್ರಜಾಪತಯಸ್ತಥಾ ।
ಸಂಪೂಜ್ಯ ಪಾರ್ಥಿವಂ ಲಿಂಗಂ ಪ್ರಾಪುಸ್ಸರ್ವೇಽಪ್ಸಿತಂ ದ್ವಿಜಾಃ ॥ ೫ ॥

ದೇವಾಸುರಮನುಷ್ಯಾಶ್ಚ ಗಂಧರ್ವೋರಗರಾಕ್ಷಸಾಃ ।
ಅನ್ಯೇಽಪಿ ಬಹವಸ್ತಂ ಸಂಪೂಜ್ಯ ಸಿದ್ಧಿಂ ಗತಾಃ ಪರಾಂ ॥ ೬ ॥

ಕೃತೇ ರತ್ನಮಯಂ ಲಿಂಗಂ ತ್ರೇತಾಯಾಂ ಹೇಮಸಂಭವಂ ।
ದ್ವಾಪರೇ ಪಾರದಂ ಶ್ರೇಷ್ಠಂ ಪಾರ್ಥಿವಂ ತು ಕಲೌಯುಗೇ ॥ ೭ ॥

ಅಷ್ಟಮೂರ್ತಿಷು ಸರ್ವಾಸು ಮೂರ್ತಿರ್ನ್ಯೆ ಪಾರ್ಥಿವೀ ವರಾ ।
ಅನನ್ಯಪೂಜಿತಾ ವಿಪ್ರಾಸ್ತಪಸ್ತಸ್ಮಾನ್ಮಹತ್ಫಲಂ ॥ ೮ ॥

---

೪. ಈಗ ಹೇಳಿರುವ ಲಿಂಗಗಳಲ್ಲೆಲ್ಲಾ ಪಾರ್ಥಿವಲಿಂಗವೇ ಉತ್ತಮವಾದುದು. ಅದನ್ನು ಪೂಜಿಸಿ ಅನೇಕರು ಸಿದ್ಧಿಯನ್ನು ಪಡೆದಿರುವರು.

೫. ಬ್ರಹ್ಮ, ವಿಷ್ಣು, ಋಷಿಗಳು ಮತ್ತು ದಕ್ಷ ಮುಂತಾದ ಮಿಕ್ಕ ಪ್ರಜಾಪತಿಗಳು, ಇವರೆಲ್ಲರೂ ಪಾರ್ಥಿವಲಿಂಗವನ್ನು ಪೂಜಿಸಿ ಬೇಕಾದ ಇಷ್ಟಾರ್ಥಗಳನ್ನು ಪಡೆದಿರುವರು.

೬. ಇನ್ನೂ ಅನೇಕ ದೇವತೆಗಳು, ರಾಕ್ಷಸರು, ಮನುಷ್ಯರು, ನಾಗರು, ಅಸುರರು ಮುಂತಾದವರು ಪಾರ್ಥಿವಲಿಂಗಗಳನ್ನು ಪೂಜಿಸಿ ಇಷ್ಟಸಿದ್ಧಿಯನ್ನು ಪಡೆದಿರುವರು.

೭. ಕೃತಯುಗದಲ್ಲಿ ರತ್ನಮಯವಾದ ಲಿಂಗವು ಉತ್ತಮವಾದುದು. ತ್ರೇತಾಯುಗದಲ್ಲಿ ಸುವರ್ಣಲಿಂಗವು ಉತ್ತಮವು. ದ್ವಾಪರಯುಗದಲ್ಲಿ (ಪಾದ) ರಸದ ಲಿಂಗವು ಶ್ರೇಷ್ಠವಾದುದು. ಕಲಿಯುಗದಲ್ಲಿ ಪಾರ್ಥಿವಲಿಂಗವು ಶ್ರೇಷ್ಠವು.

೮. ಈಶ್ವರನ ಎಂಟು ಮೂರ್ತಿಗಳಲ್ಲಿ ಪೃಥಿವೀರೂಪವಾದ ಮೂರ್ತಿಯು ಶ್ರೇಷ್ಠವಾದುದು. ಇನ್ನಾವುದನ್ನೂ ಅಪೇಕ್ಷಿಸದೆ ಆ ಪಾರ್ಥಿವಮೂರ್ತಿಯನ್ನೇ ಕುರಿತು ತಪಸ್ಸುಮಾಡಿದರೆ ಮಹತ್ತಾದ ಫಲವು ಲಭಿಸುವದು.

ಯಥಾ ಸರ್ವೇಷು ದೇವೇಷು ಜ್ಯೇಷ್ಠಃ ಶ್ರೇಷ್ಠೋ ಮಹೇಶ್ವರಃ ।
ಏವಂ ಸರ್ವೇಷು ಲಿಂಗೇಷು ಪಾರ್ಥಿವಂ ಶ್ರೇಷ್ಠಮುಚ್ಯತೇ ॥ ೯ ॥

ಯಥಾ ನದೀಷು ಸರ್ವಾಸು ಜ್ಯೇಷ್ಠಾ ಶ್ರೇಷ್ಠಾ ಸುರಾಪಗಾ ।
ತಥಾ ಸರ್ವೇಷು ಲಿಂಗೇಷು ಪಾರ್ಥಿವಂ ಲಿಂಗಮುಚ್ಯತೇ ॥ ೧೦ ॥

ಯಥಾ ಸರ್ವೇಷು ಮಂತ್ರೇಷು ಪ್ರಣವೋ ಹಿ ಮಹಾನ್ ಸ್ಮೃತಃ ।
ತಥೇದಂ ಪಾರ್ಥಿವಂ ಶ್ರೇಷ್ಠಮಾರಾಧ್ಯಂ ಪೂಜ್ಯಮೇವ ಹಿ ॥ ೧೧ ॥

ಯಥಾ ವರ್ಣೇಷು ಸರ್ವೇಷು ಬ್ರಾಹ್ಮಣಃ ಶ್ರೇಷ್ಠ ಉಚ್ಯತೇ ।
ತಥಾ ಸರ್ವೇಷು ಲಿಂಗೇಷು ಪಾರ್ಥಿವಂ ಶ್ರೇಷ್ಠಮುಚ್ಯತೇ ॥ ೧೨ ॥

ಯಥಾ ಪುರೀಷು ಸರ್ವಾಸು ಕಾಶೀ ಶ್ರೇಷ್ಠತಮಾ ಸ್ಮೃತಾ ।
ತಥಾ ಸರ್ವೇಷು ಲಿಂಗೇಷು ಪಾರ್ಥಿವಂ ಶ್ರೇಷ್ಠಮುಚ್ಯತೇ ॥ ೧೩ ॥

ಯಥಾ ವ್ರತೇಷು ಸರ್ವೇಷು ಶಿವರಾತ್ರಿವ್ರತಂ ಪರಂ ।
ತಥಾ ಸರ್ವೇಷು ಲಿಂಗೇಷು ಪಾರ್ಥಿವಂ ಶ್ರೇಷ್ಠಮುಚ್ಯತೇ ॥ ೧೪ ॥

ಯಥಾ ದೇವೀಷು ಸರ್ವಾಸು ಶೈವೀ ಶಕ್ತಿಃ ಪರಾ ಸ್ಮೃತಾ ।
ತಥಾ ಸರ್ವೇಷು ಲಿಂಗೇಷು ಪಾರ್ಥಿವಂ ಶ್ರೇಷ್ಠಮುಚ್ಯತೇ ॥ ೧೫ ॥

---

೯. ದೇವತೆಗಳಲ್ಲಿ ಮಹೇಶ್ವರನು ಮೊದಲನೆಯುವನೂ ಶ್ರೇಷ್ಠನೂ ಆಗಿರುವಂತೆ ಲಿಂಗಗಳಲ್ಲೆಲ್ಲಾ ಪ್ರಾರ್ಥಿವಲಿಂಗವು ಶ್ರೇಷ್ಠವಾದುದು.

೧೦-೧೨. ನದಿಗಳಲ್ಲಿ ಗಂಗೆಯು ಮೊದಲನೆಯುದೂ ಶ್ರೇಷ್ಠವೂ ಆಗಿರುವಂತೆ ಲಿಂಗಗಳಲ್ಲಿ ಪ್ರಾರ್ಥಿವಲಿಂಗವು ಶ್ರೇಷ್ಠವಾದುದು. ಮಂತ್ರಗಳಲ್ಲಿ ಪ್ರಣವವು ಶ್ರೇಷ್ಠವಾಗಿರುವಂತೆ ಈ ಪ್ರಾರ್ಥಿವಲಿಂಗವೂ ಸಹ ಶೇಷ್ಠವೂ, ಆರಾಧಿಸಲು ಯೋಗ್ಯವೂ ಆಗಿರುವದು. ವರ್ಣ (ಜಾತಿ) ಗಳಲ್ಲಿ ಬ್ರಾಹ್ಮಣನು ಶ್ರೇಷ್ಠನಾಗಿರುವಂತೆ ಲಿಂಗಗಳಲ್ಲಿ ಪಾರ್ಥಿವಲಿಂಗವು ಶ್ರೇಷ್ಠವಾದುದು.

೧೩-೧೫. ಪಟ್ಟಣಗಳಲ್ಲಿ ಕಾಶೀಪಟ್ಟಣವೂ, ವ್ರತಗಗಳಲ್ಲಿ ಶಿವರಾತ್ರಿವ್ರತವೂ ಶಕ್ತಿದೇವತೆಯರಲ್ಲಿ ಶಿವಶಕ್ತಿಯೂ ಶ್ರೇಷ್ಠವಾಗಿರುವಂತೆ ಶಿವಲಿಂಗಗಳಲ್ಲಿ ಪಾರ್ಥಿವ ಲಿಂಗವು ಶ್ರೇಷ್ಠವಾದುದು.

ಪ್ರಕೃತ್ಯ ಪಾರ್ಥಿವಂ ಲಿಂಗಂ ಯೋಽನ್ಯದೇವಂ ಪ್ರಪೂಜಯೇತ್ ।
ವೃಥಾ ಭವತಿ ಸಾ ಪೂಜಾ ಸ್ನಾನದಾನಾದಿಕಂ ವೃಥಾ ॥ ೧೬ ॥

ಪಾರ್ಥಿವಾರಾಧನಂ ಪುಣ್ಯಂ ಧನ್ಯಮಾಯುರ್ವಿವರ್ಧನಂ ।
ತುಷ್ಟಿದಂ ಪುಷ್ಟಿದಂ ಶ್ರೀದಂ ಕಾರ್ಯಂ ಸಾಧಕಸತ್ತಮೈಃ ॥ ೧೭ ॥

ಯಥಾಲಬ್ಧೋಪಚಾರೈಶ್ಚ ಭಕ್ತಿಶ್ರದ್ಧಾಸಮನ್ವಿತಃ ।
ಪೂಜಯೇತ್ಪಾರ್ಥಿವಂ ಲಿಂಗಂ ಸರ್ವಕಾಮಾರ್ಥಸಿದ್ಧಿದಂ ॥ ೧೮ ॥

ಯಃ ಕೃತ್ವಾ ಪಾರ್ಥಿವಂ ಲಿಂಗಂ ಪೂಜಯೇಚ್ಛುಭವೇದಿಕಂ ।
ಇಹೈವ ಧನವಾನ್ ಶ್ರೀಮಾನಂತೇ ರುದ್ರೋಽಭಿಜಾಯತೇ ॥ ೧೯ ॥

ತ್ರಿಸಂಧ್ಯಂ ಯೋಽರ್ಚಯೇಲ್ಲಿಂಗಂ ಕೃತ್ವಾ ಬಿಲ್ವೇನ ಪಾರ್ಥಿವಂ ।
ದಶೈಕಾದಶಕಂ ಯಾವತ್ತಸ್ಯ ಪುಣ್ಯಫಲಂ ಶೃಣು ॥ ೨೦ ॥

---

೧೬. ಪ್ರಾರ್ಥಿವಲಿಂಗದಲ್ಲಿ ಶಿವನನ್ನು ಬಿಟ್ಟು ಮಿಕ್ಕದೇವತೆಗಳನ್ನು ಪೂಜಿಸಿದರೆ ಆ ಪೂಜೆಯು ವ್ಯರ್ಥವಾಗುವನು. ಅದಕ್ಕಾಗಿ ಮಾಡಿದ ಸ್ನಾನ ದಾನ ಮೊದಲಾದುವುಗಳು ವ್ಯರ್ಥವಾಗುವುವು.

೧೭. ಪಾರ್ಥವಲಿಂಗಪೂಜೆಯು ಪುಣ್ಯಪ್ರದವಾದುದು. ಧನ ಮತ್ತು ಆಯುಸ್ಸುಗಳನ್ನು ಹೆಚ್ಚಿಸುವುದು. ಸಂತೋಷ ಮತ್ತು ಪುಷ್ಟಿಗಳನ್ನುಂಟುಮಾಡುವುದು. ಐಶ್ವರ್ಯವನ್ನುಂಟುಮಾಡುವುದು. ಇಂತಹ ಪಾರ್ಥಿವಲಿಂಗ ಪೂಜೆಯನ್ನು ಸಾಧಕಶ್ರೇಷ್ಠರು ಭಕ್ತಿಯಿಂದ ಆಚರಿಸಬೇಕು.

೧೮. ಯಥಾಯೋಗ್ಯವಾಗಿ ಸಂಗ್ರಹಿಸಿದ ಸಾಮಾಗ್ರಿಗಳಿಂದಲೂ, ಉಪಚಾರಗಳಿಂದಲೂ ಭಕ್ತಿಶ್ರದ್ಧಾಪೂರ್ವಕವಾಗಿ ಪಾರ್ಥಿವಲಿಂಗವನ್ನು ಪೂಜಿಸಬೇಕು. ಸಕಲ ಇಷ್ಟಾರ್ಥಗಳೂ ನೆರವೇರುವವು.

೧೯. ಪಾರ್ಥಿವ (ಮಣ್ಣಿನ) ಲಿಂಗವನ್ನು ನಿರ್ಮಿಸಿ ಶುಭ ವೇದಿಕೆಯಲ್ಲಿ ಯಾವನು ಪೂಜಿಸುವನೋ ಅವನು ಇಹಲೋಕದಲ್ಲಿ ಧನವಂತನೂ, ಶ್ರೀಮಂತನೂ ಆಗಿದ್ದು ಮರಣಾನಂತರ ರುದ್ರಸ್ವರೂಪವನ್ನು ಹೊಂದುವನು.

೨೦. ಮೂರು ಸಂಧ್ಯಾಕಾಲಗಳಲ್ಲಿಯೂ ಹನ್ನೊಂದು ಪಾರ್ಥಿವಲಿಂಗಗಳನ್ನು ಮಾಡಿ ಬಿಲ್ವಪತ್ರಗಳಿಂದ ಯಾವನು ಪೂಜಿಸುವನೋ ಅವನು ಸಶರೀರವಾಗಿ ರುದ್ರಲೋಕಕ್ಕೆ ಹೋಗುವನು.

ಅನೇನೈವ ಸ್ವದೇಹೇನ ರುದ್ರಲೋಕೇ ಮಹೀಯತೇ ।
ಪಾಪಘಂ ಸರ್ವಮರ್ತ್ಯಾನಾಂ ದರ್ಶನಾತ್ಸ್ಪರ್ಶನಾದಪಿ ॥ ೨೧ ॥

ಜೀವನ್ಮುಕ್ತಃ ಸ ವೈ ಜ್ಞಾನೀ ಶಿವ ಏವ ನ ಸಂಶಯಃ ।
ತಸ್ಯ ದರ್ಶನಮಾತ್ರೇಣ ಭುಕ್ತಿರ್ಮುಕ್ತಿಶ್ಚ ಜಾಯತೇ ॥ ೨೨ ॥

ಶಿವಂ ಯಃ ಪೂಜಯೇನ್ನಿತ್ಯಂ ಕೃತ್ವಾ ಲಿಂಗಂ ತು ಪಾರ್ಥಿವಂ ।
ಯಾವಜ್ಜೀವನಪರ್ಯಂತಂ ಸ ಯಾತಿ ಶಿವಮಂದಿರಂ ॥ ೨೩ ॥

ಮೃಡೇನಾಪ್ರಮಿತಾನ್ ವರ್ಷಾ ಶಿವಲೋಕೇನ್ ಹಿ ತಿಷ್ಠತಿ ।
ಸಕಾಮಃ ಪುನರಾಗತ್ಯ ರಾಜೇಂದ್ರೋ ಭಾರತೇ ಭವೇತ್ ॥ ೨೪ ॥

ನಿಷ್ಕಾಮಃ ಪೂಜಯೇನ್ನಿತ್ಯಂ ಪಾರ್ಥಿವಂ ಲಿಂಗಮುತ್ತಮಂ ।
ಶಿವಲೋಕೇ ಸದಾ ತಿಷ್ಠೇತ್ತಸ್ಯ ಸಾಯುಜ್ಯಮಾಪ್ನುಯಾತ್ ॥ ೨೫ ॥

---

೨೧-೨೨. ಅವನ ದರ್ಶನ ಮತ್ತು ಸ್ಪರ್ಶ ಇವುಗಳನ್ನು ಮಾಡಿದವರ ಪಾಪಗಳು ಸಹ ನಷ್ಟವಾಗುವವು. ಅವನು ಜೀವನ್ಮುಕ್ತನೂ ಜ್ಞಾನಿಯೂ ಆಗಿ ಶಿವಸ್ವರೂಪನೇ ಆಗುವನು. ಅವನ ದರ್ಶನ ಮಾತ್ರದಿಂದಲೇ ನರರಿಗೆ ಭೋಗವೂ ಮುಕ್ತಿಯೂ ಲಭಿಸುವವು.

೨೩. ಪಾರ್ಥಿವಲಿಂಗವನ್ನು ನಿರ್ಮಿಸಿ ಅದರಲ್ಲಿ ಶಿವನನ್ನು ನಿತ್ಯವೂ ತಾನು ಜೀವಿಸಿರುವವರೆಗೆ ಪೂಜಿಸುವವನು ಶಿವಲೋಕವನ್ನು ಪಡೆಯುವನು.

೨೪. ಆ ಶಿವಲೋಕದಲ್ಲಿ ಶಿವನೊಡನೆ ಅನೇಕ ವರ್ಷಗಳು ಇದ್ದು ಸಕಾಮನಾಗಿದ್ದರೆ ಅವನು ತಿರುಗಿ ಭಾರತಭೂಮಿಯಲ್ಲಿ ಚಕ್ರವರ್ತಿಯಾಗಿ ಜನಿಸುವನು.

೨೫. ಆದುದರಿಂದ ಫಲೇಚ್ಛೆಯಿಲ್ಲದವನಾಗಿ ಎಂದರೆ ನಿಷ್ಕಾಮನಾಗಿ ನಿತ್ಯವೂ ಪಾರ್ಥಿವಲಿಂಗವನ್ನು ಅರ್ಚಿಸಬೇಕು. ಹಾಗೆ ಅರ್ಚಿಸಿದವನು ಬಹಳಕಾಲ ಶಿವಲೋಕದಲ್ಲಿದ್ದು ಕೊನೆಗೆ ಮುಕ್ತಿಯನ್ನು ಪಡೆಯುವನು, ಶಿವನೊಡನೆ ಐಕ್ಯವನ್ನು ಹೊಂದುವನು.

ಪಾರ್ಥಿವಂ ಶಿವಲಿಂಗಂ ತು ವಿಪ್ರೋ ಯದಿ ನ ಪೂಜಯೇತ್ ।
ಸ ಯಾತಿ ನರಕಂ ಘೋರಂ ಶೂಲಪ್ರೋತಂ ಸುದಾರುಣಂ ॥ ೨೬ ॥

ಯಥಾಕಥಂಚಿದ್ವಿಧಿನಾ ರಮ್ಯಂ ಲಿಂಗಂ ಪ್ರಕಾರಯೇತ್ ।
ಪಂಚಸತ್ರವಿಧಾನಂ ಚ ಪಾರ್ಥಿವೇನ ವಿಚಾರಯೇತ್ ॥ ೨೭ ॥

ಅಖಂಡಂ ತದ್ಧಿ ಕರ್ತವ್ಯಂ ನ ವಿಖಂಡಂ ಪ್ರಕಾರಯೇತ್
ವಿಖಂಡಂ ತು ಪ್ರಕುರ್ವಾಣೋ ನೈವ ಪೂಜಾಫಲಂ ಲಭೇತ್ ॥ ೨೮ ॥

ರತ್ನಜಂ ಹೇಮಜಂ ಲಿಂಗಂ ಪಾರದಂ ಸ್ಫಾಟಿಕಂ ತಥಾ ।
ಪಾರ್ಥಿವಂ ಪುಷ್ಪರಾಗೋತ್ಥಮಖಂಡಂ ತು ಪ್ರಕಾರಯೇತ್ ॥ ೨೯ ॥

ಅಖಂಡಂ ತು ಚರಂ ಲಿಂಗಂ ದ್ವಿಖಂಡಮಚರಂ ಸ್ಮೃತಂ ।
ಖಂಡಾಖಂಡವಿಚಾರೋಽಯಂ ಸಚರಾಚರಯೋಃ ಸ್ಮೃತಃ ॥ ೩೦ ॥

---

೨೬. ಪಾರ್ಥಿವಲಿಂಗವನ್ನು ಪೂಜಿಸದಿರುವ ಬ್ರಾಹ್ಮಣನು ಶೂಲಕ್ಕೇರಿಸುವಂತಹ ತುಂಬಾ ಭಯಂಕರವಾದ ಮತ್ತು ಘೋರವಾದ ನರಕವನ್ನು ಪಡೆಯುವನು.

೨೭. ಬಹು ಪ್ರಯತ್ನಪಟ್ಟು ವಿಧಿವತ್ತಾಗಿ ಮನೋಹರವಾದ ಪಾರ್ಥಿವ ಲಿಂಗವನ್ನು ನಿರ್ಮಿಸಬೇಕು. ಪಂಚಯಜ್ಞವಿಧಿಯನ್ನೂ ಸಹ ಆ ಪಾರ್ಥಿವಲಿಂಗದೊಡನೆ ಆಚರಿಸಬೇಕು.

೨೮. ಪಾರ್ಥಿವಲಿಂಗವನ್ನು ವಿಖಂಡ ಎಂದರೆ ಪೀಠ ಮತ್ತು ಲಿಂಗಗಳು ಬೇರೆಯಾಗಿರುವಂತೆ ಮಾಡಬಾರದು. ಅಖಂಡ (ಒಟ್ಟಾಗಿ) ವಾಗಿಯೇ ನಿರ್ಮಿಸಬೇಕು. ವಿಖಂಡವಾಗಿ ಮಾಡಿದರೆ ಪೂಜೆಯ ಫಲವು ಲಭಿಸಲಾರದು.

೨೯. ರತ್ನಮಯವಾದ ಮತ್ತು ಸುವರ್ಣದ ಲಿಂಗಗಳು, ಪಾದರಸಲಿಂಗ, ಸ್ಫಟಿಕಲಿಂಗ, ಪಾರ್ಥಿವಲಿಂಗ, ಪುಷ್ಪರಾಗದಲಿಂಗ ಇವುಗಳನ್ನು ಅಖಂಡವಾಗಿ (ಪೀಠ ಮತ್ತು ಲಿಂಗಗಳು ಸೇರಿರುವಂತೆ) ನಿರ್ಮಿಸಬೇಕು.

೩೦. ಚರಲಿಂಗವು ಅಖಂಡವಾಗಿರಬೇಕು. ಸ್ಥಿರವಾಗಿ ಪ್ರತಿಷ್ಠಿಸುವ ಲಿಂಗವು ವಿಖಂಡವಾಗಿರಬೇಕು. ಪೀಠ ಮತ್ತು ಲಿಂಗಗಳು ಬೇರೆಯಾಗಿರಬೇಕು. ಆ ಮೇಲೆ ಪೀಠದಲ್ಲಿ ಲಿಂಗವನ್ನು ಶುಭಮುಹೂರ್ತದಲ್ಲಿ ಪ್ರತಿಷ್ಠಿಸಬೇಕು ಎಂದು ಅಭಿ

ವೇದಿಕಾ ತು ಮಹಾವಿದ್ಯಾ ಲಿಂಗಂ ದೇವೋ ಮಹೇಶ್ವರಃ ।
ಅತೋ ಹಿ ಸ್ಥಾವರೇ ಲಿಂಗೇ ಸ್ಮೃತಾ ಶ್ರೇಷ್ಠಾ ದ್ವಿಖಂಡತಾ ॥ ೩೦ ॥

ದ್ವಿಖಂಡಂ ಸ್ಥಾವರಂ ಲಿಂಗಂ ಕರ್ತವ್ಯಂ ಹಿ ವಿಧಾನತಃ ।
ಅಖಂಡಂ ಜಂಗಮಂ ಪ್ರೋಕ್ತಂ ಶೈವಸಿದ್ಧಾಂತವೇದಿಭಿಃ ॥ ೩೧ ॥

ದ್ವಿಖಂಡಂ ತು ಚರಂ ಲಿಂಗಂ ಕುರ್ವಂತ್ಯಜ್ಞಾನಮೋಹಿತಾಃ ।
ನೈವ ಸಿದ್ಧಾಂತವೇತ್ತಾರೋ ಮುನಯಃ ಶಾಸ್ತ್ರಕೋವಿದಾಃ ॥ ೩೨ ॥

ಅಖಂಡಂ ಸ್ಥಾವರಂ ಲಿಂಗಂ ದ್ವಿಖಂಡಂ ಚರಮೇವ ಚ ।
ಯೇ ಕುರ್ವಂತಿ ನರಾ ಮೂಢಾ ನ ಪೂಜಾಫಲಭಾಗಿನಃ ॥ ೩೪ ॥

ತಸ್ಮಾಚ್ಛಾಸ್ತ್ರೋಕ್ತವಿಧಿನಾ ಅಖಂಡಂ ಚರಸಂಜ್ಞಕಂ ।
ದ್ವಿಖಂಡಂ ಸ್ಥಾವರಂ ಲಿಂಗಂ ಕರ್ತವ್ಯಂ ಪರಯಾ ಮುದಾ ॥ ೩೫ ॥

---

ಪ್ರಾಯವು. ಹೀಗೆ ಅಖಂಡ ಮತ್ತು ವಿಖಂಡ ವಿಚಾರವು, ಚರಲಿಂಗ ಮತ್ತು ಅಚರ ಲಿಂಗಗಳಿಗೆ ಸಂಬಂಧಪಟ್ಟುದುದು.

೩೦. ವೇದಿಕೆಯು (ಪೀಠವು) ಶಿವಶಕ್ತಿ ಸ್ವರೂಪವಾದುದು. ಲಿಂಗವು ಮಹಾದೇವಸ್ವರೂಪವಾದುದು. ಆದುದರಿಂದ ಸ್ಥಿರವಾದ ಲಿಂಗಗಳಲ್ಲಿ ಲಿಂಗವು ದ್ವಿಖಂಡವಾಗಿ (ಪೀಠ ಮತ್ತು ಲಿಂಗಗಳು ಬೇರೆಯಾಗಿ) ಇರಬೇಕು.

೩೧. ಚರಲಿಂಗವನ್ನು ಅಖಂಡವಾಗಿ ಮಾಡಬೇಕು. ಸ್ಥಿರಲಿಂಗವನ್ನು ದ್ವಿಖಂಡವಾಗಿ ಮಾಡಬೇಕು ಎಂದು ಶೈವಸಿದ್ಧಾಂತವನ್ನು ಬಲ್ಲವರು ಹೇಳಿರುವರು.

೩೨. ಆದರೆ ತಿಳಿವಳಿಕೆಯಿಲ್ಲದವರು ದ್ವಿಖಂಡವಾಗಿ ಚರಲಿಂಗವನ್ನು ಮಾಡುವರು. ಅವರು ಸಿದ್ಧಾಂತವನ್ನು ತಿಳಿದವರಲ್ಲ. ಶೈವಸಿದ್ಧಾಂತವನ್ನೂ ಶಾಸ್ತ್ರವನ್ನೂ ತಿಳಿದಂತಹ ಮುನಿಗಳು ಆರೀತಿಯಾಗಿ ಮಾಡುವುದಿಲ್ಲ.

೩೪. ಅಚರಲಿಂಗವನ್ನು ಅಖಂಡವಾಗಿಯೂ, ಚರಲಿಂಗವನ್ನು ದ್ವಿಖಂಡವಾಗಿಯೂ ನಿರ್ಮಿಸುವ ಮೂಢರು ಶಿವಲಿಂಗ ಪೂಜಾಫಲವನ್ನು ಪಡೆಯಲಾರರು.

೩೫. ಆದುದರಿಂದ ಶಾಸ್ತ್ರವಿಧಿಯಂತೆ ಚರಲಿಂಗವನ್ನು ಅಖಂಡವಾಗಿಯೂ ಸ್ಥಿರಲಿಂಗವನ್ನು ದ್ವಿಖಂಡವಾಗಿಯೂ ರಚಿಸಬೇಕು.

ಅಖಂಡೇ ತು ಚರೇ ಪೂಜಾ ಸಂಪೂರ್ಣಫಲದಾಯಿನೀ ।
ದ್ವಿಖಂಡೇ ತು ಚರೇ ಪೂಜಾ ಮಹಾಹಾನಿಪ್ರದಾ ಸ್ಮೃತಾ ॥ ೩೬ ॥

ಅಖಂಡೇ ಸ್ಥಾವರೇ ಪೂಜಾ ನ ಕಾಮಫಲದಾಯಿನೀ ।
ಪ್ರತ್ಯವಾಯಕರೀ ನಿತ್ಯಮಿತ್ಯುಕ್ತಂ ಶಾಸ್ತ್ರವೇದಿಭಿಃ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಏಕೋನವಿಂಶೋಽಧ್ಯಾಯಃ.

---

೩೬. ಅಖಂಡವಾದ ಚರಲಿಂಗದಲ್ಲಿ ಶಿವನನ್ನು ಪೂಜಿಸಿದರೆ ಸಂಪೂರ್ಣ ಫಲವು ಲಭಿಸುವದು. ದ್ವಿಖಂಡವಾದ ಚರಲಿಂಗದಲ್ಲಿ ಪೂಜಿಸಿದರೆ ಮಹಾ ಅನಿಷ್ಟವು ಪ್ರಾಪ್ತವಾಗುವದು.

೩೭. ಅಖಂಡವಾದ ಸ್ಥಿರಲಿಂಗದಲ್ಲಿ ಪೂಜಿಸಿದರೆ ಇಷ್ಟಾರ್ಥವು ಲಭಿಸಲಾರದು. ಅಲ್ಲದೆ ಮಹಾ ಅನಿಷ್ಟವೂ ಉಂಟಾಗುವದು ಎಂದು ಶಾಸ್ತ್ರವನ್ನು ಬಲ್ಲವರು ಹೇಳಿರುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿನ ಮೊದಲನೆಯ ವಿದ್ವೇಶ್ವರಸಂಹಿತೆಯಲ್ಲಿ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ವಿಂಶೋಽಧ್ಯಾಯಃ

॥ ಸೂತ ಉವಾಚ ॥

ಅಥ ವೈದಿಕಭಕ್ತಾನಾಂ ಪಾರ್ಥಿವಾರ್ಚಾ ನಿಗದ್ಯತೇ ।
ವೈದಿಕೇನೈವ ಮಾರ್ಗೇಣ ಭುಕ್ತಿಮುಕ್ತಿಪ್ರದಾಯಿನೀ ॥ ೧ ॥

ಸೂತ್ರೋಕ್ತವಿಧಿನಾ ಸ್ನಾತ್ವಾ ಸಂಧ್ಯಾಂ ಕೃತ್ವಾ ಯಥಾವಿಧಿ ।
ಬ್ರಹ್ಮಯಜ್ಞಂ ವಿಧಾಯಾದೌ ತತಸ್ತರ್ಪಣಮಾಚರೇತ್ ॥ ೨ ॥

ನೈತ್ಯಿಕಂ ಸಕಲಂ ಕರ್ಮ ವಿಧಾಯಾನಂತರಂ ಪುಮಾನ್ ।
ಶಿವಸ್ಮರಣಪೂರ್ವಂ ಹಿ ಭಸ್ಮರುದ್ರಾಕ್ಷಧಾರಕಃ ॥ ೩ ॥

---

## ಇಪ್ಪತ್ತನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು:—ಈಗ ವೈದಿಕರಾದ ಶಿವಭಕ್ತರು ಪಾರ್ಥಿವಲಿಂಗವನ್ನು ಪೂಜಿಸುವ ವಿಧಾನವನ್ನು ಹೇಳುವೆನು. ಪಾರ್ಥಿವಲಿಂಗವನ್ನು ಪೂಜಿಸಿದರೆ ಭೋಗಮುಕ್ತಿಗಳೆರಡೂ ಲಭಿಸುವವು.

೨. ತಮ್ಮ ಗೃಹ್ಯಸೂತ್ರದಲ್ಲಿ ಹೇಳಿರುವ ವಿಧಿಯಂತೆ ಸ್ನಾನಮಾಡಿ ಸಂಧ್ಯಾವಂದನೆಯನ್ನಾಚರಿಸಿ ಮೊದಲು ಬ್ರಹ್ಮಯಜ್ಞವನ್ನು ಮಾಡಿ ಬಳಿಕ ತರ್ಪಣವನ್ನು ಮಾಡಬೇಕು.

೩-೪. ನಿತ್ಯಕರ್ಮಗಳನ್ನೆಲ್ಲಾ ಆಚರಿಸಿ ಬಳಿಕ ಶಿವನನ್ನು ಸ್ಮರಿಸುತ್ತಾ ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸಿಕೊಂಡು ವೇದೋಕ್ತವಾದ ವಿಧಿಯಂತೆ ಭಕ್ತಿಯಿಂದ

ವೇದೋಕ್ತವಿಧಿನಾ ಸಮ್ಯಕ್ಸಂಪೂರ್ಣಫಲಸಿದ್ಧಯೇ ।
ಪೂಜಯೇತ್ಪರಯಾ ಭಕ್ತ್ಯಾ ಪಾರ್ಥಿವಂ ಲಿಂಗಮುತ್ತಮಂ ॥ ೪ ॥

ನದೀತೀರೇ ತಟಾಗೇ ಚ ಪರ್ವತೇ ಕಾನನೇಽಪಿ ಚ ।
ಶಿವಾಲಯೇ ಶುಚೌ ದೇಶೇ ಪಾರ್ಥಿವಾರ್ಚಾ ವಿಧೀಯತೇ ॥ ೫ ॥

ಶುದ್ಧಪ್ರದೇಶಸಂಭೂತಾಂ ಮೃದಮಾಹೃತ್ಯ ಯತ್ನತಃ ।
ಶಿವಲಿಂಗಂ ಪ್ರಕಲ್ಪೇತ ಸಾವಧಾನತಯಾ ದ್ವಿಜಾಃ ॥ ೬ ॥

ವಿಪ್ರೇ ಗೌರಾ ಸ್ಮೃತಾ ಶೋಣಾ ಬಾಹುಜೇ ಪೀತವರ್ಣಕಾ ।
ವೈಶ್ಯೇ ಕೃಷ್ಣಾ ಪಾದಜಾತೇ ಹ್ಯಥವಾ ಯತ್ರ ಯಾ ಭವೇತ್ ॥ ೭ ॥

ಸಂಗೃಹ್ಯ ಮೃತ್ತಿಕಾಂ ಲಿಂಗನಿರ್ಮಾಣಾರ್ಥಂ ಪ್ರಯತ್ನತಃ ।
ಅತೀವ ಶುಭದೇಶೇ ಚ ಸ್ಥಾಪಯೇಚ್ಚ ಮೃದಂ ಶುಭಾಂ ॥ ೮ ॥

---

ಪಾರ್ಥಿವಲಿಂಗವನ್ನು ಪೂಜಿಸಬೇಕು. ಹಾಗೆ ಮಾಡಿದರೆ ಸಂಪೂರ್ಣಫಲವು ಲಭಿಸುವುದು.

೫. ನದಿಯದಡ, ಸರೋವರತೀರ, ಬೆಟ್ಟ ಮತ್ತು ಶಾಂತವಾದ ಅರಣ್ಯ, ಶಿವದೇವಾಲಯ ಇವುಗಳಲ್ಲಿ ಶುದ್ಧವಾದ ಪ್ರದೇಶದಲ್ಲಿ ಪಾರ್ಥಿವಲಿಂಗವನ್ನು ಅರ್ಚಿಸಬೇಕು.

೬. ಶುದ್ಧವಾದ ಪ್ರದೇಶದಲ್ಲಿನ ಮಣ್ಣನ್ನು ಪ್ರಯತ್ನಪಟ್ಟು ಸಂಪಾದಿಸಿ ಅದ ರಿಂದ ಶಿವಲಿಂಗವನ್ನು ಸಾವಧಾನವಾಗಿ ರಚಿಸಬೇಕು.

೭. ಬ್ರಾಹ್ಮಣನು ಬಿಳಿಯಮಣ್ಣನ್ನು ತರಬೇಕು. ಕ್ಷತ್ರಿಯನು ಕೆಂಪು ವರ್ಣದ ಮಣ್ಣನ್ನು ತರಬೇಕು. ವೈಶ್ಯನು ಹಳದಿಮಣ್ಣನ್ನು ಸಂಗ್ರಹಿಸಬೇಕು. ಶೂದ್ರನು ಕರಿಯಮಣ್ಣನ್ನು ತರಬೇಕು. ಅಥವಾ ಯಾವುದು ಅನುಕೂಲವಾಗಿ ಸಿಕ್ಕುವುದೋ ಆ ಮಣ್ಣನ್ನು ತರಬಹುದು.

೮. ಈ ರೀತಿಯಾಗಿ ಪ್ರಯತ್ನದಿಂದ ಮಣ್ಣನ್ನು ಸಂಗ್ರಹಿಸಿ ಆ ಮಣ್ಣನ್ನು ಶುದ್ಧವಾದ ಪ್ರದೇಶದಲ್ಲಿರಿಸಬೇಕು.

ಸಂಶೋಧ್ಯ ಚ ಜಲೇನಾಪಿ ಪಿಂಡೀಕೃತ್ಯ ಶನೈಃ ಶನೈಃ ।
ವಿಧೀಯೇತ ಶುಭಂ ಲಿಂಗಂ ಪಾರ್ಥಿವಂ ವೇದಮಾರ್ಗತಃ ॥ ೯ ॥

ತತಃ ಸಂಪೂಜಯೇದ್ಭಕ್ತ್ಯಾ ಭುಕ್ತಿಮುಕ್ತಿಫಲಾಪ್ತಯೇ ।
ತತ್ಪ್ರಕಾರಮಹಂ ವಚ್ಮಿ ಶೃಣುಧ್ವಂ ಸವಿಧಾನತಃ ॥ ೧೦ ॥

ನಮಃ ಶಿವಾಯ ಮಂತ್ರೇಣಾರ್ಚನದ್ರವ್ಯಂ ಚ ಪ್ರೋಕ್ಷಯೇತ್ ।
ಭೂರಸೀತಿ ಚ ಮಂತ್ರೇಣ ಕ್ಷೇತ್ರಸಿದ್ಧಿಂ ಪ್ರಕಾರಯೇತ್ ॥ ೧೧ ॥

ಆಪೋಽಸ್ಮಾನಿತಿ ಮಂತ್ರೇಣ ಜಲಸಂಸ್ಕಾರಮಾಚರೇತ್ ।
ನಮಸ್ತೇ ರುದ್ರಮಂತ್ರೇಣ ಫಾಟಿಕಾ ಬಂಧಮುಚ್ಯತೇ ॥ ೧೨ ॥

ಶಂಭವಾಯೇತಿ ಮಂತ್ರೇಣ ಕ್ಷೇತ್ರಶುದ್ಧಿಂ ಪ್ರಕಾರಯೇತ್ ।
ನಮಃ ಪೂರ್ವೇಣ ಕುರ್ಯಾತ್ಪಂಚಾಮೃತಸ್ಯಾಪಿ ಪ್ರೋಕ್ಷಣಂ ॥ ೧೩ ॥

---

೯. ಆ ಮೇಲೆ ಆ ಮಣ್ಣನ್ನು ಜಲದಿಂದ ಶೋಧಿಸಿ, ಮೆಲ್ಲಮೆಲ್ಲಗೆ ಉಂಡೆಯನ್ನು ಕಟ್ಟಿ ವೇದೋಕ್ತವಿಧಿಯಂತೆ ಪಾರ್ಥಿವಲಿಂಗವನ್ನು ನಿರ್ಮಿಸಬೇಕು.

೧೦. ಆ ಬಳಿಕ ಲಿಂಗವನ್ನು ಭೋಗಮೋಕ್ಷಪ್ರಾಪ್ತಿಗಾಗಿ ಭಕ್ತಿಯಿಂದ ಅರ್ಚಿಸಬೇಕು. ಆ ಪೂಜಾ ಪ್ರಕಾರವನ್ನು ವಿಧಿವತ್ತಾಗಿ ಹೇಳುವೆನು, ಶ್ರದ್ಧೆಯಿಂದ ಕೇಳಿ.

೧೧. ನಮಃಶಿವಾಯ ಎಂಬ ಮಂತ್ರದಿಂದ ಪೂಜಾಸಾಮಗ್ರಿಗಳನ್ನು ಪ್ರೋಕ್ಷಿಸಬೇಕು. (ನಮಃಶಿವಾಯಚ ತೈ. ಸಂ. ೪-೫) ಭೂರಸಿ (ಭೂರಸಿ ಭೂಮಿರಸಿ-ತೈ. ಸಂ.) ಎಂಬ ಮಂತ್ರದಿಂದ ಕ್ಷೇತ್ರಸಿದ್ಧಿಯನ್ನು ಮಾಡಬೇಕು. "ಆಪೋಽಸ್ಮಾನ್" (ಆಪೋ ಅಸ್ಮಾನ್ ಮಾತರಃ ಶುಧಂತು—ತೈ. ಸಂ.) ಎಂಬ ಮಂತ್ರದಿಂದ ಜಲಶುದ್ಧಿಯನ್ನು ಮಾಡಬೇಕು.

೧೨-೧೩. "ನಮಸ್ತೇರುದ್ರ" (ತೈ. ಸಂ. ೪-೫) ಎಂಬ ಮಂತ್ರದಿಂದ ಫಾಟಿಕಾಬಂಧವನ್ನು ಮಾಡಬೇಕು. "ನಮಃ ಶಂಭವಾಯ" (ನಮಃಶಂಭವೇಚ ಮಯೋಭವೇಚ---ತೈ. ಸಂ. ೪-೫) ಎಂಬ ಮಂತ್ರದಿಂದ ಆ ಸ್ಥಳದ ಶುದ್ಧಿಯನ್ನೂ ಪಂಚಾಮೃತಗಳಿಗೆ ಪ್ರೋಕ್ಷಣವನ್ನೂ ಮಾಡಬೇಕು.

ನೀಲಗ್ರೀವಾಯ ಮಂತ್ರೇಣ ನಮಃಪೂರ್ವೇಣ ಭಕ್ತಿಮಾ೯ ।
ಚರೇಚ್ಛಂಕರಲಿಂಗಸ್ಯ ಪ್ರತಿಷ್ಠಾಪನಮುತ್ತಮಂ ॥ ೧೪ ॥

ಭಕ್ತಿತಸ್ತತ ಏತತ್ತೇ ರುದ್ರಾಯೇತಿ ಚ ಮಂತ್ರತಃ ।
ಆಸನಂ ರಮಣೀಯಂ ವೈ ದದ್ಯಾದ್ವೈದಿಕಮಾರ್ಗಕೃತ್ ॥ ೧೫ ॥

ಮಾ ನೋ ಮಹಾಂತಮಿತಿ ಚ ಮಂತ್ರೇಣಾವಾಹನಂ ಚರೇತ್ ।
ಯಾ ತೇ ರುದ್ರೇತಿ ಮಂತ್ರೇಣ ಸಂಚರೇದುಪವೇಶನಂ ॥ ೧೬ ॥

ಮಂತ್ರೇಣ ಯಾಮಿಷುಮಿತಿ ನ್ಯಾಸಂ ಕುರ್ಯಾಚ್ಛಿವಸ್ಯ ಚ ।
ಅಧ್ಯವೋಚದಿತಿ ಪ್ರೇಮ್ಣಾಧಿವಾಸಂ ಮನುನಾ ಚರೇತ್ ॥ ೧೭ ॥

ಮನುನಾಸೌ ಜೀವ ಇತಿ ದೇವತಾನ್ಯಾಸಮಾಚರೇತ್ ।
ಅಸೌ ಯೋಽವಸರ್ಪತೀತಿ ಚಾಚರೇದುಪಸರ್ಪಣಂ ॥ ೧೮

---

೧೪. ನೀಲಗ್ರೀವಾಯ ನಮಃ (ನಮೋ ನೀಲಗ್ರೀವಾಯ—ತೈ. ಸಂ.) ಎಂಬ ಮಂತ್ರದಿಂದ ಆ ಶಿವಲಿಂಗವನ್ನು ಭಕ್ತಿಯಿಂದ ಪ್ರತಿಷ್ಠಿಸಬೇಕು.

೧೫. ಬಳಿಕ "ಎತತ್ತೇ ರುದ್ರಾಯ" ಎಂಬ ಮಂತ್ರದಿಂದ ಮನೋಹರವಾದ ಆಸನವನ್ನು ಭಕ್ತಿಯಿಂದ ವೈದಿಕ ಶಿವಭಕ್ತನು ಅರ್ಪಿಸಬೇಕು.

೧೬. "ಮಾನೋಮಹಾಂತಂ" ಎಂಬ ಮಂತ್ರದಿಂದ ಶಿವನನ್ನು ಆವಾಹನೆ ಮಾಡಬೇಕು. "ಯಾತೇರುದ್ರ" ಎಂಬ ಮಂತ್ರದಿಂದ ಉಪದೇಶ (ಕೂರಿಸುವಿಕೆ) ನ ವನ್ನು ಮಾಡಬೇಕು. (ಮುಂದಿನ ಶ್ಲೋಕಗಳಲ್ಲಿ ಹೇಳಿರುವ ಮಂತ್ರಗಳು ಯಜು ರ್ವೇದದ ರುದ್ರಾಧ್ಯಾಯದಲ್ಲಿವೆ. ತೈ. ಸಂ. ೪-೫.)

೧೭. "ಯಾಮಿಷುಂ" ಎಂಬ ಮಂತ್ರದಿಂದ ಶಿವನಿಗೆ ನ್ಯಾಸವನ್ನೂ "ಅಧ್ಯ ವೋಚತ್" ಎಂಬ ಮಂತ್ರದಿಂದ ಅಧಿವಾಸವನ್ನೂ ಭಕ್ತಿಯಿಂದ ಆಚರಿಸಬೇಕು.

೧೮. "ಅಸೌ" ಎಂಬ ಮಂತ್ರದಿಂದ ದೇವತಾನ್ಯಾಸಗಳನ್ನು ಮಾಡಬೇಕು. "ಅಸೌಯೊವಸರ್ಪತಿ" ಎಂಬ ಮಂತ್ರದಿಂದ ಉಪಸರ್ಪಣ (ಬಂದು ಸೇರುವಿಕೆ) ವನ್ನು ಆಚರಿಸಬೇಕು.

ನಮೋಽಸ್ತು ನೀಲಗ್ರೀವಾಯೇತಿ ಪಾದ್ಯಂ ಮನಸಾ ಹರೇತ್ ।
ಅರ್ಘ್ಯಂ ಚ ರುದ್ರಗಾಯತ್ರ್ಯಾ ಚಮನಂ ತ್ರ್ಯಂಬಕೇಣ ತು ॥ ೧೯ ॥

ಪಯಃ ಪೃಥಿವ್ಯಾಮಿತಿ ಚ ಪಯಸಾ ಸ್ನಾನಮಾಚರೇತ್ ।
ದಧಿಕ್ರಾವ್ಣೇತಿ ಮಂತ್ರೇಣ ದಧಿಸ್ನಾನಂ ಚ ಕಾರಯೇತ್ ॥ ೨೦ ॥

ಘೃತೆ ಸ್ನಾನಂ ಖಲು ಘೃತಂ ಘೃತಯಾವೇತಿ ಮಂತ್ರತಃ ।
ಮಧುವಾತಾ ಮಧುನಕ್ತಂ ಮಧುಮಾನ್ನ ಇತಿ ತ್ರ್ಯೃಚಾ ॥ ೨೧ ॥

ಮಧುಖಂಡಸ್ನಪನಂ ಪ್ರೋಕ್ತಮಿತಿ ಪಂಚಾಮೃತಂ ಸ್ಮೃತಂ ।
ಅಥವಾ ಪಾದ್ಯಮಂತ್ರೇಣ ಸ್ನಾನಂ ಪಂಚಾಮೃತೇನ ಚ ॥ ೨೨

ಮಾನಸೋಕ್ತೇ ಇತಿ ಪ್ರೇಮ್ಣಾ ಮಂತ್ರೇಣ ಕಟಿಬಂಧನಂ ।
ನಮೋಧೃಷ್ಣವೇ ಇತಿ ವಾ ಉತ್ತರೀಯಂ ಚ ಧಾಪಯೇತ್ ॥ ೨೩ ॥

---

೧೯. "ನಮೋ ಅಸ್ತು ನೀಲಗ್ರೀವಾಯ" ಎಂಬ ಮಂತ್ರದಿಂದ ಪಾದ್ಯವನ್ನೂ, ರುದ್ರಗಾಯತ್ರಿಯಿಂದ (ತತ್ಪುರುಷಾಯ ವಿದ್ಮಹೇ—ಯಾತ್) ಅರ್ಘ್ಯವನ್ನೂ "ತ್ರ್ಯಂಬಕಂಯಜಾಮಹೆ" ಎಂಬ ಮಂತ್ರದಿಂದ ಆಚಮನವನ್ನೂ ಶಿವನಿಗೆ ಅರ್ಪಿಸಬೇಕು.

೨೦. "ಪಯಃಪೃಥಿವ್ಯಾಂ" ಎಂಬ ಮಂತ್ರದಿಂದ ಕ್ಷೀರಸ್ನಾನವನ್ನೂ, "ದಧಿಕ್ರಾವ್ಣೋ ಅಕಾರಿಷಂ" ಎಂಬ ಮಂತ್ರದಿಂದ ದಧಿ (ಮೊಸರು) ಸ್ನಾನವನ್ನೂ ಶಿವನಿಗೆ ಮಾಡಿಸಬೇಕು.

೨೧-೨೨. "ಘೃತಂ ಘೃತಯೋನೇಪಿಬ ಪ್ರಪ್ರಯಜ್ಞಪತಿಂತಿರ" ಎಂಬ ಮಂತ್ರದಿಂದ ಘೃತ (ತುಪ್ಪ) ಸ್ನಾನವನ್ನೂ "ಮಧುವಾತಾ" "ಮಧುನಕ್ತಂ" "ಮಧುಮಾನ್ನೋ" ಎಂಬ ಮೂರು ಮಂತ್ರಗಳಿಂದ ಮಧು (ಜೇನುತುಪ್ಪ) ಸ್ನಾನವನ್ನೂ ಮಾಡಿಸಬೇಕು. ಇದು ಪಂಚಾಮೃತಸ್ನಾನವು. ಅಥವಾ "ನಮೋಅಸ್ತು ನೀಲಗ್ರೀವಾಯ" ಎಂಬಪಾದ್ಯ ಮಂತ್ರದಿಂದ ಪಂಚಾಮೃತಸ್ನಾನವನ್ನು ಮಾಡಿಸಬೇಕು.

೨೩. "ಮಾನಸ್ತೋಕೆ" ಎಂಬ ಮಂತ್ರದಿಂದ ಉಡುವ ವಸ್ತ್ರವನ್ನೂ "ನಮೋ ಧೃಷ್ಣವೆ" ಎಂಬ ಮಂತ್ರದಿಂದ ಹೊದೆಯುವ ವಸ್ತ್ರವನ್ನೂ ಭಕ್ತಿಯಿಂದ ಅರ್ಪಿಸಬೇಕು.

ಯಾತೇ ಹೇತಿರಿತಿ ಪ್ರೇಮ್ಣಾ ಋಕ್ಚತುಷ್ಕೇಣ ವೈದಿಕಃ ।
ಶಿವಾಯ ವಿಧಿನಾ ಭಕ್ತಶ್ಚರೇದ್ವಸ್ತ್ರಸಮರ್ಪಣಂ ॥ ೨೪ ॥

ನಮಃಶ್ವಭ್ಯ ಇತಿ ಪ್ರೇಮ್ಣಾ ಗಂಧಂ ದದ್ಯಾದೃಚಾ ಸುಧೀಃ ।
ನಮಸ್ತಕ್ಷಭ್ಯ ಇತಿ ಚಾಕ್ಷತಾರ್ನ್ ಮಂತ್ರೇಣ ಚಾರ್ಪಯೇತ್ ॥ ೨೫ ॥

ನಮಃ ಪಾರ್ಯಾಯ ಇತಿ ವಾ ಪುಷ್ಪಂ ಮಂತ್ರೇಣ ಚಾರ್ಪಯೇತ್ ।
ನಮಃಪರ್ಣ್ಯಾಯ ಇತಿ ವಾ ಬಿಲ್ವಪತ್ರಸಮರ್ಪಣಂ ॥ ೨೬ ॥

ನಮಃ ಕಪರ್ದಿನೇ ಚೇತಿ ಧೂಪಂ ದದ್ಯಾದ್ಯಥಾವಿಧಿ ।
ದೀಪಂ ದದ್ಯಾದ್ಯಥೋಕ್ತಂ ತು ನಮ ಆಶವ ಇತ್ಯೃಚಾ ॥ ೨೭ ॥

ನಮೋ ಜ್ಯೇಷ್ಠಾಯ ಮಂತ್ರೇಣ ದದ್ಯಾನ್ನೈವೇದ್ಯಮುತ್ತಮಂ ।
ಮನುನಾ ತ್ರ್ಯಂಬಕಮಿತಿ ಪುನರಾಚಮನಂ ಸ್ಮೃತಂ ॥ ೨೮ ॥

ಇಮಾ ರುದ್ರಾಯೇತಿ ಋಚಾ ಕುರ್ಯಾತ್ಫಲಸಮರ್ಪಣಂ ।
ನಮೋ ವ್ರಜ್ಯಾಯೇತಿ ಋಚಾ ಸಕಲಂ ಶಂಭವೇಽರ್ಪಯೇತ್. ॥ ೨೯ ॥

---

೨೪. ವೈದಿಕಭಕ್ತನು "ಯಾತೇ ಹೇತಿಃ" ಎಂಬ ನಾಲ್ಕು ಮಂತ್ರಗಳಿಂದಲೂ ಶಿವನಿಗೆ ವಸ್ತ್ರವನ್ನು ಭಕ್ತಿಯಿಂದ ಅರ್ಪಿಸಬೇಕು.

೨೫. "ನಮಃ ಶ್ವಭ್ಯಃ" ಎಂಬ ಮಂತ್ರದಿಂದ ಗಂಧವನ್ನೂ "ನಮಸ್ತಕ್ಷಭ್ಯಃ" ಎಂಬ ಮಂತ್ರದಿಂದ ಅಕ್ಷತೆಗಳನ್ನೂ ಭಕ್ತಿಯಿಂದ ಅರ್ಪಿಸಬೇಕು.

೨೬. "ನಮಃ ಪಾರ್ಯಾಯ" ಎಂಬ ಮಂತ್ರದಿಂದ ಪುಷ್ಪಗಳನ್ನೂ "ನಮಃ ಪರ್ಣಾಯ" ಎಂಬ ಮಂತ್ರದಿಂದ ಬಿಲ್ವಪತ್ರಗಳನ್ನೂ ಅರ್ಪಿಸಬೇಕು.

೨೭. "ನಮಃ ಕಪರ್ದಿನೇ ಚ" ಎಂಬ ಮಂತ್ರದಿಂದ ಧೂಪವನ್ನೂ "ನಮ ಆಶವೆ" ಎಂಬ ಮೂರು ಮಂತ್ರಗಳಿಂದ ದೀಪವನ್ನೂ ಅರ್ಪಿಸಬೇಕು.

೨೮-೨೯. "ನಮೋಜ್ಯೇಷ್ಠಾಯಚ" ಎಂಬ ಮಂತ್ರದಿಂದ ಉತ್ತಮವಾದ ನೈವೇದ್ಯವನ್ನೂ "ತ್ರ್ಯಂಬಕಂಯಜಾಮಹೆ" ಎಂಬ ಮಂತ್ರದಿಂದ ಪುನರಾಚಮನವನ್ನೂ ಅರ್ಪಿಸಬೇಕು. "ಇಮಾರುದ್ರಾಯ" (ಇಮಾ ರುದ್ರಾಯತವಸೇ ಯ-

ಮಾ ನೋ ಮಹಾಂತಮಿತಿ ಚ ಮಾನಸ್ತೋಕೇ ಇತಿ ತತಃ ।
ಮಂತ್ರದ್ವಯೇನೈಕಾದಶಾಕ್ಷತೈ ರುದ್ರಾನ್ ಪ್ರಪೂಜಯೇತ್ ॥ ೩೦ ॥

ಹಿರಣ್ಯಗರ್ಭ ಇತಿ ತ್ರ್ಯೃಚಾ ದಕ್ಷಿಣಾಂ ಹಿ ಸಮರ್ಪಯೇತ್ ।
ದೇವಸ್ಯತ್ವೇತಿ ಮಂತ್ರೇಣ ಹ್ಯಭಿಷೇಕಂ ಚರೇದ್ಬುಧಃ ॥ ೩೧ ॥

ದೀಪಮಂತ್ರೇಣ ವಾ ಶಂಭೋರ್ನೀರಾಜನವಿಧಿಂ ಚರೇತ್ ।
ಪುಷ್ಪಾಂಜಲಿಂ ಚರೇದ್ಭಕ್ತ್ಯಾ ಇಮಾ ರುದ್ರಾಯ ಚ ತ್ರ್ಯೃಚಾ ॥ ೩೨

ಮಾ ನೋ ಮಹಾಂತಮಿತಿ ಚರೇತ್ಪ್ರಾಜ್ಞಃ ಪ್ರದಕ್ಷಿಣಾಂ ।
ಮಾ ನಸ್ತೋಕೇತಿ ಮಂತ್ರೇಣ ಸಾಷ್ಟಾಂಗಂ ಪ್ರಣಮೇತ್ಸುಧೀಃ ॥ ೩೩ ॥

ಏಷ ತೇ ಇತಿ ಮಂತ್ರೇಣ ಶಿವಮುದ್ರಾಂ ಪ್ರದರ್ಶಯೇತ್ ।
ಯತೋ ಯತ ಇತ್ಯಭಯಾಂ ಜ್ಞಾನಾಖ್ಯಾಂ ತ್ರ್ಯಂಬಕೇಣ ಚ ॥ ೩೪ ॥

---

ಸಂ-೧-೮) ಎಂಬ ಮಂತ್ರದಿಂದ ಫಲಗಳನ್ನು ಸಮರ್ಪಿಸಬೇಕು. "ನಮೋ ವೃಜ್ಯಾಯ ಚ" ಎಂಬ ಮಂತ್ರದಿಂದ ಎಲಾ ವಸ್ತುಗಳನ್ನೂ ಅರ್ಪಿಸಬೇಕು.

೩೦. "ಮಾನೋಮಹಾಂತಂ" "ಮಾನಸ್ತೋಕೆ" ಈ ಎರಡು ಮಂತ್ರಗಳಿಂದ ಹನ್ನೊಂದು ಜನ ರುದ್ರರನ್ನು ಅಕ್ಷತೆಗಳಿಂದ ಪೂಜಿಸಬೇಕು.

೩೧. "ಹಿರಣ್ಯಗರ್ಭಃ" ಎಂಬ ಮಂತ್ರದಿಂದ ದಕ್ಷಿಣೆಯನ್ನು ಸಮರ್ಪಿಸಬೇಕು. "ದೇವಸ್ಯತ್ವಾ" ಎಂಬ ಮಂತ್ರದಿಂದ ಅಭಿಷೇಕವನ್ನು ಮಾಡಿಸಬೇಕು.

೩೨. "ನಮ ಆಶವೇ" ಎಂಬ ಮಂತ್ರದಿಂದ ಶಿವನಿಗೆ ಮಂಗಳಾರತಿಯನ್ನು ಮಾಡಬೇಕು. "ಇಮಾರುದ್ರಾಯ" ಎಂಬ ಮೂರು ಮಂತ್ರಗಳಿಂದ ಪುಷ್ಪಾಂಜಲಿ (ಮಂತ್ರಪುಷ್ಪ) ವನ್ನು ಅರ್ಪಿಸಬೇಕು.

೩೩. "ಮಾನೋಮಹಾಂತಂ" ಎಂಬ ಮಂತ್ರದಿಂದ ಪ್ರದಕ್ಷಿಣವನ್ನೂ "ಮಾನಸ್ತೋಕೆ" ಎಂಬ ಮಂತ್ರದಿಂದ ಸಾಷ್ಟಾಂಗ ನಮಸ್ಕಾರವನ್ನೂ ಮಾಡಬೇಕು.

೩೪. "ಏಷತೇ" ಎಂಬ ಮಂತ್ರದಿಂದ ಶಿವಮುದ್ರೆಯನ್ನು ಪ್ರದರ್ಶಿಸಬೇಕು. "ಯತೋಯತ" ಎಂಬ ಮಂತ್ರದಿಂದ ಅಭಯಮುದ್ರೆಯನ್ನೂ 'ತ್ರ್ಯಂಬಕಂ" ಎಂಬ ಮಂತ್ರದಿಂದ ಜ್ಞಾನಮುದ್ರೆಯನ್ನು ಪ್ರದರ್ಶಿಸಬೇಕು.

ನಮಃ ಸೇನೇತಿ ಮಂತ್ರೇಣ ಮಹಾಮುದ್ರಾಂ ಪ್ರದರ್ಶಯೇತ್ ।
ದರ್ಶಯೇದ್ಧೇನುಮುದ್ರಾಂ ಚ ನಮೋ ಗೋಭ್ಯ ಋಚಾನಯಾ ॥ ೩೫ ॥

ಪಂಚ ಮುದ್ರಾಃ ಪ್ರದರ್ಶ್ಯಾಥ ಶಿವಮಂತ್ರಜಪಂ ಚರೇತ್ ।
ಶತರುದ್ರೀಯಮಂತ್ರೇಣ ಜಪೇದ್ವೇದವಿಚಕ್ಷಣಃ ॥ ೩೬ ॥

ತತಃ ಪಂಚಾಗಪಾಠಂ ಚ ಕುರ್ಯಾದ್ವೇದವಿಚಕ್ಷಣಃ ।
ದೇವಾ ಗಾತ್ವಿತಿ ಮಂತ್ರೇಣ ಕುರ್ಯಾಚ್ಛಂಭೋರ್ವಿಸರ್ಜನಂ ॥ ೩೭ ॥

ಇತ್ಯುಕ್ತಃ ಶಿವಪೂಜಾಯಾ ವ್ಯಾಸತೋ ವೈದಿಕೋ ವಿಧಿಃ ।
ಸಮಾಸತಶ್ಚ ಶೃಣುತ ವೈದಿಕಂ ವಿಧಿಮುತ್ತಮಂ ॥ ೩೮ ॥

ಋಚಾ ಸದ್ಯೋಜಾತಮಿತಿ ಮೃದಾಹರಣಮಾಚರೇತ್ ।
ವಾಮದೇವಾಯ ಇತಿ ಚ ಜಲಪ್ರಕ್ಷೇಪಮಾಚರೇತ್ ॥ ೩೯ ॥

ಅಘೋರ ಇತಿ ಮಂತ್ರೇಣ ಲಿಂಗನಿರ್ಮಾಣಮಾಚರೇತ್ ।
ತತ್ಪುರುಷಾಯ ಮಂತ್ರೇಣಾಹ್ವಾನಂ ಕುರ್ಯಾದ್ಯಥಾವಿಧಿ ॥ ೪೦ ॥

---

೩೫. "ನಮಃಸೇನಾಭ್ಯಃ" ಎಂಬ ಮಂತ್ರದಿಂದ ಮಹಾಮುದ್ರೆಯನ್ನು ಪ್ರದರ್ಶಿಸಬೇಕು. "ನಮೋಗೋಭ್ಯಃ" ಎಂಬ ಮಂತ್ರದಿಂದ ಧೇನು (ಸುರಭಿ) ಮುದ್ರೆಯನ್ನು ಪ್ರದರ್ಶಿಸಬೇಕು.

೩೬. ಹೀಗೆ ಐದು ಮುದ್ರೆಗಳನ್ನು ಪ್ರದರ್ಶಿಸಿ ಬಳಿಕ ಶಿವಮಂತ್ರಜಪವನ್ನು ಮಾಡಬೇಕು. ವೇದವಿತ್ತಾದ ಸಾಧಕನು ನೂರು ಬಾರಿ ರುದ್ರನಮಕ ಚಮಕಗಳನ್ನು ಜಪಿಸಬೇಕು.

೩೭. ಆಮೇಲೆ ವೇದವಿತ್ತಾದವನು ಪಂಚಾಂಗವನ್ನು ಪಠಿಸಬೇಕು. ಬಳಿಕ "ದೇವಾಗಾತು ವಿದೋಗಾತುಂ ವಿತ್ವಾ" (ತೈ. ಸಂ. ೧-೧) ಎಂಬ ಮಂತ್ರದಿಂದ ಶಿವನನ್ನು ವಿಸರ್ಜಿಸಬೇಕು.

೩೮. ಈ ರೀತಿಯಾಗಿ ಶಿವಪೂಜೆಯ ವೈದಿಕ ವಿಧಿಯನ್ನು ಸಂಕ್ಷೇಪ ರೀತಿ ರೀತಿಯಿಂದ ಹೇಳಿರುವೆನು. ಈಗ ವಿಸ್ತಾರವಾಗಿ ಶಿವಪೂಜಾಕ್ರಮವನ್ನು ಹೇಳುವೆನು. ಎಲೈ ಮುನಿಗಳೇ! ಕೇಳಿರಿ.

೩೯-೪೦. "ಸದ್ಯೋಜಾತಂ" ಎಂಬ ಮಂತ್ರದಿಂದ ಮಣ್ಣನ್ನು ತರಬೇಕು. ವಾಮದೇವಾಯ ನಮ ಎಂಬ ಮಂತ್ರದಿಂದ ಜಲದಿಂದ ಮಣ್ಣನ್ನು ಶೋಧಿಸಬೇಕು.

ಸಂಯೋಜಯೇದ್ವೇದಿಕಾಯಾಮೀಶಾನಮನುನಾ ಹರಂ ।
ಅನ್ಯತ್ಸರ್ವಂ ವಿಧಾನಂ ಚ ಕುರ್ಯಾತ್ಸಂಕ್ಷೇಪತಃ ಸುಧೀಃ ॥ ೪೧ ॥

ಪಂಚಾಕ್ಷರೇಣ ವಾ ಮಂತ್ರೇಣ ಗುರುದತ್ತೇನ ವಾ ತಥಾ ।
ಕುರ್ಯಾತ್ಪೂಜಾಂ ಷೋಡಶೋಪಚಾರೇಣ ವಿಧಿವತ್ಸುಧೀಃ ॥ ೪೨ ॥

ಭವಾಯ ಭವನಾಶಾಯ ಮಹಾದೇವಾಯ ಧೀಮಹಿ ।
ಉಗ್ರಾಯ ಉಗ್ರನಾಶಾಯ ಶರ್ವಾಯ ಶಶಿಮೌಲಿನೇ ॥ ೪೩ ॥

ಅನೇನ ಮನುನಾ ವಾಪಿ ಪೂಜಯೇಚ್ಛಂಕರಂ ಸುಧೀಃ ।
ಸುಭಕ್ತ್ಯಾ ಚ ಭ್ರಮಂ ತ್ಯಕ್ತ್ವಾ ಭಕ್ತ್ಯೈವ ಫಲದಃ ಶಿವಃ ॥ ೪೪ ॥

---

" ಅಘೋರೇಭ್ಯೋ " ಎಂಬ ಮಂತ್ರದಿಂದ ಲಿಂಗವನ್ನು ನಿರ್ಮಿಸಬೇಕು. ' ತತ್ಪುರುಷಾಯ " ಎಂಬ ಮಂತ್ರದಿಂದ ವಿಧಿವತ್ತಾಗಿ ಶಿವನನ್ನು ಆಹ್ವಾನಿಸಬೇಕು.

೪೧. ಬಳಿಕ " ಈಶಾನಃ " ಎಂಬ ಮಂತ್ರದಿಂದ ಶಿವನನ್ನು ಪೀಠದಲ್ಲಿ ಪ್ರತಿಷ್ಠಿಸಬೇಕು. ಮಿಕ್ಕ ಎಲ್ಲಾ ವಿಧಾನಗಳನ್ನು ಸಂಕ್ಷೇಪವಾಗಿ ತಿಳಿದು ಆಚರಿಸಬೇಕು.

೪೨. ಅಥವಾ ಗುರುವು ಉಪದೇಶಿಸಿರುವಂತಹ ಶಿವಪಂಚಾಕ್ಷರೀಮಂತ್ರದಿಂದ ಷೋಡಶೋಪಚಾರಗಳನ್ನರ್ಪಿಸಿ ವಿಧಿವತ್ತಾಗಿ ಪೂಜಿಸಬೇಕು.

೪೩-೪೪. ಅಥವಾ ಭವಾಯ (ಜಗದ್ರೂಪನಾದಂತಹ) ಭವನಾಶಾಯ (ಸಂಸಾರವನ್ನು ನಾಶಮಾಡುವಂತಹ) ಮಹಾದೇವಾಯ (ದೇವದೇವನಾದ ಪರಮೇಶ್ವರನನ್ನು) ಧೀಮಹಿ (ಪೂಜೆಯಿಂದ ಸಂತೋಷಗೊಳಿಸುವೆವು.) ಉಗ್ರಾಯ (ಉಗ್ರನೂ) ಉಗ್ರನಾಶಾಯ (ಕ್ರೂರರನ್ನು ನಾಶಮಾಡುವವನೂ) ಶಶಿಮೌಲಿನೆ (ಚಂದ್ರಕಲೆಯನ್ನು ಧರಿಸಿರುವವನೂ ಆದಂತಹ) ಶರ್ವಾಯ (ಶಿವನಿಗೆ ನಮಸ್ಕಾರವು) ಎಂಬ ಮಂತ್ರದಿಂದ ಭಕ್ತಿಪೂರ್ವಕವಾಗಿ ಭ್ರಮವಿಲ್ಲದೆ ಪೂಜಿಸಬೇಕು. ಭಕ್ತಿಯಿಂದ ಪೂಜಿಸಿದರೇನೆ ಶಿವನು ಫಲವನ್ನು ಕೊಡುವನು.

ಇತ್ಯಪಿ ಪ್ರೋಕ್ತಮಾದೃತ್ಯ ವೈದಿಕಕ್ರಮಪೂಜನಂ ।
ಪ್ರೋಚ್ಯತೇಽನ್ಯವಿಧಿಃ ಸಮ್ಯಕ್ಸಾಧಾರಣತಯಾ ದ್ವಿಜಾಃ ॥ ೪೫ ॥

ಪೂಜಾ ಪಾರ್ಥಿವಲಿಂಗಸ್ಯ ಸಂಪ್ರೋಕ್ತಾ ಶಿವನಾಮಭಿಃ ।
ತಾಂ ಶೃಣುಧ್ವಂ ಮುನಿಶ್ರೇಷ್ಠಾಃ ಸರ್ವಕಾಮಪ್ರದಾಯಿನೀಂ ॥ ೪೬ ॥

ಹರೋ ಮಹೇಶ್ವರಃ ಶಂಭುಃ ಶೂಲಪಾಣಿಃ ಪಿನಾಕಧೃಕ್ ।
ಶಿವಃ ಪಶುಪತಿಶ್ಚೈವ ಮಹಾದೇವ ಇತಿ ಕ್ರಮಾತ್ ॥ ೪೭ ॥

ಮೃದಾಹರಣಸಂಘಟ್ಟಪ್ರತಿಷ್ಠಾಹ್ವಾನಮೇವ ಚ ।
ಸ್ನಪನಂ ಪೂಜನಂ ಚೈವ ಕ್ಷಮಸ್ವೇತಿ ವಿಸರ್ಜನಂ ॥ ೪೮ ॥

ಓಂಕಾರಾದಿ ಚತುರ್ಥ್ಯಂತೈರ್ನಮೋಂತೈರ್ನಾಮಭಿಃ ಕ್ರಮಾತ್ ।
ಕರ್ತವ್ಯಾಶ್ಚ ಕ್ರಿಯಾಃ ಸರ್ವಾ ಭಕ್ತ್ಯಾ ಪರಮಯಾ ಮುದಾ ॥ ೪೯ ॥

---

೪೫. ಈ ರೀತಿಯಾಗಿ ಹೇಳಿರುವ ವೈದಿಕ ಪೂಜಾಕ್ರಮವನ್ನು ಅನುಸರಿಸಿ ಮತ್ತೊಂದು ಪೂಜಾವಿಧಿಯು ಸಾಮಾನ್ಯರೀತಿಯಿಂದ ಚನ್ನಾಗಿ ಹೇಳಲ್ಪಟ್ಟಿರುವುದು. ಅದನ್ನೂ ಹೇಳುವೆನು.

೪೬. ಪಾರ್ಥಿವಲಿಂಗಕ್ಕೆ ಶಿವನ ನಾಮಗಳಿಂದ ಪೂಜೆಯು ಹೇಳಲ್ಪಟ್ಟಿರುವುದು. ಸಕಲ ಇಷ್ಟಾರ್ಥವನ್ನುಂಟುಮಾಡುವಂತಹ ಆ ಪೂಜಾಕ್ರಮವನ್ನು ಭಕ್ತಿಯಿಂದ ಕೇಳಿರಿ.

೪೭-೪೯. ಓಂ ಹರಾಯನಮಃ । ಓಂ ಮಹೇಶ್ವರಾಯನಮಃ। ಓಂ ಶಂಭವೇ ನಮಃ । ಓಂ ಶೂಲಪಾಣಯೇ ನಮಃ । ಓಂ ಪಿನಾಕಧರಾಯನಮಃ । ಓಂ ಶಿವಾಯ ನಮಃ । ಓಂ ಪಶುಪತಯೇ ನಮಃ । ಓಂ ಮಹಾದೇವಾಯ ನಮಃ । ಎಂಬ ಓಂಕಾರವು ಆದಿಯಲ್ಲುಳ್ಳ, ಚತುರ್ಥೀವಿಭಕ್ತ್ಯಂತವಾದ ಮತ್ತು ಕೊನೆಯಲ್ಲಿ ನಮಃ ಪದವುಳ್ಳ ಎಂಟು ಶಿವನಾಮಗಳಿಂದ ಕ್ರಮವಾಗಿ ಮಣ್ಣನ್ನು ತರುವುದು, ಜಲದಿಂದ ಕಲಸಿ ಮುದ್ದೆ ಕಟ್ಟುವುದು, ಲಿಂಗವನ್ನು ನಿರ್ಮಿಸುವುದು, ಪ್ರತಿಷ್ಠಿಸುವುದು, ಆಹ್ವಾನ, ಸ್ನಾನ, ಪೂಜೆ, ಕ್ಷಮಿಸು ಎಂದು ಹೇಳಿ ವಿಸರ್ಜನೆಮಾಡುವುದು. ಈ ವಿಧಿಗಳನ್ನೆಲ್ಲಾ ಭಕ್ತಿಯಿಂದ ಮಾಡಬೇಕು.

ಕೃತ್ವಾ ನ್ಯಾಸವಿಧಿಂ ಸಮ್ಯಕ್ ಷಡಂಗಂ ಕರಯೋಸ್ತಥಾ ।
ಷಡಕ್ಷರೇಣ ಮಂತ್ರೇಣ ತತೋ ಧ್ಯಾನಂ ಸಮಾಚರೇತ್ ॥ ೫೦ ॥

ಕೈಲಾಸಪೀಠಾಸನಮಧ್ಯಸಂಸ್ಥಂ
ಭಕ್ತೈಃ ಸನಂದಾದಿಭಿರರ್ಚ್ಯಮಾನಂ ।
ಭಕ್ತಾರ್ತಿದಾವಾನಲಮಪ್ರಮೇಯಂ
ಧ್ಯಾಯೇದುಮಾಲಿಂಗಿತವಿಶ್ವಭೂಷಣಂ ॥ ೫೧ ॥

ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ ಚಾರುಚಂದ್ರಾವತಂಸಂ ।
ರತ್ನಾಕಲ್ಪೋಜ್ಜ್ವಲಾಂಗಂ ಪರಶುಮೃಗವರಾಭೀತಿಹಸ್ತಂ ಪ್ರಸನ್ನಂ ।
ಪದ್ಮಾಸೀನಂ ಸಮಂತಾತ್ಸ್ತುತಮಮರಗಣೈರ್ವ್ಯಾಘ್ರಕೃತ್ತಿಂ ವಸಾನಂ
ವಿಶ್ವಾದ್ಯಂ ವಿಶ್ವಬೀಜಂ ನಿಖಿಲಭಯಹರಂ ಪಂಚವಕ್ತ್ರಂ ತ್ರಿಣೇತ್ರಂ ॥ ೫೨ ॥

---

೫೦. ಆಮೇಲೆ ಆರು ಅಂಗನ್ಯಾಸ ಮತ್ತು ಕರನ್ಯಾಸಗಳನ್ನು ವಿಧಿವತ್ತಾಗಿ ಮಾಡಿ ಬಳಿಕ "ಓಂ ನಮಃ ಶಿವಾಯ" ಎಂಬ ಷಡಕ್ಷರಮಂತ್ರದಿಂದ ಶಿವಧ್ಯಾನವನ್ನು ಮಾಡಬೇಕು.

೫೧. ಶ್ರೀ ಶಿವನು ಕೈಲಾಸದಲ್ಲಿರುವ ರಜತಪೀಠದ ಮಧ್ಯದಲ್ಲಿ ಕುಳಿತಿರುವನು. ಸನಂದ ಮುಂತಾದ ಭಕ್ತರಿಂದ ಅರ್ಚಿಸಲ್ಪಡುತ್ತಿರುವನು. ಭಕ್ತರ ತೊಂದರೆಗಳೆಂಬ ಕಾಡಿಗೆ ಕಾಡುಕಿಚ್ಚಿನಂತಿರುವನು. ಎಂದರೆ ಭಕ್ತರ ದುಃಖವನ್ನು ಹೋಗಲಾಡಿಸುವನು. ಚಕ್ಷುರಾದಿ ಪ್ರಮಾಣಗಳಿಗೆ ಅಗೋಚರನು, ಪಾರ್ವತಿಯಿಂದ ಆಲಂಗಿಸಲ್ಪಟ್ಟಿರುವನು. ಸಕಲ ಆಭರಣಗಳಿಂದಲೂ ಅಲಂಕೃತನಾಗಿರುವನು. ಜಗತ್ತಿಗೆ ಅಲಂಕಾರಪ್ರಾಯನು. ಇಂತಹ ಶಿವನನ್ನು ಧ್ಯಾನಿಸಬೇಕು.

೫೨. ಮತ್ತೂ ಆ ಶಿವನು ರಜತಗಿರಿ ಎಂದರೆ ಕೈಲಾಸಗಿರಿ ಅಥವಾ ಬೆಳ್ಳಿಯ ಬೆಟ್ಟದಂತೆ ಶುಭ್ರವಾದ ವರ್ಣದಿಂದ ವಿರಾಜಿಸುವನು. ಅವನ ಶಿರಸ್ಸಿನಲ್ಲಿ ಸುಂದರವಾದ ಚಂದ್ರಕಲೆಯಿರುವದು. ರತ್ನಾಭರಣಗಳ ಕಾಂತಿಯಿಂದ ಮತ್ತಷ್ಟು ಅವನ ಶರೀರವು ಪ್ರಕಾಶಿಸುತ್ತಲಿರುವುದು. ಕೈಗಳಲ್ಲಿ ಕೊಡಲಿ, ಜಿಂಕೆ, ವರದಮುದ್ರೆ ಮತ್ತು ಅಭಯಮುದ್ರೆಗಳನ್ನು ಧರಿಸಿರುವನು. ಪ್ರಸನ್ನವಾದ ಮುಖದಿಂದ ಬೆಳಗುತ್ತಿರುವನು, ಪದ್ಮಾಸನದಲ್ಲಿ ಕುಳಿತಿರುವನು. ಅವನ ಸುತ್ತಲೂ ದೇವತೆಗಳು ನೆರೆದಿರುವರು. ಹುಲಿಯ ಚರ್ಮವನ್ನುಟ್ಟಿರುವನು. ಆ ಶಿವನು ಜಗತ್ತಿಗೆ ಆದಿಪುರುಷನು,

ಇತಿ ಧ್ಯಾತ್ವಾ ಚ ಸಂಪೂಜ್ಯ ಪಾರ್ಥಿವಂ ಲಿಂಗಮುತ್ತಮಂ ।
ಜಪೇತ್ಪಂಚಾಕ್ಷರಂ ಮಂತ್ರಂ ಗುರುದತ್ತಂ ಯಥಾವಿಧಿ ॥ ೫೩ ॥

ಸ್ತುತಿಭಿಶ್ಚೈವ ದೇವೇಶಂ ಸ್ತುವೀತ ಪ್ರಣಮನ್ ಸುಧೀಃ ।
ನಾನಾಭಿಧಾಭಿರ್ವಿಪ್ರೇಂದ್ರಾಃ ಪಠೇಚ್ಚೈ ಶತರುದ್ರಿಯಂ ॥ ೫೪ ॥

ತತಃ ಸಾಕ್ಷತಪುಷ್ಪಾಣಿ ಗೃಹೀತ್ವಾಂಜಲಿನಾ ಮುದಾ ।
ಪ್ರಾರ್ಥಯೇಚ್ಛಂಕರಂ ಭಕ್ತ್ಯಾ ಮಂತ್ರೈರೇಭಿಃ ಸುಭಕ್ತಿತಃ ॥ ೫೫ ॥

ತಾವಕಸ್ತ್ವದ್ಗುಣಪ್ರಾಣಸ್ತ್ವಚ್ಚಿತ್ತೋಽಹಂ ಸದಾ ಮೃಡ ।
ಕೃಪಾನಿಧೇ ಇತಿ ಜ್ಞಾತ್ವಾ ಭೂತನಾಥ ಪ್ರಸೀದ ಮೇ ॥ ೫೬ ॥

---

ಆದಿಕಾರಣನು; ಸಕಲ ಭಯವನ್ನೂ ಹೋಗಲಾಡಿಸುವವನು. ಐದು ಮುಖಗಳಿಂದಲೂ, ಮೂರು ನೇತ್ರಗಳಿಂದಲೂ ಶೋಭಿಸುತ್ತಿರುವನು. ಇಂತಹ ಶಿವನನ್ನು ಧ್ಯಾನಿಸಬೇಕು.

೫೩. ಈ ರೀತಿಯಾಗಿ ಶಿವನನ್ನು ಧ್ಯಾನಿಸಿ ಪಾರ್ಥಿವಲಿಂಗವನ್ನು ಪೂಜಿಸಬೇಕು. ಬಳಿಕ ಪಂಚಾಕ್ಷರಮಂತ್ರವನ್ನು ಗುರುವಿನ ಉಪದೇಶದಂತೆ ವಿಧಿವತ್ತಾಗಿ ಜಪಿಸಬೇಕು.

೫೪. ಮತ್ತು ದೇವದೇವನಾದ ಶಿವನನ್ನು ನಮಸ್ಕರಿಸುತ್ತಾ ಅನೇಕ ವಿಧವಾಗಿ ಸ್ತೋತ್ರಗಳಿಂದ ಸ್ತುತಿಸಬೇಕು. ಶತರುದ್ರೀಯವನ್ನು ನೂರು ಬಾರಿ ಪಠಿಸಬೇಕು.

೫೫. ಬಳಿಕ ಅಕ್ಷತೆ ಮತ್ತು ಪುಷ್ಪಗಳನ್ನು ಅಂಜಲಿಯಲ್ಲಿ ಧರಿಸಿ ಶಿವನನ್ನು ಸಂತೋಷದಿಂದಲೂ, ಭಕ್ತಿಯಿಂದಲೂ, ಮುಂದೆ ಹೇಳುವ ಮಂತ್ರಗಳಿಂದ ಪ್ರಾರ್ಥಿಸಬೇಕು.

೫೬. ಭೂತನಾಥನಾದ ಓ ಶಿವನೇ! ಓ ದಯಾಮೂರ್ತಿಯೇ! ನಾನು ನಿನ್ನವನು, ನಿನ್ನ ಗುಣಗಳೇ ಪ್ರಾಣವಾಗಿ ಉಳ್ಳವನು. ನಿನ್ನ ಗುಣಗಳನ್ನು ಹೆಚ್ಚಾಗಿ ಪ್ರೀತಿಸುವವನು, ನಿನ್ನಲ್ಲಿಯೇ ನೆಟ್ಟಮನಸ್ಸುಳ್ಳವನು ಎಂದು ತಿಳಿದು ನನ್ನಲ್ಲಿ ಪ್ರಸನ್ನನಾಗು!

ಅಜ್ಞಾನಾದ್ಯದಿ ವಾ ಜ್ಞಾನಾಜ್ಜಪಪೂಜಾದಿಕಂ ಮಯಾ ।
ಕೃತಂ ತದಸ್ತು ಸಫಲಂ ಕೃಪಯಾ ತವ ಶಂಕರ ॥ ೫೭ ॥

ಅಹಂ ಪಾಪೀ ಮಹಾನದ್ಯ ಪಾವನಶ್ಚ ಭವಾನ್ಮಹಾನ್ ।
ಇತಿ ವಿಜ್ಞಾಯ ಗೌರೀಶ ಯದೀಚ್ಛಸಿ ತಥಾ ಕುರು ॥ ೫೮ ॥

ವೇದೈಃ ಪುರಾಣೈರ್ವಿವಿಧೈಸ್ಸಿದ್ಧಾಂತೈ ಋಷಿಭಿಸ್ತಥಾ ।
ನ ಜ್ಞಾತೋಽಸಿ ಮಹಾದೇವ ಕುತೋಽಹಂ ತ್ವಾಂ ಸದಾಶಿವ ॥ ೫೯ ॥

ಯಥಾ ತಥಾ ತ್ವದೀಯೋಽಸ್ಮಿ ಸರ್ವಭಾವೈರ್ಮಹೇಶ್ವರ ।
ರಕ್ಷಣೀಯಸ್ತ್ವಯಾಹಂ ವೈ ಪ್ರಸೀದ ಪರಮೇಶ್ವರ ॥ ೬೦ ॥

ಇತ್ಯೇವಂ ಚಾಕ್ಷತಾನ್ ಪುಷ್ಪಾಣ್ಯಾರೋಪ್ಯ ಚ ಶಿವೋಪರಿ ।
ಪ್ರಣಮೇದ್ಭಕ್ತಿತಃ ಶಂಭುಂ ಸಾಷ್ಟಾಂಗಂ ವಿಧಿವನ್ಮುನೇ ॥ ೬೧ ॥

---

೫೭. ಓ ಶಂಕರ! ತಿಳಿವಳಿಕೆಯಿಲ್ಲದೆ ಅಥವಾ ತಿಳಿವಳಿಕೆಯಿಂದ ನಾನು ಮಾಡಿದ ನಿನ್ನ ಪೂಜೆ ಜಪ ಮುಂತಾದುವುಗಳು ನಿನ್ನ ಕೃಪೆಯಿಂದ ಸಫಲವಾಗುವುವಂತೆ ಅನುಗ್ರಹಿಸು.

೫೮. ನಾನು ಮಹಾಪಾಪಿಯು. ನೀನು ಮಹಾಪರಿಶುದ್ಧನು. ಇದನ್ನು ಜ್ಞಾಪಿಸಿಕೊಂಡು ನಿನಗೆ ಹೇಗೆ ತೋರುವುದೋ ಅದರಂತೆ ಮಾಡುವವನಾಗು.

೫೯. ಓ ಮಹಾದೇವ! ವೇದಗಳು, ಪುರಾಣಗಳು. ಅನೇಕ ವಿಧವಾದ ಶಾಸ್ತ್ರಗಳು ಮತ್ತು ಮಂತ್ರವಿತ್ತುಗಳಾದ ಋಷಿಗಳು ಇವರೂ ಸಹ ನಿನ್ನ ಸ್ವರೂಪವನ್ನು ತಿಳಿಯಲಾರರು. ಇಂತಹ ನಿನ್ನನ್ನು ನಾನು ಹೇಗೆ ತಿಳಿಯಬಲ್ಲೆನು?

೬೦. ಓ ಮಹೇಶ್ವರ! ಹೇಗಾದರೂ ನಾನು ಸರ್ವ ವಿಧಗಳಿಂದಲೂ ನಿನ್ನವನಾಗಿರುವನು. ಆದುದರಿಂದ ಓ ಪರಮೇಶ್ವರ! ಪ್ರಸನ್ನನಾಗು, ನನ್ನನ್ನು ರಕ್ಷಿಸು.

೬೧. ಈ ರೀತಿ ಪ್ರಾರ್ಥಿಸಿ ಅಕ್ಷತೆ ಮತ್ತು ಪುಷ್ಪಗಳನ್ನು ಶಿವಲಿಂಗದಮೇಲೆ ಪೂಜಿಸಿ, ಭಕ್ತಿಯಿಂಡ ಶಂಕರನಿಗೆ ಸಾಷ್ಟಾಂಗನಮಸ್ಕಾರಗಳನ್ನು ವಿಧಿವತ್ತಾಗಿ ಮಾಡಬೇಕು.

ತತಃ ಪ್ರದಕ್ಷಿಣಾಂ ಕುರ್ಯಾದ್ಯಥೋಕ್ತವಿಧಿನಾ ಸುಧೀಃ ।
ಪುನಃ ಸ್ತುವೀತ ದೇವೇಶಂ ಸ್ತುತಿಭಿಃ ಶ್ರದ್ಧಯಾನ್ವಿತಃ ॥ ೬೨ ॥

ತತೋ ಗಲರವಂ ಕೃತ್ವಾ ಪ್ರಣಮೇಚ್ಛುಚಿನಮ್ರಧೀಃ ।
ಕುರ್ಯಾದ್ವಿಜ್ಞಪ್ತಿಮಾದೃತ್ಯ ವಿಸರ್ಜನಮಥಾಚರೇತ್ ॥ ೬೩ ॥

ಇತ್ಯುಕ್ತ್ವಾ ಮುನಿಶಾರ್ದೂಲಾಃ ಪಾರ್ಥಿವಾರ್ಚಾ ವಿಧಾನತಃ ।
ಭುಕ್ತಿದಾ ಮುಕ್ತಿದಾ ಚೈವ ಶಿವಭಕ್ತಿವಿವರ್ಧಿನೀ ॥ ೬೪ ॥

ಇತ್ಯಧ್ಯಾಯಂ ಸುಚಿತ್ತೇನ ಯಃ ಪಠೇಚ್ಛೃಣುಯಾದಪಿ ।
ಸರ್ವಪಾಪವಿಶುದ್ಧಾತ್ಮಾ ಸರ್ವಾನ್ ಕಾಮಾನವಾಪ್ನುಯಾತ್ ॥ ೬೫ ॥

ಆಯುರಾರೋಗ್ಯದಂ ಚೈವ ಯಶಸ್ಯಂ ಸ್ವರ್ಗಮೇವ ಚ ।
ಪುತ್ರಪೌತ್ರಾದಿಸುಖದಮಾಖ್ಯಾನಮಿದಮುತ್ತಮಂ ॥ ೬೬ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ವಿಂಶೋಽಧ್ಯಾಯಃ.

---

೬೨. ಬಳಿಕ ಹಿಂದೆ ಹೇಳಿದ ವಿಧಿಯಂತೆ ಪ್ರದಕ್ಷಿಣವನ್ನು ಮಾಡಬೇಕು. ಆ ಮೇಲೆ ತಿರುಗಿ ಮಹಾದೇವನನ್ನು ಶ್ರದ್ಧೆ (ಭಕ್ತಿ) ಯಿಂದ ಸ್ತುತಿಸಬೇಕು.

೬೩. ನಂತರ ಕಂಠಶಬ್ದವನ್ನು ಮಾಡಿ ಶುದ್ಧವಾಗಿಯೂ, ನಮ್ರತೆಯಿಂದಲೂ ನಮಸ್ಕರಿಸಬೇಕು. ಆಮೇಲೆ ಆದರದಿಂದ ಕ್ಷಮಿಸು ಎಂದು ವಿಜ್ಞಾಪಿಸಿ ವಿಸರ್ಜನ ವನ್ನು ಮಾಡಬೇಕು.

೬೪. ಎಲೈ ಮುನಿಶ್ರೇಷ್ಠರೇ! ಹೀಗೆ ಪಾರ್ಥಿವಪೂಜೆಯನ್ನು ವಿಧಿವತ್ತಾಗಿ ಹೇಳಿರುವೆನು. ಈ ಪೂಜೆಯು ಭೋಗ ಮತ್ತು ಮೋಕ್ಷಗಳನ್ನುಂಟುಮಾಡುವದು. ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವದು.

೬೫. ಈ ಅಧ್ಯಾಯವನ್ನು ಯಾವನು ಸಾವಧಾನಮನಸ್ಸಿನಿಂದ ಕೇಳುವನೋ ಮತ್ತು ಪಠಿಸುವನೋ, ಅವನು ಸಕಲ ಪಾಪಗಳಿಂದಲೂ ರಹಿತನಾಗಿ ಬೇಕಾದ ಇಷ್ಟಾರ್ಥಗಳನ್ನು ಪಡೆಯುವನು.

೬೬. ಈ ಆಖ್ಯಾನವು ಆಯುಸ್ಸು ಮತ್ತು ಆರೋಗ್ಯವನ್ನುಂಟುಮಾಡು ವುದು. ಯಶಸ್ಸನ್ನೂ, ಸ್ವರ್ಗವನ್ನೂ ಪುತ್ರಪೌತ್ರಾದಿ ಸುಖಸಂಪತ್ತನ್ನೂ ಉಂಟು ಮಾಡುವದು.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ಏಕವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸೂತ ಮಹಾಭಾಗ ವ್ಯಾಸಶಿಷ್ಯ ನಮೋಽಸ್ತು ತೇ ।
ಸಮ್ಯಗುಕ್ತಂ ತ್ವಯಾ ತಾತ ಪಾರ್ಥಿವಾರ್ಚಾವಿಧಾನಕಂ ॥ ೧ ॥

ಕಾಮನಾಭೇದಮಾಶ್ರಿತ್ಯ ಸಂಖ್ಯಾಂ ಬ್ರೂಹಿ ವಿಧಾನತಃ ।
ಶಿವಪಾರ್ಥಿವಲಿಂಗಾನಾಂ ಕೃಪಯಾ ದೀನವತ್ಸಲ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯವು.

೧. ಋಷಿಗಳು ಕೇಳಿದರು:—ಮಹಾಮಹಿಮನಾದ ಓ ಸೂತಮುನಿ! ವ್ಯಾಸಶಿಷ್ಯನಾದ ನಿನಗೆ ನಮಸ್ಕಾರವು. ನೀನು ಪಾರ್ಥಿವಲಿಂಗಪೂಜೆಯನ್ನು ನಮಗೆ ಚನ್ನಾಗಿ ಹೇಳಿರುವೆ.

೨. ಕರುಣಾಶಾಲಿಯಾದ ಓ ಮುನಿ! ಈಗ ಪೂಜಿಸುವವರ ಫಲೇಚ್ಛೆಗಳನ್ನನುಸರಿಸಿ ಶಿವಪಾರ್ಥಿವಲಿಂಗಗಳ ಸಂಖ್ಯೆಯನ್ನು ದಯವಿಟ್ಟು ನಮಗೆ ತಿಳಿಸು ಎಂದು ಕೇಳಲು,

॥ ಸೂತ ಉವಾಚ ॥

ಶೃಣುಧ್ವಮೃಷಯಃ ಸರ್ವೇ ಪಾರ್ಥಿವಾರ್ಚಾವಿಧಾನಕಂ ।
ಯಸ್ಯಾನುಷ್ಠಾನಮಾತ್ರೇಣ ಕೃತಕೃತ್ಯೋ ಭವೇನ್ನರಃ ॥ ೩ ॥

ಅಕೃತ್ವಾ ಪಾರ್ಥಿವಂ ಲಿಂಗಂ ಯೋಽನ್ಯದೇವಂ ಪ್ರಪೂಜಯೇತ್ ।
ವೃಥಾ ಭವತಿ ಸಾ ಪೂಜಾ ದಮದಾನಾದಿಕಂ ವೃಥಾ ॥ ೪ ॥

ಸಂಖ್ಯಾ ಪಾರ್ಥಿವಲಿಂಗಾನಾಂ ಯಥಾಕಾಮಂ ನಿಗದ್ಯತೇ ।
ಸಂಖ್ಯಾ ಸದ್ಯೋ ಮುನಿಶ್ರೇಷ್ಠ ನಿಶ್ಚಯೇನ ಫಲಪ್ರದಾ ॥ ೫ ॥

ಪ್ರಥಮಾವಾಹನಂ ತತ್ರ ಪ್ರತಿಷ್ಠಾ ಪೂಜನಂ ಪೃಥಕ್ ।
ಲಿಂಗಾಕಾರಂ ಸಮಂ ಜ್ಞೇಯಂ ಸರ್ವಂ ತತ್ರ ಪೃಥಕ್ಪೃಥಕ್ ॥ ೬ ॥

ವಿದ್ಯಾರ್ಥೀ ಪುರುಷಃ ಪ್ರೀತ್ಯಾ ಸಹಸ್ರಮಿತಪಾರ್ಥಿವಂ ।
ಪೂಜಯೇಚ್ಛಿವಲಿಂಗಂ ಹಿ ನಿಶ್ಚಯಾತ್ತತ್ಫಲಪ್ರದಂ ॥ ೭ ॥

---

೩. ಸೂತಮುನಿಯು ಹೇಳಿದನು :—ಎಲೈ ಋಷಿಗಳೇ! ಯಾವುದನ್ನು ಅನುಷ್ಠಾನಮಾಡಿದ ಮಾತ್ರದಿಂದಲೇ ನರನು ಕೃತಾರ್ಥನಾಗುವನೋ ಅಂತಹ ಪಾರ್ಥಿವಲಿಂಗಪೂಜಾವಿಧಿಯನ್ನು ಹೇಳುವೆನು, ಎಲ್ಲರೂ ಕೇಳಿರಿ!

೪. ಪಾರ್ಥಿವಲಿಂಗವನ್ನು ಅರ್ಚಿಸದೇ ಯಾವನು ಬೇರೆ ದೇವತೆಗಳನ್ನು ಪೂಜಿಸುವನೋ ಅವನ ಪೂಜೆಯು ವ್ಯರ್ಥವಾಗುವದು. ಜಿತೇಂದ್ರಿಯತೆ ದಾನ ಮುಂತಾದುವುಗಳೂ ವ್ಯರ್ಥವಾಗುವವು.

೫. ಪಾರ್ಥಿವಲಿಂಗಗಳ ಸಂಖ್ಯೆಯನ್ನು ಫಲಕಾಮನೆಗಳ ಭೇದವನ್ನಾಶ್ರಯಿಸಿ ಹೇಳುವೆನು. ಎಲೈ ಮುನಿಶ್ರೇಷ್ಠರೆ! ಪಾರ್ಥಿವಲಿಂಗಸಂಖ್ಯೆಯು ಸದ್ಯಃ ಫಲವನ್ನು ನಿಶ್ಚಯವಾಗಿ ಕೊಡುವುದು.

೬. ಆ ಪಾರ್ಥಿವಲಿಂಗಗಳಲ್ಲಿ ಮೊದಲು ಆವಾಹನೆ, ಮಾಡಿ ಬಳಿಕ ಪ್ರತಿಷ್ಠೆ, ಪೂಜೆ, ಮುಂತಾದುವುಗಳನ್ನು ಬೇರೆ ಬೇರೆಯಾಗಿ ಆಯಾಯ ಲಿಂಗಗಳಿಗೆ ಅನುಸಾರವಾಗಿ ಮಾಡಬೇಕು.

೭. ವಿದ್ಯೆಯನ್ನಪೇಕ್ಷಿಸುವ ಪುರುಷನು ಸಾವಿರ ಪಾರ್ಥಿವಲಿಂಗಗಳನ್ನು ಅರ್ಚಿಸಬೇಕು. ಅದರಿಂದ ನಿಶ್ಚಯವಾಗಿ ವಿದ್ಯೆಯು ಲಭಿಸುವದು.

ನರಃ ಪಾರ್ಥಿವಲಿಂಗಾನಾಂ ಧನಾರ್ಥೀ ಚ ತದರ್ಧಕಂ ।
ಪುತ್ರಾರ್ಥೀ ಸಾರ್ಧಸಾಹಸ್ರಂ ವಸ್ತ್ರಾರ್ಥೀ ಶತಪಂಚಕಂ ॥ ೮ ॥

ಮೋಕ್ಷಾರ್ಥೀ ಕೋಟಿಗುಣಿತಂ ಭೂಕಾಮಶ್ಚ ಸಹಸ್ರಕಂ ।
ದಯಾರ್ಥೀ ಚ ತ್ರಿಸಾಹಸ್ರಂ ತೀರ್ಥಾರ್ಥೀ ದ್ವಿಸಹಸ್ರಕಂ ॥ ೯ ॥

ಸುಹೃತ್ಕಾಮೀ ತ್ರಿಸಾಹಸ್ರಂ ವಶ್ಯಾರ್ಥೀ ಶತಮಷ್ಟಕಂ ।
ಮಾರಣಾರ್ಥೀ ಸಪ್ತಶತಂ ಮೋಹನಾರ್ಥೀ ಶತಾಷ್ಟಕಂ ॥ ೧೦ ॥

ನಿಗಡಾನ್ಮುಕ್ತಿಕಾಮಸ್ತು ಸಹಸ್ರಂ ಸಾರ್ಧಮುತ್ತಮಂ ।
ಮಹಾರಾಜಭಯೇ ಪಂಚಶತಂ ಜ್ಞೇಯಂ ವಿಚಕ್ಷಣೈಃ ॥ ೧೧ ॥

ಚೌರಾದಿಸಂಕಟೇ ಜ್ಞೇಯಂ ಪಾರ್ಥಿವಾನಾಂ ಶತದ್ವಯಂ ।
ಡಾಕಿನ್ಯಾದಿಭಯೇ ಪಂಚಶತಮುಕ್ತಂ ತು ಪಾರ್ಥಿವಂ ॥ ೧೨ ॥

---

೮. ಧನವನ್ನಪೇಕ್ಷಿಸುವ ಪುರುಷನು ಐದುನೂರು ಪಾರ್ಥಿವಲಿಂಗಗಳನ್ನು ಪೂಜಿಸಬೇಕು. ಪುತ್ರರನ್ನಪೇಕ್ಷಿಸುವವನು ಒಂದೂವರೆಸಾವಿರ ಲಿಂಗಗಳನ್ನೂ, ವಸ್ತ್ರವನ್ನಪೇಕ್ಷಿಸುವವನು ಐನೂರು ಲಿಂಗಗಳನ್ನೂ ಪೂಜಿಸಬೇಕು.

೯-೧೦. ಮುಕ್ತಿಯನ್ನಪೇಕ್ಷಿಸುವವನು ಕೋಟಿ ಲಿಂಗಗಳನ್ನೂ, ಭೂಮಿಯನ್ನಪೇಕ್ಷಿಸುವವನು ಸಾವಿರ ಲಿಂಗಗಳನ್ನೂ, ದಯೆಯನ್ನಪೇಕ್ಷಿಸುವವನು ಮೂರು ಸಾವಿರ ಲಿಂಗಗಳನ್ನೂ, ತೀರ್ಥವನ್ನಪೇಕ್ಷಿಸುವವನು ಮೂರುಸಾವಿರ ಲಿಂಗಗಳನ್ನೂ, ಸ್ನೇಹಿತರನ್ನಪೇಕ್ಷಿಸುವವನು ಮೂರುಸಾವಿರ ಲಿಂಗಗಳನ್ನೂ ವಶೀಕರಣವನ್ನಪೇಕ್ಷಿಸು ಎರಡುನೂರು ಲಿಂಗಗಳನ್ನೂ ಶತ್ರುನಾಶವನ್ನಪೇಕ್ಷಿಸುವವನು ಏಳುನೂರು ಲಿಂಗಗಳನ್ನೂ, ಮೋಹನವಿದ್ಯೆಯನ್ನಪೇಕ್ಷಿಸುವವನು ಎಂಟುನೂರು ಲಿಂಗಗಳನ್ನೂ ಅರ್ಚಿಸಬೇಕು.

೧೧. ಬಂಧನದಿಂದ ಬಿಡುಗಡೆಯನ್ನಪೇಕ್ಷಿಸುವವನು ಸಾವಿರದೈನೂರು ಲಿಂಗಗಳನ್ನು ಪೂಜಿಸಬೇಕು. ರಾಜಭಯದಲ್ಲಿ ಐನೂರು ಲಿಂಗಗಳನ್ನು ಪೂಜಿಸಬೇಕು.

೧೨. ಕಳ್ಳರಿಂದ ಭಯವೊದಗಿದಲ್ಲಿ ಎರಡುನೂರು ಪಾರ್ಥಿವಲಿಂಗಗಳನ್ನೂ, ಡಾಕಿನೀ ಮುಂತಾದ ಪಿಶಾಚಿಗಳ ಬಾಧೆಯಲ್ಲಿ ಐದುನೂರು ಲಿಂಗಗಳನ್ನೂ ಪೂಜಿಸಬೇಕು. ಬಡತನವು ಪ್ರಾಪ್ತವಾದರೆ ಐದುಸಾವಿರ ಲಿಂಗಗಳನ್ನು ಪೂಜಿಸಬೇಕು.

ದಾರಿದ್ರ್ಯೇ ಪಂಚಸಾಹಸ್ರಮಯುತಂ ಸರ್ವಕಾಮದಂ ।
ಉಚ್ಚಾಟನಪರಶ್ಚೈವ ಸಹಸ್ರಂ ಚ ಯಥೋಕ್ತಿತಃ ॥ ೧೩ ॥

ಸ್ತಂಭನಾರ್ಥೀ ಸಹಸ್ರಂ ತು ದ್ವೇಷಣಾರ್ಥೀ ತದರ್ಧಕಂ ।
ಅಥ ನಿತ್ಯವಿಧಿಂ ವಕ್ಷ್ಯೇ ಶೃಣುಧ್ವಂ ಮುನಿಸತ್ತಮಾಃ ॥ ೧೪ ॥

ಏಕಂ ಪಾಪಹರಂ ಪ್ರೋಕ್ತಂ ದ್ವಿಲಿಂಗಂ ಚಾರ್ಥಸಿದ್ಧಿದಂ ।
ತ್ರಿಲಿಂಗಂ ಸರ್ವಕಾಮಾನಾಂ ಕಾರಣಂ ಪರಮೀರಿತಂ ॥ ೧೫ ॥

ಉತ್ತರೋತ್ತರಮೇವಂ ಸ್ಯಾತ್ಪೂರ್ವೋಕ್ತಗಣನಾವಧಿ ।
ಮತಾಂತರಮಥೋ ವಕ್ಷ್ಯೇ ಸಂಖ್ಯಾಯಾಂ ಮುನಿಭೇದತಃ ॥ ೧೬ ॥

ಲಿಂಗಾನಾಮಯುತಂ ಕೃತ್ವಾ ಪಾರ್ಥಿವಾನಾಂ ಸುಬುದ್ಧಿಮಾನ್ ।
ನಿರ್ಭಯೋ ಹಿ ಭವೇನ್ನೂನಂ ಮಹಾರಾಜಭಯಂ ಹರೇತ್ ॥ ೧೭ ॥

---

ಅಲ್ಲಿಯೂ ಹತ್ತುಸಾವಿರ ಲಿಂಗಗಳನ್ನರ್ಚಿಸಿದರೆ ಸಕಲ ಇಷ್ಟಾರ್ಥಗಳೂ ನೆರವೇರುವುವು.

೧೩. ಉಚ್ಚಾಟನ (ಶತ್ರುಗಳನ್ನೋಡಿಸುವುದು) ವನ್ನಪೇಕ್ಷಿಸುವವನು ಸಾವಿರ ಲಿಂಗಗಳನ್ನರ್ಚಿಸಬೇಕು. ಶತ್ರು ಸ್ತಂಭನವನ್ನಪೇಕ್ಷಿಸುವವನು ಸಾವಿರ ಲಿಂಗಗಳನ್ನೂ, ದ್ವೇಷಣವನ್ನಪೇಕ್ಷಿಸುವವನು ಐನೂರು ಲಿಂಗಗಗಳನ್ನೂ ಅರ್ಚಿಬೇಕು.

೧೪-೧೫. ಎಲೈ ಮುನಿಶ್ರೇಷ್ಠರೇ ! ಈಗ ನಿತ್ಯವೂ ಪೂಜಿಸಬೇಕಾದ ಪಾರ್ಥಿವಲಿಂಗ ಸಂಖ್ಯೆಯನ್ನು ಹೇಳುವೆನು. ಪ್ರತಿದಿನವೂ ಒಂದು ಲಿಂಗವನ್ನು ಪೂಜಿಸಿದರೆ ಪಾಪನಾಶವಾಗುವದು. ಎರಡು ಲಿಂಗಗಳನ್ನರ್ಚಿಸಿದರೆ ಧನಲಾಭವೂ, ಮೂರು ಲಿಂಗಗಳನ್ನರ್ಚಿಸಿದರೆ ಸಕಲ ಇಷ್ಟಾರ್ಥಸಿದ್ಧಿಯೂ ಆಗುವದು.

೧೬. ಇನ್ನೂ ಹೆಚ್ಚು ಹೆಚ್ಚಾಗಿ ಲಿಂಗಗಳನ್ನರ್ಚಿಸಿದರೆ ಅದಕ್ಕನುಸಾರವಾಗಿ ಫಲವೂ ಹೆಚ್ಚಾಗಿ ಲಭಿಸುವದು. ' ಈಗ ಪಾರ್ಥಿವಲಿಂಗಸಂಖ್ಯೆಗಳ ವಿಷಯದಲ್ಲಿ ಬೇರೆ ಮುನಿಗಳ ಮತಾಂತರವನ್ನು ಹೇಳುವೆನು.

೧೭. ಹತ್ತುಸಾವಿರ ಪಾರ್ಥಿವಲಿಂಗಗಳನ್ನು ಪೂಜಿಸಿದ ನರೋತ್ತಮನು ಯಾವ ಭಯವೂ ಇಲ್ಲದವನಾಗುವನು. ಮತ್ತು ಮಹತ್ತಾದ ರಾಜಭಯವೂ ನಿವಾರಣೆಯಾಗುವದು.

ಕಾರಾಗೃಹಾದಿಮುಕ್ತ್ಯರ್ಥಮಯುತಂ ಕಾರಯೇದ್ಬುಧಃ ।
ಡಾಕಿನ್ಯಾದಿಭಯೇ ಸಪ್ತಸಹಸ್ರಂ ಕಾರಯೇತ್ತಥಾ ॥ ೧೮ ॥

ಸಹಸ್ರಾಣಿ ಪಂಚಪಂಚಾಶದಪುತ್ರಃ ಪ್ರಕಾರಯೇತ್ ।
ಲಿಂಗಾನಾಮಯುತೇನೈವ ಕನ್ಯಕಾಸಂತತಿಂ ಲಭೇತ್ ॥ ೧೯ ॥

ಲಿಂಗಾನಾಮಯುತೇನೈವ ವಿಷ್ಣ್ವಾದ್ಯೈಶ್ವರ್ಯಮಾಪ್ನುಯಾತ್ ।
ಲಿಂಗಾನಾಂ ಪ್ರಯುತೇನೈವ ಹ್ಯತುಲಾಂ ಶ್ರಿಯಮಾಪ್ನುಯಾತ್ ॥ ೨೦ ॥

ಕೋಟಿಮೇಕಾಂ ತು ಲಿಂಗಾನಾಂ ಯಃ ಕರೋತಿ ನರೋ ಭುವಿ ।
ಶಿವ ಏವ ಭವೇತ್ಸೋಽಪಿ ನಾತ್ರ ಕಾರ್ಯಾ ವಿಚಾರಣಾ ॥ ೨೧ ॥

ಅರ್ಚಾ ಪಾರ್ಥಿವಲಿಂಗಾನಾಂ ಕೋಟಿಯಜ್ಞಫಲಪ್ರದಾ ।
ಭುಕ್ತಿದಾ ಮುಕ್ತಿದಾ ನಿತ್ಯಂ ತತಃ ಕಾಮಾರ್ಥಿನಾಂ ನೃಣಾಂ ॥ ೨೨ ॥

---

೧೮-೨೦. ಹತ್ತುಸಾವಿರ ಲಿಂಗಪೂಜೆಯನ್ನು ಮಾಡಿದರೆ ಸೆರೆಯಿಂದ ಬಿಡುಗಡೆಯಾಗುವದು. ಡಾಕಿನೀ ಮುಂತಾದ ಭೂತಗಳ ಬಾಧೆಯೊದಗಿದಲ್ಲಿ ಏಳು ಸಾವಿರ ಲಿಂಗಗಳನ್ನರ್ಚಿಸಬೇಕು. ಗಂಡುಮಕ್ಕಳಿಲ್ಲದವನು ಐವತ್ತೈದುಸಾವಿರ ಲಿಂಗಗಳನ್ನು ಪೂಜಿಸಬೇಕು. ಹತ್ತುಸಾವಿರ ಲಿಂಗಗಳನ್ನರ್ಚಿಸಿದರೆ ಹೆಣ್ಣು ಮಕ್ಕಳಾಗುವುದು. ಮತ್ತು ಹತ್ತುಸಾವಿರ ಲಿಂಗಪೂಜೆಯಿಂದ ವಿಷ್ಣು ಮುಂತಾದ ದೇವತೆಗಳ ಐಶ್ವರ್ಯವು ಲಭಿಸುವದು. ಇಪ್ಪತ್ತುಸಾವಿರ ಲಿಂಗಗಳನ್ನರ್ಚಿಸಿದರೆ ಹೆಚ್ಚಾದ ಸಂಪತ್ತು ಲಭಿಸುವುದು.

೨೧. ಒಂದುಕೋಟಿ ಲಿಂಗಗಳನ್ನು ನಿರ್ಮಿಸಿ ಅರ್ಚಿಸಿದ ನರೋತ್ತಮನು ಶಿವನೇ ಆಗುವನು. ಶಿವಸ್ವರೂಪವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ.

೨೨. ಹೀಗೆ ಪಾರ್ಥಿವಲಿಂಗಗಳನ್ನು ಪೂಜಿಸಿದರೆ ಕೋಟಿ ಯಜ್ಞಗಳ ಫಲವು ಲಭಿಸುವದು. ಮುಕ್ತಿಯನ್ನಪೇಕ್ಷಿಸುವವರಿಗೆ ಮುಕ್ತಿಯೂ, ಭೋಗವನ್ನಪೇಕ್ಷಿಸುವವರಿಗೆ ಭೋಗವೂ ಲಭಿಸುವವು.

ವಿನಾ ಲಿಂಗಾರ್ಚನಂ ಯಸ್ಯ ಕಾಲೋ ಗಚ್ಛತಿ ನಿತ್ಯಶಃ ।
ಮಹಾಹಾನಿರ್ಭವೇತ್ತಸ್ಯ ದುರ್ವೃತ್ತಸ್ಯ ದುರಾತ್ಮನಃ ॥ ೨೩ ॥

ಏಕತಃ ಸರ್ವದಾನಾನಿ ವ್ರತಾನಿ ವಿವಿಧಾನಿ ಚ ।
ತೀರ್ಥಾನಿ ನಿಯಮಾ ಯಜ್ಞಾ ಲಿಂಗಾರ್ಚಾ ಚೈಕತಃ ಸ್ಮೃತಾ ॥ ೨೪ ॥

ಕಲೌ ಲಿಂಗಾರ್ಚನಂ ಶ್ರೇಷ್ಠಂ ಯಥಾ ಲೋಕೇ ಪ್ರದೃಶ್ಯತೇ ।
ತಥಾನ್ಯನ್ನಾಸ್ತಿ ಶಾಸ್ತ್ರಾಣಾಮೇಷ ಸಿದ್ಧಾಂತನಿಶ್ಚಯಃ ॥ ೨೫ ॥

ಭುಕ್ತಿಮುಕ್ತಿಪ್ರದಂ ಲಿಂಗಂ ವಿವಿಧಾಪನ್ನಿವಾರಣಂ ।
ಪೂಜಯಿತ್ವಾ ನರೋ ನಿತ್ಯಂ ಶಿವಸಾಯುಜ್ಯಮಾಪ್ನುಯಾತ್ ॥ ೨೬ ॥

ಶಿವನಾಮಮಯಂ ಲಿಂಗಂ ನಿತ್ಯಂ ಪೂಜ್ಯಂ ಮಹರ್ಷಿಭಿಃ ।
ಯತಶ್ಚ ಸರ್ವಲಿಂಗೇಷು ತಸ್ಮಾತ್ಪೂಜ್ಯಂ ವಿಧಾನತಃ ॥ ೨೭ ॥

---

೨೩. ಪಾರ್ಥಿವಲಿಂಗವನ್ನರ್ಚಿಸದೆ ದುರಾಚಾರಿಯಾಗಿ ದುರ್ಜೀವನವನು ನಡೆಸುತ್ತಾ ಯಾವನು ಕಾಲವನ್ನು ಕಳೆಯುವನೋ ಅವನಿಗೆ ಮಹತ್ತಾದ ಹಾನಿಯು ಪ್ರಾಪ್ತವಾಗುವದು.

೨೪. ಎಲ್ಲಾ ದಾನಗಳು, ಅನೇಕ ಬಗೆಯ ವ್ರತಗಳು, ತೀರ್ಥಗಳು, ನಿಯಮಗಳು ಮತ್ತು ಯಜ್ಞಗಳು ಇವೆಲ್ಲವೂ ಒಂದು, ಪಾರ್ಥಿವಲಿಂಗಾರ್ಚನೆಯೇ ಒಂದು. ಇದು ಅವೆಲ್ಲವುಗಳಿಗೂ ಸಮವಾದುದು.

೨೫. ಕಲಿಯುಗದಲ್ಲಿ ಲಿಂಗಪೂಜೆಯೇ ಶ್ರೇಷ್ಠವಾದುದು. ಆದುದರಿಂದಲೇ ಲಿಂಗಾರ್ಚನವು ಹೆಚ್ಚಾಗಿ ಲೋಕದಲ್ಲಿರುವದು. ಲಿಂಗಪೂಜೆಗಿಂತ ಶ್ರೇಷ್ಠವಾದುದು ಇನ್ನೊಂದಿಲ್ಲವೆಂದು ಶಾಸ್ತ್ರಸಿದ್ಧಾಂತವು.

೨೬. ಶಿವಲಿಂಗವು ಭೋಗ ಮತ್ತು ಮೋಕ್ಷಗಳನ್ನುಂಟುಮಾಡುವದು, ಎಲ್ಲಾ ವಿಪತ್ತುಗಳನ್ನೂ ನಿವಾರಿಸುವದು, ನಿತ್ಯವೂ ಲಿಂಗವನ್ನು ಪೂಜಿಸಿದರೆ ಶಿವನ ಸ್ವರೂಪವು ಲಭಿಸುವದು.

೨೭. ಲಿಂಗಗಳಲ್ಲಿ ಶಿವನಾಮಮಯವಾದ ಲಿಂಗಗಳನ್ನೇ ಮಹರ್ಷಿಗಳು ಪೂಜಿಸಬೇಕು. ಅದೇ ಶ್ರೇಷ್ಠವಾದುದರಿಂದ ವಿಧಿವತ್ತಾಗಿ ಅರ್ಚಿಸಬೇಕು.

ಉತ್ತಮಂ ಮಧ್ಯಮಂ ನೀಚಂ ತ್ರಿವಿಧಂ ಲಿಂಗಮೀರಿತಂ।
ಮಾನತೋ ಮುನಿಶಾರ್ದೂಲಾಸ್ತಚ್ಛೃಣುಧ್ವಂ ಮುನೀಶ್ವರಾಃ ॥ ೨೮ ॥

ಚತುರಂಗುಲಮುಚ್ಛ್ರಾಯಂ ರಮ್ಯಂ ವೇದಿಕಯಾ ಯುತಂ ।
ಉತ್ತಮಂ ಲಿಂಗಮಾಖ್ಯಾತಂ ಮುನಿಭಿಃ ಶಾಸ್ತ್ರಕೋವಿದೈಃ ॥ ೨೯ ॥

ತದರ್ಧಂ ಮಧ್ಯಮಂ ಪ್ರೋಕ್ತಂ ತದರ್ಧಮಧಮಂ ಸ್ಮೃತಂ ।
ಇತ್ಥಂ ತ್ರಿವಿಧಮಾಖ್ಯಾತಮುತ್ತರೋತ್ತರತಃ ಪರಂ ॥ ೩೦ ॥

ಅನೇಕಲಿಂಗಂ ಯೋ ನಿತ್ಯಂ ಭಕ್ತಿಶ್ರದ್ಧಾಸಮನ್ವಿತಃ ।
ಪೂಜಯೇತ್ಸ ಲಭೇತ್ಕಾಮಾನ್ಮನಸಾ ಮಾನಸೇಪ್ಸಿತಾನ್ ॥ ೩೧ ॥

ನ ಲಿಂಗಾರಾಧನಾದನ್ಯತ್ಪುಣ್ಯಂ ವೇದಚತುಷ್ಟಯೇ ।
ವಿದ್ಯತೇ ಸರ್ವಶಾಸ್ತ್ರಾಣಾಮೇಷ ಏವ ವಿನಿಶ್ಚಯಃ ॥ ೩೨ ॥

---

೨೮. ಎಲೈ ಮುನಿಶ್ರೇಷ್ಠರೇ! ಆಯಾಯ ಪ್ರಮಾಣಗಳಿಗನುಸಾರವಾಗಿ ಲಿಂಗವು ಉತ್ತಮ, ಮಧ್ಯಮ, ನೀಚವೆಂದು ಮೂರು ವಿಧವಾಗಿರುವದು, ಅದನ್ನು ಹೇಳುವೆನು ಕೇಳಿರಿ.

೨೯. ನಾಲ್ಕು ಅಂಗುಲ ಎತ್ತರವಾಗಿದ್ದು ಪೀಠದೊಡನೆ ಇರುವ ರಮ್ಯವಾದ ಲಿಂಗವು ಉತ್ತಮವಾದುದೆಂದು ಶಾಸ್ತ್ರಗಳನ್ನು ಬಲ್ಲ ಮುನಿಗಳು ಹೇಳಿರುವರು.

೩೦. ಅದರರ್ಧ ಪ್ರಮಾಣವುಳ್ಳ ಎಂದರೆ ಎರಡು ಅಂಗುಲ ಎತ್ತರವಾದ ಲಿಂಗವು ಮಧ್ಯಮವಾದುದು. ಒಂದು ಅಂಗಲ ಎತ್ತರವಾದುದು ಅಧಮವು ಎಂದು ಮೂರುವಿಧವಾಗಿ ಲಿಂಗವಿರುವದು. ಹೆಚ್ಚು ಪ್ರಮಾಣವುಳ್ಳ ಲಿಂಗವೇ ಶ್ರೇಷ್ಠವಾದುದು.

೩೧. ನಿತ್ಯವೂ ಭಕ್ತಿಶ್ರದ್ಧೆಗಳಿಂದ ಅನೇಕ ಲಿಂಗಗಳನ್ನು ಪೂಜಿಸುವವನು, ತನಗೆ ಬೇಕುಬೇಕಾದಂತಹ ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು.

೩೨. ಶಿವಲಿಂಗಾರ್ಚನವನ್ನು ಹೊರತು ಪುಣ್ಯತಮವಾದ ಇನ್ನೊಂದು ಕರ್ಮವು ನಾಲ್ಕು ವೇದಗಳಲ್ಲಿಯೂ ಇಲ್ಲವೇ ಇಲ್ಲ. ಸಕಲ ಶಾಸ್ತ್ರಗಳ ಸಿದ್ಧಾಂತವೂ ಹೀಗೆಯೇ ಇರುವದು.

ಸರ್ವಮೇತತ್ಪರಿತ್ಯಜ್ಯ ಕರ್ಮಜಾಲಮಶೇಷತಃ ।
ಭಕ್ತ್ಯಾ ಪರಮಯಾ ಯುಕ್ತೋ ಲಿಂಗಮೇಕಂ ಪ್ರಪೂಜಯೇತ್ ॥ ೩೩ ॥

ಲಿಂಗೇಽರ್ಚಿತೇಽರ್ಚಿತಂ ಸರ್ವಂ ಜಗತ್ಸ್ಥಾವರಜಂಗಮಂ ।
ಸಂಸಾರಾಂಬುಧಿಮಗ್ನಾನಾಂ ನಾನ್ಯತ್ತಾರಣಕಾರಣಂ ॥ ೩೪ ॥

ಅಜ್ಞಾನತಿಮಿರಾಂಧಾನಾಂ ವಿಷಯಾಸಕ್ತಚೇತಸಾಂ ।
ಪ್ಲವೋ ನಾನ್ಯೋಽಸ್ತಿ ಜಗತಿ ಲಿಂಗಾರಾಧನಮಂತರಾ ॥ ೩೫ ॥

ಹರಿಬ್ರಹ್ಮಾದಯೋ ದೇವಾ ಮುನಯೋ ಯಕ್ಷರಾಕ್ಷಸಾಃ ।
ಗಂಧರ್ವಾಶ್ಚಾರಣಾಃ ಸಿದ್ಧಾ ದೈತೇಯಾ ದಾನವಾಸ್ತಥಾ ॥ ೩೬ ॥

ನಾಗಾಃ ಶೇಷಪ್ರಭೃತಯೋ ಗರುಡಾದ್ಯಾಃ ಖಗಾಸ್ತಥಾ ।
ಸಪ್ರಜಾಪತಯಶ್ಚಾನ್ಯೇ ಮನವಃ ಕಿನ್ನರಾ ನರಾಃ ॥ ೩೭ ॥

---

೩೩. ವಿದ್ವಾಂಸನಾದವನು ಮಿಕ್ಕ ಎಲ್ಲಾ ಲೌಕಿಕ ವೈದಿಕ ಕರ್ಮಗಳನ್ನೂ ಬಿಟ್ಟು, ಈ ಪಾರ್ಥಿವಲಿಂಗಾರ್ಚನೆಯೊಂದನ್ನು ತುಂಬಾ ಭಕ್ತಿಯಿಂದ ಮಾಡಬೇಕು.

೩೪. ಲಿಂಗವನ್ನು ಪೂಜಿಸಿದರೆ ಚರಾಚರಾತ್ಮಕವಾದ ಇಡೀ ಜಗತ್ತನ್ನು ಪೂಜಿಸಿದಂತಾಗುವದು. ಸಂಸಾರಸಮುದ್ರವನ್ನು ದಾಟಲು ಪಾರ್ಥಿವಲಿಂಗಪೂಜೆಯನ್ನು ಬಿಟ್ಟರೆ ಬೇರೆ ಯಾವ ಸಾಧನವೂ ಇಲ್ಲ.

೩೫. ಅಜ್ಞಾನವೆಂಬ ಕತ್ತಲೆಯಿಂದ ಕುರುಡರಾಗಿಯೂ ವಿಷಯಗಳಲ್ಲೇ ಆಸಕ್ತವಾಗಿರುವ ಮನಸ್ಸುಳ್ಳವರಾಗಿಯೂ ಇದ್ದು, ಸಂಸಾರಸಮುದ್ರದಲ್ಲಿ ಮುಳುಗಿರುವ ಸಂಸಾರಿಗಳಿಗೆ ಲಿಂಗಪೂಜೆ ಹೊರತು ಸಂಸಾರಸಾಗರವನ್ನು ದಾಟಿಸುವ ನೌಕೆಯು ಬೇರೊಂದಿಲ್ಲ.

೩೬-೩೮. ಮಹಾವಿಷ್ಣು, ಚತುರ್ಮುಖಬ್ರಹ್ಮ ಮುಂತಾದ ದೇವತೆಗಳು, ಮುನಿಗಳು, ಯಕ್ಷರಾಕ್ಷಸರು, ಗಂಧರ್ವರು, ಚಾರಣರು, ಸಿದ್ಧರು, ದೈತ್ಯರು, ದಾನವರು, ಆದಿಶೇಷನೇ ಮೊದಲಾದ ನಾಗಗಳು, ಗರುಡ ಮೊದಲಾದ ಪಕ್ಷಿಗಳು, ಕಶ್ಯಪ ಮುಂತಾದ ಬ್ರಹ್ಮರು, ಹದಿನಾಲ್ಕು ಮನುಗಳು, ಕಿನ್ನರರು, ಇವರೆಲ್ಲರೂ ಸಹ ಸಕ

ಪೂಜಯಿತ್ವಾ ಮಹಾಭಕ್ತ್ಯಾ ಲಿಂಗಂ ಸರ್ವಾರ್ಥಸಿದ್ಧಿದಂ ।
ತಾಂಸ್ತಾನ್ ಕಾಮಾನಭೀಷ್ಟಾಂಶ್ಚ ಪ್ರಾಪ್ತಾಃ ಸರ್ವಾನ್ ಹೃದಿ ಸ್ಥಿತಾನ್ ॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಪ್ರತಿಲೋಮಜಃ ।
ಪೂಜಯೇತ್ಸತತಂ ಲಿಂಗಂ ತತ್ತನ್ಮಂತ್ರೇಣ ಸಾದರಂ ॥ ೩೯ ॥

ಕಿಂ ಬಹೂಕ್ತೇನ ಮುನಯಃ ಸ್ತ್ರೀಣಾಮಪಿ ತಥಾನ್ಯತಃ ।
ಅಧಿಕಾರೋಽಸ್ತಿ ಸರ್ವೇಷಾಂ ಶಿವಲಿಂಗಾರ್ಚನೇ ದ್ವಿಜಾಃ ॥ ೪೦ ॥

ದ್ವಿಜಾನಾಂ ವೈದಿಕೇನಾಪಿ ಮಾರ್ಗೇಣಾರಾಧನಂ ವರಂ ।
ಅನ್ಯೇಷಾಮಪಿ ಜಂತೂನಾಂ ವೈದಿಕೇನ ನ ಸಮ್ಮತಂ ॥ ೪೧ ॥

ವೈದಿಕಾನಾಂ ದ್ವಿಜಾನಾಂ ಚ ಪೂಜಾ ವೈದಿಕಮಾರ್ಗತಃ ।
ಕರ್ತವ್ಯಾ ನಾನ್ಯಮಾರ್ಗೇಣ ಇತ್ಯಾಹ ಭಗವಾನ್ ಶಿವಃ ॥ ೪೨ ॥

---

ಲಾಭೀಷ್ಟವನ್ನುಂಟುಮಾಡುವ ಶಿವಲಿಂಗವನ್ನು ಮಹಾಭಕ್ತಿಯಿಂದ ಪೂಜಿಸಿ ತಮಗೆ ಬೇಕಾದಂತಹ ಇಷ್ಟಾರ್ಥಗಳನ್ನೆಲ್ಲವನ್ನೂ ಪಡೆದಿರುವರು.

೩೯. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಸಂಕರಜಾತಿಯವನು ಇವರೆಲ್ಲರೂ ತಮತಮಗೆ ಹೇಳಿರುವರ ಮಂತ್ರದಿಂದ ಭಕ್ತಿಪೂರ್ವಕವಾಗಿ ಶಿವಲಿಂಗವನ್ನು ಸದಾ ಪೂಜಿಸಬೇಕು.

೪೦. ಎಲೈ ಮುನಿಗಳೇ, ಹೆಚ್ಚು ಹೇಳಿ ಪ್ರಯೋಜನವೇನು ? ಸ್ತ್ರೀಯರು ಮೊದಲುಗೊಂಡು ಎಲ್ಲರಿಗೂ ಶಿವಲಿಂಗಪೂಜೆಯಲ್ಲಿ ಅಧಿಕಾರವಿರುವುದು.

೪೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರು ವೇದೋಕ್ತ ಮಾರ್ಗದಿಂದ ಶಿವಲಿಂಗಾರ್ಚನೆಯನ್ನು ಮಾಡುವುದು ಉತ್ತಮವು. ಮಿಕ್ಕ ವರ್ಣದವರು ವೇದೋಕ್ತವಾಗಿ ಮಾಡಬಾರದು.

೪೨. ವೈದಿಕರಾದ ಮೂರು ವರ್ಣದವರು ವೇದೋಕ್ತವಾಗಿಯೇ ಶಿವಪೂಜೆಯನ್ನು ಮಾಡಬೇಕು. ಬೇರೆ ಮಾರ್ಗದಿಂದ ಮಾಡಬಾರದು ಎಂದು ಭಗವಂತನಾದ ಶಿವನೇ ಹೇಳಿರುವನು.

ದಧೀಚಿಗೌತಮಾದೀನಾಂ ಶಾಪೇನಾದಗ್ಧಚೇತಸಾಂ ।
ದ್ವಿಜಾನಾಂ ಜಾಯತೇ ಶ್ರದ್ಧಾ ನೈವ ವೈದಿಕಕರ್ಮಣಿ ॥ ೪೩ ॥

ಯೋ ವೈದಿಕಮನಾದೃತ್ಯ ಕರ್ಮ ಸ್ಮಾರ್ತಮಥಾಪಿ ವಾ ।
ಅನ್ಯತ್ಸಮಾಚರೇನ್ಮರ್ತ್ಯೋ ನ ಸಂಕಲ್ಪಫಲಂ ಲಭೇತ್ ॥ ೪೪ ॥

ಇತ್ಥಂ ಕೃತ್ವಾರ್ಚನಂ ಶಂಭೋರ್ನೈವೇದ್ಯಾಂತಂ ವಿಧಾನತಃ ।
ಪೂಜಯೇದಷ್ಟಮೂರ್ತೀಶ್ಚ ತತ್ರೈವ ತ್ರಿಜಗನ್ಮಯೀಃ ॥ ೪೫ ॥

ಕ್ಷಿತಿರಾಪೋಽನಲೋ ವಾಯುರಾಕಾಶಃ ಸೂರ್ಯಸೋಮಕೌ ।
ಯಜಮಾನ ಇತಿ ತ್ವಷ್ಟೌ ಮೂರ್ತಯಃ ಪರಿಕೀರ್ತಿತಾಃ ॥ ೪೬ ॥

ಶರ್ವೋ ಭವಶ್ಚ ರುದ್ರಶ್ಚ ಉಗ್ರೋ ಭೀಮ ಇತೀಶ್ವರಃ ।
ಮಹಾದೇವಃ ಪಶುಪತಿರೇತಾನ್ ಮೂರ್ತಿಭಿರರ್ಚಯೇತ್ ॥ ೪೭ ॥

ಪೂಜಯೇತ್ಪರಿವಾರಂ ಚ ತತಃ ಶಂಭೋಃ ಸುಭಕ್ತಿತಃ ।
ಈಶಾನಾದಿಕ್ರಮಾತ್ತತ್ರ ಚಂದನಾಕ್ಷತಪತ್ರಕೈಃ ॥ ೪೮ ॥

---

೪೩. ದಧೀಚಿಮುನಿ ಮತ್ತು ಗೌತಮಋಷಿ ಮೊದಲಾದವರಿಂದ ಶಾಪಗ್ರಸ್ತರಾಗಿರುವಂತಹ ದ್ವಿಜರಿಗೆ ವೈದಿಕಕರ್ಮದಲ್ಲಿ ಶ್ರದ್ಧೆಯುಂಟಾಗುವುದಿಲ್ಲ.

೪೪. ವೈದಿಕಕರ್ಮಗಳನ್ನೂ ಸ್ಮಾರ್ತಕರ್ಮಗಳನ್ನೂ ತಿರಸ್ಕರಿಸಿ ಬೇರೆ ಕರ್ಮಗಳನ್ನು ಮಾಡುವವನು ಯಾವ ಫಲವನ್ನೂ ಪಡೆಯಲಾರನು.

೪೫. ಹೀಗೆ ವಿಧಿವತ್ತಾಗಿ ನೈವೇದ್ಯದವರೆಗೆ ಶಂಭುವನ್ನರ್ಚಿಸಿ ಅಲ್ಲಿಯೇ ಅವನ ಮೂರು ಜಗದ್ರೂಪಗಳಾಗಿರುವ ಎಂಟು ಮೂರ್ತಿಗಳನ್ನೂ ಪೂಜಿಸಬೇಕು.

೪೬. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಯಜಮಾನ ಇವರುಗಳು ಈಶ್ವರನ ಎಂಟುಮೂರ್ತಿಗಳು.

೪೭. ಶರ್ವ, ಭವ, ರುದ್ರ, ಉಗ್ರ, ಭೀಮ, ಈಶ್ವರ, ಮಹಾದೇವ, ಪಶುಪತಿ ಈ ಎಂಟು ಈಶ್ವರಸ್ವರೂಪಗಳನ್ನು ಎಂಟು ಮೂರ್ತಿಗಳಿಂದ ಅರ್ಚಿಸಬೇಕು.

೪೮. ಆಮೇಲೆ ಈಶಾನನೇ ಮೊದಲಾದ ಶಂಕರನ ಪರಿವಾರ ಗಣಗಳನ್ನೂ ಗಂಧ, ಅಕ್ಷತೆ, ಬಿಲ್ವಪತ್ರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

ಈಶಾನಂ ನಂದಿನಂ ಚಂಡಂ ಮಹಾಕಾಲಂ ಚ ಭೃಂಗಿಣಂ ।
ವೃಷಂ ಸ್ಕಂದಂ ಕಪರ್ದೀಶಂ ಸೋಮಂ ಶುಕ್ರಂ ಚ ತತ್ಕ್ರಮಾತ್ ॥

ಅಗ್ರತೋ ವೀರಭದ್ರಂ ಚ ಪೃಷ್ಠೇ ಕೀರ್ತಿಮುಖಂ ತಥಾ ।
ತತ ಏಕಾದಶಾನ್ ರುದ್ರಾನ್ ಪೂಜಯೇದ್ವಿಧಿನಾ ತತಃ ॥ ೫೦ ॥

ತತಃ ಪಂಚಾಕ್ಷರಂ ಜಪ್ತ್ವಾ ಶತರುದ್ರೀಯಮೇವ ಚ ।
ಸ್ತುತೀರ್ನಾನಾವಿಧಾಃ ಕೃತ್ವಾ ಪಂಚಾಂಗಪಠನಂ ತಥಾ ॥ ೫೧ ॥

ತತಃ ಪ್ರದಕ್ಷಿಣಂ ಕೃತ್ವಾ ನತ್ವಾ ಲಿಂಗಂ ವಿಸರ್ಜಯೇತ್ ।
ಇತಿ ಪ್ರೋಕ್ತಮಶೇಷಂ ಚ ಶಿವಪೂಜನಮಾದರಾತ್ ॥ ೫೨ ॥

ರಾತ್ರಾವುದಙ್ಮುಖಃ ಕುರ್ಯಾದ್ದೇವಕಾರ್ಯಂ ಸದೈವ ಹಿ ।
ಶಿವಾರ್ಚನಂ ಸದಾಪ್ಯೇವಂ ಶುಚಿಃ ಕುರ್ಯಾದುದಙ್ಮುಖಃ ॥ ೫೩ ॥

---

೪೯. ಈಶಾನ, ನಂದೀಶ್ವರ, ಚಂಡ, ಮಹಾಕಾಲ, ಭೃಂಗಿ, ವೃಷ, ಸ್ಕಂದ, ಕಪರ್ದೀಶ, ಸೋಮ, ಶುಕ್ರ, ಇವರೇ ಈಶ್ವರನ ಪರಿವಾರ ಜನಗಳು. ಇವರನ್ನು ಕ್ರಮವಾಗಿ ಅರ್ಚಿಸಬೇಕು.

೫೦. ಮುಂಭಾಗದಲ್ಲಿ ವೀರಭದ್ರನನ್ನೂ, ಹಿಂಭಾಗದಲ್ಲಿ ಕೀರ್ತಿಮುಖನನ್ನೂ ಪೂಜಿಸಬೇಕು. ಆ ಮೇಲೆ ಏಕಾದಶ ರುದ್ರರನ್ನು ವಿಧಿವತ್ತಾಗಿ ಅರ್ಚಿಸಬೇಕು.

೫೧-೫೨. ಆಮೇಲೆ ಶಿವಪಂಚಾಕ್ಷರೀಜಪವನ್ನು ಮಾಡಿ ಶತರುದ್ರೀಯ ಪಾರಾಯಣವನ್ನು ಮಾಡಬೇಕು. ಆಮೇಲೆ ಅನೇಕ ಬಗೆಯಿಂದ ಶಿವನನ್ನು ಸ್ತುತಿಸಿ, ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ನಂತರ ಲಿಂಗವನ್ನು ವಿಸರ್ಜಿಸಬೇಕು. ಈರೀತಿಯಾಗಿ ಶಿವಪೂಜಾಕ್ರಮವನ್ನು ಸಂಪೂರ್ಣವಾಗಿ ಹೇಳಿರುವೆನು.

೫೩. ರಾತ್ರಿಯಲ್ಲಿ ಶುದ್ಧನಾಗಿದ್ದು, ಶಿವಪೂಜೆ ಮತ್ತು ಇತರ ದೇವರ ಪೂಜೆಗಳನ್ನು ಉತ್ತರಮುಖವಾಗಿ ಕುಳಿತು ಮಾಡಬೇಕು.

ನ ಪ್ರಾಚೀಮಗ್ರತಃ ಶಂಭೋರ್ನೋದೀಚೀಂ ಶಕ್ತಿಸಂಹಿತಾಂ ।
ನ ಪ್ರತೀಚೀಂ ಯತಃ ಪೃಷ್ಠಮತೋ ಗ್ರಾಹ್ಯಂ ಸಮಾಶ್ರಯೇತ್ ॥ ೫೪ ॥

ವಿನಾ ಭಸ್ಮತ್ರಿಪುಂಡ್ರೇಣ ವಿನಾ ರುದ್ರಾಕ್ಷಮಾಲಯಾ ।
ಬಿಲ್ವಪತ್ರಂ ವಿನಾ ನೈವ ಪೂಜಯೇಚ್ಛಂಕರಂ ಬುಧಃ ॥ ೫೫ ॥

ಭಸ್ಮಾಪ್ರಾಪ್ತೌ ಮುನಿಶ್ರೇಷ್ಠಾಃ ಪ್ರವೃತ್ತೇ ಶಿವಪೂಜನೇ ।
ತದಾ ಮೃದಾಪಿ ಕರ್ತವ್ಯಂ ಲಲಾಟೇ ಚ ತ್ರಿಪುಂಡ್ರಕಂ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾ-
ಮೇಕವಿಂಶೋಽಧ್ಯಾಯಃ.

---

೫೪. ಪೂರ್ವದಿಕ್ಕಿಗೂ, ಶಂಕರನೆದುರಾಗಿಯೂ, ಪಶ್ಚಿಮದಿಕ್ಕಿಗೂ ಸಹ ಬೆನ್ನು ಹಾಕಿಕೊಂಡು ಕುಳಿತುಕೊಳ್ಳಬಾರದು. ಆದುದರಿಂದ ಗ್ರಾಹ್ಯವಾದ ದಿಕ್ಕನ್ನು ಆಶ್ರಯಿಸಬೇಕು.

೫೫. ಭಸ್ಮವನ್ನು ಹಚ್ಚದೆಯೂ, ರುದ್ರಾಕ್ಷಮಾಲೆಯನ್ನು ಧರಿಸದೆಯೂ, ಬಿಲ್ವಪತ್ರಗಳಿಲ್ಲದೆಯೂ ಶಿವನನ್ನು ತಿಳಿದವರು ಪೂಜಿಸಬಾರದು.

೫೬. ಶಿವಪೂಜೆಯು ಪ್ರಾರಂಭವಾಗಿ ಭಸ್ಮವು ಎಲ್ಲಿಯೂ ಸಿಗದಿದ್ದರೆ, ಶುದ್ಧವಾದ ಮಣ್ಣಿನಿಂದ ಹಣೆಯಲ್ಲಿ ಮೂರು ಪಟ್ಟೆಗಳನ್ನು ಹಚ್ಚಿಕೊಳ್ಳಬೇಕು.

ಇಲ್ಲಿಗೆ ಶ್ರೀಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರಸಂಹಿತೆಯಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ದ್ವಾವಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಅಗ್ರಾಹ್ಯಂ ಶಿವನೈವೇದ್ಯಮಿತಿ ಪೂರ್ವಂ ಶ್ರುತಂ ವಚಃ ।
ಬ್ರೂಹಿ ತನ್ನಿರ್ಣಯಂ ಬಿಲ್ವಮಾಹಾತ್ಮ್ಯಮಪಿ ಸನ್ಮುನೇ ॥ ೧ ॥

॥ ಸೂತ ಉವಾಚ ॥

ಶೃಣುಧ್ವಂ ಮುನಯಃ ಸರ್ವೇ ಸಾವಧಾನತಯಾಧುನಾ ।
ಸರ್ವಂ ವದಾಮಿ ಸಪ್ರೀತ್ಯ ಧನ್ಯಾ ಯೂಯಂ ಶಿವವ್ರತಾಃ ॥ ೨ ॥

---

### ಇಪ್ಪತ್ತೆರಡನೆಯ ಅಧ್ಯಾಯವು.

೧. ಋಷಿಗಳು ಕೇಳಿದರು :—ಓ ಸೂತಮುನಿಶ್ರೇಷ್ಠನೇ! ಶಿವನ ನೈವೇದ್ಯವನ್ನು ಸೇವಿಸಬಾರದೆಂದು ಹಿಂದೆ ಕೇಳಿರುವೆವು. ಅದರ ನಿರ್ಣಯವನ್ನೂ, ಬಿಲ್ವಪತ್ರದ ಮಾಹಾತ್ಮ್ಯವನ್ನೂ ನಮಗೆ ತಿಳಿಸು ಎಂದು ಕೇಳಲು,

೨. ಸೂತನು ಹೇಳಿದನು:—ಎಲೈ ಮುನಿಗಳೇ! ಶಿವಭಕ್ತರಾದ ನೀವೇ ಧನ್ಯರು. ಇಂತಹ ನೀವು ಕೇಳಿದುದೆಲ್ಲವನ್ನೂ ಪ್ರೀತಿಯಿಂದ ಹೇಳುವೆನು. ಸಾವಧಾನದಿಂದ ಕೇಳಿರಿ.

ಶಿವಭಕ್ತಃ ಶುಚಿಃ ಶುದ್ಧಃ ಸದ್ವ್ರತೀ ದೃಢನಿಶ್ಚಯಃ ।
ಭಕ್ಷಯೇಚ್ಛಿವನೈವೇದ್ಯಂ ತ್ಯಜೇದಗ್ರಾಹ್ಯಭಾವನಾಂ ॥ ೩ ॥

ದೃಷ್ಟ್ವಾಪಿ ಶಿವನೈವೇದ್ಯಂ ಯಾಂತಿ ಪಾಪಾನಿ ದೂರತಃ ।
ಭುಕ್ತೇ ತು ಶಿವನೈವೇದ್ಯೇ ಪುಣ್ಯಾನ್ಯಾಯಾಂತಿ ಕೋಟಿಶಃ ॥ ೪ ॥

ಅಲಂ ಯಾಗಸಹಸ್ರೇಣಾಪ್ಯಲಂ ಯಾಗಾರ್ಬುದೈರಪಿ ।
ಭಕ್ಷಿತೇ ಶಿವನೈವೇದ್ಯೇ ಶಿವಸಾಯುಜ್ಯಮಾಪ್ನುಯಾತ್ ॥ ೫ ॥

ಯದ್ಗೃಹೇ ಶಿವನೈವೇದ್ಯಪ್ರಚಾರೋಽಪಿ ಪ್ರಜಾಯತೇ ।
ತದ್ಗೃಹಂ ಪಾವನಂ ಸರ್ವಮನ್ಯಪಾವನಕಾರಣಂ ॥ ೬ ॥

ಆಗತಂ ಶಿವನೈವೇದ್ಯಂ ಗೃಹೀತ್ವಾ ಶಿರಸಾ ಮುದಾ ।
ಭಕ್ಷಣೀಯಂ ಪ್ರಯತ್ನೇನ ಶಿವಸ್ಮರಣಪೂರ್ವಕಂ ॥ ೭ ॥

---

೩. ದೃಢವಾದ ಭಕ್ತಿಯುಳ್ಳ ಶಿವಭಕ್ತನು ಶುಚಿಯೂ, ಶುದ್ಧನೂ, ಸದಾಚಾರಿಯೂ ಆಗಿದ್ದು ಶಿವನೇವೈದ್ಯವನ್ನು ಸೇವಿಸಬೇಕು. ಅದು ಅಗ್ರಾಹ್ಯವು ಎಂದರೆ ಸೇವಿಸಕೂಡದು ಎಂಬ ಭಾವನೆಯನ್ನು ಬಿಡಬೇಕು.

೪. ಶಿವನೈವೇದ್ಯವನ್ನು ನೋಡಿದ ಮಾತ್ರದಿಂದಲೇ ಪಾಪಗಳು ದೂರವಾಗುವುವು. ಅದನ್ನು ಸೇವಿಸಿದರೆ ಕೋಟಿ ಪುಣ್ಯಗಳು ಲಭಿಸುವವು.

೫. ಸಾವಿರ ಯಾಗಗಳಿಂದ - ಅಷ್ಟೇಕೆ ? ಅರ್ಬುದಯಾಗಗಳಿಂದಲೂ ಪ್ರಯೋಜನವಿಲ್ಲ. ಆದರೆ ಶಿವನೈವೇದ್ಯವನ್ನು ಭಕ್ಷಿಸಿದರೆ ಶಿವಸಾಯುಜ್ಯವು ಲಭಿಸುವುದು.

೬. ಯಾವ ಮನೆಯಲ್ಲಿ ಶಿವನೈವೇದ್ಯಪ್ರಚಾರವು ಹೆಚ್ಚಾಗಿರುವುದೋ ಆ ಮನೆಯು ತುಂಬಾ ಪವಿತ್ರವಾದುದು. ಮಿಕ್ಕ ವಸ್ತುಗಳನ್ನೂ ಆ ಮನೆಯು ಪವಿತ್ರಗೊಳಿಸುವುದು.

೭. ತನಗೆ ಲಭಿಸಿರುವ ಶಿವನೈವೇದ್ಯವನ್ನು ಪ್ರೀತಿಯಿಂದ ಶಿರಸ್ಸಿನಲ್ಲಿ ಧರಿಸಿ, ಬಳಿಕ ಶಿವನನ್ನು ಸ್ಮರಿಸುತ್ತಾ ಪ್ರಯತ್ನಪೂರ್ವಕವಾಗಿ ಅದನ್ನು ಸೇವಿಸಬೇಕು.

ಆಗತಂ ಶಿವನೈವೇದ್ಯಮನ್ಯದಾ ಗ್ರಾಹ್ಯಮಿತ್ಯಪಿ ।
ವಿಲಂಬೇ ಪಾಪಸಂಬಂಧೋ ಭವತ್ಯೇವ ಹಿ ಮಾನವಃ ॥ ೮ ॥

ನ ಯಸ್ಯ ಶಿವನೈವೇದ್ಯಗ್ರಹಣೇಚ್ಛಾ ಪ್ರಜಾಯತೇ ।
ಸ ಪಾಪಿಷ್ಠಗರಿಷ್ಠಃ ಸ್ಯಾನ್ನರಕಂ ಯಾತ್ಯಪಿ ಧ್ರುವಂ ॥ ೯ ॥

ಹೃದಯೇ ಚಂದ್ರಕಾಂತೇ ಚ ಸ್ವರ್ಣರೂಪ್ಯಾದಿನಿರ್ಮಿತೇ ।
ಶಿವದೀಕ್ಷಾವತಾ ಭಕ್ತೇನೇದಂ ಭಕ್ಷ್ಯಮಿತೀರಿತಂ ॥ ೧೦ ॥

ಶಿವದೀಕ್ಷಾನ್ವಿತೋ ಭಕ್ತೋ ಮಹಾಪ್ರಸಾದಸಂಜ್ಞಕಂ ।
ಸರ್ವೇಷಾಮಪಿ ಲಿಂಗಾನಾಂ ನೈವೇದ್ಯಂ ಭಕ್ಷಯೇಚ್ಛುಭಂ ॥ ೧೧ ॥

ಅನ್ಯದೀಕ್ಷಾಯುತನೃಣಾಂ ಶಿವಭಕ್ತಿರತಾತ್ಮನಾಂ ।
ಶೃಣುಧ್ವಂ ನಿರ್ಣಯಂ ಪ್ರೀತ್ಯಾ ಶಿವನೈವೇದ್ಯಭಕ್ಷಣೇ ॥ ೧೨ ॥

---

೮. ತನಗೆ ದೊರೆತಿರುವ ಶಿವನೈವೇದ್ಯವನ್ನು ಆಮೇಲೆ ಸೇವಿಸುವೆನೆಂದು ವಿಲಂಬಮಾಡಿದರೆ ಪಾಪವು ಬರುವುದು, ಆದ ಕಾರಣ ಕೂಡಲೇ ಭಕ್ಷಿಸಬೇಕು.

೯. ಶಿವನೈವೇದ್ಯವನ್ನು ಸ್ವೀಕರಿಸಬೇಕೆಂಬ ಇಚ್ಛೆಯುಂಟಾಗದಿರುವವನು ಮಹಾಪಾಪಿಯಾಗುವನು. ಮತ್ತು ನಿಶ್ಚಯವಾಗಿ ನರಕವನ್ನು ಪಡೆಯುವನು.

೧೦. ಹೃದಯ, ಚಂದ್ರಕಾಂತಶಿಲೆ, ಸುವರ್ಣ ಮತ್ತು ಬೆಳ್ಳಿ ಮುಂತಾದುವುಗಳಿಂದ ನಿರ್ಮಿಸಿದ ಪಾತ್ರೆ ಇವುಗಳಲ್ಲಿ ಶಿವದೀಕ್ಷೆಯಲ್ಲಿ ನಿರತನಾದ ಭಕ್ತನು ಶಿವನೈವೇದ್ಯವನ್ನು ಭಕ್ಷಿಸಬೇಕು.

೧೧. ಶಿವದೀಕ್ಷೆಯಿಂದ ಕೂಡಿರುವ ಭಕ್ತನು ಎಲ್ಲಾ ಶಿವಲಿಂಗಗಳ ಮಹಾಪ್ರಸಾದವೆಂಬ ನೈವೇದ್ಯವನ್ನೂ ಭಕ್ಷಿಸಬೇಕು.

೧೨. ಬೇರೆ ದೇವತೆಗಳ ವ್ರತದೀಕ್ಷೆಯಲ್ಲಿರುವಂತಹ ಶಿವಭಕ್ತರು ನೈವೇದ್ಯವನ್ನು ಭಕ್ಷಿಸುವ ವಿಚಾರದಲ್ಲಿ ನಿರ್ಣಯವನ್ನು ಹೇಳುವೆನು ಎಲೈ ಮುನಿಗಳೇ! ಪ್ರೀತಿಯಿಂದ ಕೇಳಿರಿ.

ಶಾಲಿಗ್ರಾಮೋದ್ಭವೇ ಲಿಂಗೇ ರಸಲಿಂಗೇ ತಥಾ ದ್ವಿಜಾಃ ।
ಪಾಷಾಣೇ ರಾಜತೇ ಸ್ವರ್ಣೇ ಸುರಸಿದ್ಧಪ್ರತಿಷ್ಠಿತೇ ॥ ೧೩ ॥

ಕಾಶ್ಮೀರೇ ಸ್ಫಾಟಿಕೇ ರತ್ನೇ ಜ್ಯೋತಿರ್ಲಿಂಗೇಷು ಸರ್ವಶಃ ।
ಚಾಂದ್ರಾಯಣಸಮಂ ಪ್ರೋಕ್ತಂ ಶಿವನೈವೇದ್ಯಭಕ್ಷಣಂ ॥ ೧೪ ॥

ಬ್ರಹ್ಮಹಾಪಿ ಶುಚಿರ್ಭೂತ್ವಾ ನಿರ್ಮಾಲ್ಯಂ ಯಸ್ತು ಧಾರಯೇತ್ ।
ಭಕ್ಷಯಿತ್ವಾ ದ್ರುತಂ ತಸ್ಯ ಸರ್ವಪಾಪಂ ಪ್ರಣಶ್ಯತಿ ॥ ೧೫ ॥

ಚಂಡಾಧಿಕಾರೋ ಯತ್ರಾಸ್ತಿ ತದ್ಭೋಕ್ತವ್ಯಂ ನ ಮಾನವೈಃ ।
ಚಂಡಾಧಿಕಾರೋ ನೋ ಯತ್ರ ಭೋಕ್ತವ್ಯಂ ತಚ್ಚ ಭಕ್ತಿತಃ ॥ ೧೬ ॥

ಬಾಣಲಿಂಗೇ ಚ ಲೌಹೇ ಚ ಸಿದ್ಧೇ ಲಿಂಗೇ ಸ್ವಯಂಭುವಿ ।
ಪ್ರತಿಮಾಸು ಚ ಸರ್ವಾಸು ನ ಚಂಡೋಽಧಿಕೃತೋ ಭವೇತ್ ॥ ೧೭ ॥

---

೧೩-೧೪. ಸಾಲಿಗ್ರಾಮದಲ್ಲುದ್ಭವಿಸಿದ ಲಿಂಗ, ಪಾದರಸಲಿಂಗ, ಶಿಲಾಲಿಂಗ, ಬೆಳ್ಳಿಯಲಿಂಗ, ಸುವರ್ಣಲಿಂಗ, ದೇವತೆಗಳು ಮತ್ತು ಸಿದ್ಧರು ಪ್ರತಿಷ್ಠಿಸಿದ ಲಿಂಗ, ಕಾಶ್ಮೀರಲಿಂಗ, ಸ್ಫಟಿಕಲಿಂಗ, ರತ್ನಲಿಂಗ, ಜ್ಯೋತಿರ್ಲಿಂಗ, ಇವುಗಳಲ್ಲಿನ ಶಿವನೈವೇದ್ಯವನ್ನು ಭಕ್ಷಿಸಿದರೆ ಚಾಂದ್ರಾಯಣವ್ರತವನ್ನು ಮಾಡಿದ ಪುಣ್ಯವು ಲಭಿಸುವುದು.

೧೫. ಬ್ರಹ್ಮಹತ್ಯೆಯನ್ನು ಮಾಡಿದವನೂ ಸಹ ಶುಚಿಯಾಗಿದ್ದು ಶಿವ ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಿ, ನೈವೇದ್ಯವನ್ನು ಭಕ್ಷಿಸಿದರೆ ಅವನ ಸಕಲಪಾಪಗಳೂ ಹೋಗುವುವು.

೧೬. ಚಂಡನ (ಶಿವನ ಗಣ) ಅಧಿಕಾರವಿರುವಂತಹ ನೈವೇದ್ಯವನ್ನು ಮಾನವನು ಭಕ್ಷಿಸಬಾರದು. ಚಂಡನ ಅಧಿಕಾರಕ್ಕೊಳಪಡದಂತಹ ಶಿವನೈವೇದ್ಯವನ್ನು ಭಕ್ತಿಯಿಂದ ಭಕ್ಷಿಸಬೇಕು.

೧೭. ಬಾಣಲಿಂಗ, ಲೋಹದಲಿಂಗ, ತಾನಾಗಿಯೇ ಉದ್ಭವಿಸಿದಲಿಂಗ, ಮತ್ತು ಎಲ್ಲಾ ಶಿವವಿಗ್ರಹಗಳು ಇವುಗಳಲ್ಲಿ ಚಂಡೀಶ್ವರನ ಅಧಿಕಾರವಿಲ್ಲ

ಸ್ನಾಪಯಿತ್ವಾ ವಿಧಾನೇನ ಯೋ ಲಿಂಗಸ್ನಪನೋದಕಂ ।
ಯಃ ಪಿಬೇತ್ತ್ರಿವಿಧಂ ಪಾಪಂ ತಸ್ಯೇಹಾಶು ವಿನಶ್ಯತಿ ॥ ೧೮ ॥

ಅಗ್ರಾಹ್ಯಂ ಶಿವನೈವೇದ್ಯಂ ಪತ್ರಂ ಪುಷ್ಪಂ ಫಲಂ ಜಲಂ ।
ಶಾಲಗ್ರಾಮಶಿಲಾಸಂಗಾತ್ಸರ್ವಂ ಯಾತಿ ಪವಿತ್ರತಾಂ ॥ ೧೯ ॥

ಲಿಂಗೋಪರಿ ಚ ಯದ್ದ್ರವ್ಯಂ ತದಗ್ರಾಹ್ಯಂ ಮುನೀಶ್ವರಾಃ ।
ಸುಪವಿತ್ರಂ ಚ ತಜ್ಞ್ಜೇಯಂ ಯಲ್ಲಿಂಗಸ್ಪರ್ಶಬಾಹ್ಯತಃ ॥ ೨೦ ॥

ನೈವೇದ್ಯನಿರ್ಣಯಃ ಪ್ರೋಕ್ತ ಇತ್ಥಂ ವೋ ಮುನಿಸತ್ತಮಾಃ ।
ಶೃಣುಧ್ವಂ ಬಿಲ್ವಮಾಹಾತ್ಮ್ಯಂ ಸಾವಧಾನತಯಾದರಾತ್ ॥ ೨೧ ॥

ಮಹದೇವಸ್ವರೂಪೋಽಯಂ ಬಿಲ್ವೋ ದೇವೈರಪಿ ಸ್ತುತಃ ।
ಯಥಾಕಥಂಚಿದೇತಸ್ಯ ಮಹಿಮಾ ಜ್ಞಾಯತೇ ಕಥಂ ॥ ೨೨ ॥

---

೧೮. ಲಿಂಗವನ್ನು ವಿಧಿವತ್ತಾಗಿ ಸ್ನಾನಮಾಡಿಸಿ ಆ ಸ್ನಾನಜಲವನ್ನು ಪಾನ ಮಾಡಿದರೆ ಕೂಡಲೆ ಕಾಯಿಕ, ವಾಚಿಕ, ಮಾನಸಿಕವಾದ ಮೂರು ಪಾಪಗಳೂ ನಷ್ಟ ವಾಗುವುವು.

೧೯. ಪತ್ರ, ಪುಷ್ಪ, ಫಲ, ಜಲ ಮುಂತಾದ ಶಿವನೈವೇದ್ಯವು ಅಗ್ರಾಹ್ಯ (ಅಪವಿತ್ರ) ವಾದುದಾದರೂ ಶಿವಸಾಲಿಗ್ರಾಮ ಶಿಲೆಯ ಸಂಬಂಧದಿಂದ ಪವಿತ್ರ ವಾಗುವುದು.

೨೦. ಲಿಂಗದ ಮೇಲಿರುವ ದ್ರವ್ಯವು ಗ್ರಾಹ್ಯವಾದುದಲ್ಲ. ಲಿಂಗಸ್ಪರ್ಶವನ್ನು ಹೊಂದದಂತಹ ದ್ರವ್ಯವು ಪವಿತ್ರವಾದುದು. ಅದೇ ಗ್ರಾಹ್ಯವು.

೨೧. ಎಲೈ ಮುನಿಶ್ರೇಷ್ಠರೇ ! ಈ ರೀತಿಯಾಗಿ ಶಿವನೈವೇದ್ಯನಿರ್ಣಯ ವನ್ನು ನಿಮಗೆ ಹೇಳಿರುವೆನು. ಈಗ ಬಿಲ್ವಪತ್ರದ ಮಹಿಮೆಯನ್ನು ಹೇಳುವೆನು. ಆದರದಿಂದಲೂ ಸಾವಧಾನತೆಯಿಂದಲೂ ಕೇಳಿರಿ.

೨೨. ಬಿಲ್ವವೃಕ್ಷವು ಮಹಾದೇವಸ್ವರೂಪವಾದುದು. ದೇವತೆಗಳೂ ಅದನ್ನು ಸ್ತುತಿಸುವರು. ಇಂತಹ ಬಿಲ್ವದ ಮಹಿಮೆಯನ್ನು ತಿಳಿಯುವುದು ಹೇಗೆ?

ಪುಣ್ಯತೀರ್ಥಾನಿ ಯಾವಂತಿ ಲೋಕೇಷು ಪ್ರಥಿತಾನ್ಯಪಿ ।
ತಾನಿ ಸರ್ವಾಣಿ ತೀರ್ಥಾನಿ ಬಿಲ್ವಮೂಲೇ ವಸಂತಿ ಹಿ ॥ ೨೩ ॥

ಬಿಲ್ವಮೂಲೇ ಮಹಾದೇವಂ ಲಿಂಗರೂಪಿಣಮವ್ಯಯಂ ।
ಯಃ ಪೂಜಯತಿ ಪುಣ್ಯಾತ್ಮಾ ಸ ಶಿವಂ ಪ್ರಾಪ್ನುಯಾದ್ಧ್ರುವಂ ॥ ೨೪ ॥

ಬಿಲ್ವಮೂಲೇ ಜಲೈರ್ಯಸ್ತು ಮೂರ್ಧಾನಮಭಿಷಿಂಚತಿ ।
ಸ ಸರ್ವತೀರ್ಥಸ್ನಾತಃ ಸ್ಯಾತ್ಸ ಏವ ಭುವಿ ಪಾವನಃ ॥ ೨೫ ॥

ಏತಸ್ಯ ಬಿಲ್ವಮೂಲಸ್ಯಾಥಾಲವಾಲಮನುತ್ತಮಂ ।
ಜಲಾಕುಲಂ ಮಹಾದೇವೋ ದೃಷ್ಟ್ವಾ ತುಷ್ಟೋ ಭವತ್ಯಲಂ ॥ ೨೬ ॥

ಪೂಜಯೇದ್ಬಿಲ್ವಮೂಲಂ ಯೋ ಗಂಧಪುಷ್ಪಾದಿಭಿರ್ನರಃ ।
ಶಿವಲೋಕಮವಾಪ್ನೋತಿ ಸಂತತಿರ್ವರ್ಧತೇ ಸುಖಂ ॥ ೨೭ ॥

---

೨೩. ಲೋಕದಲ್ಲಿ ಪ್ರಸಿದ್ಧವಾಗಿ ಎಷ್ಟೆಷ್ಟು ಪುಣ್ಯತೀರ್ಥಗಳಿರುವುವೋ ಅವೆಲ್ಲವೂ ಈ ಬಿಲ್ವವೃಕ್ಷದ ಮೂಲದಲ್ಲಿ ಇರುವವು.

೨೪. ಬಿಲ್ವವೃಕ್ಷದ ಮೂಲದಲ್ಲಿ ಲಿಂಗರೂಪಿಯಾದ ಶಿವನನ್ನು ಯಾವನು ಪೂಜಿಸುವನೋ ಆ ಪುಣ್ಯಾತ್ಮನು ಶಿವನನ್ನು ಪಡೆಯುವನು.

೨೫. ಬಿಲ್ವವೃಕ್ಷದ ಮೂಲದಲ್ಲಿ ಜಲದಿಂದ ತನ್ನ ಶಿರಸ್ಸಿಗೆ ಸ್ನಾನವನ್ನು ಮಾಡಿಸುವವನು ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವನ್ನು ಪಡೆಯುವನು. ತುಂಬಾ ಪವಿತ್ರನಾಗುವನು.

೨೬. ಬಿಲ್ವವೃಕ್ಷದಕಟ್ಟೆ (ಪಾತಿ) ಗಳು ನೀರಿನಿಂದ ತುಂಬಿರುವುದನ್ನು ನೋಡಿದರೆ ಮಹಾದೇವನು ಸಂತುಷ್ಟನಾಗುವನು.

೨೭. ಬಿಲ್ವವೃಕ್ಷದ ಮೂಲವನ್ನು ಗಂಧ, ಪುಷ್ಪ ಮುಂತಾದುವುಗಳಿಂದ ಯಾವನು ಪೂಜಿಸುವನೋ ಅವನು ಇಹದಲ್ಲಿ ಸುಖವನ್ನೂ, ಸಂತಾನವನ್ನೂ, ಪಡೆಯುವನು.

ಬಿಲ್ವಮೂಲೇ ದೀಪಮಾಲಾಂ ಯಃ ಕಲ್ಪಯತಿ ಸಾದರಂ ।
ಸ ತತ್ತ್ವಜ್ಞಾನಸಂಪನ್ನೋ ಮಹೇಶಾಂತರ್ಗತೋ ಭವೇತ್ ॥ ೨೮ ॥

ಬಿಲ್ವಶಾಖಾಂ ಸಮಾದಾಯ ಹಸ್ತೇನ ನವಪಲ್ಲವಂ ।
ಗೃಹೀತ್ವಾ ಪೂಜಯೇದ್ಬಿಲ್ವಂ ಸ ಚ ಪಾಪೈಃ ಪ್ರಮುಚ್ಯತೇ ॥ ೨೯ ॥

ಬಿಲ್ವಮೂಲೇ ಶಿವರತಂ ಭೋಜಯೇದ್ಯಸ್ತು ಭಕ್ತಿತಃ ।
ಏಕಂ ವಾ ಕೋಟಿಗುಣಿತಂ ತಸ್ಯ ಪುಣ್ಯಂ ಪ್ರಜಾಯತೇ ॥ ೩೦ ॥

ಬಿಲ್ವಮೂಲೇ ಕ್ಷೀರಯುಕ್ತಮನ್ನಮಾಜ್ಯೇನ ಸಂಯುತಂ ।
ಯೋ ದದ್ಯಾಚ್ಛಿವಭಕ್ತಾಯ ಸ ದರಿದ್ರೋ ನ ಜಾಯತೇ ॥ ೩೧ ॥

ಸಾಂಗೋಪಾಂಗಮಿತಿ ಪ್ರೋಕ್ತಂ ಶಿವಲಿಂಗಪ್ರಪೂಜನಂ ।
ಪ್ರವೃತ್ತಾನಾಂ ನಿವೃತ್ತಾನಾಂ ಭೇದತೋ ದ್ವಿವಿಧಂ ದ್ವಿಜಾಃ ॥ ೩೨ ॥

---

೨೮. ಬಿಲ್ವವೃಕ್ಷದ ಮೂಲದಲ್ಲಿ ದೀಪೋತ್ಸವವನ್ನು ಯಾವನು ಮಾಡುವನೋ ಅವನು ತತ್ತ್ವಜ್ಞಾನವನ್ನು ಹೊಂದಿ ಮಹಾದೇವನೊಡನೆ ಐಕ್ಯವನ್ನು ಹೊಂದುವನು.

೨೯. ಬಿಲ್ವವೃಕ್ಷದ ಕೊಂಬೆಯನ್ನು ತಂದು ಹೊಸ ಚಿಗುರಿನಿಂದ ಬಿಲ್ವವನ್ನು ಪೂಜಿಸಬೇಕು, ಹಾಗೆ ಮಾಡಿದರೆ ಪಾಪನಾಶವಾಗುವುದು.

೩೦. ಬಿಲ್ವವೃಕ್ಷದ ಮೂಲದಲ್ಲಿ ಒಬ್ಬ ಶಿವಭಕ್ತನಿಗಾದರೂ ಭಕ್ತಿಯಿಂದ ಭೋಜನವನ್ನು ಮಾಡಿಸಿದರೆ ಕೋಟಿ ಪುಣ್ಯವು ಲಭಿಸುವುದು.

೩೧. ಬಿಲ್ವಮೂಲದಲ್ಲಿ ತುಪ್ಪ ಮತ್ತು ಹಾಲುಗಳಿಂದ ಕೂಡಿದ ಅನ್ನ (ಪರಮಾನ್ನ) ವನ್ನು ಶಿವಭಕ್ತನಿಗೆ ದಾನಮಾಡಿದರೆ ದಾರಿದ್ರ್ಯವು ಬರುವುದಿಲ್ಲ.

೩೨. ಈರೀತಿಯಾಗಿ ಸಾಧನ ಮತ್ತು ಉಪಸಾಧನಗಳೊಡನೆ ಹೇಳಿರುವ ಈ ಶಿವಲಿಂಗಪೂಜೆಯು ವಿರಕ್ತರಿಗೂ, ವಿರಕ್ತರಲ್ಲದವರಿಗೂ ಬೇರೆಬೇರೆಯಾಗಿ ಎರಡು ವಿಧವಾಗಿರುವುದು.

ಪ್ರವೃತ್ತಾನಾಂ ಪೀಠಪೂಜಾ ಸರ್ವಾಭೀಷ್ಟಪ್ರದಾ ಭುವಿ ।
ಪಾತ್ರೇಣೈವ ಪ್ರವೃತ್ತಸ್ತು ಸರ್ವಪೂಜಾಂ ಸಮಾಚರೇತ್ ॥ ೩೩ ॥

ನೈವೇದ್ಯಮಭಿಷೇಕಾಂತೇ ಶಾಲ್ಯನ್ನೇನ ಸಮಾಚರೇತ್ ।
ಪೂಜಾಂತೇ ಸ್ಥಾಪಯೇಲ್ಲಿಂಗಂ ಪುಟೇ ಶುದ್ಧೇ ಪೃಥಗ್ಗೃಹೇ ॥ ೩೪ ॥

ಕರಪೂಜಾನಿವೃತ್ತಾನಾಂ ಸ್ವಭೋಜ್ಯಂ ತು ನಿವೇದಯೇತ್ ।
ನಿವೃತ್ತಾನಾಂ ಪರಂ ಸೂಕ್ಷ್ಮಂ ಲಿಂಗಮೇವ ವಿಶಿಷ್ಯತೇ ॥ ೩೫ ॥

ವಿಭೂತ್ಯಭ್ಯರ್ಚನಂ ಕುರ್ಯಾದ್ವಿಭೂತಿಂ ಚ ನಿವೇದಯೇತ್ ।
ಪೂಜಾಂ ಕೃತ್ವಾ ತಥಾ ಲಿಂಗಂ ಶಿರಸಾ ಧಾರಯೇತ್ಸದಾ ॥ ೩೬ ॥

ಇತಿ ಶ್ರೀ ಶಿವಪುರಾಣೇ ವಿದ್ಯೇಶ್ವರಸಂಹಿತಾಯಾಂ
ದ್ವಾವಿಂಶೋऽಧ್ಯಾಯಃ.

---

೩೩. ವಿರಕ್ತರಲ್ಲದ ಗೃಹಸ್ಥರಿಗೆ ಪೀಠಪೂಜೆಯು ಸಕಲಾಭೀಷ್ಟವನ್ನುಂಟು ಮಾಡುವುದು. ಮತ್ತು ಅವರು ಪಾತ್ರೆಯಿಂದಲೇ ಪೂಜೆಯೆಲ್ಲವನ್ನೂ ಮಾಡ ಬೇಕು.

೩೪. ಅಭಿಷೇಕವಾದನಂತರ ಶಾಲ್ಯನ್ನದಿಂದ ನೈವೇದ್ಯವನ್ನು ಮಾಡಬೇಕು. ಪೂಜೆಯಾದ ಮೇಲೆ ಲಿಂಗವನ್ನು ಮನೆಯಲ್ಲಿ ಶುದ್ಧವಾದ ಬೇರೆ ಸಂಪುಟದಲ್ಲಿರಿಸ ಬೇಕು.

೩೫. ವಿರಕ್ತರಾದ ಸನ್ಯಾಸಿಗಳಿಗೆ ಕರಪೂಜೆಯು ಎಂದರೆ ಕೈನಲ್ಲಿ ಲಿಂಗ ವನ್ನಿಟ್ಟುಕೊಂಡು ಪೂಜಿಸುವುದು ಪ್ರಶಸ್ತವಾದುದು, ತಾವು ಭಕ್ಷಿಸುವ ಆಹಾರ ವನ್ನೇ ನಿವೇದಿಸಬೇಕು, ಅವರಿಗೆ ಸೂಕ್ಷ್ಮಲಿಂಗವೇ ಪ್ರಶಸ್ತವಾದುದು.

೩೬. ವಿಭೂತಿಯಿಂದ ಲಿಂಗವನ್ನರ್ಚಿಸಬೇಕು. ವಿಭೂತಿಯನ್ನು ನಿವೇದಿಸ ಬೇಕು. ಪೂಜೆಯನ್ನು ಮಾಡಿ ಅನಂತರ ಲಿಂಗವನ್ನು ಶಿರಸ್ಸಿನಲ್ಲಿ ಧರಿಸಬೇಕು.

ಇಲ್ಲಿಗೆ ಶ್ರೀಶಿವಪುರಾಣದ ಮೊದಲನೆಯ ವಿದ್ಯೇಶ್ವರಸಂಹಿತೆಯಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ತ್ರಯೋವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸೂತ ಮಹಾಭಾಗ ವ್ಯಾಸಶಿಷ್ಯ ನಮೋಽಸ್ತು ತೇ ।
ತದೇವ ವ್ಯಾಸತೋ ಬ್ರೂಹಿ ಭಸ್ಮಮಾಹಾತ್ಮ್ಯಮುತ್ತಮಂ ॥ ೧ ॥

ತಥಾ ರುದ್ರಾಕ್ಷಮಾಹಾತ್ಮ್ಯಂ ನಾಮಮಾಹಾತ್ಮ್ಯಮುತ್ತಮಂ ।
ತ್ರಿತಯಂ ಬ್ರೂಹಿ ಸುಪ್ರೀತ್ಯಾ ಮಮಾನಂದಯ ಮಾನಸಂ ॥ ೨ ॥

॥ ಸೂತ ಉವಾಚ ॥

ಸಾಧು ಪೃಷ್ಟಂ ಭವದ್ಭಿಶ್ಚ ಲೋಕಾನಾಂ ಹಿತಕಾರಕಂ ।
ಭವಂತೋ ವೈ ಮಹಾಧನ್ಯಾಃ ಪವಿತ್ರಾಃ ಕುಲಭೂಷಣಾಃ ॥ ೩ ॥

---

### ಇಪ್ಪತ್ತಮೂರನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು :—ಮಹಾಮಹಿಮೆಯುಳ್ಳ ಓ ಸೂತಮುನಿ ! ವ್ಯಾಸಮುನಿಯ ಶಿಷ್ಯನಾದ ನಿನಗೆ ನಮಿಸುವೆವು. ಈಗ ನೀನು ಭಸ್ಮಮಾಹಾತ್ಮ್ಯೆವನ್ನೂ, ರುದ್ರಾಕ್ಷಮಹಿಮೆಯನ್ನೂ, ಶಿವನಾಮಮಹಿಮೆಯನ್ನೂ ಬೇರೆ ಬೇರೆಯಾಗಿ ನಮಗೆ ಹೇಳಿ ನಮ್ಮ ಮನಸ್ಸಿಗೆ ಸಂತೋಷವನ್ನುಂಟುಮಾಡು ಎಂದರು.

೩-೪. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ ! ನೀವು ಒಳ್ಳೆಯದನ್ನೇ ಕೇಳಿರುವಿರಿ ! ನೀವು ಪ್ರಶ್ನಿಸಿದ ವಿಷಯವು ಲೋಕಕ್ಕೆ ಹಿತವನ್ನುಂಟುಮಾಡು

ಯೇಷಾಂ ಚೈವ ಶಿವಸ್ಸಾಕ್ಷಾದ್ದೈವತಂ ಪರಮಂ ಮತಂ ।
ಸದಾಶಿವಕಥಾ ಲೋಕೇ ವಲ್ಲಭಾ ಭವತಾಂ ಸದಾ ॥ ೪ ॥

ತೇ ಧನ್ಯಾಶ್ಚ ಕೃತಾರ್ಥಾಶ್ಚ ಸಫಲಂ ದೇಹಧಾರಣಂ ।
ಉದ್ಧೃತಂ ಚ ಕುಲಂ ತೇಷಾಂ ಯೇ ಶಿವಂ ಸಮುಪಾಸತೇ ॥ ೫ ॥

ಶಿವನಾಮ ಮುಖೇ ಯಸ್ಯ ಸದಾಶಿವ ಶಿವೇತಿ ಚ ।
ಪಾಪಾನಿ ನ ಸ್ಪೃಶಂತ್ಯೇವ ಖದಿರಾಂಗಾರಕಂ ಯಥಾ ॥ ೬ ॥

ಶ್ರೀಶಿವಾಯ ನಮಸ್ತುಭ್ಯಂ ಮುಖಂ ವ್ಯಾಹರತೇ ಯದಾ ।
ತನ್ಮುಖಂ ಪಾವನಂ ತೀರ್ಥಂ ಸರ್ವಪಾಪವಿನಾಶನಂ ॥ ೭ ॥

ತನ್ಮುಖಂ ಚ ತಥಾ ಯೋ ವೈ ಪಶ್ಯತಿ ಪ್ರೀತಿಮಾನ್ನರಃ ।
ತೀರ್ಥಜನ್ಯಂ ಫಲಂ ತಸ್ಯ ಭವತೀತಿ ಸುನಿಶ್ಚಿತಂ ॥ ೮ ॥

---

ವಂತಹುದು. ಶಿವನನ್ನೇ ಶ್ರೇಷ್ಠದೇವನೆಂದು ಭಾವಿಸುವ ನೀವೆಲ್ಲರೂ ಧನ್ಯರು, ಕೃತಾರ್ಥರು, ಪುಣ್ಯವಂತರು, ಮತ್ತು ನಿಮ್ಮ ಕುಲಕ್ಕೆ ಅಲಂಕಾರಪ್ರಾಯರು. ನಿಮ್ಮೆಲ್ಲರಿಗೂ ಸದಾಶಿವನ ಕಥೆಯು ಲೋಕದಲ್ಲಿ ತುಂಬಾ ಪ್ರಿಯವಾದುದು ಯಾರು ಶಿವನನ್ನು ನಿತ್ಯವೂ ಉಪಾಸಿಸುವರೋ ಅವರು ಧನ್ಯರೂ ಕೃತಾರ್ಥರೂ ಆಗುವರು. ಅವರ ಜನ್ಮವು ಸಫಲವಾದುದು, ಅವರ ಕುಲವು ಉದ್ಧಾರವಾಗುವುದು.

೬. ಯಾವನ ಮುಖದಲ್ಲಿ ಶಿವ ಶಿವ ಎಂಬ ಶಿವನಾಮವು ಸದಾ ಇರುವುದೋ ಎಂದರೆ ಶಿವನಾಮವನ್ನು ಯಾವಾಗಲೂ ಉಚ್ಚರಿಸುತ್ತಿರುವನೋ ಅವನನ್ನು ಪಾಪಗಳು ಸ್ಪರ್ಶಿಸುವುದಿಲ್ಲ.

೭. "ಶ್ರೀಶಿವಾಯ ನಮಸ್ತುಭ್ಯಂ" ಎಂದು ಯಾವನ ಮುಖವು ಉಚ್ಚರಿಸುವುದೋ ಆ ಮುಖವು ಪವಿತ್ರವಾದ ತೀರ್ಥವು. ಅದು ಸಕಲ ಪಾಪಗಳನ್ನೂ ಹೋಗಲಾಡಿಸುವುದು.

೮. ಅಂತಹ ಮುಖವನ್ನು ಯಾವನು ಪ್ರೀತಿಯಿಂದ ನೋಡುವನೋ ಅವನಿಗೆ ತೀರ್ಥದರ್ಶನವನ್ನು ಮಾಡಿದ ಪುಣ್ಯವು ನಿಶ್ಚಯವಾಗಿ ಬರುವುದು.

ಯತ್ರ ತ್ರಯಂ ಸದಾ ತಿಷ್ಠೇದೇತಚ್ಛುಭತರಂ ದ್ವಿಜಾಃ ।
ತಸ್ಯ ದರ್ಶನಮಾತ್ರೇಣ ವೇಣೀಸ್ನಾನಫಲಂ ಲಭೇತ್ ॥ ೯ ॥

ಶಿವನಾಮ ವಿಭೂತಿಶ್ಚ ತಥಾ ರುದ್ರಾಕ್ಷ ಏವ ಚ ।
ಏತತ್ತ್ರಯಂ ಮಹಾಪುಣ್ಯಂ ತ್ರಿವೇಣೀಸದೃಶಂ ಸ್ಮೃತಂ ॥ ೧೦ ॥

ಏತತ್ತ್ರಯಂ ಶರೀರೇ ಚ ಯಸ್ಯ ತಿಷ್ಠತಿ ನಿತ್ಯಶಃ ।
ತಸ್ಯೈವ ದರ್ಶನಂ ಲೋಕೇ ದುರ್ಲಭಂ ಪಾಪಹಾರಕಂ ॥ ೧೧ ॥

ತದ್ದರ್ಶನಂ ಯಥಾ ವೇಣೀ ನೋಭಯೋರಂತರಂ ಮನಾಕ್ ।
ಏವಂ ಯೋ ನ ವಿಜಾನಾತಿ ಸ ಪಾಪಿಷ್ಠೋ ನ ಸಂಶಯಃ ॥ ೧೨ ॥

ವಿಭೂತಿರ್ಯಸ್ಯ ನೋ ಭಾಲೇ ನಾಂಗೇ ರುದ್ರಾಕ್ಷಧಾರಣಂ ।
ನಾಸ್ಯೇ ಶಿವಮಯೀ ವಾಣೀ ತಂ ತ್ಯಜೇದಧಮಂ ಯಥಾ ॥ ೧೩ ॥

---

೯. ಶಿವನಾಮ, ರುದ್ರಾಕ್ಷ, ವಿಭೂತಿ ಈ ಮೂರೂ ಒಟ್ಟು ಇರುವುದನ್ನು ದರ್ಶನಮಾಡಿದರೆ ತ್ರಿವೇಣೀ ಸಂಗಮ ಎಂದರೆ ಮೂರು ನದಿಗಳು ಸೇರಿರುವ ಪುಣ್ಯ ಸ್ಥಳದಲ್ಲಿ ಸ್ನಾನಮಾಡಿದ ಫಲವು ಬರುವುದು.

೧೦. ಶಿವನಾಮ, ವಿಭೂತಿ, ರುದ್ರಾಕ್ಷ ಈ ಮೂರೂ ಮಹಾಪುಣ್ಯಪ್ರದವಾದುವುಗಳು. ತ್ರಿವೇಣೀ (ಮೂರು ನದಿಗಳು) ಗಳಂತೆ ಪವಿತ್ರವಾದುವುಗಳು.

೧೧. ಶಿವನಾಮ, ವಿಭೂತಿ, ರುದ್ರಾಕ್ಷ ಈ ಮೂರು ವಸ್ತುಗಳನ್ನು ನಿತ್ಯವೂ ಧರಿಸಿರುವವನ ದರ್ಶನವು ದುರ್ಲಭವಾದುದು, ಪಾಪವನ್ನು ನಾಶಮಾಡುವಂತಹುದು.

೧೨. ತ್ರಿವೇಣಿಗಳ ದರ್ಶನದಂತೆ ವಿಭೂತಿ, ಶಿವನಾಮ ರುದ್ರಾಕ್ಷಿಗಳ ದರ್ಶನವು ಪುಣ್ಯಪ್ರದವಾದುದು. ಆದುದರಿಂದ ವಿಭೂತಿ ಮುಂತಾದವುಗಳಿಗೂ ತ್ರಿವೇಣಿಗೂ ವಿಶೇಷ ಭೇದವೇನೂ ಇಲ್ಲ. ಈ ರೀತಿಯಾಗಿ ಯಾವನು ತಿಳಿದಿಲ್ಲವೋ ಅವನು ಪಾಪಿಷ್ಠನು. ಇದರಲ್ಲಿ ಸಂಶಯವಿಲ್ಲ.

೧೩. ಯಾವನ ಹಣೆಯಲ್ಲಿ ವಿಭೂತಿಯಿಲ್ಲವೋ, ಯಾವನ ಶರೀರದಲ್ಲಿ ರುದ್ರಾಕ್ಷಿ ಇಲ್ಲವೋ, ಮುಖದಲ್ಲಿ ಶಿವನಾಮ ಸ್ಮರಣೆ ಇಲ್ಲವೋ ಅವನನ್ನು ಪತಿತನಂತೆ ತ್ಯಜಿಸಬೇಕು.

ಶೈವಂ ನಾಮ ಯಥಾ ಗಂಗಾ ವಿಭೂತಿರ್ಯಮುನಾ ಮತಾ ।
ರುದ್ರಾಕ್ಷಂ ವಿಧಿಜಾ ಪ್ರೋಕ್ತಾ ಸರ್ವಪಾಪವಿನಾಶಿನೀ ॥ ೧೪ ॥

ಶರೀರೇ ಚ ತ್ರಯಂ ಯಸ್ಯ ತತ್ಫಲಂ ಚೈಕತಃ ಸ್ಥಿತಂ ।
ಏಕತೋ ವೇಣಿಕಾಯಾಶ್ಚ ಸ್ನಾನಜಂ ತು ಫಲಂ ಬುಧೈಃ ॥ ೧೫ ॥

ತದೇವಂ ತುಲಿತಂ ಪೂರ್ವಂ ಬ್ರಹ್ಮಣಾ ಹಿತಕಾರಿಣಾ ।
ಸಮಾನಂ ಚೈವ ತಜ್ಜಾತಂ ತಸ್ಮಾದ್ಧಾರ್ಯಂ ಸದಾ ಬುಧೈಃ ॥ ೧೬ ॥

ತದ್ದಿನಂ ಹಿ ಸಮಾರಭ್ಯ ಬ್ರಹ್ಮವಿಷ್ಣ್ವಾದಿಭಿಃ ಸುರೈಃ ।
ಧಾರ್ಯತೇ ತ್ರಿತಯಂ ತಚ್ಚ ದರ್ಶನಾತ್ಪಾಪಹಾರಕಂ ॥ ೧೭ ॥

॥ ಋಷಯ ಊಚುಃ ॥

ಈದೃಶಂ ಹಿ ಫಲಂ ಪ್ರೋಕ್ತಂ ನಾಮಾದಿತ್ರಿತಯೋದ್ಭವಂ ।
ತನ್ಮಾಹಾತ್ಮ್ಯಂ ವಿಶೇಷೇಣ ವಕ್ತುಮರ್ಹಸಿ ಸುವ್ರತ ॥ ೧೮ ॥

---

೧೪. ಶಿವನಾಮವು ಗಂಗೆಗೆ ಸಮಾನವಾದುದು. ವಿಭೂತಿಯು ಯಮುನೆಯಂತಹುದು. ರುದ್ರಾಕ್ಷಿಯು ಸ್ವರಸ್ವತೀನದಿಯಂತೆ ಸಕಲ ಪಾಪಗಳನ್ನು ನಾಶ ಮಾಡುವುದು.

೧೫-೧೬. ಶರೀರದಲ್ಲಿ ಶಿವನಾಮ, ವಿಭೂತಿ, ರುದ್ರಾಕ್ಷಿ ಇವುಗಳನ್ನು ಧರಿಸಿದ ಫಲವನ್ನೂ, ತ್ರಿವೇಣೀಸಂಗಮಸ್ನಾನದ ಫಲವನ್ನೂ ಸಹ ಲೋಕೋಪಕಾರಿಯಾದ ಬ್ರಹ್ಮನು ಹಿಂದೆ ತಕ್ಕಡಿಯಲ್ಲಿಟ್ಟು ತೂಗಿದನು. ಆಗ ಅವರೆಡು ಫಲಗಳೂ ಸಮವಾದವು. ಆದುದರಿಂದ ತಿಳಿದವರು ಶಿವನಾಮ ಮೊದಲಾದ ಮೂರು ಶೈವಚಿಹ್ನೆಗಳನ್ನು ಧರಿಸಲೇಬೇಕು.

೧೭. ಈ ರೀತಿ ಬ್ರಹ್ಮನು ಶಿವನಾಮ ಮುಂತಾದುವುಗಳನ್ನು ತೂಗಿದ ದಿನ ಮೊದಲುಗೊಂಡು ಬ್ರಹ್ಮ ವಿಷ್ಣು ಮುಂತಾದ ದೇವತೆಗಳು ಆ ಮೂರು ಶೈವ ಚಿಹ್ನೆಗಳನ್ನೂ ಧರಿಸುತ್ತಲಿರುವರು. ಮತ್ತು ಆ ಚಿಹ್ನೆಗಳನ್ನು ದರ್ಶನಮಾಡಿದರೆ ಪಾಪವು ನಾಶವಾಗುವುದು.

೧೮. ಋಷಿಗಳು ಕೇಳಿದರು :—ತಪಸ್ವಿಯಾದ ಓ ಸೂತಮುನಿ! ಶಿವನಾಮ, ವಿಭೂತಿ, ರುದ್ರಾಕ್ಷಿ, ಇವುಗಳಿಂದಾಗುವ ಫಲವನ್ನು ಚನ್ನಾಗಿ ನಿರೂಪಿಸಿರುವೆ. ಈಗ ಅವುಗಳ ಮಾಹಾತ್ಮ್ಯವನ್ನು ವಿಶೇಷವಾಗಿ ತಿಳಿಯ ಹೇಳು ಎನ್ನಲು,

॥ ಸೂತ ಉವಾಚ ॥

ಋಷಯೋ ಹಿ ಮಹಾಪ್ರಾಜ್ಞಾಃ ಸಚ್ಛೈವಾ ಜ್ಞಾನಿನಾಂ ವರಾಃ ।
ತನ್ಮಾಹಾತ್ಮ್ಯಂ ಹಿ ಸದ್ಭಕ್ತ್ಯಾ ಶೃಣುತಾದರತೋ ದ್ವಿಜಾಃ ॥ ೧೯ ॥

ಸ ಗೂಢಮಪಿ ಶಾಸ್ತ್ರೇಷು ಪುರಾಣೇಷು ಶ್ರುತಿಷ್ವಪಿ ।
ಭವತ್ಸ್ನೇಹಾನ್ಮಯಾ ವಿಪ್ರಾಃ ಪ್ರಕಾಶಃ ಕ್ರಿಯತೇಽಧುನಾ ॥ ೨೦ ॥

ಕಸ್ತತ್ತ್ರಿತಯಮಾಹಾತ್ಮ್ಯಂ ಸಂಜಾನಾತಿ ದ್ವಿಜೋತ್ತಮಾಃ ।
ಮಹೇಶ್ವರಂ ವಿನಾ ಸರ್ವಂ ಬ್ರಹ್ಮಾಂಡೇ ಸದಸತ್ಪರಂ ॥ ೨೧ ॥

ವಕ್ಷ್ಯೇಹಂ ನಾಮಮಾಹಾತ್ಮ್ಯಂ ಯಥಾಶಕ್ತಿ ಸುಭಕ್ತಿತಃ ।
ಶೃಣುತ ಪ್ರೀತಿತೋ ವಿಪ್ರಾಃ ಸರ್ವಪಾಪಹರಂ ಪರಂ ॥ ೨೨ ।

---

೧೯. ಸೂತಮುನಿಯು ಹೇಳಿದನು :—ಎಲೈ ಋಷಿಗಳೇ ! ನೀವು ತುಂಬಾ ತಿಳಿವಳಿಕೆಯುಳ್ಳ ಮಹಾಜ್ಞಾನಿಗಳು, ಸತ್ಪುರುಷರಾದ ಶಿವಭಕ್ತರು. ಇಂತಹ ನೀವು ಶಿವನಾಮ ಮುಂತಾದುವುಗಳ ಮಹಿಮೆಯನ್ನು ಆದರದಿಂದಲೂ ಭಕ್ತಿಯಿಂದಲೂ ಶ್ರವಣಮಾಡಬೇಕು.

೨೦. ನೀವು ಕೇಳಿದ ವಿಷಯವು ಶಾಸ್ತ್ರ, ಪುರಾಣ ಮತ್ತು ವೇದಗಳಲ್ಲಿ ಗೂಢವಾಗಿರುವುದು. ಆದರೂ ನಿಮ್ಮಲ್ಲಿನ ಸ್ನೇಹದಿಂದ ಅದನ್ನು ಈಗ ಪ್ರಕಾಶಪಡಿಸುವೆನು.

೨೧. ಎಲೈ ವಿಪ್ರೋತ್ತಮರೇ ! ಶಿವನಾಮ ಮುಂತಾದ ಮೂರು ಶೈವಚಿಹ್ನೆಗಳ ಮಹಿಮೆಯನ್ನು, ಜಗತ್ತಿನಲ್ಲಿರುವ ಸದ್ವಸ್ತು ಮತ್ತು ಅಸದ್ವಸ್ತುಗಳಿಗಿಂತಲೂ ಉತ್ಕೃಷ್ಟನಾದಂತಹ ಮಹೇಶ್ವರನೊಬ್ಬನು ಹೊರತು ಇನ್ನಾರೂ ತಿಳಿಯಲಾರರು.

೨೨. ಆದರೂ ನಾನು ಶಿವನಾಮಹಿಮೆಯನ್ನು ಯಥಾಶಕ್ತಿ ಭಕ್ತಿಯಿಂದ ಹೇಳುವೆನು. ಎಲೈ ವಿಪ್ರರೇ ! ಸಕಲ ಪಾಪವನ್ನೂ ನಾಶಮಾಡುವಂತಹ ಶಿವನಾಮ ಮಹಿಮೆಯನ್ನು ಪ್ರೀತಿಯಿಂದ ಕೇಳುವವರಾಗಿರಿ !

ಶಿವೇತಿ ನಾಮದಾವಾಗ್ನೇರ್ಮಹಾಪಾತಕಪರ್ವತಾಃ ।
ಭಸ್ಮೀಭವಂತ್ಯನಾಯಾಸಾತ್ಸತ್ಯಂ ಸತ್ಯಂ ನ ಸಂಶಯಃ ॥ ೨೩ ॥

ಪಾಪಮೂಲಾನಿ ದುಃಖಾನಿ ವಿವಿಧಾನ್ಯಪಿ ಶೌನಕ ।
ಶಿವನಾಮ್ನೈಕನಶ್ಯಾನಿ ನಾನ್ಯನಶ್ಯಾನಿ ಸರ್ವಥಾ ॥ ೨೪ ॥

ಸ ವೈದಿಕಃ ಸ ಪುಣ್ಯಾತ್ಮಾ ಸ ಧನ್ಯಃ ಸ ಬುಧೋ ಮತಃ ।
ಶಿವನಾಮಜಪಾಸಕ್ತೋ ಯೋ ನಿತ್ಯಂ ಭುವಿ ಮಾನವಃ ॥ ೨೫ ॥

ಭವಂತಿ ವಿವಿಧಾ ಧರ್ಮಾಸ್ತೇಷಾಂ ಸದ್ಯಃ ಫಲೋನ್ಮುಖಾಃ ।
ಯೇಷಾಂ ಭವತಿ ವಿಶ್ವಾಸಃ ಶಿವನಾಮಜಪೇ ಮುನೇ ॥ ೨೬ ॥

ಪಾತಕಾನಿ ವಿನಶ್ಯಂತಿ ಯಾವಂತಿ ಶಿವನಾಮತಃ ।
ಭುವಿ ತಾವಂತಿ ಪಾಪಾನಿ ಕ್ರಿಯಂತೇ ನ ನರೈರ್ಮುನೇ ॥ ೨೭ ॥

---

೨೩. "ಶಿವ" ಎಂಬ ನಾಮವೇ ಕಾಡುಕಿಚ್ಚು. ಆ ಕಾಡುಕಿಚ್ಚಿನಿಂದ ಮಹಾಪಾಪವೆಂಬ ಪರ್ವತಗಳು ಅನಾಯಾಸವಾಗಿ ಸುಟ್ಟುಹೋಗುವುವು, ಈ ವಿಷಯವು ಸತ್ಯವು, ಸಂಶಯವಿಲ್ಲ.

೨೪. ಎಲೈ ಶೌನಕಮುನಿಯೇ, ದುಃಖವು ಪಾಪದಿಂದ ಬರುವುದು. ಆ ಪಾಪಗಳು ಶಿವನಾಮವೊಂದರಿಂದಲೇ ನಾಶವಾಗುವುವು. ಇನ್ನಾವುದರಿಂದಲೂ ನಾಶವಾಗಲಾರವು.

೨೫. ಯಾವನು ನಿತ್ಯವೂ ಶಿವನಾಮವನ್ನು ಜಪಿಸುವನೋ ಅವನು ವೈದಿಕನು, ಪುಣ್ಯವಂತನು, ಧನ್ಯನು. ಅವನೇ ಪಂಡಿತನು, ವಿವೇಕಿಯು.

೨೬. ಎಲೈ ಮುನಿಗಳೇ! ಶಿವನಾಮ ಜಪದಲ್ಲಿ ವಿಶ್ವಾಸವುಳ್ಳವರು ಅನುಷ್ಠಾನಮಾಡಿದ ಧರ್ಮಗಳೆಲ್ಲವೂ ಶೀಘ್ರವಾಗಿ ಫಲವನ್ನು ಕೊಡುವವು.

೨೭. ಶಿವನಾಮಕ್ಕೆ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿಯು ಇರುವುದೋ ಅಷ್ಟು ಪಾಪಗಳನ್ನು ಮನುಷ್ಯರೂ ಮಾಡಲಾರರು. ಎಂದರೆ ಮನುಷ್ಯರು ಮಾಡಬಹುದಾದ ಪಾಪಗಳನ್ನೆಲ್ಲಾ ನಾಶಮಾಡುವ ಶಕ್ತಿ ಈ ಶಿವನಾಮಕ್ಕೆ ಇದೆ. ಇನ್ನೂ ಹೆಚ್ಚಾಗಿಯೇ ಇರುವುದು.

ಬ್ರಹ್ಮಹತ್ಯಾದಿಪಾಪಾನಾಂ ರಾಶೀನಪ್ರಮಿತಾ೯ ಮುನೇ ।
ಶಿವನಾಮ ದ್ರುತಂ ಪ್ರೋಕ್ತಂ ನಾಶಯತ್ಯಖಿಲಾನ್ನರೈಃ ॥ ೨೮ ॥

ಶಿವನಾಮತರೀಂ ಪ್ರಾಪ್ಯ ಸಂಸಾರಾಬ್ಧಿಂ ತರಂತಿ ಯೇ ।
ಸಂಸಾರಮೂಲಪಾಪಾನಿ ತಾನಿ ನಶ್ಯಂತ್ಯಸಂಶಯಂ ॥ ೨೯ ॥

ಸಂಸಾರಮೂಲಭೂತಾನಾಂ ಪಾತಕಾನಾಂ ಮಹಾಮುನೇ ।
ಶಿವನಾಮಕುಠಾರೇಣ ವಿನಾಶೋ ಜಾಯತೇ ಧ್ರುವಂ ॥ ೩೦ ॥

ಶಿವನಾಮಾಮೃತಂ ಪೇಯಂ ಪಾಪದಾವಾನಲಾರ್ದಿತೈಃ ।
ಪಾಪದಾವಾಗ್ನಿತಪ್ತಾನಾಂ ಶಾಂತಿಸ್ತೇನ ವಿನಾ ನ ಹಿ ॥ ೩೧ ॥

ಶಿವೇತಿ ನಾಮಪೀಯೂಷವರ್ಷಧಾರಾಪರಿಪ್ಲುತಾಃ ।
ಸಂಸಾರದವಮಧ್ಯೇಽಪಿ ನ ಶೋಚಂತಿ ಕದಾಚನ ॥ ೩೨ ॥

---

೨೮. ಎಲೈ ಮುನಿಗಳೇ! ಬ್ರಹ್ಮಹತ್ಯೆ ಮುಂತಾದ ಅಸಂಖ್ಯಾತ ಮಹಾ ಪಾಪಗಳ ರಾಶಿರಾಶಿಗಳನ್ನೂ ಸಹ ಶಿವನಾಮವು ಕೂಡಲೇ ನಾಶಮಾಡುವುದು.

೨೯. ಶಿವನಾಮವೆಂಬ ನೌಕೆಯನ್ನು ಹತ್ತಿ ಸಂಸಾರಸಾಗರವನ್ನು ದಾಟಲು ಯಾರು ಪ್ರಯತ್ನಿಸುವರೋ ಅವರ ಸಂಸಾರಮೂಲಭೂತವಾದ ಪಾಪಗಳೆಲ್ಲವೂ ಸಂಶಯವಿಲ್ಲದೆ ನಾಶವಾಗುವವು.

೩೦. ಸಂಸಾರಕ್ಕೆ ಕಾರಣವಾದ ಪಾಪಗಳೆಂಬ ವೃಕ್ಷಗಳು ಶಿವನಾಮವೆಂಬ ಕೊಡಲಿಯಿಂದ ಕತ್ತರಿಸಲ್ಪಡುವುವು.

೩೧. ಪಾಪವೆಂಬ ಕಾಡುಕಿಚ್ಚಿನಿಂದ ಪೀಡಿಸಲ್ಪಟ್ಟವರು ಶಿವನಾಮವೆಂಬ ಅಮೃತವನ್ನು ಕುಡಿಯಬೇಕು. ಪಾಪವೆಂಬ ಕಾಡುಕಿಚ್ಚಿನಿಂದ ತಾಪವನ್ನು ಹೊಂದಿದವರಿಗೆ ಶಾಂತಿಯಿಲ್ಲ.

೩೨. ಶಿವನಾಮವೆಂಬ ಅಮೃತಧಾರೆಗಳಿಂದ ಕೂಡಿದವರು, ಸಂಸಾರವೆಂಬ ದಾವಾಗ್ನಿಮಧ್ಯದಲ್ಲಿದ್ದರೂ ಶೋಕವನ್ನು ಹೊಂದುವುದಿಲ್ಲ.

ಶಿವನಾಮ್ನಿ ಮಹದ್ಭಕ್ತಿರ್ಜಾತಾ ಯೇಷಾಂ ಮಹಾತ್ಮನಾಂ ।
ತದ್ವಿಧಾನಾಂ ತು ಸಹಸಾ ಮುಕ್ತಿರ್ಭವತಿ ಸರ್ವಥಾ ॥ ೩೩ ॥

ಅನೇಕಜನ್ಮಭಿರ್ಯೇನ ತಪಸ್ತಪ್ತಂ ಮುನೀಶ್ವರಾಃ ।
ಶಿವನಾಮ್ನಿ ಭವೇದ್ಭಕ್ತಿಃ ಸರ್ವಪಾಪಾಪಹಾರಿಣೀ ॥ ೩೪ ॥

ಯಸ್ಯಾಸಾಧಾರಣೀ ಶಂಭುನಾಮ್ನಿ ಭಕ್ತಿರಖಂಡಿತಾ ।
ತಸ್ಯೈವ ಮೋಕ್ಷಃ ಸುಲಭೋ ನಾನ್ಯಸ್ಯೇತಿ ಮತಿರ್ಮಮ ॥ ೩೫ ॥

ಕೃತ್ವಾಪ್ಯನೇಕಪಾಪಾನಿ ಶಿವನಾಮಜಪಾದರಃ ।
ಸರ್ವಪಾಪವಿನಿರ್ಮುಕ್ತೋ ಭವತ್ಯೇವ ನ ಸಂಶಯಃ ॥ ೩೬ ॥

ಭವಂತಿ ಭಸ್ಮಸಾದ್ವೃಕ್ಷಾ ದವದಗ್ಧಾ ಯಥಾ ವನೇ ।
ತಥಾ ತಾವಂತಿ ದಗ್ಧಾನಿ ಪಾಪಾನಿ ಶಿವನಾಮತಃ ॥ ೩೭ ॥

---

೩೩. ಶಿವನಾಮದಲ್ಲಿ ಯಾವ ಮಹಾತ್ಮರಿಗೆ ಮಹತ್ತಾದ ಭಕ್ತಿಯಿರುವುದೋ ಅವರಿಗೆ ಶೀಘ್ರದಲ್ಲಿಯೇ ಮುಕ್ತಿಯುಂಟಾಗುವುದು.

೩೪. ಅನೇಕ ಜನ್ಮಗಳಿಂದ ತಪಸ್ಸನ್ನು ಮಾಡಿದವರಿಗೆ ಮಾತ್ರ ಶಿವನಾಮದಲ್ಲಿ ಸಕಲ ಪಾಪವನ್ನು ನಾಶಮಾಡುವಂತಹ ಭಕ್ತಿಯು ಉಂಟಾಗುವುದು.

೩೫. ಯಾವನಿಗೆ ಶಿವನಾಮದಲ್ಲಿ ಅಸಾಧಾರಣವೂ, ಅವಿಚ್ಛಿನ್ನವೂ ಆದಂತಹ ಭಕ್ತಿಯು ಇರುವುದೋ ಅವನಿಗೆ ಮೋಕ್ಷವು ಸುಖವಾಗಿ ಲಭಿಸುವುದು. ಮಿಕ್ಕವರಿಗೆ ಲಭಿಸಲಾರದು ಎಂದು ನನ್ನ ಅಭಿಪ್ರಾಯವು.

೩೬. ಅನೇಕ ಮಹಾಪಾಪಗಳನ್ನು ಮಾಡಿರುವವನಾದರೂ ಶಿವನಾಮ ಜಪವನ್ನು ಭಕ್ತಿಯಿಂದ ಮಾಡಿದರೆ ಆ ಎಲ್ಲಾ ಪಾಪಗಳಿಂದಲೂ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ.

೩೭. ಅರಣ್ಯದಲ್ಲಿ ಕಾಡುಕಿಚ್ಚಿನಿಂದ ದಗ್ಧವಾದ ಮರಗಳು ಹೇಗೆ ಭಸ್ಮವಾಗುವುವೋ ಅದರಂತೆ ಪಾಪಗಳೂ ಸಹ ಶಿವನಾಮದಿಂದ ದಹಿಸಲ್ಪಡುವವು.

ಯೋ ನಿತ್ಯಂ ಭಸ್ಮಪೂತಾಂಗಃ ಶಿವನಾಮಜಪಾದರಃ ।
ಸ ತರತ್ಯೇವ ಸಂಸಾರಮಘೋರಮಪಿ ಶೌನಕ ॥ ೩೮ ॥

ಬ್ರಹ್ಮಸ್ವಹರಣಂ ಕೃತ್ವಾ ಹತ್ವಾಪಿ ಬ್ರಾಹ್ಮಣಾನ್ ಬಹೂನ್ ।
ನ ಲಿಪ್ಯತೇ ನರಃ ಪಾಪೈಃ ಶಿವನಾಮಜಪಾದರಃ ॥ ೩೯ ॥

ವಿಲೋಕ್ಯ ವೇದನಖಿಲಾನ್ ಶಿವನಾಮಜಪಃ ಪರಃ ।
ಸಂಸಾರತರಣೋಪಾಯ ಇತಿ ಪೂರ್ವೈರ್ವಿನಿಶ್ಚಿತಂ ॥ ೪೦ ॥

ಕಿಂ ಬಹೂಕ್ತ್ಯಾ ಮುನಿಶ್ರೇಷ್ಠಾಃ ಶ್ಲೋಕೇನೈಕೇನ ವಚ್ಮ್ಯಹಂ ।
ಶಿವನಾಮ್ನೋ ಮಹಿಮಾನಂ ಸರ್ವಪಾಪಾಪಹಾರಣಂ ॥ ೪೧ ॥

ಪಾಪಾನಾಂ ಹರಣೇ ಶಂಭೋರ್ನಾಮ್ನಃ ಶಕ್ತಿರ್ಹಿ ಪಾವನೀ ।
ಶಕ್ನೋತಿ ಪಾತಕಂ ಕರ್ತುಂ ನಾಪಿ ತಾವನ್ನರಃ ಕ್ವಚಿತ್ ॥ ೪೨ ॥

---

೩೮. ಎಲೈ ಶೌನಕಮುನಿ, ಯಾವನು ನಿತ್ಯವೂ ಪವಿತ್ರವಾದ ಭಸ್ಮವನ್ನು ಧರಿಸಿ ಶಿವನಾಮವನ್ನು ಭಕ್ತಿಯಿಂದ ಜಪಿಸುವನೋ ಅವನು ಘೋರವಾದಂತಹ ಸಂಸಾರಸಾಗರವನ್ನು ದಾಟುವನು.

೩೯. ಶಿವನಾಮವನ್ನು ಆದರದಿಂದ ಜಪಿಸುವವನು, ಬ್ರಾಹ್ಮಣನ ಧನವನ್ನು ಅಪಹರಿಸಿದ್ದರೂ, ಬ್ರಾಹ್ಮಣರನ್ನು ಸಂಹರಿಸಿ ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಅವನಿಗೆ ಆ ಪಾಪಗಳ ಸಂಬಂಧವುಂಟಾಗುವುದಿಲ್ಲ.

೪೦. ವೇದಗಳನ್ನೆಲ್ಲಾ ಪರಿಶೀಲಿಸಿ ಶಿವನಾಮವೊಂದು ಮಾತ್ರ ಸಂಸಾರ ಸಾಗರವನ್ನು ದಾಟಲು ಯೋಗ್ಯವಾದ ಸಾಧನವೆಂದು ಹಿಂದಿನವರು ಸಿದ್ಧಾಂತ ಮಾಡಿರುವರು.

೪೧. ಎಲೈ ಮುನಿಶ್ರೇಷ್ಠರೇ! ಹೆಚ್ಚು ಹೇಳಿ ಪ್ರಯೋಜನವೇನು? ಸಕಲ ಪಾಪವನ್ನೂ ಹೋಗಲಾಡಿಸುವ ಶಿವನಾಮದ ಮಹಿಮೆಯನ್ನು ಸಂಗ್ರಹಿಸಿ ಒಂದು ಶ್ಲೋಕದಿಂದಲೇ ಹೇಳುವೆನು.

೪೨. ಶಿವನಾಮಕ್ಕೆ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿಯಿರುವದೋ ಅಷ್ಟು ಪಾಪಗಳನ್ನು ಯಾವ ನರನೂ ಮಾಡಲಾರನು.

ಶಿವನಾಮಪ್ರಭಾವೇಣ ಲೇಭೇ ಸದ್ಗತಿಮುತ್ತಮಾಂ।
ಇಂದ್ರದ್ಯುಮ್ನನೃಪಃ ಪೂರ್ವಂ ಮಹಾಪಾಪಯುತೋ ಮುನೇ ॥ ೪೩ ॥

ತಥಾ ಕಾಚಿದ್ದ್ವಿಜಾ ಯೋಷಾsಸೌ ಮುನೇ ಬಹುಪಾಪಿನೀ ।
ಶಿವನಾಮಪ್ರಭಾವೇಣ ಲೇಭೇ ಸದ್ಗತಿಮುತ್ತಮಾಂ ॥ ೪೪ ॥

ಇತ್ಯುಕ್ತಂ ವೋ ಮುನಿಶ್ರೇಷ್ಠಾ ನಾಮಮಾಹಾತ್ಮ್ಯಮುತ್ತಮಂ ।
ಶೃಣುಧ್ವಂ ಭಸ್ಮಮಾಹಾತ್ಮ್ಯಂ ಸರ್ವಪಾವನಪಾವನಂ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ತ್ರಯೋವಿಂಶೋsಧ್ಯಾಯಃ.

---

೪೩. ಹಿಂದೆ ಮಹಾಪಾಪಿಯಾದ ಇಂದ್ರದ್ಯುಮ್ನನೆಂಬ ರಾಜನು ಶಿವನಾಮದ ಪ್ರಭಾವದಿಂದ ಒಳ್ಳೆಯ ಗತಿಯನ್ನು ಪಡೆದನು.

೪೪. ಮತ್ತು ಮಹಾಪಾಪಿಯಾಗಿದ್ದ ಓರ್ವ ಬ್ರಾಹ್ಮಣಸ್ತ್ರೀಯು ಶಿವನಾಮ ಪ್ರಭಾವದಿಂದ ಉತ್ತಮವಾದ ಗತಿಯನ್ನು ಪಡೆದಳು.

೪೫. ಎಲೈ ಮುನಿಶ್ರೇಷ್ಠರೇ ! ಈ ರೀತಿಯಾಗಿ ನಿಮಗೆ ಉತ್ತಮವಾದ ಶಿವನಾಮ ಮಹಿಮೆಯನ್ನು ಹೇಳಿರುವೆನು ಈಗ ಪರಮ ಪವಿತ್ರವಾದ ಭಸ್ಮ ಮಾಹಾತ್ಮ್ಯವನ್ನು ಹೇಳುವೆನು, ಕೇಳಿರಿ ಎಂದನು.

ಇಲ್ಲಿಗೆ ಶ್ರೀಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಇಪ್ಪತ್ತ
ಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಚತುರ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

ದ್ವಿವಿಧಂ ಭಸ್ಮ ಸಂಪ್ರೋಕ್ತಂ ಸರ್ವಮಂಗಲದಂ ಪರಂ ।
ತತ್ಪ್ರಕಾರಮಹಂ ವಕ್ಷ್ಯೇ ಸಾವಧಾನತಯಾ ಶೃಣು ॥ ೧ ॥

ಏಕಂ ಜ್ಞೇಯಂ ಮಹಾಭಸ್ಮ ದ್ವಿತೀಯಂ ಸ್ವಲ್ಪಸಂಜ್ಞಕಂ ।
ಮಹಾಭಸ್ಮ ಇತಿ ಪ್ರೋಕ್ತಂ ಭಸ್ಮ ನಾನಾವಿಧಂ ಪರಂ ॥ ೨ ॥

ತದ್ಭಸ್ಮ ತ್ರಿವಿಧಂ ಪ್ರೋಕ್ತಂ ಶ್ರೌತಂ ಸ್ಮಾರ್ತಂ ಚ ಲೌಕಿಕಂ ।
ಭಸ್ಮೈವ ಸ್ವಲ್ಪಸಂಜ್ಞಂ ಹಿ ಬಹುಧಾ ಪರಿಕೀರ್ತಿತಂ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ! ಸಕಲ ಮಂಗಳವನ್ನೂ ಉಂಟುಮಾಡುವ ಭಸ್ಮವು ಎರಡು ವಿಧವಾಗಿರುವುದು. ಅದರ ವಿವರವನ್ನು ಹೇಳುವೆನು ಸಾವಧಾನವಾಗಿ ಕೇಳಿ.

೨-೩. ಆ ಎರಡು ವಿಧವಾದ ಭಸ್ಮಗಳಲ್ಲಿ ಮೊದಲನೆಯದು ಮಹಾಭಸ್ಮವೆಂಬುದು. ಎರಡನೆಯದಕ್ಕೆ ಸ್ವಲ್ಪಭಸ್ಮವೆಂಬ ಹೆಸರು. ಹೀಗೆ ಭಸ್ಮವು ಅನೇಕ

ಶ್ರೌತಂ ಭಸ್ಮ ತಥಾ ಸ್ಮಾರ್ತಂ ದ್ವಿಜಾನಾಮೇವ ಕೀರ್ತಿತಂ ।
ಅನ್ಯೇಷಾಮಪಿ ಸರ್ವೇಷಾಮಪರಂ ಭಸ್ಮ ಕೀರ್ತಿತಂ ॥ ೪ ॥

ಧಾರಣಂ ಮಂತ್ರತಃ ಪ್ರೋಕ್ತಂ ದ್ವಿಜಾನಾಂ ಮುನಿಪುಂಗವೈಃ ।
ಕೇವಲಂ ಧಾರಣಂ ಜ್ಞೇಯಮನ್ಯೇಷಾಂ ಮಂತ್ರವರ್ಜಿತಂ ॥ ೫ ॥

ಆಗ್ನೇಯಮುಚ್ಯತೇ ಭಸ್ಮ ದಗ್ಧಗೋಮಯಸಂಭವಂ ।
ತದಪಿ ದ್ರವ್ಯಮಿತ್ಯುಕ್ತಂ ತ್ರಿಪುಂಡ್ರಸ್ಯ ಮಹಾಮುನೇ ॥ ೬ ॥

ಅಗ್ನಿಹೋತ್ರೋತ್ಥಿತಂ ಭಸ್ಮ ಸಂಗ್ರಾಹ್ಯಂ ವಾ ಮನೀಷಿಭಿಃ ।
ಅನ್ಯಯಜ್ಞೋತ್ಥಿತಂ ವಾಪಿ ತ್ರಿಪುಂಡ್ರಸ್ಯ ಚ ಧಾರಣೇ ॥ ೭ ॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಜಾಬಾಲೋಪನಿಷದ್ಗತೈಃ ।
ಸಪ್ತಭಿರ್ಧೂಲನಂ ಕಾರ್ಯಂ ಭಸ್ಮನಾ ಸಜಲೇನ ಚ ॥ ೮ ॥

---

ವಿಧವಾಗಿರುವದು. ಮಹಾಭಸ್ಮವೂ ಸಹ ಶ್ರೌತಭಸ್ಮ, ಸ್ಮಾರ್ತಭಸ್ಮ, ಲೌಕಿಕಭಸ್ಮ ಎಂದು ಮೂರು ವಿಧವಾಗಿರುವುದು, ಸ್ವಲ್ಪ ಭಸ್ಮವು ಅನೇಕ ವಿಧವಾಗಿರುವದು.

೪. ಶ್ರೌತ ಮತ್ತು ಸ್ಮಾರ್ತ ಭಸ್ಮಗಳನ್ನು ಬ್ರಾಹ್ಮಣಾದಿ ಮೂರು ವರ್ಣದವರು ಧರಿಸಬೇಕು. ಮಿಕ್ಕವರು ಲೌಕಿಕಭಸ್ಮವನ್ನು ಧರಿಸಬೇಕು.

೫. ದ್ವಿಜರು ಎಂದರೆ ಬ್ರಾಹ್ಮಣಾದಿ ಮೂರು ವರ್ಣದವರು ಮಂತ್ರಪೂರ್ವಕವಾಗಿ ಧರಿಸಬೇಕು. ಶೂದ್ರರೇ ಮುಂತಾದವರು ಮಂತ್ರವಿಲ್ಲದೆ ಹಾಗೆಯೇ ಭಸ್ಮವನ್ನು ಧರಿಸಬೇಕು ಎಂದು ಹಿಂದಿನ ಋಷಿಶ್ರೇಷ್ಠರು ಹೇಳಿರುವರು.

೬. ಎಲೈ ಮುನಿಗಳೇ ! ಭಸ್ಮಕ್ಕೆ ಆಗ್ನೇಯ ಎಂದರೆ ಅಗ್ನಿಯಿಂದ ಜನಿಸಿದುದು ಎಂಬ ಹೆಸರಿರುವುದು. ಆ ಭಸ್ಮವನ್ನು ಮಾಡಬೇಕಾದರೆ ಹಸುವಿನ ಸಗಣಿಯನ್ನು ಅಗ್ನಿಯಲ್ಲಿ ಸುಟ್ಟು ಮಾಡಬೇಕು. ಆದುದರಿಂದ ಭಸ್ಮಕ್ಕೆ ಗೋಮಯವೂ ಒಂದು ದ್ರವ್ಯವು.

೭. ಅಗ್ನಿಹೋತ್ರದಿಂದಾದ ಭಸ್ಮವನ್ನೂ ಧರಿಸಬಹುದು. ಮಿಕ್ಕ ಜ್ಯೋತಿಷ್ಟೋಮಾದಿಯಾಗಗಳಲ್ಲಾದ ಭಸ್ಮಗಳಿಂದಲೂ ತ್ರಿಪುಂಡ್ರವನ್ನು ಧರಿಸಬಹುದು.

೮. ಜಾಬಾಲೋಪನಿಷತ್ತಿನಲ್ಲಿಸುವ "ಅಗ್ನಿರಿತಿ ಭಸ್ಮ" ಎಂಬ ಏಳು ಮಂತ್ರಗಳಿಂದ ಪ್ರತ್ಯೇಕವಾಗಿ ಭಸ್ಮವನ್ನು ನೀರಿನಲ್ಲಿ ಕಲಸಿ ಹಚ್ಚಬೇಕು.

ವರ್ಣಾನಾಮಾಶ್ರಮಾಣಾಂ ಚ ಮಂತ್ರತೋಽಮಂತ್ರತೋಽಪಿ ಚ ।
ತ್ರಿಪುಂಡ್ರೋದ್ಧೂಲನಂ ಪ್ರೋಕ್ತಂ ಜಾಬಾಲೈರಾದರೇಣ ಚ ॥ ೯ ॥

ಭಸ್ಮನೋದ್ಧೂಲನಂ ಚೈವ ಯಥಾ ತಿರ್ಯಕ್ತ್ರಿಪುಂಡ್ರಕಂ ।
ಪ್ರಮಾದಾದಪಿ ಮೋಕ್ಷಾರ್ಥೀ ನ ತ್ಯಜೇದಿತಿ ವಿಶ್ರುತಿಃ ॥ ೧೦ ॥

ಶಿವೇನ ವಿಷ್ಣುನಾ ಚೈವ ತಥಾ ತಿರ್ಯಕ್ತ್ರಿಪುಂಡ್ರಕಂ ।
ಉಮಾದೇವೀ ಚ ಲಕ್ಷ್ಮೀಶ್ಚ ವಾಚಾನ್ಯಾಭಿಶ್ಚ ನಿತ್ಯಶಃ ॥ ೧೧ ॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈರಪಿ ಚ ಸಂಕರೈಃ
ಅಪಭ್ರಂಶೈರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಲನಾತ್ಮನಾ ॥ ೧೨ ॥

ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ।
ತೇಷಾಂ ನಾಸ್ತಿ ಸಮಾಚಾರೋ ವರ್ಣಾಶ್ರಮಸಮನ್ವಿತಃ ॥ ೧೩ ॥

---

೯. ಬ್ರಹ್ಮಚಾರಿ ಮೊದಲಾದ ಆಶ್ರಮಿಗಳೂ ಬ್ರಾಹ್ಮಣ ಮೊದಲಾದ ವರ್ಣದವರೂ ಸಹ ಮಂತ್ರಪೂರ್ವಕವಾಗಿಯಾಗಲೀ ಮಂತ್ರವಿಲ್ಲದೆಯಾಗಲೀ ಭಸ್ಮತ್ರಿಪುಂಡ್ರವನ್ನು ಧರಿಸಬೇಕೆಂದು ಜಾಬಾಲರು ಹೇಳಿರುವರು.

೧೦. ಭಸ್ಮತ್ರಿಪುಂಡ್ರವನ್ನು ಅಡ್ಡವಾಗಿ ಧರಿಸಬೇಕು. ಮುಕ್ತಿಯನ್ನಪೇಕ್ಷಿಸುವವನು ಪ್ರಮಾದದಿಂದಲೂ ಸಹ ಭಸ್ಮತ್ರಿಪುಂಡ್ರಧಾರಣೆಯನ್ನು ಬಿಡಬಾರದು ಎಂದು ಜಾಬಾಲಶ್ರುತಿಯಲ್ಲಿ ಹೇಳಿರುವದು.

೧೧. ಭಸ್ಮವನ್ನು ತಿರ್ಯಕ್ತ್ರಿಪುಂಡ್ರವಾಗಿ ಅಂದರೆ ಅಡ್ಡವಾಗಿ ಮೂರು ಪಟ್ಟೆಗೆರೆಗಳನ್ನಾಗಿ ಶಿವನೂ, ವಿಷ್ಣುವೂ, ಪಾರ್ವತಿದೇವಿಯೂ ಮತ್ತು ಲಕ್ಷ್ಮೀದೇವಿಯೂ ಸಹ ನಿತ್ಯವೂ ಧರಿಸುವರು. ಸರಸ್ವತೀ ಮುಂತಾದ ಮಿಕ್ಕವರೂ ಸಹ ಧರಿಸುವರು.

೧೨. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸಂಕರಜಾತಿಯವರು, ಜಾತಿಭ್ರಷ್ಟರೂ ಸಹ ಭಸ್ಮವನ್ನು ತ್ರಿಪುಂಡ್ರವಾಗಿ ಧರಿಸಬೇಕು.

೧೩. ಭಸ್ಮವನ್ನು ಸುಮ್ಮನೆ ಮೇಲೆ ಧರಿಸುವುದಾಗಲಿ ಮತ್ತು ತ್ರಿಪುಂಡ್ರಧಾರಣವನ್ನಾಗಲಿ ಯಾರು ಶ್ರದ್ಧೆಯಿಂದ ಆಚರಿಸುವುದಿಲ್ಲವೋ ಅವರಿಗೆ ವರ್ಣ ಮತ್ತು ಆಶ್ರಮಕರ್ಮಗಳ ಆಚಾರವ್ಯವಹಾರಗಳಲ್ಲಿ ಅಧಿಕಾರವಿಲ್ಲ.

ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ।
ತೇಷಾಂ ನಾಸ್ತಿ ವಿನಿರ್ಮುಕ್ತಿಃ ಸಂಸಾರಾಜ್ಜನ್ಮಕೋಟಿಭಿಃ ॥ ೧೪ ॥

ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ।
ತೇಷಾಂ ನಾಸ್ತಿ ಶಿವಜ್ಞಾನಂ ಕಲ್ಪಕೋಟಿಶತೈರಪಿ ॥ ೧೫ ॥

ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ।
ತೇ ಮಹಾಪಾತಕೈರ್ಯುಕ್ತಾ ಇತಿ ಶಾಸ್ತ್ರೀಯನಿರ್ಣಯಃ ॥ ೧೬ ॥

ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ।
ತೇಷಾಮಾಚರಿತಂ ಸರ್ವಂ ವಿಪರೀತಫಲಾಯ ವೈ ॥ ೧೭ ॥

ಮಹಾಪಾತಕಯುಕ್ತಾನಾಂ ಜಂತೂನಾಂ ಶರ್ವವಿದ್ವಿಷಾಂ ।
ತ್ರಿಪುಂಡ್ರೋದ್ಧೂಲನದ್ವೇಷೋ ಜಾಯತೇ ಸುದೃಢಂ ಮುನೇ ॥ ೧೮ ॥

---

೧೪. ಭಸ್ಮೋದ್ಧೂಲನ ಮತ್ತು ತ್ರಿಪುಂಡ್ರಗಳನ್ನು ಶ್ರದ್ಧೆಯಿಂದ ಧರಿಸದಿರುವವರಿಗೆ ಕೋಟಿ ಜನ್ಮಗಳಾದರೂ ಸಂಸಾರದಿಂದ ಬಿಡುಗಡೆಯು ಆಗಲಾರದು.

೧೫. ಭಸ್ಮೋದ್ಧೂಲನ ಮತ್ತು ತ್ರಿಪುಂಡ್ರಗಳನ್ನು ಶ್ರದ್ಧೆಯಿಂದ ಧರಿಸದಿರುವವರಿಗೆ ನೂರು ಕೋಟಿ ಜನ್ಮಗಳಾದರೂ ಶಿವಜ್ಞಾನವು ಲಭಿಸುವದಿಲ್ಲ.

೧೬. ಭಸ್ಮೋದ್ಧೂಲನ ಮತ್ತು ತ್ರಿಪುಂಡ್ರಗಳನ್ನು ಶ್ರದ್ಧೆಯಿಂದ ಧರಿಸದಿರುವವರು ಮಹಾಪಾಪಗಳನ್ನು ಮಾಡಿದವರೆಂದು ಶಾಸ್ತ್ರಸಿದ್ಧಾಂತವು.

೧೭. ಭಸ್ಮೋದ್ಧೂಲನ ತ್ರಿಪುಂಡ್ರಗಳನ್ನು ಶ್ರದ್ಧೆಯಿಂದ ಧರಿಸದವರು ಮಾಡುವ ಆಚಾರವೆಲ್ಲವೂ ವಿರುದ್ಧವಾದ ಎಂದರೆ ಅನಿಷ್ಟವಾದ ಫಲವನ್ನೇ ಕೊಡುವುದು.

೧೮. ಎಲೈ ಮುನಿಗಳೇ! ಬ್ರಹ್ಮಹತ್ಯೆ ಮುಂತಾದ ಮಹಾ ಪಾಪಗಳನ್ನು ಮಾಡಿದವರಿಗೆ ಮಾತ್ರ ಶಿವನಲ್ಲಿಯೂ ಭಸ್ಮತ್ರಿಪುಂಡ್ರ ಮತ್ತು ಉದ್ಧೂಲನಗಳಲ್ಲಿಯೂ ದೃಢವಾದ ದ್ವೇಷವುಂಟಾಗುವದು.

ಶಿವಾಗ್ನಿಕಾರ್ಯಂ ಯಃ ಕೃತ್ವಾ ಕುರ್ಯಾತ್ತ್ರಿಯಾಯುಷಾತ್ಮವಿತ್ ।
ಮುಚ್ಯತೇ ಸರ್ವಪಾಪೈಸ್ತು ಸ್ಪೃಷ್ಟೇನ ಭಸ್ಮನಾ ನರಃ ॥ ೧೯ ॥

ಸಿತೇನ ಭಸ್ಮನಾ ಕುರ್ಯಾತ್ತ್ರಿಪುಂಡ್ರಂ ಯಸ್ತ್ರಿಸಂಧ್ಯಕಂ ।
ಸರ್ವಪಾಪವಿನಿರ್ಮುಕ್ತಃ ಶಿವೇನ ಸಹ ಮೋದತೇ ॥ ೨೦ ॥

ಸಿತೇನ ಭಸ್ಮನಾ ಕುರ್ಯಾಲ್ಲಲಾಟೇ ತು ತ್ರಿಪುಂಡ್ರಕಂ ।
ಯೋಽಸಾವನಾದಿಭೂತಾರ್ಥಾ ಹಿ ಲೋಕಾನಾಪ್ನೋತಿ ಮೃತೋ ಭವೇತ್ ॥

ಅಕೃತ್ವಾ ಭಸ್ಮನಾ ಸ್ನಾನಂ ನ ಜಪೇದ್ವೈ ಷಡಕ್ಷರಂ ।
ತ್ರಿಪುಂಡ್ರಂ ಚ ರಚಿತ್ವಾ ತು ವಿಧಿನಾ ಭಸ್ಮನಾ ಜಪೇತ್ ॥ ೨೨ ॥

ಅದಯೋ ವಾಧನೋ ವಾಪಿ ಸರ್ವಪಾಪಾನ್ವಿತೋಽಪಿ ವಾ ।
ಉಷಃಪಾಪಾನ್ವಿತೋ ವಾಪಿ ಮೂರ್ಖೋ ವಾ ಪತಿತೋಽಪಿ ವಾ ॥ ೨೩ ॥

---

೧೯. ಶಿವನನ್ನುದ್ದೇಶಿಸಿ ಅಗ್ನಿಕಾರ್ಯವನ್ನು ಮಾಡಿ ಭಸ್ಮರಕ್ಷೆಯನ್ನು ಧಾರಣಮಾಡಿದರೆ ಸರ್ವ ಪಾಪ ವಿನಿರ್ಮುಕ್ತನಾಗುವನು.

೨೦. ಶುದ್ಧವಾದ ಬಿಳಿಯಭಸ್ಮವನ್ನು ನಿತ್ಯವೂ ಮೂರು ಸಂಧ್ಯಾಕಾಲಗಳಲ್ಲಿ ಮೂರು ಗೆರೆಗಳಾಗಿ ಯಾವನು ಧರಿಸುವನೋ ಅವನು ಪಾಪಗಳನ್ನು ಕಳೆದುಕೊಂಡು ಶಿವನೊಡನೆ ವಿಹರಿಸುವನು.

೨೧. ಬಿಳಿಯ ಭಸ್ಮವನ್ನು ಹಣೆಯಲ್ಲಿ ಮೂರು ಪಟ್ಟೆಯಾಗಿ ಯಾವನು ಧರಿಸುವನೋ ಅವನು ಮರಣಾನಂತರ ಸ್ವರ್ಗ ಮುಂತಾದ ಲೋಕಗಳನ್ನು ಪಡೆಯುವನು.

೨೨. ಭಸ್ಮವನ್ನು ಧರಿಸದೆ ಶಿವಷಡಕ್ಷರಮಂತ್ರವನ್ನು ಜಪಿಸಕೂಡದು. ಭಸ್ಮತ್ರಿಪುಂಡ್ರವನ್ನು ವಿಧಿವತ್ತಾಗಿ ಧರಿಸಿಯೇ ಜಪವನ್ನು ಮಾಡಬೇಕು.

೨೩-೨೪. ಕ್ರೂರನಾದರೂ ನೀಚನಾದರೂ ಮಹಾಪಾಪಿಯಾದರೂ, ಮೂರ್ಖನೂ ಪತಿತನೂ ಆದರೂ ಸಹ ವಿಭೂತಿಯನ್ನು ಧರಿಸಿದವನು ಯಾವ ದೇಶ

ಯಸ್ಮಿನ್ ದೇಶೇ ವಸೇನ್ನಿತ್ಯಂ ಭೂತಿಶಾಸನಸಂಯುತಃ ।
ಸರ್ವತೀರ್ಥೈಶ್ಚ ಕ್ರತುಭಿಃ ಸಾನ್ನಿಧ್ಯಂ ಕ್ರಿಯತೇ ಸದಾ ॥ ೨೪ ॥

ತ್ರಿಪುಂಡ್ರಸಹಿತೋ ಜೀವಃ ಪೂಜ್ಯಃ ಸರ್ವೈಃ ಸುರಾಸುರೈಃ ।
ಪಾಪಾನ್ವಿತೋಽಪಿ ಶುದ್ಧಾತ್ಮಾ ಕಿಂ ಪುನಃ ಶ್ರದ್ಧಯಾ ಯುತಃ ॥ ೨೫ ॥

ಯಸ್ಮಿನ್ ದೇಶೇ ಶಿವಜ್ಞಾನೀ ಭೂತಿಶಾಸನಸಂಯುತಃ ।
ಗತೋ ಯದೃಚ್ಛಯಾದ್ಯಾಪಿ ತಸ್ಮಿಂಸ್ತೀರ್ಥಾಃ ಸಮಾಗತಾಃ ॥ ೨೬ ॥

ಬಹುನಾತ್ರ ಕಿಮುಕ್ತೇನ ಧಾರ್ಯಂ ಭಸ್ಮ ಸದಾ ಬುಧೈಃ ।
ಲಿಂಗಾರ್ಚನಂ ಸದಾ ಕಾರ್ಯಂ ಜಪ್ಯೋ ಮಂತ್ರಃ ಷಡಕ್ಷರಃ ॥ ೨೭ ॥

ಬ್ರಹ್ಮಣಾ ವಿಷ್ಣುನಾ ವಾಪಿ ರುದ್ರೇಣ ಮುನಿಭಿಃ ಸುರೈಃ ।
ಭಸ್ಮಧಾರಣಮಾಹಾತ್ಮ್ಯಂ ನ ಶಕ್ಯಂ ಪರಿಭಾಷಿತುಂ ॥ ೨೮ ॥

---

ದಲ್ಲಿ ವಾಸಿಸುವನೋ ಆ ದೇಶವು ಸಕಲ ತೀರ್ಥಗಳ ಮತ್ತು ಯಾಗಗಳ ಸಾನ್ನಿಧ ವುಳ್ಳದುದಾಗಿ ಪವಿತ್ರತಮವಾಗುವುದು.

೨೫. ತ್ರಿಪುಂಡ್ರವನ್ನು ಧರಿಸುವ ಜೀವನು ಪಾಪಿಷ್ಠನಾಗಿದ್ದರೂ ಅವನನ್ನು ಎಲ್ಲ ದೇವತೆಗಳೂ ಮತ್ತು ಅಸುರರೂ ಪೂಜಿಸುವರು. ಇನ್ನು ಪಾಪವಿಲ್ಲದೆ ಶುದ್ಧಾತ್ಮನೂ ಶ್ರದ್ಧೆಯುಳ್ಳವನೂ ಆದವನು ತ್ರಿಪುಂಡ್ರವನ್ನು ಧರಿಸಿದರೆ ಪವಿತ್ರನೂ, ಪೂಜ್ಯನೂ ಆಗುವನೆಂದು ಹೇಳಬೇಕಾದುದೇನು ?

೨೬. ವಿಭೂತಿಯನ್ನು ಧರಿಸಿರುವ ಶಿವಜ್ಞಾನಿಯು ಅಕಸ್ಮಾತ್ತಾಗಿ ಯಾವುದಾದರೊಂದು ದೇಶಕ್ಕೆ ಹೋದರೂ ಆ ದೇಶವು ಸದಾ ತೀರ್ಥಗಳ ಸಾನ್ನಿಧ್ಯವುಳ್ಳದುದಾಗುವುದು.

೨೭. ಹೆಚ್ಚು ಹೇಳಿ ಪ್ರಯೋಜನವೇನು ? ತಿಳಿವಳಿಕೆಯುಳ್ಳವರು ಸದಾ ಭಸ್ಮವನ್ನು ಧರಿಸಬೇಕು. ಲಿಂಗವನ್ನು ಸದಾ ಅರ್ಚಿಸಬೇಕು. ಶಿವಷಡಕ್ಷರ ಮಂತ್ರವನ್ನು ಸದಾ ಜಪಿಸಬೇಕು.

೨೮. ಬ್ರಹ್ಮ, ವಿಷ್ಣು, ರುದ್ರ, ಈ ತ್ರಿಮೂರ್ತಿಗಳೂ, ಮುನಿಗಳೂ ಮತ್ತು ಮಿಕ್ಕ ದೇವತೆಗಳೂ ಸಹ ಭಸ್ಮಧಾರಣದ ಮಹಿಮೆಯನ್ನು ವರ್ಣಿಸಲಾರರು.

ಇತಿ ವರ್ಣಾಶ್ರಮಾಚಾರೋ ಲುಪ್ತವರ್ಣಕ್ರಿಯೋಽಪಿ ಚ ।
ಪಾಪಾತ್ಸಕೃತ್ತ್ರಿಪುಂಡ್ರಸ್ಯ ಧಾರಣಾತ್ಸೋಽಪಿ ಮುಚ್ಯತೇ ॥ ೨೯ ॥

ಯೇ ಭಸ್ಮಧಾರಣಂ ತ್ಯಕ್ತ್ವಾ ಕರ್ಮ ಕುರ್ವಂತಿ ಮಾನವಾಃ ।
ತೇಷಾಂ ನಾಸ್ತಿ ವಿನಿರ್ಮೋಕ್ಷಃ ಸಂಸಾರಾಜ್ಜನ್ಮಕೋಟಿಭಿಃ ॥ ೩೦ ॥

ತೇನಾಧೀತಂ ಗುರೋಸ್ಸರ್ವಂ ತೇನ ಸರ್ವಮನುಷ್ಠಿತಂ ।
ಯೇನ ವಿಪ್ರೇಣ ಶಿರಸಿ ತ್ರಿಪುಂಡ್ರಂ ಭಸ್ಮನಾ ಕೃತಂ ॥ ೩೧ ॥

ಯೇ ಭಸ್ಮಧಾರಿಣಂ ದೃಷ್ಟ್ವಾ ನರಾಃ ಕುರ್ವಂತಿ ತಾಡನಂ ।
ತೇಷಾಂ ಚಂಡಾಲತೋ ಜನ್ಮ ಬ್ರಹ್ಮನ್ನೂಹ್ಯಂ ವಿಪಶ್ಚಿತಾ ॥ ೩೨ ॥

ಮಾನಸ್ತೋಕೇನ ಮಂತ್ರೇಣ ಮಂತ್ರಿತಂ ಭಸ್ಮ ಧಾರಯೇತ್ ।
ಬ್ರಾಹ್ಮಣಃ ಕ್ಷತ್ರಿಯಶ್ಚೈವ ಪ್ರೋಕ್ತೇಷ್ವಂಗೇಷು ಭಕ್ತಿಮಾನ್ ॥ ೩೩ ॥

---

೨೯. ತನ್ನ ವರ್ಣಕ್ಕನುಗುಣವಾಗಿ ಆಚರಿಸದವನೂ, ಕರ್ಮವನ್ನು ಮಾಡದವನೂ ಸಹ ಒಂದು ಬಾರಿ ಭಸ್ಮವನ್ನು ಧರಿಸಿದುದರಿಂದಲೇ ಪಾಪವಿಲ್ಲದವನಾಗುವನು.

೩೦. ಯಾರು ಭಸ್ಮವನ್ನು ಧರಿಸದೆ ಕರ್ಮವನ್ನು ಆಚರಿಸುವರೋ ಆ ಮಾನವರಿಗೆ ಕೋಟಿ ಜನ್ಮಗಳಾದರೂ ಸಹ ಈ ಸಂಸಾರದಿಂದ ಮುಕ್ತಿಯು ಲಭಿಸಲಾರದು.

೩೧. ಯಾವ ಬ್ರಾಹ್ಮಣನು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸುವನೋ ಅವನು ಗುರುಮುಖದಿಂದ ಸರ್ವವನ್ನೂ ಅಧ್ಯಯನಮಾಡಿದಂತಾಗುವುದು. ಎಲ್ಲಾ ಕರ್ಮಗಳೂ ಅನುಷ್ಠಿಸಲ್ಪಟ್ಟಂತಾಗುವವು.

೩೨. ಎಲೈ ವಿಪ್ರರೆ! ಯಾರು ಭಸ್ಮ ಧರಿಸಿದವರನ್ನು ನೋಡಿ ಕೈತಟ್ಟಿ ಹಾಸ್ಯಮಾಡುವರೋ ಅವರು ಚಂಡಾಲರಿಂದ ಜನಿಸಿರುವರೆಂದು ಪಂಡಿತನಾದವನು ಊಹಿಸಬೇಕು.

೩೩. "ಮಾನಸ್ತೋಕೆ" ಎಂಬ ಮಂತ್ರದಿಂದ ಭಸ್ಮವನ್ನಭಿಮಂತ್ರಿಸಿ ಹಿಂದೆ ಹೇಳಿದ ಅಂಗಗಳಲ್ಲಿ ಬ್ರಾಹ್ಮಣನೂ ಕ್ಷತ್ರಿಯನೂ ಸಹ ಕ್ರಮವಾಗಿ ಭಕ್ತಿಯಿಂದ ಹಚ್ಚಬೇಕು.

ವೈಶ್ಯಸ್ತ್ರಿಯಂಬಕೇನೈವ ಶೂದ್ರಃ ಪಂಚಾಕ್ಷರೇಣ ತು ।
ಅನ್ಯೇಸಾಂ ವಿಧವಾಸ್ತ್ರೀಣಾಂ ವಿಧಿಃ ಪ್ರೋಕ್ತಶ್ಚ ಶೂದ್ರವತ್ ॥ ೩೪ ॥

ಪಂಚಬ್ರಹ್ಮಾದಿಮನುಭಿರ್ಗೃಹಸ್ಥಸ್ಯ ವಿಧೀಯತೇ ।
ತ್ರಿಯಂಬಕೇನ ಮನುನಾ ವಿಧಿರ್ವೈ ಬ್ರಹ್ಮಚಾರಿಣಃ ॥ ೩೫ ॥

ಅಘೋರೇಣಾಥ ಮನುನಾ ವಿಪಿನಸ್ಥವಿಧಿಃ ಸ್ಮೃತಃ ।
ಯತಿಸ್ತು ಪ್ರಣವೇನೈವ ತ್ರಿಪುಂಡ್ರಾದೀನಿ ಕಾರಯೇತ್ ॥ ೩೬ ॥

ಅತಿವರ್ಣಾಶ್ರಮೀ ನಿತ್ಯಂ ಶಿವೋಽಹಂಭಾವನಾತ್ಪರಾತ್ ।
ಶಿವಯೋಗೀ ಚ ನಿಯತಮೀಶಾನೇನಾಪಿ ಧಾರಯೇತ್ ॥ ೩೭ ॥

ನ ತ್ಯಾಜ್ಯಂ ಸರ್ವವರ್ಣೈಶ್ಚ ಭಸ್ಮಧಾರಣಮುತ್ತಮಂ ।
ಅನ್ಯೈರಪಿ ಯಥಾ ಜೀವೈಃ ಸದೇತಿ ಶಿವಶಾಸನಂ ॥ ೩೮ ॥

---

೩೪. ವೈಶ್ಯನು ತ್ರಿಯಂಬಕ ಮಂತ್ರದಿಂದಲೂ ಶೂದ್ರನು ಶಿವಪಂಚಾಕ್ಷರ ಮಂತ್ರದಿಂದಲೂ ಭಸ್ಮವನ್ನು ಧರಿಸಬೇಕು. ಮಿಕ್ಕ ಸಂಕರಜಾತಿ ಮುಂತಾದವರು, ವಿಧವೆಯರು ಮುಂತಾದವರೂ ಸಹ ಶೂದ್ರರಂತೆಯೇ ಧರಿಸತಕ್ಕದ್ದು.

೩೫. "ಪಂಚಬ್ರಹ್ಮ" ಮುಂತಾದ ಮಂತ್ರಗಳಿಂದ ಗೃಹಸ್ಥನು ಭಸ್ಮವನ್ನು ಧರಿಸಬೇಕು. ಬ್ರಹ್ಮಚಾರಿಯು ತ್ರಿಯಂಬಕ ಮಂತ್ರದಿಂದ ಭಸ್ಮವನ್ನು ಹಚ್ಚಿಕೊಳ್ಳಬೇಕು. (ಸದ್ಯೋಜಾತಾದಿಮಂತ್ರಗಳೇ ಪಂಚಬ್ರಹ್ಮ ಮಂತ್ರಗಳು.)

೩೬. ಅಘೋರ ಮಂತ್ರದಿಂದ ವಾನಪ್ರಸ್ಥನು ಭಸ್ಮವನ್ನು ಧರಿಸಬೇಕು. ಸನ್ಯಾಸಿಯು ಓಂಕಾರದಿಂದಲೇ ಭಸ್ಮತ್ರಿಪುಂಡ್ರಾದಿಗಳನ್ನು ಧರಿಸಬೇಕು.

೩೭. ವರ್ಣಾಶ್ರಮಗಳ ಕರ್ಮಗಳನ್ನು ತ್ಯಾಗಮಾಡಿದ ವಿದ್ವತ್ಸನ್ಯಾಸಿಯು ಶಿವನೇ ನಾನೆಂಬ ಉತ್ತಮಭಾವನೆಯಿಂದ ಭಸ್ಮವನ್ನು ಧರಿಸಬೇಕು. ಶಿವಯೋಗಿಯು ಈಶಾನಮಂತ್ರದಿಂದ ಭಸ್ಮವನ್ನು ಧರಿಸಬೇಕು.

೩೮. ಯಾವ ವರ್ಣದವರೂ ಸಹ ಉತ್ತಮವಾದ ಭಸ್ಮಧಾರಣವನ್ನು ಬಿಡಬಾರದು. ಮಿಕ್ಕ ಜಂತುಗಳೂ ಸದಾ ಧರಿಸಬೇಕೆಂದು ಶಿವನ ಶಾಸನವಿರುವದು.

ಭಸ್ಮಸ್ನಾನೇನ ಯಾವಂತಃ ಕಣಾಃ ಸ್ವಾಂಗೇ ಪ್ರತಿಷ್ಠಿತಾಃ ।
ತಾವಂತಿ ಶಿವಲಿಂಗಾನಿ ತನೌ ಧತ್ತೇ ಹಿ ಸಾಧಕಃ ॥ ೩೯ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚಾಪಿ ಚ ಸಂಕರಾಃ ।
ಸ್ತ್ರಿಯೋಽಥ ವಿಧವಾ ಬಾಲಾ ಪ್ರಾಪ್ತಾಃ ಪಾಷಂಡಿಕಾಸ್ತಥಾ ॥ ೪೦ ॥

ಬ್ರಹ್ಮಚಾರೀ ಗೃಹೀ ವನ್ಯಃ ಸಂನ್ಯಾಸೀ ಚ ವ್ರತೀ ತಥಾ ।
ನಾರ್ಯೋ ಭಸ್ಮ ತ್ರಿಪುಂಡ್ರಾಂಕಾ ಮುಕ್ತಾ ಏವ ನ ಸಂಶಯಃ ॥ ೪೧ ॥

ಜ್ಞಾನಾಜ್ಞಾನಧೃತೋ ವಾಪಿ ವಹ್ನಿದಾಹಸಮೋ ಯಥಾ ।
ಜ್ಞಾನಾಜ್ಞಾನಧೃತಂ ಭಸ್ಮ ಪಾವಯೇತ್ಸಕಲಂ ನರಂ ॥ ೪೨ ॥

ನಾಶ್ನೀಯಾಜ್ಜಲಮನ್ನಮಲ್ಪಮಪಿ ವಾ ಭಸ್ಮಾಕ್ಷಧೃತ್ಯಾ ವಿನಾ
ಭುಕ್ತ್ವಾ ವಾಥ ಗೃಹೀ ವನೀಪತಿಯತೀ ವರ್ಣೀ ತಥಾ ಸಂಕರಃ ।
ಏನೋಭುಙ್ನರಕಂ ಪ್ರಯಾತಿ ಸ ತದಾ ಗಾಯತ್ರಿಜಾಪೇನ ತ-
ದ್ವರ್ಣಾನಾಂ ತು ಯತೇಸ್ತು ಮುಖ್ಯಪ್ರಣವಾಜಾಪೇನ ಮುಕ್ತಿರ್ಭವೇತ್ ॥

---

೩೯. ಭಸ್ಮಸ್ನಾನದಿಂದ ಎಷ್ಟು ಭಸ್ಮದ ಕಣ (ಚೂರು) ಗಳು ಶರೀರದಲ್ಲಿ ಸೇರುವುವೋ ಅಷ್ಟು ಶಿವಲಿಂಗಗಳನ್ನು ಸಾಧಕನು ಧರಿಸಿದಂತಾಗುವುದು.

೪೦-೪೧. ಭಸ್ಮತ್ರಿಪುಂಡ್ರವನ್ನು ಧರಿಸಿದರೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸಂಕರಜಾತಿಗಳು, ವಿಧವೆಯರು, ಕನ್ಯೆಯರು, ಬಾಲಕರು, ನಾಸ್ತಿಕರು, ಬ್ರಹ್ಮಚಾರಿಗಳು, ಗೃಹಸ್ಥರು, ವಾನಪ್ರಸ್ಥರು, ಸನ್ಯಾಸಿಗಳು, ತಪಸ್ವಿಗಳು, ಸುಮಂಗಲಿಯರು ಇವರೆಲ್ಲರೂ ಮುಕ್ತಿಯನ್ನು ಪಡೆಯುವರು. ಈ ವಿಷಯದಲ್ಲಿ ಸಂಶಯವೇ ಇಲ್ಲ.

೪೨. ತಿಳಿವಳಿಕೆಯಿದ್ದು ಅಥವಾ ಇಲ್ಲದೇ ಸ್ಪರ್ಶಿಸಿದರೂ ಸಹ ಅಗ್ನಿಯು ಹೇಗೆ ಸುಡುವುದೋ ಅದರಂತೆ ಭಸ್ಮವೂ ಸಹ ತಿಳಿವಳಿಕೆಯಿಂದ ಅಥವಾ ತಿಳಿವಳಿಕೆಯಿಲ್ಲದೆ ಧರಿಸಿದರೂ ಸಹ ಪಾಪಗಳೆಲ್ಲವನ್ನೂ ನಾಶಪಡಿಸಿ ಮನುಷ್ಯನನ್ನು ಪವಿತ್ರನನ್ನಾಗಿ ಮಾಡುವುದು.

೪೩. ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸದೆ ಸ್ವಲ್ಪವಾದರೂ ಅನ್ನಪಾನಾದಿಗಳನ್ನು ಸೇವಿಸಕೂಡದು. ಹಾಗಲ್ಲದೆ ಸೇವಿಸಿದ ಪಕ್ಷದಲ್ಲಿ ಗ್ರಹಸ್ಥ, ವಾನಪ್ರಸ್ಥ,

ತ್ರಿಪುಂಡ್ರಂ ಯೇ ವಿನಿಂದಂತಿ ನಿಂದತಿ ಶಿವಮೇವ ತೇ ।
ಧಾರಯಂತಿ ಚ ಯೇ ಭಕ್ತ್ಯಾ ಧಾರಯಂತಿ ತಮೇವ ತೇ ॥ ೪೪ ॥

ಧಿಗ್ಭಸ್ಮರಹಿತಂ ಭಾಲಂ ಧಿಗ್ಗ್ರಾಮಮಶಿವಾಲಯಂ ।
ಧಿಗನೀಶಾರ್ಚನಂ ಜನ್ಮ ಧಿಗ್ವಿದ್ಯಾಮಶಿವಾಶ್ರಯಾಂ ॥ ೪೫ ॥

ಯೇ ನಿಂದಂತಿಮಹೇಶ್ವರಂ ತ್ರಿಜಗತಾಮಾಧಾರಭೂತಂ ಹರಂ
ಯೇ ನಿಂದಂತಿ ತ್ರಿಪುಂಡ್ರಧಾರಣಕರಂ ದೋಷಸ್ತು ತದ್ದರ್ಶನೇ ।
ತೇ ವೈ ಸಂಕರಸೂಕರಾಸುರಖರಾಶ್ವಕ್ರೋಷ್ಟುಕೀಟೋಪಮಾ
ಜಾತಾ ಏವಂ ಭವಂತಿ ಪಾಪಪರಮಾಸ್ತೇ ನಾರಕಾಃ ಕೇವಲಂ ॥ ೪೬ ॥

---

ಯತಿ, ಬ್ರಹ್ಮಚಾರೀ, ಸಂಕರಜಾತಿಗಳಲ್ಲಿ ಯಾರಾದರೂ ಸರಿಯೆ ಎಲ್ಲರೂ ಪಾಪಭಾಗಿಗಳಾಗಿ ನರಕವನ್ನು ಹೊಂದುವರು. ಆ ದೋಷಶಾಂತಿಗಾಗಿ ಸರ್ವ ವರ್ಣದವರೂ ಗಾಯತ್ರೀಜಪವನ್ನು ಯಥಾಶಕ್ತಿಯಾಗಿ ಮಾಡಬೇಕು. ಯತಿಗಳು ಓಂಕಾರವನ್ನು ಜಪಿಸಬೇಕು. ಅದರಿಂದ ಪಾಪನಿವೃತ್ತಿಯಾಗುವದು.

೪೪. ಭಸ್ಮತ್ರಿಪುಂಡ್ರವನ್ನು ಯಾರು ನಿಂದಿಸುವರೋ ಅವರು ಶಿವನನು ನಿಂದಿಸಿದ ಪಾಪಕ್ಕೆ ಗುರಿಯಾಗುವರು. ತ್ರಿಪುಂಡವನ್ನು ಯಾರು ಧರಿಸುವರೋ ಅವರು ಶಿವನನ್ನೇ ಧರಿಸುವರು.

೪೫. ಭಸ್ಮವನ್ನು ಧರಿಸಿದಿರುವ ಹಣೆಗೆ ಧಿಕ್ಕಾರವಿರಲಿ, ಶಿವದೇವಾಲಯವಿಲ್ಲದ ಗ್ರಾಮವು ನಿಂದನೀಯವಾದುದು. ಶಿವನನ್ನರ್ಚಿಸದಿರುವ ಜನ್ಮಕ್ಕೆ ಧಿಕ್ಕಾರವು. ಶಿವವಿಷಯವಲ್ಲದ ವಿದ್ಯೆಗೆ ಧಿಕ್ಕಾರವಿರಲಿ.

೪೬. ಮೂರು ಜಗತ್ತಿಗೂ ಆಧಾರನಾದ ಮಹೇಶ್ವರನನ್ನು ಯಾರು ನಿಂದಿಸುವರೋ ಮತ್ತು ಭಸ್ಮತ್ರಿಪುಂಡ್ರ ಧರಿಸುವವನನ್ನು ನಿಂದಿಸುವರೋ ಅವರು ಪಾಪಿಷ್ಠರಾಗಿ ನರಕವನ್ನು ಪಡೆಯುವುದಲ್ಲದೆ ಸಂಕರಜಾತಿ, ಹಂದಿ, ರಾಕ್ಷಸ, ಕತ್ತೆ, ಕುದುರೆ, ನರಿ, ಕೀಟ ಮುಂತಾದ ನೀಚಯೋನಿಗಳಲ್ಲಿ ಜನಿಸುವರು.

ತೇ ದೃಷ್ಟ್ವಾ ಶಶಿಭಾಸ್ಕರೌ ನಿಶಿ ದಿನೇ ಸ್ವಪ್ನೇऽಪಿ ನೋ ಕೇವಲಂ
ಪಶ್ಯಂತು ಶ್ರುತಿರುದ್ರಸೂಕ್ತಜಪತೋ ಮುಚ್ಯೇತ ತೇನಾದೃತಾಃ ।
ತತ್ಸಂಭಾಷಣತೋ ಭವೇದ್ಧಿ ನರಕಂ ನಿಸ್ತಾರವಾನಾಸ್ಥಿತಂ ।
ಯೇ ಭಸ್ಮಾದಿವಿಧಾರಣಂ ಹಿ ಪುರುಷಂ ನಿಂದಂತಿ ಮಂದಾ ಹಿ ತೇ ॥ ೪೭ ॥

ನ ತಾಂತ್ರಿಕಸ್ತ್ವಧಿಕೃತೋ ನೋರ್ಧ್ವಪುಂಡ್ರಧರೋ ಮುನೇ ।
ಸಂತಪ್ತಚಕ್ರಚಿಹ್ನೋऽತ್ರ ಶಿವಯಜ್ಞೇ ಬಹಿಷ್ಕೃತಃ । ॥ ೪೮ ॥

ತತ್ರೈತೇ ಬಹವೋ ಲೋಕಾ ಬೃಹಜ್ಜಾಬಾಲಚೋದಿತಾಃ ।
ತೇ ವಿಚಾರ್ಯಾಃ ಪ್ರಯತ್ನೇನ ತತೋ ಭಸ್ಮರತೋ ಭವೇತ್ ॥ ೪೯ ॥

ಯಚ್ಚಂದನೈಶ್ಚಂದನಕೇऽಪಿ ಮಿಶ್ರಂ
ಧಾರ್ಯಂ ಹಿ ಭಸ್ಮೈವ ತ್ರಿಪುಂಡ್ರಭಸ್ಮನಾ ।
ವಿಭೂತಿಭಾಲೋಪರಿ ಕಿಂಚನಾಪಿ
ಧಾರ್ಯಂ ಸದಾ ನೋ ಯದಿ ಸಂತಿ ಬುದ್ಧಯಃ ॥ ೫೦ ॥

---

೪೭. ಯಾರಿಗೆ ಹಗಲು ಸೂರ್ಯನೂ, ರಾತ್ರಿಯಲ್ಲಿ ಚಂದ್ರನೂ, ಕಾಣಿಸು ವುದಿಲ್ಲವೋ, ಅವರೂ, ಮತ್ತು ಸ್ವಪ್ನದಲ್ಲಿಯೂ ಸೂರ್ಯ ಚಂದ್ರರು ಯಾರಿಗೆ ಕಾಣಿಸುವುದಿಲ್ಲವೋ ಅವರೂ ಸಹ ರುದ್ರಸೂಕ್ತವನ್ನು ಪಾರಾಯಣಮಾಡಬೇಕು, ಜಪಿಸಬೇಕು. ಭಸ್ಮವನ್ನು ಧರಿಸುವರನ್ನು ನಿಂದಿಸುವವರು ತಿಳಿವಳಿಕೆಯಿಲ್ಲದವರು. ಅವರಿಗೆ ನರಕವುಂಟಾಗುವದು; ಅವರೊಡನೆ ಮಾತನಾಡಿದವರಿಗೂ ಸಹ ನರಕ ವುಂಟಾಗುವದು.

೪೮. ಶಿವಯಜ್ಞದಲ್ಲಿ ಭಸ್ಮತ್ರಿಪುಂಡ್ರಧಾರಿಯಲ್ಲದ ತಾಂತ್ರಿಕನಿಗೆ ಅಧಿಕಾರವಿಲ್ಲ. ಮೂರು ನಾಮಗಳನ್ನು ಧರಿಸುವವನಿಗೂ ಕಾಸಿದ ಚಕ್ರಚಿಹ್ನೆಯನ್ನು ಧರಿಸುವವನಿಗೂ ಸಹ ಈ ಶಿವಯಾಗದಲ್ಲಿ ಅಧಿಕಾರವಿಲ್ಲ.

೪೯. ಭಸ್ಮಧಾರಣದಲ್ಲಿ ಬೃಹಜ್ಜಾಬಾಲೋಪನಿಷತ್ತಿನಲ್ಲಿ ಅನೇಕ ನಿಯಮ ಗಳು ಹೇಳಲ್ಪಟ್ಟಿರುವವು. ಅವೆಲ್ಲವನ್ನೂ ಪ್ರಯತ್ನದಿಂದ ವಿಚಾರಿಸಿ ಅದಕ್ಕನುಸಾರ ವಾಗಿ ಭಸ್ಮವನ್ನು ಧರಿಸಬೇಕು.

೫೦. ಚಂದನವನ್ನು ಧರಿಸುವುದಾದರೂ ಭಸ್ಮವನ್ನು ಮಿಶ್ರಮಾಡಿಯೇ ಧರಿಸಬೇಕು. ವಿಭೂತಿಯನ್ನು ಧರಿಸಿದ ಹಣೆಯಮೇಲೆ ಎಂದರೆ ವಿಭೂತಿಯು ಮುಚ್ಚಿಹೋಗುವಂತೆ ಅದರ ಮೇಲೆ ಏನನ್ನೂ ಧರಿಸಬಾರದು.

ಸ್ತ್ರೀಭಿಸ್ತ್ರಿಪುಂಡ್ರಮಲಕಾವಧಿ ಧಾರಣೀಯಂ
ಭಸ್ಮ ದ್ವಿಜಾದಿಭಿರತೋ ವಿಧವಾಭಿರೇವಂ ।
ತದ್ವತ್ಸದಾಶ್ರಮವತಾಂ ವಿಶದಾ ವಿಭೂತಿ-
ರ್ಧಾರ್ಯರ್ಾಪವರ್ಗಫಲದಾ ಸಕಲಾಘಹಂತ್ರೀ ॥ ೫೧ ॥

ತ್ರಿಪುಂಡ್ರಂ ಕುರುತೇ ಯಸ್ತು ಭಸ್ಮನಾ ವಿಧಿಪೂರ್ವಕಂ ।
ಮಹಾಪಾತಕಸಂಘಾತೈರ್ಮುಚ್ಯತೇ ಚೋಪಪಾತಕೈಃ ॥ ೫೨ ॥

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ।
ಬ್ರಹ್ಮಕ್ಷತ್ರಾಶ್ಚ ವಿಟ್ಶೂದ್ರಾಸ್ತಥಾನ್ಯೇ ಪತಿತಾಧಮಾಃ ॥ ೫೩ ॥

ಉದ್ಧೂಲನಂ ತ್ರಿಪುಂಡ್ರಂ ಚ ಧೃತ್ವಾ ಶುದ್ಧಾ ಭವಂತಿ ಹಿ ।
ಭಸ್ಮನೋ ವಿಧಿನಾ ಸಮ್ಯಕ್ಪಾಪರಾಶಿಂ ವಿಹಾಯ ಚ ॥ ೫೪ ॥

ಭಸ್ಮಧಾರೀ ವಿಶೇಷೇಣ ಸ್ತ್ರೀಗೋಹತ್ಯಾದಿಪಾತಕೈಃ ।
ವೀರಹತ್ಯಾಶ್ವಹತ್ಯಾಭ್ಯಾಂ ಮುಚ್ಯತೇ ನಾತ್ರ ಸಂಶಯಃ ॥ ೫೫ ॥

---

೫೧. ಸುಮಂಗಲಿಸ್ತ್ರೀಯರು ಮುಂಗುರುಳುಗಳವರೆಗೆ ವಿಭೂತಿಯನ್ನು ಧರಿಸಬೇಕು. ವಿಧವೆಯರೂ ಸಹ ತ್ರಿಪುಂಡ್ರವನ್ನು ಧರಿಸಬೇಕು. ಆರೀತಿಯಾಗಿ ವಿಭೂತಿಯನ್ನು ಧರಿಸಿದರೆ ಐಶ್ವರ್ಯವೂ, ಮುಕ್ತಿಯೂ ಪಾಪನಾಶವೂ ಆಗುವದು.

೫೨. ವಿಧಿವತ್ತಾಗಿ ಭಸ್ಮತ್ರಿಪುಂಡ್ರವನ್ನು ಧರಿಸಿದರೆ ಮಹಾಪಾಪಗಳೂ ಉಪ ಪಾತಕಗಳೂ ಸಹ ನಾಶವಾಗುವವು.

೫೩-೫೪. ಬ್ರಹ್ಮಚಾರಿಗಳು, ಗೃಹಸ್ಥರು, ವಾನಪ್ರಸ್ಥರು, ಸನ್ಯಾಸಿಗಳು, ಬ್ರಾಹ್ಮಣಕ್ಷತ್ರಿಯ ವೈಶ್ಯಶೂದ್ರರು, ಪತಿತರು ಮತ್ತು ಅಧಮರು ಇವರೆಲ್ಲರೂ ಸಹ ಭಸ್ಮೋದ್ಧೂಲನ ತ್ರಿಪುಂಡ್ರಗಳನ್ನು ಧರಿಸಿದರೆ ಪಾಪಗಳನ್ನು ಕಳೆದುಕೊಂಡು ಪರಿ ಶುದ್ಧರಾಗುವರು.

೫೫. ವಿಶೇಷವಾಗಿ ಭಸ್ಮವನ್ನು ಧರಿಸುವವನು ಸ್ತ್ರೀಹತ್ಯೆ, ಗೋಹತ್ಯೆ, ವೀರ ಹತ್ಯೆ, ಅಶ್ವಹತ್ಯೆ ಇವುಗಳ ಪಾಪಗಳಿಂದ ಬಿಡಲ್ಪಡುವನು.

ಪರದ್ರವ್ಯಾಪಹರಣಂ ಪರದಾರಾಭಿಮರ್ಶನಂ ।
ಪರನಿಂದಾ ಪರಕ್ಷೇತ್ರಹರಣಂ ಪರಪೀಡನಂ ॥ ೫೬ ॥

ಸಸ್ಯಾರಾಮಾದಿಹರಣಂ ಗೃಹದಾಹಾದಿಕರ್ಮ ಚ ।
ಗೋಹಿರಣ್ಯಮಹಿಷ್ಯಾದಿತಿಲಕಂಬಲವಾಸಸಾಂ ॥ ೫೭ ॥

ಅನ್ನಧಾನ್ಯಜಲಾದೀನಾಂ ನೀಚೇಭ್ಯಶ್ಚ ಪರಿಗ್ರಹಃ ।
ದಶವೇಶ್ಯಾಮತಂಗೀಷು ವೃಷಲೀಷು ನಟೀಷು ಚ ॥ ೫೮ ॥

ರಜಸ್ವಲಾಸು ಕನ್ಯಾಸು ವಿಧವಾಸು ಚ ಮೈಥುನಂ ।
ಮಾಂಸಚರ್ಮರಸಾದೀನಾಂ ಲವಣಸ್ಯ ಚ ವಿಕ್ರಯಃ ॥ ೫೯ ॥

ಪೈಶುನ್ಯಂ ಕೂಟವಾದಶ್ಚ ಸಾಕ್ಷಿಮಿಥ್ಯಾಭಿಲಾಷಿಣಾಂ ।
ಏವಮಾದೀನ್ಯಸಂಖ್ಯಾನಿ ಪಾಪಾನಿ ವಿವಿಧಾನಿ ಚ ॥ ೬೦ ॥

ಸದ್ಯ ಏವ ವಿನಶ್ಯಂತಿ ತ್ರಿಪುಂಡ್ರಸ್ಯ ಚ ಧಾರಣಾತ್ ।
ಶಿವದ್ರವ್ಯಾಪಹರಣಂ ಶಿವನಿಂದಾ ಚ ಕುತ್ರಚಿತ್ ॥ ೬೧ ॥

---

೫೬-೬೦. ಪರರ ಧನವನ್ನು ಅಪಹರಿಸುವುದು, ಪರಸ್ತ್ರೀಸಂಗಮಾಡುವದು, ಪರರನ್ನು ನಿಂದಿಸುವದು, ಪರರ ಹೊಲಗದ್ದೆಗಳನ್ನು ಅಪಹರಿಸುವದು, ಪರರನ್ನು ಅಕಾರಣವಾಗಿ ಪೀಡಿಸುವಿಕೆ, ಪೈರು, ಉಪವನ ಮುಂತಾದುವುಗಳನ್ನು ಹಾಳುಮಾಡುವುದು, ಪರರಮನೆಗೆ ಬೆಂಕಿಯಿಡುವದು, ನೀಚರಿಂದ ಗೋದಾನ, ಸುವರ್ಣದಾನ, ಎಮ್ಮೆದಾನ, ಎಳ್ಳುದಾನ, ಕಂಬಳಿದಾನ, ಬಟ್ಟೆದಾನ ಮುಂತಾದುವುಗಳನ್ನು ತೆಗೆದುಕೊಳ್ಳುವದು ಮತ್ತು ನೀಚರಿಂದ ಅನ್ನ, ನೀರು ಮುಂತಾದುವುಗಳನ್ನು ಸೇವಿಸುವದು, ವಯಸ್ಸಾದಸೂಳೆ, ಚಂಡಾಲಸ್ತ್ರೀ, ಶೂದ್ರಸ್ತ್ರೀ, ನರ್ತಕಿಯರು, ರಜಸ್ವಲೆ, ಕನ್ಯೆ, ವಿಧವೆಯರು ಇವರಲ್ಲಿ ಸಂಭೋಗವನ್ನು ಮಾಡುವಿಕೆ, ಮಾಂಸ, ಚರ್ಮ, ರಕ್ತ, ಉಪ್ಪು ಮುಂತಾದುವುಗಳನ್ನು ಮಾರುವದು, ಚಾಡಿಹೇಳುವಿಕೆ, ಸುಳ್ಳುಸಾಕ್ಷಿ ಹೇಳುವದು, ಮೋಸವ್ಯವಹಾರ, ಮುಂತಾದ ಅನೇಕ ಎಣಿಸಲಾರದಷ್ಟು ಪಾಪಗಳು ಭಸ್ಮತ್ರಿಪುಂಡ್ರವನ್ನು ಧರಿಸಿದರೆ ತಕ್ಷಣದಲ್ಲಿಯೇ ನಾಶವಾಗುವವು.

೬೧. ಶಿವನಿಗಾಗಿ ನಿವೇದಿಸಿರುವ ಧನವನ್ನು ಅಪಹರಿಸುವದು, ಶಿವನ ಮತ್ತು ಶಿವಭಕ್ತರ ನಿಂದೆ ಇವುಗಳಿಗೆ ಮಾತ್ರ ಪ್ರಾಯಶ್ಚಿತ್ತವೇ ಇಲ್ಲ.

ನಿಂದಾ ಚ ಶಿವಭಕ್ತಾನಾಂ ಪ್ರಾಯಶ್ಚಿತ್ತೈರ್ನಶುದ್ಧ್ಯತಿ ।
ರುದ್ರಾಕ್ಷಂ ಯಸ್ಯ ಗಾತ್ರೇಷು ಲಲಾಟೇ ತು ತ್ರಿಪುಂಡ್ರಕಂ ॥ ೬೨ ॥

ಸ ಚಾಂಡಾಲೋಽಪಿ ಸಂಪೂಜ್ಯೋ ವರ್ಣವರ್ಣೋತ್ತಮೋತ್ತಮಃ ।
ಯಾನಿ ತೀರ್ಥಾನಿ ಲೋಕೇಽಸ್ಮಿನ್ ಗಂಗಾದ್ಯಾಃ ಸರಿತಶ್ಚ ಯಾಃ ॥ ೬೩ ॥

ಸ್ನಾತೋ ಭವತಿ ಸರ್ವತ್ರ ಲಲಾಟೇ ಯಸ್ತ್ರಿಪುಂಡ್ರಕಂ ।
ಸಪ್ತಕೋಟಿಮಹಾಮಂತ್ರಾಃ ಪಂಚಾಕ್ಷರಪುರಸ್ಸರಾಃ ॥ ೬೪ ॥

ತಥಾನ್ಯೇ ಕೋಟಿಶೋ ಮಂತ್ರಾಃ ಶೈವಕೈವಲ್ಯಹೇತವಃ ।
ಅನ್ಯೇ ಮಂತ್ರಾಶ್ಚ ದೇವಾನಾಂ ಸರ್ವಸೌಖ್ಯಕರಾ ಮುನೇ ॥ ೬೫ ॥

ತೇ ಸರ್ವೇ ತಸ್ಯ ವಶ್ಯಾಃ ಸ್ಯುರ್ಯೋ ಬಿಭರ್ತಿ ತ್ರಿಪುಂಡ್ರಕಂ ।
ಸಹಸ್ರಂ ಪೂರ್ವಜಾತಾನಾಂ ಸಹಸ್ರಂ ಜನಯಿಷ್ಯತಾಂ ॥ ೬೬ ॥

---

೬೨. ಯಾವನು ಶರೀರದಲ್ಲಿ ರುದ್ರಾಕ್ಷವನ್ನೂ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ ಧರಿಸಿರುವನೋ ಅವನು ಹೊಲೆಯನಾದರೂ ಪೂಜ್ಯನು, ಭಸ್ಮರುದ್ರಾಕ್ಷಗಳನ್ನು ಧರಿಸದಿರುವ ಮಿಕ್ಕ ವರ್ಣದವರಿಗಿಂತಲೂ ಅತ್ಯುತ್ತಮನು.

೬೩. ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿದರೆ ಲೋಕದಲ್ಲಿರುವ ಎಲ್ಲಾ ತೀರ್ಥಗಳಲ್ಲೂ, ಗಂಗಾದಿ ಪುಣ್ಯನದಿಗಳಲ್ಲೂ ಸ್ನಾನಮಾಡಿದ ಪುಣ್ಯವು ಲಭಿಸುವದು.

೬೪. ಶಿವಪಂಚಾಕ್ಷರ ಮೊದಲುಗೊಂಡು ಏಳುಕೋಟಿ ಮಹಾಮಂತ್ರಗಳೂ ಮಿಕ್ಕ ಕೋಟಿ ಕೋಟಿಯಾಗಿರುವ ಮಂತ್ರಗಳೂ ಸಹ ಶಿವನೊಡನೆ ಐಕ್ಯ (ಮುಕ್ತಿಯ) ವನ್ನುಂಟುಮಾಡುವವು.

೬೫. ಮಿಕ್ಕ ದೇವತೆಗಳ ಮಂತ್ರಗಳೂ ಸಹ ಸಕಲ ಇಷ್ಟಾರ್ಥಗಳನ್ನುಂಟುಮಾಡುವವು. ಮೇಲೆ ಹೇಳಿದ ಈ ಎಲ್ಲಾ ಮಂತ್ರಗಳೂ ಸಹ ಭಸ್ಮತ್ರಿಪುಂಡ್ರವನ್ನು ಧರಿಸುವವನಿಗೆ ಮಾತ್ರ ಅಧೀನವಾಗುವವು.

೬೬. ತ್ರಿಪುಂಡ್ರವನ್ನು ಧರಿಸುವವನು ತನ್ನ ವಂಶದಲ್ಲಿ ಹಿಂದೆ ಜನಿಸಿದ ಸಾವಿರ ಬಂಧುಗಳನ್ನೂ ಮುಂದೆ ಜನಿಸುವ ಸಾವಿರ ಬಂಧುಗಳನ್ನೂ ಉದ್ಧರಿಸುವನು.

ಸ್ವವಂಶಜಾನಾಂ ಜ್ಞಾತೀನಾಮುದ್ಧರೇದ್ಯಸ್ತ್ರಿಪುಂಡ್ರಕೃತ್ ।
ಇಹ ಭುಕ್ತ್ವಾಖಿಲಾನ್ ಭೋಗಾನ್ ದೀರ್ಘಾಯುರ್ವ್ಯಾಧಿವರ್ಜಿತಃ ॥ ೬೭ ॥

ಜೀವಿತಾಂತೇ ಚ ಮರಣಂ ಸುಖೇನೈವ ಪ್ರಪದ್ಯತೇ ।
ಅಷ್ಟೈಶ್ವರ್ಯಗುಣೋಪೇತಂ ಪ್ರಾಪ್ಯ ದಿವ್ಯವಪುಃ ಶಿವಂ ॥ ೬೮ ॥

ದಿವ್ಯಂ ವಿಮಾನಮಾರುಹ್ಯ ದಿವ್ಯತ್ರಿದಶಸೇವಿತಂ ।
ವಿದ್ಯಾಧರಾಣಾಂ ಸರ್ವೇಷಾಂ ಗಂಧರ್ವಾಣಾಂ ಮಹೌಜಸಾಂ ॥ ೬೯ ॥

ಇಂದ್ರಾದಿಲೋಕಪಾಲಾನಾಂ ಲೋಕೇಷು ಚ ಯಥಾಕ್ರಮಂ ।
ಭುಕ್ತ್ವಾ ಭೋಗಾನ್ ಸುವಿಪುಲಾನ್ ಪ್ರಜೇಶಾನಾಂ ಪದೇಷು ಚ ॥ ೭೦ ॥

ಬ್ರಹ್ಮಣಃ ಪದಮಾಸಾದ್ಯ ತತ್ರ ಕನ್ಯಾಶತಂ ರಮೇತ್ ।
ತತ್ರ ಬ್ರಹ್ಮಾಯುಷೋ ಮಾನಂ ಭುಕ್ತ್ವಾ ಭೋಗಾನನೇಕಶಃ ॥ ೭೧ ॥

---

೬೭. ಮತ್ತು ಭಸ್ಮವನ್ನು ಧರಿಸುವ ಶಿವಭಕ್ತನು ಇಹಜನ್ಮದಲ್ಲಿ ರೋಗವಿಲ್ಲದವನಾಗಿ ಬಹಳ ಕಾಲ ಬದುಕಿ, ಬೇಕಾದಂತಹ ಭೋಗಗಳನ್ನನುಭವಿಸಿ ಕೊನೆಯಲ್ಲಿ ಸುಖಮರಣವನ್ನು ಪಡೆಯುವನು.

೬೮-೭೦. ಮರಣಾನಂತರ ಆ ಭಸ್ಮಧಾರೀ ಶಿವಭಕ್ತನು, ಅಣಿಮಾದ್ಯಷ್ಟೈಶ್ವರ್ಯಯುಕ್ತನಾಗಿ ದಿವ್ಯವಾದ ದೇವಶರೀರವನ್ನು ಪಡೆದು, ದೇವತೆಗಳು ಉಪಯೋಗಿಸುವಂತಹ ದಿವ್ಯವಾದ ವಿಮಾನವನ್ನೇರಿ, ಮಹಾಮಹಿಮರಾದ ವಿದ್ಯಾಧರರು ಗಂಧರ್ವರು, ಇಂದ್ರನೇ ಮೊದಲಾದ ದಿಕ್ಪಾಲರು, ಇವರುಗಳ ದಿವ್ಯಲೋಕದಲ್ಲಿ ಕ್ರಮವಾಗಿ ಅನಂತವಾದ ಭೋಗಗಳನ್ನು ಅನುಭವಿಸಿ, ಬಳಿಕ ಪ್ರಜಾಪತಿಗಳ ಸ್ಥಾನಗಳಲ್ಲಿಯೂ ಭೋಗವನ್ನನುಭವಿಸಿ ಆನಂತರ ಬ್ರಹ್ಮಲೋಕವನ್ನು ಪಡೆದು ಅಲ್ಲಿ ಅನೇಕ ಸುರಸುಂದರಿಯರೊಡನೆ ವಿಹರಿಸುವನು.

೭೧. ಆ ಬ್ರಹ್ಮಲೋಕದಲ್ಲಿ ಒಬ್ಬ ಬ್ರಹ್ಮನ ಆಯುಸ್ಸು ಪರ್ಯಂತವಾಗಿದ್ದು ಅನೇಕ ಭೋಗಗಳನ್ನನುಭವಿಸಿ, ಬಳಿಕ ವಿಷ್ಣುಲೋಕದಲ್ಲಿ ನೂರುಜನ ಬ್ರಹ್ಮರು ಆಗಿ ಹೋಗುವವರೆಗೆ ಭೋಗವನ್ನು ಅನುಭವಿಸುವನು.

ವಿಷ್ಣೋರ್ಲೋಕೇ ಲಭೇದ್ಭೋಗಂ ಯಾವದ್ಬ್ರಹ್ಮಶತಾತ್ಯಯಃ ।
ಶಿವಲೋಕಂ ತತಃ ಪ್ರಾಪ್ಯ ಲಬ್ಧ್ವೇಷ್ಟಂ ಕಾಮಮುಕ್ಷಯಂ ॥ ೭೨ ॥

ಶಿವಸಾಯುಜ್ಯಮಾಪ್ನೋತಿ ಸಂಶಯೋ ನಾತ್ರ ಜಾಯತೇ ।
ಸರ್ವೋಪನಿಷದಾಂ ಸಾರಂ ಸಮಾಲೋಕ್ಯ ಮುಹುರ್ಮುಹುಃ ॥ ೭೩ ॥

ಇದಮೇವ ಹಿ ನಿರ್ಣೀತಂ ಪರಂ ಶ್ರೇಯಸ್ತ್ರಿಪುಂಡ್ರಕಂ ।
ವಿಭೂತಿಂ ನಿಂದತೇ ಯೋ ವೈ ಬ್ರಾಹ್ಮಣಃ ಸೋಽನ್ಯಜಾತಕಃ ॥ ೭೪ ॥

ಪ್ರಯಾತಿ ನರಕೇ ಘೋರೇ ಯಾವದ್ಬ್ರಹ್ಮಾ ಚತುರ್ಮುಖಃ ।
ಶ್ರಾದ್ಧೇ ಯಜ್ಞೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ ॥ ೭೫ ॥

ಧೃತತ್ರಿಪುಂಡ್ರಃ ಪೂತಾತ್ಮಾ ಮೃತ್ಯುಂ ಜಯತಿ ಮಾನವಃ ।
ಜಲಸ್ನಾನಂ ಮಲತ್ಯಾಗೇ ಭಸ್ಮಸ್ನಾನಂ ಸದಾ ಶುಚಿ ॥ ೭೬ ॥

---

೭೨. ಆಮೇಲೆ ಶಿವಲೋಕವನ್ನು ಪಡೆದು ಅಲ್ಲಿ ಬೇಕಾದಂತಹ ಅನಂತ ಭೋಗಗಳನ್ನು ಅನುಭವಿಸಿ, ಕೊನೆಯಲ್ಲಿ ಶಿವಸಾಯುಜ್ಯವನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ.

೭೩. ಋಷಿಗಳು ಸಕಲ ಉಪನಿಷತ್ತುಗಳ ಸಾರವನ್ನು ಪುನಃ ಪುನಃ ವಿಮರ್ಶಿಸಿ ಭಸ್ಮತ್ರಿಪುಂಡ್ರಧಾರಣೆಯೇ ಪರಮ ಶ್ರೇಯಸ್ಕರವಾದುದೆಂದು ನಿರ್ಣಯಿಸಿರುವರು.

೭೪. ವಿಭೂತಿಯನ್ನು ನಿಂದಿಸುವ ಬ್ರಾಹ್ಮಣನು ವ್ಯಭಿಚಾರದಿಂದ ಜನಿಸಿದವನೆಂದು ತಿಳಿಯಬೇಕು. ಅವನು ಚತುರ್ಮುಖಬ್ರಹ್ಮನ ಆಯುಸ್ಸಿನ ಪರ್ಯಂತ ಘೋರವಾದ ನರಕದಲ್ಲಿ ದುಃಖವನ್ನು ಅನುಭವಿಸುವನು.

೭೫. ಶ್ರಾದ್ಧ, ಯಜ್ಞ, ಜಪ, ಹೋಮ, ವೈಶ್ವದೇವ, ದೇವಾರ್ಚನೆ ಇವುಗಳಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿದವನು ಪರಿಶುದ್ಧನಾಗಿ ಮೃತ್ಯುವನ್ನು ಜಯಿಸುವನು.

೭೬. ಜಲಸ್ನಾನವು ಕೊಳೆಯನ್ನು ಮಾತ್ರ ಹೋಗಲಾಡಿಸುವುದು, ಭಸ್ಮಸ್ನಾನವು ಸದಾ ಶುಚಿತ್ವವನ್ನುಂಟುಮಾಡುವದು, ಮಂತ್ರಸ್ನಾನವು ಪಾಪವನ್ನು ಹೋಗಲಾಡಿಸುವದು, ಶಿವಜ್ಞಾನಸ್ನಾನದಿಂದ ಶಿವಪದವು ಲಭಿಸುವದು.

ಮಂತ್ರಸ್ನಾನಂ ಹರೇತ್ಪಾಪಂ ಜ್ಞಾನಸ್ನಾನೇ ಪರಂ ಪದಂ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ॥ ೭೭ ॥

ತತ್ಸರ್ವಂ ಫಲಮಾಪ್ನೋತಿ ಭಸ್ಮಸ್ನಾನಕರೋ ಜನಃ ।
ಭಸ್ಮಸ್ನಾನಂ ಪರಂ ತೀರ್ಥಂ ಗಂಗಾಸ್ನಾನಂ ದಿನೇ ದಿನೇ ॥ ೭೮ ॥

ಭಸ್ಮರೂಪೀ ಶಿವಃ ಸಾಕ್ಷಾದ್ಭಸ್ಮ ತ್ರೈಲೋಕ್ಯಪಾವನಂ ।
ನ ತದೂನಂ ನ ತದ್ಧ್ಯಾನಂ ನ ತದ್ದಾನಂ ಜಪೋ ನ ಸಃ ॥ ೭೯ ॥

ತ್ರಿಪುಂಡ್ರೇನ ವಿನಾ ಯೇನ ವಿಪ್ರೇಣ ಯದನುಷ್ಠಿತಂ ।
ವಾನಪ್ರಸ್ಥಸ್ಯ ಕನ್ಯಾನಾಂ ದೀಕ್ಷಹೀನನೃಣಾಂ ತಥಾ ॥ ೮೦ ॥

ಮಧ್ಯಾಹ್ನಾತ್ಪ್ರಾಗ್ಜಲೈರ್ಯುಕ್ತಂ ಪರತೋ ಜಲವರ್ಜಿತಂ ।
ಏವಂ ತ್ರಿಪುಂಡ್ರಂ ಯಃ ಕುರ್ಯಾನ್ನಿತ್ಯಂ ನಿಯತಮಾನಸಃ ॥ ೮೧ ॥

---

೭೭. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದರೆ ಯಾವ ಯಾವ ಪುಣ್ಯ ಮತ್ತು ಫಲಗಳು ಬರುವುವೋ ಅವೆಲ್ಲವೂ ಭಸ್ಮಸ್ನಾನಮಾಡಿದ ಮಾತ್ರಕ್ಕೆ ಲಭಿಸುವವು.

೭೮. ಭಸ್ಮಸ್ನಾನವು ಉತ್ಕೃಷ್ಟವಾದ ತೀರ್ಥವು. ನಿತ್ಯವೂ ಲಭಿಸುವಂತಹ ಗಂಗಾಸ್ನಾನವು. ಭಸ್ಮವು ಶಿವಸ್ವರೂಪವಾದುದು. ಮತ್ತು ಮೂರು ಲೋಕಗಳನ್ನೂ ಪವಿತ್ರಗೊಳಿಸುವದು.

೭೯. ಭಸ್ಮವನ್ನು ಧರಿಸದೆ ಬ್ರಾಹ್ಮಣನು ಮಾಡಿದ ಧ್ಯಾನ, ದಾನ ಮತ್ತು ಜಪಗಳು ನ್ಯೂನಾತಿರಿಕ್ತದೋಷಗಳಿಂದ ಕೂಡಿ ವ್ಯರ್ಥವಾಗುವವು.

೮೦. ವಾನಪ್ರಸ್ಥರು, ಕನ್ಯೆಯರು, ದೀಕ್ಷಿತರಲ್ಲದ ಮಾನವರು ಇವರೆಲ್ಲರೂ ಮಧ್ಯಾಹ್ನದ ಪರ್ಯಂತ ನೀರಿನಿಂದ ಕಲಿಸಿ ಭಸ್ಮವನ್ನು ಹಚ್ಚಬೇಕು. ಮಧ್ಯಾಹ್ನದ ನಂತರ ನೀರಿಲ್ಲದೆಯೇ ಹಚ್ಚಿಕೊಳ್ಳಬೇಕು.

೮೧. ಈ ರೀತಿಯಾಗಿ ನಿತ್ಯವೂ ಭಸ್ಮತ್ರಿಪುಂಡ್ರವನ್ನು ಸಾವಧಾನತೆಯಿಂದ ಧರಿಸುವ ಶಿವಭಕ್ತನು ಭೋಗವನ್ನೂ, ಮುಕ್ತಿಯನ್ನೂ ಪಡೆಯುವನು.

ಶಿವಭಕ್ತೈಃ ಸ ವಿಜ್ಞೇಯೋ ಭುಕ್ತಿಂ ಮುಕ್ತಿಂ ಚ ವಿಂದತಿ ।
ಯಸ್ಯಾಂಗೇ ನೈವ ರುದ್ರಾಕ್ಷ ಏಕೋಽಪಿ ಬಹುಪುಣ್ಯದಃ ॥ ೮೨ ॥

ತಸ್ಯ ಜನ್ಮ ನಿರರ್ಥಂ ಸ್ಯಾತ್ರಿಪುಂಡ್ರರಹಿತೋ ಯದಿ ।
ಏವಂ ತ್ರಿಪುಂಡ್ರಮಾಹಾತ್ಮ್ಯಂ ಸಮಾಸಾತ್ಕಥಿತಂ ಮಯಾ ॥ ೮೩ ॥

ರಹಸ್ಯಂ ಸರ್ವಜಂತೂನಾಂ ಗೋಪನೀಯಮಿದಂ ತ್ವಯಾ ।
ತಿಸ್ರೋ ರೇಖಾ ಭವಂತ್ಯೇವ ಸ್ಥಾನೇಷು ಮುನಿಪುಂಗವಾಃ ॥ ೮೪ ॥

ಲಲಾಟಾದಿಷು ಸರ್ವೇಷು ಯಥೋಕ್ತೇಷು ಬುಧೈರ್ಮುನೇ ।
ಭ್ರುವೋರ್ಮಧ್ಯಂ ಸಮಾರಭ್ಯ ಯಾವದಂತೋ ಭವೇದ್ಭ್ರುವೋಃ ॥ ೮೫ ॥

ತಾವತ್ಪ್ರಮಾಣಂ ಸಂಧಾರ್ಯಂ ಲಲಾಟೇ ಚ ತ್ರಿಪುಂಡ್ರಕಂ ।
ಮಧ್ಯಮಾನಾಮಿಕಾಂಗುಲ್ಯಾ ಮಧ್ಯೇ ತು ಪ್ರತಿಲೋಮತಃ ॥ ೮೬ ॥

---

೮೨. ಯಾವನ ಶರೀರದಲ್ಲಿ ಪುಣ್ಯಪ್ರದವಾದ ರುದ್ರಾಕ್ಷಿಯು ಒಂದೂ ಇಲ್ಲವೋ ಮತ್ತು ಭಸ್ಮತ್ರಿಪುಂಡ್ರವು ಇರುವುದಿಲ್ಲವೋ ಅಂತಹವನ ಜನ್ಮವು ವ್ಯರ್ಥವಾದುದು.

೮೩. ಎಲೈ ಮುನಿಗಳೇ! ಈ ರೀತಿಯಾಗಿ ಭಸ್ಮಮಾಹಾತ್ಮ್ಯವನ್ನು ಸಂಪೂರ್ಣವಾಗಿ ನಿಮಗೆ ಹೇಳಿರುವೆನು. ಅತಿ ರಹಸ್ಯವಾದ ಈ ವಿಷಯವನ್ನು ಯಾವ ಪ್ರಾಣಿಗಳಿಗೂ ಬಹಿರಂಗಪಡಿಸದೆ ನೀವು ಗೋಪ್ಯವಾಗಿರಿಸಬೇಕು.

೮೪. ಹಣೆ ಮುಂತಾದ ಹಿಂದೆ ಹೇಳಿದ ಸ್ಥಾನಗಳಲ್ಲಿ ಭಸ್ಮವನ್ನು ಅಡ್ಡಲಾಗಿ ಮೂರು ಮೂರು ಗೆರೆಗಳಾಗಿ ಹಚ್ಚಿಕೊಳ್ಳಬೇಕು ಎಂದು ತಿಳಿದವರು ಹೇಳಿರುವರು.

೮೫. ಹಣೆಯಲ್ಲಿ ಹುಬ್ಬಿನ ನಡುವನ್ನಾರಂಭಿಸಿ ಹುಬ್ಬಿನ ಕೊನೆಯವರೆಗೆ ಮೂರುಗೆರೆಗಳಾಗಿ ತ್ರಿಪುಂಡ್ರಭಸ್ಮವನ್ನು ಧರಿಸಬೇಕು.

೮೬. ಮಧ್ಯಮ ಮತ್ತು ಅನಾಮಿಕ ಈ ಬೆರಳುಗಳಿಂದಲೂ ಮಧ್ಯದಲ್ಲಿ ಹೆಬ್ಬೆರಳಿನಿಂದಲೂ ಅಡ್ಡವಾಗಿ ಮಾಡುವ ಮೂರು ಭಸ್ಮದ ಗೆರೆಗಳಿಗೆ ತ್ರಿಪುಂಡ್ರವೆಂದು ಹೆಸರು.

ಅಂಗುಷ್ಠೇನ ಕೃತಾ ರೇಖಾ ತ್ರಿಪುಂಡ್ರಾಖ್ಯಾಭಿಧೀಯತೇ ।
ಮಧ್ಯೇಂಗುಲಿಭಿರಾದಾಯ ತಿಸೃಭಿರ್ಭಸ್ಮ ಯತ್ನತಃ ॥ ೮೭ ॥

ತ್ರಿಪುಂಡ್ರಂ ಧಾರಯೇದ್ಭಕ್ತ್ಯಾ ಭುಕ್ತಿಮುಕ್ತಿಪ್ರದಂ ಪರಂ ।
ತಿಸೃಣಾಮಪಿ ರೇಖಾನಾಂ ಪ್ರತ್ಯೇಕಂ ನವದೇವತಾಃ ॥ ೮೮ ॥

ಸರ್ವತ್ರಾಂಗೇಷು ತಾ ವಕ್ಷ್ಯೇ ಸಾವಧಾನತಯಾ ಶೃಣು ।
ಅಕಾರೋ ಗ್ರಾರ್ಹಪತ್ಯಾಗ್ನಿರ್ಭೂರ್ಧರ್ಮಶ್ಚ ರಜೋಗುಣಃ ॥ ೮೯ ॥

ಋಗ್ವೇದಶ್ಚ ಕ್ರಿಯಾಶಕ್ತಿಃ ಪ್ರಾತಸ್ಸವನಮೇವ ಚ ।
ಮಹಾದೇವಶ್ಚ ರೇಖಾಯಾ ಪ್ರಥಮಾಯಾಶ್ಚ ದೇವತಾ ॥ ೯೦ ॥

ವಿಜ್ಞೇಯಾ ಮುನಿಶಾರ್ದೂಲಾಃ ಶಿವದೀಕ್ಷಾಪರಾಯಣೈಃ ।
ಉಕಾರೋ ದಕ್ಷಿಣಾಗ್ನಿಶ್ಚ ನಭಸ್ತತ್ತ್ವಂ ಯಜುಸ್ತಥಾ ॥ ೯೧ ॥

ಮಾಧ್ಯಂದಿನಂ ಚ ಸವನಮಿಚ್ಛಾಶಕ್ತ್ಯಂತರಾತ್ಮಕೌ ।
ಮಹೇಶ್ವರಶ್ಚ ರೇಖಾಯಾ ದ್ವಿತೀಯಾಯಾಶ್ಚ ದೇವತಾ ॥ ೯೨ ॥

---

೮೭. ಹಿಂದೆ ಹೇಳಿದ ಮೂರು ಬೆರಳುಗಳಿಂದ ಭಸ್ಮವನ್ನು ತೆಗೆದುಕೊಂಡು ಹಣೆಯ ಮಧ್ಯದಲ್ಲಿ ಭೋಗ ಮತ್ತು ಮುಕ್ತಿಗಳನ್ನುಂಟುಮಾಡುವಂತಹ ತ್ರಿಪುಂಡ್ರವನ್ನು ರಚಿಸಬೇಕು.

೮೮. ಭಸ್ಮದ ಮೂರು ರೇಖೆಗಳಿಗೆ ಪ್ರತ್ಯೇಕವಾಗಿ ಒಂಭತ್ತು ಅಂಗದೇವತೆಗಳಿರುವರು. ಅವರನ್ನು ಹೇಳುವೆನು ಸಾವಧಾನವಾಗಿ ಕೇಳಿರಿ.

೮೯-೯೦. ಓಂಕಾರದಲ್ಲಿನ ಅಕಾರ, ಗಾರ್ಹಪತ್ಯಾಗ್ನಿ, ಭೂಮಿ, ಧರ್ಮ, ರಜೋಗುಣ, ಋಗ್ವೇದ ಕ್ರಿಯಾಶಕ್ತಿ, ಯಜ್ಞದಲ್ಲಿನ ಪ್ರಾತಸ್ಸವನ, ಮಹಾದೇವ ಇವರುಗಳು ಮೊದಲನೆಯ ರೇಖೆಯ ದೇವತೆಗಳು ಎಲೈ ಮುನಿಶ್ರೇಷ್ಠರೇ! ಶಿವದೀಕ್ಷಾನಿರತರಾಗಿರುವರು ಹೀಗೆಂದು ತಿಳಿಯಬೇಕು.

೯೧-೯೨. ಓಂಕಾರದಲ್ಲಿನ ಉಕಾರ, ದಕ್ಷಿಣಾಗ್ನಿ ಆಕಾಶತತ್ವ, ಯಜುರ್ವೇದ, ಮಧ್ಯಾಹ್ನದ ಸವನ, ಇಚ್ಛಾಶಕ್ತಿ ಮತ್ತು ಅಂತರಾತ್ಮರು ಮಹೇಶ್ವರ ಇವರುಗಳು ಎರಡನೆಯ ರೇಖೆಯ ದೇವತೆಗಳು ಎಂದು ಶಿವಭಕ್ತರು ತಿಳಿದುಕೊಳ್ಳಬೇಕು.

ವಿಜ್ಞೇಯಾ ಮುನಿಶಾರ್ದೂಲ ಶಿವದೀಕ್ಷಾಪರಾಯಣೈಃ ।
ಮಕಾರಾಹವನೀಯೌ ಚ ಪರಮಾತ್ಮಾ ತಮೋದಿವೌ ॥ ೯೩ ॥

ಜ್ಞಾನಶಕ್ತಿಃ ಸಾಮವೇದಸ್ತೃತೀಯಂ ಸವನಂ ತಥಾ ।
ಶಿವಶ್ಚೈವ ಚ ರೇಖಾಯಾಸ್ತೃತೀಯಾಯಾಶ್ಚ ದೇವತಾ ॥ ೯೪ ॥

ವಿಜ್ಞೇಯಾ ಮುನಿಶಾರ್ದೂಲ ಶಿವವ್ರತಪರಾಯಣೈಃ ।
ಏವಂ ನಿತ್ಯಂ ನಮಸ್ಕೃತ್ಯ ಸದ್ಭಕ್ತ್ಯಾ ಸ್ಥಾನದೇವತಾಃ ॥ ೯೫ ॥

ತ್ರಿಪುಂಡ್ರಂ ಧಾರಯೇಚ್ಛುದ್ಧೌ ಭುಕ್ತಿಂ ಮುಕ್ತಿಂ ಚ ವಿಂದತಿ ।
ಇತ್ಯುಕ್ತಾಃ ಸ್ಥಾನದೇವಾಶ್ಚ ಸರ್ವಾಂಗೇಷು ಮುನೀಶ್ವರಾಃ ॥ ೯೬ ॥

ತೇಷಾಂ ಸಂಬಂಧಿನೋ ಭಕ್ತ್ಯಾ ಸ್ಥಾನಾನಿ ಶೃಣು ಸಾಂಪ್ರತಂ ।
ದ್ವಾತ್ರಿಂಶತ್ಸ್ಥಾನಕೇ ವಾಥ ಷೋಡಶಸ್ಥಾನಕೇಽಪಿ ಚ ॥ ೯೭ ॥

ಅಷ್ಟಸ್ಥಾನೇ ತಥಾ ಚೈವ ಪಂಚಸ್ಥಾನೇಽಪಿ ವಾ ನ್ಯಸೇತ್ ।
ಉತ್ತಮಾಂಗೇ ಲಲಾಟೇ ಚ ಕರ್ಣಯೋರ್ನೇತ್ರಯೋಸ್ತಥಾ ॥ ೯೮ ॥

---

೯೩-೯೪. ಓಂಕಾರದಲ್ಲಿನ ಮಕಾರ, ಆಹವನೀಯಾಗ್ನಿ, ಪರಮಾತ್ಮ, ತಮೋ ಗುಣ, ಸ್ವರ್ಗಲೋಕ, ಜ್ಞಾನಶಕ್ತಿ, ಸಾಮವೇದ, ಯಜ್ಞದ ಮೂರನೆಯ ಸವನ, ಶಿವ ಇವರುಗಳು ಮೂರನೆಯ ರೇಖೆಯ ದೇವತೆಗಳು ಎಂದು ಶಿವವ್ರತನಿಷ್ಠರು ತಿಳಿದುಕೊಳ್ಳಬೇಕು.

೯೫. ಈರೀತಿಯಾಗಿ ಆಯಾಯ ಸ್ಥಾನದೇವತೆಗಳನ್ನು ಒಳ್ಳೇ ಭಕ್ತಿಯಿಂದ ನಮಸ್ಕರಿಸಿ ತ್ರಿಪುಂಡ್ರವನ್ನು ಧರಿಸಿದರೆ ಪರಿಶುದ್ಧನಾಗಿ ಭೋಗವನ್ನೂ ಮುಕ್ತಿಯನ್ನೂ ಪಡೆಯುವನು.

೯೬. ಎಲೈ ಮುನಿಶ್ರೇಷ್ಠರೇ! ಹೀಗೆ ಸ್ಥಾನದೇವತೆಗಳನ್ನು ಹೇಳಿರುವೆನು. ಈಗ ಆ ದೇವತೆಗಳ ಸಂಬಂಧವಾದ ಸ್ಥಾನಗಳನ್ನು ಹೇಳುವೆನು ಕೇಳಿರಿ.

೯೭. ಮೂವತ್ತೆರಡು ಸ್ಥಾನಗಳಲ್ಲಿ ಇಲ್ಲವೇ ಹದಿನಾರು ಸ್ಥಾನಗಳಲ್ಲಿ ಅಥವಾ ಎಂಟು ಸ್ಥಾನಗಳಲ್ಲಿ ಅಥವಾ ಐದು ಸ್ಥಾನಗಳಲ್ಲಿಯಾದರೂ ಭಸ್ಮವನ್ನು ಧರಿಸಬೇಕು.

೯೮-೧೦೦. ಶಿರಸ್ಸು, ಹಣೆ, ಕಿವಿಗಳು, ಕಣ್ಣುಗಳು, ಮೂಗು, ಮುಖ, ಬಾಯಿ) ಕತ್ತು, ಕೈಗಳು, ಕೂರ್ಪರ (ಕೈಗಳ ಮಧ್ಯಸಂಧಿಗಳ ಭಾಗ) ಮಣಿಕಟ್ಟು,)

ನಾಸಾವಕ್ತ್ರಗಲೇಷ್ವೇವಂ ಹಸ್ತದ್ವಯು ಅತಃ ಪರಂ ।
ಕೂರ್ಪರೇ ಮಣಿಬಂಧೇ ಚ ಹೃದಯೇ ಪಾರ್ಶ್ವಯೋರ್ದ್ವಯೋಃ ॥ ೯೯ ॥

ನಾಭೌ ಮುಷ್ಕದ್ವಯೇ ಚೈವಮೂರ್ವೋರ್ಗುಲ್ಫೇ ಚ ಜಾನುನಿ ।
ಜಂಘಾದ್ವಯೇ ಪದದ್ವಂದ್ವೇ ದ್ವಾತ್ರಿಂಶತ್ಸ್ಥಾನಮುತ್ತಮಂ ॥ ೧೦೦ ॥

ಅಗ್ನ್ಯಬ್ಭೂಛಾಯುದಿಗ್ದೇಶದಿಕ್ಪಾಲಾನ್ ವಸುಭಿಃ ಸಹ ।
ಧರಾ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಿಲೋಽನಲಃ ॥ ೧೦೧ ॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟ ಪ್ರಕೀರ್ತಿತಾಃ ।
ಏತೇಷಾಂ ನಾಮಮಾತ್ರೇಣ ತ್ರಿಪುಂಡ್ರಂ ಧಾರಯೇದ್ಬುಧಃ ॥ ೧೦೨ ॥

ಶೀರ್ಷಕೇ ಚ ಲಲಾಟೇ ಚ ಕಂಠೇ ಚಾಂಸದ್ವಯೇ ಭುಜೇ ।
ಕೂರ್ಪರೇ ಮಣಿಬಂಧೇ ಚ ಹೃದಯೇ ನಾಭಿಪಾರ್ಶ್ವಕೇ ॥ ೧೦೩ ॥

ಪೃಷ್ಠೇ ಚೈವಂ ಪ್ರತಿಷ್ಠಾಯ ಯಜೇತ್ತತ್ರಾಶ್ವಿದೇವತೇ ।
ಕುರ್ಯಾದ್ವಾ ಷೋಡಶಸ್ಥಾನೇ ತ್ರಿಪುಂಡ್ರಂ ತು ಸಮಾಹಿತಃ ॥ ೧೦೪ ॥

---

ಹೃದಯ, ಎರಡು ಪಕ್ಕಗಳು, ನಾಭಿ, ಮುಷ್ಕಗಳೆರಡು, ತೊಡೆಗಳು, ಕಾಲುಗಂಟು, ಮೊಳಕಾಲು, ಜಂಘೆ, ಕಾಲುಗಳು, ಈ ಮೂವತ್ತೆರಡೂ ಭಸ್ಮವನ್ನು ಧರಿಸುವ ಸ್ಥಾನಗಳು.

೧೦೧-೧೦೨. ಅಗ್ನಿ, ಜಲ, ಭೂಮಿ, ವಾಯು, ದಿಕ್ಕು, ದಿಕ್ಪಾಲಕರು, ಮತ್ತು ಅಷ್ಟವಸುಗಳ ಹೆಸರಿನಿಂದ ಭಸ್ಮವನ್ನು ಧರಿಸಬೇಕು. ಧರಾ, ಧ್ರುವ, ಸೋಮ, ಜಲಗಳು, ಅನಿಲ (ವಾಯು) ಅನಲ (ಅಗ್ನಿ) ಪ್ರತ್ಯೂಷ, ಪ್ರಭಾಸ ಇವರು ಎಂಟು ಜನ ಅಷ್ಟವಸುಗಳು.

೧೦೩-೧೦೪. ಅಥವಾ ಶಿರಸ್ಸು, ಹಣೆ, ಕತ್ತು, ಭುಜಶಿರಸ್ಸುಗಳೆರಡು, ಭುಜಗಳೆರಡು, ಕೈಗಳ ಮಧ್ಯಸಂಧಿಯ ಪ್ರದೇಶ, ಮಣಿಕಟ್ಟು, ಹೃದಯ ನಾಭಿ, ಪಕ್ಕಗಳು ಬೆನ್ನು ಈ ಹದಿನಾರು ಸ್ಥಾನಗಳಲ್ಲಿ ತ್ರಿಪುಂಡ್ರವನ್ನು ಧರಿಸಬೇಕು.

ಶಿವಂ ಶಕ್ತಿಂ ತಥಾ ರುದ್ರಮೀಶಂ ನಾರದಮೇವ ಚ ।
ವಾಮಾದಿನವಶಕ್ತೀಶ್ಚ ಏತಾಷ್ಷೋಡಶ ದೇವತಾಃ ॥ ೧೦೫ ॥

ನಾಸತ್ಯೌ ದಸ್ರಕಶ್ಚೈವ ಅಶ್ವಿನೌ ದ್ವೌ ಪ್ರಕೀರ್ತಿತೌ ।
ಅಥವಾ ಮೂರ್ಧ್ನಿ ಕೇಶೇ ಚ ಕರ್ಣಯೋರ್ವದನೇ ತಥಾ ॥ ೧೦೬ ॥

ಬಾಹುದ್ವಯೇ ಚ ಹೃದಯೇ ನಾಭ್ಯಾಮೂರುಯುಗೇ ತಥಾ ।
ಜಾನುದ್ವಯೇ ಚ ಪದಯೋಃ ಪೃಷ್ಠಭಾಗೇ ಚ ಷೋಡಶ ॥ ೧೦೭ ॥

ಶಿವಶ್ಚಂದ್ರಶ್ಚ ರುದ್ರಶ್ಚ ಕೋ ವಿಘ್ನೇಶೋ ವಿಷ್ಣುರೇವ ವಾ ।
ಶ್ರೀಶ್ಚೈವ ಹೃದಯೇ ಶಂಭುಸ್ತಥಾ ನಾಭೌ ಪ್ರಜಾಪತಿಃ ॥ ೧೦೮ ॥

ನಾಗಶ್ಚ ನಾಗಕನ್ಯಾಶ್ಚ ಉಭಯೋಋಷಿಕನ್ಯಕಾಃ ।
ಪಾದಯೋಶ್ಚ ಸಮುದ್ರಾಶ್ಚ ತೀರ್ಥಾಃ ಪೃಷ್ಠೇ ವಿಶಾಲತಃ ॥ ೧೦೯ ॥

---

೧೦೫. ಅಶ್ವಿನೀದೇವತೆಗಳೀರ್ವರು, ಶಿವ, ಶಕ್ತಿದೇವಿ, ರುದ್ರ, ಈಶ್ವರ, ನಾರದ, ಮತ್ತು ವಾಮಾದೇವಿ ಮೊದಲಾದ ಒಂಭತ್ತು ಜನ ಶಕ್ತಿದೇವಿಯರು ಸೇರಿ ಹದಿನಾರು ದೇವತೆಗಳೂ ಆ ಹದಿನಾರು ಸ್ಥಾನಗಳ ದೇವತೆಗಳು. ನಾಸತ್ಯ ಮತ್ತು ದಸ್ರಕರೆಂದು ಅಶ್ವಿನೀದೇವತೆಗಳು ಈರ್ವರಿರುವರು.

೧೦೬-೧೦೭. ಅಥವಾ ಶಿರಸ್ಸು, ತಲೆಗೂದಲು, ಕಿವಿಗಳೆರಡು, ಮುಖ, ಬಾಹುಗಳೆರಡು, ಹೃದಯ, ನಾಭಿ, ತೊಡೆಗಳೆರಡು, ಮೊಳಕಾಲುಗಳೆರಡು, ಕಾಲುಗಳೆರಡು, ಬೆನ್ನು, ಈ ಹದಿನಾರು ಸ್ಥಾನಗಳಲ್ಲಿ ಭಸ್ಮವನ್ನು ಧರಿಸಬೇಕು.

೧೦೮-೧೦೯. ಆ ಸ್ಥಾನಗಳಿಗೆ ಶಿವ, ಚಂದ್ರ, ರುದ್ರ, ಗಣೇಶ, ವಿಷ್ಣು, ಲಕ್ಷ್ಮಿ, ಮತ್ತು ಹೃದಯದಲ್ಲಿ ಶಂಭು, ನಾಭಿಯಲ್ಲಿ ಪ್ರಜಾಪತಿ, ಸರ್ಪಗಳು, ನಾಗಕನ್ಯೆಯರು ಮತ್ತು ಋಷಿಕನ್ಯೆಯರು ಎರಡು ಪಕ್ಕಗಳಲ್ಲಿ, ಪಾದಗಳಲ್ಲಿ ಸಮುದ್ರಗಳು, ಬೆನ್ನಿನಲ್ಲಿ ತೀರ್ಥದೇವತೆಗಳು, ಇವರು ಮೇಲೆ ಹೇಳಿದ ಸ್ಥಾನಗಳಿಗೆ ದೇವತೆಗಳು. ಈಗ ಎಂಟು ಸ್ಥಾನಗಳನ್ನು ಹೇಳುವೆನು.

ಇತ್ಯೇವಂ ಷೋಡಶಸ್ಥಾನಮಷ್ಟಸ್ಥಾನಮಥೋಚ್ಯತೇ ।
ಗುಹ್ಯಸ್ಥಾನಂ ಲಲಾಟಶ್ಚ ಕರ್ಣದ್ವಯಮನುತ್ತಮಂ　　॥ ೧೧೦ ॥

ಅಂಸಯುಗ್ಮಂ ಚ ಹೃದಯಂ ನಾಭಿರಿತ್ಯೇವಮಷ್ಟಕಂ ।
ಬ್ರಹ್ಮಾ ಚ ಋಷಿಯಃ ಸಪ್ತ ದೇವತಾಶ್ಚ ಪ್ರಕೀರ್ತಿತಾಃ　　॥ ೧೧೧ ॥

ಇತ್ಯೇವಂ ತು ಸಮುದ್ದಿಷ್ಟಂ ಭಸ್ಮವಿದ್ಭಿರ್ಮುನೀಶ್ವರಾಃ ।
ಅಥವಾ ಮಸ್ತಕಂ ಬಾಹೂ ಹೃದಯಂ ನಾಭಿರೇವ ಚ　　॥ ೧೧೨ ॥

ಪಂಚಸ್ಥಾನಾನ್ಯಮೂನ್ಯಾಹುರ್ಧಾರಣೇ ಭಸ್ಮವಿಜ್ಞನಾಃ ।
ಯಥಾಸಂಭವನಂ ಕುರ್ಯಾದ್ದೇಶಕಾಲಾದ್ಯಪೇಕ್ಷಯಾ　　॥ ೧೧೩ ॥

ಉದ್ಧೂಲನೇಽಪ್ಯಶಕ್ತಶ್ಚೇತ್ರಿಪುಂಡ್ರಾದೀನಿ ಕಾರಯೇತ್ ।
ತ್ರಿನೇತ್ರಂ ತ್ರಿಗುಣಾಧಾರಂ ತ್ರಿದೇವಜನಕಂ ಶಿವಂ　　॥ ೧೧೪ ॥

---

೧೧೦-೧೧೧. ಜನನೇಂದ್ರಿಯ, ಹಣೆ, ಕಿವಿಗಳೆರಡು, ಭುಜಶಿರಸ್ಸುಗಳೆರಡು, ಹೃದಯ, ನಾಭಿ ಇವು ಎಂಟು ಭಸ್ಮಸ್ಥಾನಗಳು. ಇವುಗಳಿಗೆ ಬ್ರಹ್ಮ ಮತ್ತು ಏಳು ಜನ ಋಷಿಗಳು ಕ್ರಮವಾಗಿ ದೇವತೆಗಳು. ಈ ರೀತಿಯಾಗಿ ಭಸ್ಮವಿಧಿಯನ್ನು ಬಲ್ಲವರು ಹೇಳಿರುವರು.

೧೧೨. ಅಥವಾ ಶಿರಸ್ಸು, ಬಾಹುಗಳೆರಡು, ಹೃದಯ, ನಾಭಿ, ಈ ಐದು ಸ್ಥಾನಗಳಲ್ಲಿ ಭಸ್ಮವನ್ನು ಧರಿಸಬಹುದೆಂದೂ ಭಸ್ಮವಿತ್ತುಗಳು ಹೇಳಿರುವರು.

೧೧೩. ದೇಶಕಾಲಗಳಿಗೆ ಅನುಗುಣವಾಗಿ ಹೇಳಿದವುಗಳಲ್ಲಿ ಯೋಗ್ಯವಾದ ಪಕ್ಷವನ್ನಾಶ್ರಯಿಸಬೇಕು. ಭಸ್ಮೋದ್ಧೂಲನದಲ್ಲಿ ಅಶಕ್ತನಾದವನು ತ್ರಿಪುಂಡ್ರಾದಿಗಳನ್ನು ಧರಿಸಬೇಕು.

೧೧೪. ಮೂರು ಕಣ್ಣುಗಳುಳ್ಳವನೂ, ಸತ್ವರಜಸ್ತಮಸ್ಸ್ವರೂಪವಾದ ಪ್ರಕೃತಿಗೆ ಆಧಾರನೂ, ಬ್ರಹ್ಮ-ವಿಷ್ಣು-ರುದ್ರರಿಗೆ ಜನಕನೂ, ಆದಂತಹ ಶಿವನನ್ನು "ನಮಃ ಶಿವಾಯ" ಎಂದು ಸ್ಮರಿಸುತ್ತಾ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಬೇಕು.

ಸ್ಮರನ್ನಮಃ ಶಿವಾಯೇತಿ ಲಲಾಟೇ ತು ತ್ರಿಪುಂಡ್ರಕಂ ।
ಈಶಾಭ್ಯಾಂ ನಮ ಇತ್ಯುಕ್ತ್ವಾ ಪಾರ್ಶ್ವಯೋಶ್ಚ ತ್ರಿಪುಂಡ್ರಕಂ ॥ ೧೧೫ ॥

ಬೀಜಾಭ್ಯಾಂ ನಮ ಇತ್ಯುಕ್ತ್ವಾ ಧಾರಯೇತ್ತು ಪ್ರಕೋಷ್ಠಯೋಃ ।
ಕುರ್ಯಾದಧಃ ಪಿತೃಭ್ಯಾಂ ಚ ಉಮೇಶಾಭ್ಯಾಂ ತಥೋಪರಿ ।
ಭೀಮಾಯೇತಿ ತತಃ ಪೃಷ್ಠೇ ಶಿರಸಃ ಪಶ್ಚಿಮೇ ತಥಾ ॥ ೧೧೬ ॥

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ
ಭಸ್ಮಧಾರಣವರ್ಣನೋ ನಾಮ ಚತುರ್ವಿಂಶೋಽಧ್ಯಾಯಃ.

---

೧೧೫. "ಈಶಾಭ್ಯಾಂ ನಮ" ಎಂದು ಪಕ್ಕಗಳಲ್ಲಿ ತ್ರಿಪುಂಡ್ರವನ್ನು ಧರಿಸಬೇಕು. "ಬೀಜಾಭ್ಯಾಂ ನಮ" ಎಂದು ಬಾಹುಗಳ ಮಧ್ಯ ಸಂಧಿಗಳಲ್ಲಿ ಧರಿಸಬೇಕು.

೧೧೬. "ಪಿತೃಭ್ಯಾಂ ನಮಃ ಉಮೇಶಾಭ್ಯಾಂ ನಮಃ" ಎಂದು ಮೇಲುಭಾಗಗಳಲ್ಲಿಯೂ, ಕೆಳಭಾಗದಲ್ಲಿಯೂ ಧರಿಸಬೇಕು. "ಭೀಮಾಯ ನಮಃ" ಎಂದು ಬೆನ್ನಿನಲ್ಲಿಯೂ ಶಿರಸ್ಸಿನ ಹಿಂಭಾಗದಲ್ಲಿಯೂ ತ್ರಿಪುಂಡ್ರವನ್ನು ಧರಿಸಬೇಕು.

ಇಲ್ಲಿಗೆ ಶ್ರೀಶಿವಪುರಾಣದಲ್ಲಿನ ಮೊದಲನೆಯ ವಿದ್ಯೇಶ್ವರಸಂಹಿತೆಯಲ್ಲಿ
ಭಸ್ಮಧಾರಣವರ್ಣನವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಿದ್ಯೇಶ್ವರಸಂಹಿತಾಯಾಂ

## ಪಂಚವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಶೌನಕರ್ಷೇ ಮಹಾಪ್ರಾಜ್ಞ ಶಿವರೂಪ ಮಹಾಮತೇ ।
ಶೃಣು ರುದ್ರಾಕ್ಷಮಾಹಾತ್ಮ್ಯಂ ಸಮಾಸಾತ್ಕಥಯಾಮ್ಯಹಂ ॥ ೧ ॥

ಶಿವಪ್ರಿಯತಮೋ ಜ್ಞೇಯೋ ರುದ್ರಾಕ್ಷಃ ಪರಪಾವನಃ ।
ದರ್ಶನಾತ್ಸ್ಪರ್ಶನಾಜ್ಜಾಪ್ಯಾತ್ಸರ್ವಪಾಪಹರಃ ಸ್ಮೃತಃ ॥ ೨ ॥

---

### ಇಪ್ಪತ್ತೈದಯ ಅಧ್ಯಾಯವು.

೧. ಸೂತಮುನಿಯು ಹೇಳಿದನು :—ಎಲೌ ಶೌನಕನೇ, ನೀನು ಶಿವಭಕ್ತನೂ, ತುಂಬಾ ಬುದ್ಧಿಶಾಲಿಯೂ, ಮಹಾಪ್ರಾಜ್ಞನೂ ಆಗಿರುವೆ. ಈಗ ನಿನಗೆ ರುದ್ರಾಕ್ಷಿಮಹಿಮೆಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು.

೨. ಪರಮಪವಿತ್ರವಾದ ರುದ್ರಾಕ್ಷವು ಶಿವನಿಗೆ ತುಂಬಾ ಪ್ರಿಯವಾದುದು. ಅದನ್ನು ದರ್ಶನಮಾಡಿದರೂ, ಸ್ಪರ್ಶಿಸಿದರೂ, ಧರಿಸಿ ಜಪಿಸಿದರೂ ಸಹ ಸಕಲ ಪಾಪಗಳೂ ನಾಶವಾಗುವವು.

ಪುರಾ ರುದ್ರಾಕ್ಷಮಹಿಮಾ ದೇವ್ಯಗ್ರೇ ಕಥಿತೋ ಮುನೇ ।
ಲೋಕೋಪಕರಣಾರ್ಥಾಯ ಶಿವೇನ ಪರಮಾತ್ಮನಾ ॥ ೩ ॥

॥ ಶಿವ ಉವಾಚ ॥

ಶ್ರೂಯತಾಂ ತು ಮಹೇಶಾನಿ ರುದ್ರಾಕ್ಷಮಹಿಮಾ ಶಿವೇ ।
ಕಥಯಾಮಿ ತವ ಪ್ರೀತ್ಯಾ ಭಕ್ತಾನಾಂ ಹಿತಕಾಮ್ಯಯಾ ॥ ೪ ॥

ದಿವ್ಯವರ್ಷಸಹಸ್ರಾಣಿ ಮಹೇಶಾನಿ ಪುನಃ ಪುರಾ ।
ತಪಃ ಪ್ರಕುರ್ವತಸ್ತ್ರಸ್ತಂ ಮನಃ ಸಂಯಮ್ಯ ವೈ ಮಮ ॥ ೫ ॥

ಸ್ವತಂತ್ರೇಣ ಪರೇಶೇನ ಲೋಕೋಪಕೃತಿಕಾರಿಣಾ ।
ಲೀಲಯಾ ಪರಮೇಶಾನಿ ಚಕ್ಷುರುನ್ಮೀಲಿತಂ ಮಯಾ ॥ ೬ ॥

ಪುಟಾಭ್ಯಾಂ ಚಾರುಚಕ್ಷುರ್ಭ್ಯಾಂ ಪತಿತಾ ಜಲಬಿಂದವಃ ।
ತತ್ರಾಶ್ರುಬಿಂದುತೋ ಜಾತಾ ವೃಕ್ಷಾ ರುದ್ರಾಕ್ಷಸಂಜ್ಞಿತಾಃ ॥ ೭ ॥

---

೩. ಹಿಂದೆ ಪರಮಾತ್ಮನಾದ ಶಿವನು ಲೋಕಕ್ಷೇಮಕ್ಕಾಗಿ ಈ ರುದ್ರಾಕ್ಷ ಮಹಿಮೆಯನ್ನು ಪಾರ್ವತೀದೇವಿಯ ಎದುರಿನಲ್ಲಿ ಹೀಗೆ ಹೇಳಿದನು.

೪. ಶಿವನು ಪಾರ್ವತಿಗೆ ಹೇಳಿದನು:—ಎಲೌ ಮಹೇಶ್ವರಿಯಾದ ಪಾರ್ವತಿ! ಭಕ್ತರಿಗೆ ಹಿತವನ್ನು ಮಾಡಲಪೇಕ್ಷೆಯಿಂದ ರುದ್ರಾಕ್ಷ ಮಹಿಮೆಯನ್ನು ನಿನಗೆ ಪ್ರೀತಿ ಪೂರ್ವಕವಾಗಿ ಹೇಳುವೆನು, ಕೇಳು.

೫. ಎಲೌ ಪಾರ್ವತಿ! ಹಿಂದೆ ನಾನು ಚಂಚಲವಾದ ಮನಸ್ಸನ್ನು ನಿಯಮನಮಾಡಿ ದೇವಮಾನರೀತಿಯಿಂದ ಸಾವಿರ ವರ್ಷ ತಪಸ್ಸನ್ನಾ ಚರಿಸಿದೆನು.

೬. ಆಗ ಸ್ವತಂತ್ರನೂ, ಪರಮೇಶ್ವರನೂ, ಲೋಕೋಪಕಾರವನ್ನು ಮಾಡುವವನೂ ಆದಂತಹ ನಾನು ಲೀಲಾರ್ಥವಾಗಿ ಸ್ವಲ್ಪ ಕಣ್ಣನ್ನು ತೆರೆದೆನು.

೭. ಆಗ ಸುಂದರವಾದ ನನ್ನ ನೇತ್ರಪುಟಗಳಿಂದ ಜಲಬಿಂದು (ಕಣ್ಣೀರು) ಗಳು ಬಿದ್ದುವು. ಆ ಕಣ್ಣೀರಿನಿಂದ ರುದ್ರಾಕ್ಷಗಳೆಂಬ ಮರಗಳು ಜನಿಸಿದುವು.

ಸ್ಥಾವರತ್ವಮನುಪ್ರಾಪ್ಯ ಭಕ್ತಾನುಗ್ರಹಕಾರಣಾತ್ ।
ತೇ ದತ್ತಾ ವಿಷ್ಣುಭಕ್ತೇಭ್ಯಶ್ಚತುರ್ವರ್ಣೇಭ್ಯ ಏವ ಚ ॥ ೮ ॥

ಭೂಮೌ ಗೌಡೋದ್ಭವಾಂಶ್ಚಕ್ರೇ ರುದ್ರಾಕ್ಷಾನ್ ಶಿವವಲ್ಲಭಾನ್ ।
ಮಥುರಾಯಾಮಯೋಧ್ಯಾಯಾಂ ಲಂಕಾಯಾಂ ಮಲಯೇ ತಥಾ ॥ ೯ ॥

ಸಹ್ಯಾದ್ರೌ ಚ ತಥಾ ಕಾಶ್ಯಾಂ ದೇಶೇಷ್ವನ್ಯೇಷು ವಾ ತಥಾ ।
ಪರಾನಸಹ್ಯಪಾಪೌಘಭೇದನಾನ್ ಶ್ರುತಿನೋದನಾನ್ ॥ ೧೦ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಜಾತಾ ಮಮಾಜ್ಞಯಾ ।
ರುದ್ರಾಕ್ಷಾಸ್ತೇ ಪೃಥಿವ್ಯಾಂ ತು ತಜ್ಜಾತೀಯಾಃ ಶುಭಾಕ್ಷಕಾಃ ॥ ೧೧ ॥

ಶ್ವೇತರಕ್ತಾಃ ಪೀತಕೃಷ್ಣಾ ವರ್ಣಾ ಜ್ಞೇಯಾಃ ಕ್ರಮಾದ್ಬುಧೈಃ ।
ಸ್ವಜಾತೀಯಂ ನೃಭಿರ್ಧಾರ್ಯಂ ರುದ್ರಾಕ್ಷಂ ವರ್ಣತಃ ಕ್ರಮಾತ್ ॥ ೧೨ ॥

ವರ್ಣೈಸ್ತು ತತ್ಫಲಂ ಧಾರ್ಯಂ ಭುಕ್ತಿಮುಕ್ತಿಫಲೇಪ್ಸುಭಿಃ ।
ಶಿವಭಕ್ತೈರ್ವಿಶೇಷೇಣ ಶಿವಯೋಃ ಪ್ರೀತಯೇ ಸದಾ ॥ ೧೩ ॥

---

೮. ಹೀಗೆ ಭಕ್ತರನ್ನನುಗ್ರಹಿಸಲು ಕಣ್ಣುನೀರನ್ನು ವೃಕ್ಷವಾಗಿ ನಿರ್ಮಿಸಿ ವಿಷ್ಣುಭಕ್ತರೇ ಮೊದಲಾದ ನಾಲ್ಕು ವರ್ಣದವರಿಗೆ ಕೊಟ್ಟೆನು.

೯-೧೦. ಮತ್ತು ಗೌಡದೇಶ, ಮಥುರೆ, ಅಯೋಧ್ಯೆ, ಲಂಕೆ, ಮಲಯದ್ವೀಪ, ಸಹ್ಯಾದ್ರಿ, ಕಾಶೀ, ಮುಂತಾದ ಸ್ಥಳಗಳಲ್ಲಿ ಮಹಾಪಾಪಗಳನ್ನು ಹೋಗಲಾಡಿಸುವವೂ, ಶಿವನಿಗೆ ಪ್ರಿಯವಾದುವುಗಳೂ ಆದಂತಹ ಆ ರುದ್ರಾಕ್ಷಿಗಳು ಬೆಳೆಯುವಂತೆ ಮಾಡಿದೆನು.

೧೧. ಮತ್ತು ಆ ರುದ್ರಾಕ್ಷಿಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ನಾಲ್ಕು ಜಾತಿಯವುಗಳಾಗಿ ಸೃಷ್ಟಿಸಿದೆನು. ಆಯಾಯ ಜಾತಿಯವರು ಪರೀಕ್ಷಿಸಿ ಆಯಾಯ ಜಾತಿಯ ರುದ್ರಾಕ್ಷಿಗಳನ್ನೇ ಧರಿಸಬೇಕು.

೧೨-೧೩. ಬ್ರಾಹ್ಮಣಾದಿ ಜಾತಿಯವುಗಳಾದ ರುದ್ರಾಕ್ಷಗಳು ಕ್ರಮವಾಗಿ ಬಿಳಿ, ಕೆಂಪು, ಹಳದಿ, ಕಪ್ಪು, ಈ ಬಣ್ಣವುಳ್ಳವುಗಳಾಗಿರುವವು. ಭೋಗ ಮತ್ತು ಮೋಕ್ಷಗಳನ್ನು ಅಪೇಕ್ಷಿಸುವ ಶಿವಭಕ್ತರೂ, ಮಿಕ್ಕವರೂ ಸಹ ಶಿವಪಾರ್ವತಿಯರ ಪ್ರೀತಿಗಾಗಿ ತಮ್ಮ ತಮ್ಮ ಜಾತಿಯ ರುದ್ರಾಕ್ಷಿಗಳನ್ನೇ ಧರಿಸಬೇಕು.

ಧಾತ್ರೀಫಲಪ್ರಮಾಣಂ ಯಚ್ಛ್ರೇಷ್ಠಮೇತದುದಾಹೃತಂ ।
ಬದರೀಫಲಮಾತ್ರಂ ತು ಮಧ್ಯಮಂ ಸಂಪ್ರಕೀರ್ತಿತಂ ॥ ೧೪ ॥

ಅಧಮಂ ಚಣಮಾತ್ರಂ ಸ್ಯಾತ್ಪ್ರಕ್ರಿಯೈಷಾ ಪರೋಚ್ಯತೇ ।
ಶೃಣು ಪಾರ್ವತಿ ಸುಪ್ರೀತ್ಯಾ ಭಕ್ತಾನಾಂ ಹಿತಕಾಮ್ಯಯಾ ॥ ೧೫ ॥

ಬದರೀಫಲಮಾತ್ರಂ ಚ ಯತ್ಕಿಲ ಸ್ಯಾನ್ಮಹೇಶ್ವರಿ ।
ತಥಾಪಿ ಫಲದಂ ಲೋಕೇ ಸುಖಸೌಭಾಗ್ಯವರ್ಧನಂ ॥ ೧೬ ॥

ಧಾತ್ರೀಫಲಸಮಂ ಯತ್ಸ್ಯಾತ್ಸರ್ವಾರಿಷ್ಟವಿನಾಶನಂ ।
ಗುಂಜಾಯಾಃ ಸದೃಶಂ ಯತ್ಸ್ಯಾತ್ಸರ್ವಾರ್ಥಫಲಸಾಧನಂ ॥ ೧೭ ॥

ಯಥಾ ಯಥಾ ಲಘುಃ ಸ್ಯಾದ್ವೈ ತಥಾಧಿಕಫಲಪ್ರದಃ ।
ಏಕೈಕತಃ ಫಲಂ ಪ್ರೋಕ್ತಂ ದಶಾಂಶೈರಧಿಕಂ ಬುಧೈಃ ॥ ೧೮ ॥

ರುದ್ರಾಕ್ಷಧಾರಣಂ ಪ್ರೋಕ್ತಂ ಪಾಪನಾಶನಹೇತವೇ ।
ತಸ್ಮಾಚ್ಚ ಧಾರಣೀಯೋ ವೈ ಸರ್ವಾರ್ಥಸಾಧನೋ ಧ್ರುವಂ ॥ ೧೯ ॥

---

೧೪. ನೆಲ್ಲೀಕಾಯಿಯಷ್ಟು ಪ್ರಮಾಣವಾದ ರುದ್ರಾಕ್ಷಿಯು ಉತ್ತಮವಾದುದು. ಬದರೀಫಲ ಪ್ರಮಾಣವಾಗಿರುವುದು ಮಧ್ಯಮವು.

೧೫. ಕಡಲೆಯ ಪ್ರಮಾಣವಾದುದು ಅಧಮವು. ಭಕ್ತರ ಹಿತಕ್ಕಾಗಿ ಇನ್ನೂ ಕೆಲವು ಬೇರೆ ಕ್ರಮಗಳನ್ನು ಹೇಳುವೆನು. ಎಲೌ ಪಾರ್ವತಿ, ಆದರದಿಂದ ಕೇಳು.

೧೬-೧೮. ಎಲೌ ಮಹೇಶ್ವರಿ! ಬದರೀಫಲಪ್ರಮಾಣವಾದ ರುದ್ರಾಕ್ಷಿಯು ಇಹಲೋಕದಲ್ಲಿ ಸುಖಸೌಭಾಗ್ಯವನ್ನು ಹೆಚ್ಚಿಸುವದು. ನೆಲ್ಲಿಕಾಯಿ ಪ್ರಮಾಣ ವಾದದು ಸಕಲ ಅರಿಷ್ಟಗಳನ್ನೂ ನಾಶಮಾಡುವದು. ಗುಲಗುಂಜಿ ಅಥವಾ ಕಡಲೆ ಕಾಳು ಪ್ರಮಾಣವಾದುದು ಸಕಲ ಇಷ್ಟಾರ್ಥಗಳನ್ನುಂಟುಮಾಡುವದು. ಎಷ್ಟೆಷ್ಟು ಚಿಕ್ಕದಾಗಿರುವುದೋ ಅಷ್ಟಷ್ಟು ಹೆಚ್ಚು ಫಲಗಳನ್ನು ಒಂದಕ್ಕಿಂತ ಮತ್ತೊಂದು ಹತ್ತ ರಷ್ಟು ಹೆಚ್ಚಾಗಿ ಕೊಡುವದು.

೧೯. ಪಾಪನಾಶಕ್ಕಾಗಿ ರುದ್ರಾಕ್ಷಧಾರಣೆಯು ಹೇಳಲ್ಪಟ್ಟಿರುವದು. ಆದುದ ರಿಂದ ಸರ್ವಾರ್ಥಸಾಧಕವಾದ ರುದ್ರಾಕ್ಷಿಯನ್ನು ಧರಿಸಲೇಬೇಕು.

ಯಥಾ ಚ ದೃಶ್ಯತೇ ಲೋಕೇ ರುದ್ರಾಕ್ಷಃ ಫಲದಃ ಶುಭಃ ।
ನ ತಥಾ ದೃಶ್ಯತೇಽನ್ಯಾ ಚ ಮಾಲಿಕಾ ಪರಮೇಶ್ವರಿ ॥ ೨೦ ॥

ಸಮಾಃ ಸ್ನಿಗ್ಧಾಃ ದೃಢಾಃ ಸ್ಥೂಲಾಃ ಕಂಟಕೈಃ ಸಂಯುತಾಃ ಶುಭಾಃ ।
ರುದ್ರಾಕ್ಷಾಃ ಕಾಮದಾ ದೇವಿ ಭುಕ್ತಿಮುಕ್ತಿಪ್ರದಾಃ ಸದಾ ॥ ೨೧ ॥

ಕೃಮಿದುಷ್ಟಂ ಛಿನ್ನಭಿನ್ನಂ ಕಂಟಕೈರ್ಹೀನಮೇವ ಚ ।
ವ್ರಣಯುಕ್ತಮವೃತ್ತಂ ಚ ರುದ್ರಾಕ್ಷಂ ಪರಿವರ್ಜಯೇತ್ ॥ ೨೨ ॥

ಸ್ವಯಮೇವ ಕೃತದ್ವಾರಂ ರುದ್ರಾಕ್ಷಂ ಸ್ಯಾದಿಹೋತ್ತಮಂ ।
ಯತ್ತು ಪೌರುಷಯತ್ನೇನ ಕೃತಂ ತನ್ಮಧ್ಯಮಂ ಸ್ಮೃತಂ ॥ ೨೩ ॥

ರುದ್ರಾಕ್ಷಧಾರಣಂ ಪ್ರಾಪ್ತಂ ಮಹಾಪಾತಕನಾಶನಂ ।
ರುದ್ರಸಂಖ್ಯಾಶತಂ ಧೃತ್ವಾ ರುದ್ರರೂಪೋ ಭವೇನ್ನರಃ ॥ ೨೪ ॥

---

೨೦. ಎಲೌ ಪರಮೇಶ್ವರಿ! ರುದ್ರಾಕ್ಷಿಮಾಲೆಯಷ್ಟು ಫಲಪ್ರದವೂ, ಶುಭವೂ, ಪವಿತ್ರವೂ ಆದಂತಹ ಮಾಲೆಯು ಇನ್ನೊಂದಿಲ್ಲ.

೨೧. ಒಂದೇ ಆಕಾರವಾಗಿರುವುವೂ, ಮನೋಹರವೂ, ಗಟ್ಟಿಯಾದುವುಗಳೂ ದೊಡ್ಡದಾದವುಗಳೂ, ಮುಳ್ಳುಗಳಿರುವಂತಹವುಗಳೂ ಆದಂತಹ ರುದ್ರಾಕ್ಷಿಗಳು ಶುಭವಾದವು, ಭೋಗ ಮತ್ತು ಮುಕ್ತಿಯನ್ನುಂಟುಮಾಡುವವು.

೨೨. ಹುಳು ಕೊರೆದಿರುವಂತಹುದು, ಚೂರಾಗಿರುವದು, ಭಿನ್ನವಾಗಿರುವದು, ಮುಳ್ಳುಗಳಿಲ್ಲದಿರುವದು, ಗಾಯವಾಗಿರುವದು, ದುಂಡಗಿಲ್ಲದಿರುವದು, ಇಂತಹ ರುದ್ರಾಕ್ಷಿಗಳನ್ನು ತ್ಯಜಿಸಬೇಕು, ಪರಿಗ್ರಹಿಸಬಾರದು..

೨೩. ಮಾಲೆಯನ್ನು ಪೋಣಿಸುವಂತೆ ತಾನಾಗಿಯೇ ಮಧ್ಯವಲ್ಲಿ ರಂಧ್ರವುಳ್ಳ ರುದ್ರಾಕ್ಷವು ಉತ್ತಮವಾದುದು, ಪುರುಷಪ್ರಯತ್ನದಿಂದಾದ ರಂಧ್ರವುಳ್ಳದುದು ಮಧ್ಯಮವು.

೨೪. ರುದ್ರಾಕ್ಷಧಾರಣೆಯು ಮಹಾಪಾಪಗಳನ್ನು ನಾಶಮಾಡುವುದು, ನೂರು ರುದ್ರಾಕ್ಷಿಗಳನ್ನು ಧರಿಸಿದವನು ರುದ್ರಸ್ವರೂಪವನ್ನು ಪಡೆಯುವನು.

ಏಕಾದಶಶತಾನೀಹ ಧೃತ್ವಾ ಯತ್ಫಲಮಾಪ್ಯತೇ ।
ತತ್ಫಲಂ ಶಕ್ಯತೇ ನೈವ ವಕ್ತುಂ ವರ್ಷಶತೈರಪಿ ॥ ೨೫ ॥

ಶತಾರ್ಧೇನ ಯುತೈಃ ಪಂಚಶತೈರ್ವೈ ಮುಕುಟಂ ಮತಂ ।
ರುದ್ರಾಕ್ಷೈರ್ವಿರಚೇತ್ಸಮ್ಯಗ್ಭಕ್ತಿಮಾರ್ನ್ ಪುರುಷೋ ನರಃ ॥ ೨೬ ॥

ತ್ರಿಭಿಃ ಶತೈಃ ಷಷ್ಟಿಯುಕ್ತೈಸ್ತ್ರಿರಾವೃತ್ತ್ಯಾ ತಥಾ ಪುನಃ ।
ರುದ್ರಾಕ್ಷೈರುಪವೀತಂ ಚ ನಿರ್ಮಾಯಾದ್ಭಕ್ತಿ ತತ್ಪರಃ ॥ ೨೭ ॥

ಶಿಖಾಯಾಂ ಚ ತ್ರಯಂ ಪ್ರೋಕ್ತಂ ರುದ್ರಾಕ್ಷಾಣಾಂ ಮಹೇಶ್ವರಿ ।
ಕರ್ಣಯೋಃ ಷಟ್ ಷಟ್ಚೈವ ವಾಮದಕ್ಷಿಣಯೋಸ್ತಥಾ ॥ ೨೮ ॥

ಶತಮೇಕೋತ್ತರಂ ಕಂಠೇ ಬಾಹ್ವೋರ್ವೈ ರುದ್ರಸಂಖ್ಯಯಾ ।
ಕೂರ್ಪರದ್ವಾರಯೋಸ್ತತ್ರ ಮಣಿಬಂಧೇ ತಥಾ ಪುನಃ ॥ ೨೯ ॥

ಉಪವೀತೇ ತ್ರಯಂ ಧಾರ್ಯಂ ಶಿವಭಕ್ತಿರತೈರ್ನರೈಃ ।
ಶೇಷಾನುರ್ವರಿತಾನ್ಪಂಚ ಸಂಮಿತಾರ್ನ್ ಧಾರಯೇತ್ಕಟೌ ॥ ೩೦ ॥

---

೨೫. ಹನ್ನೊಂದು ಸಾವಿರ ರುದ್ರಾಕ್ಷಿಗಳನ್ನು ಧರಿಸಿದರೆ ಲಭಿಸುವ ಫಲವನ್ನು ನೂರು ವರ್ಷಗಳಾದರೂ ಹೇಳಲು ಸಾಧ್ಯವಿಲ್ಲ.

೨೬. ಐದುಸಾವಿರದ ಐನೂರು ರುದ್ರಾಕ್ಷಗಳಿಂದ ಕಿರೀಟವನ್ನು ಭಕ್ತಿಯಿಂದ ಚನ್ನಾಗಿ ನಿರ್ಮಿಸಬೇಕು.

೨೭. ಮುನ್ನೂರುಅರವತ್ತು ರುದ್ರಾಕ್ಷಿಗಳಿಂದ ಒಂದೊಂದು ಎಳೆಯಂತೆ ಮೂರು ಎಳೆಯುಳ್ಳ ಯಜ್ಞೋಪವೀತವನ್ನು ರುದ್ರಾಕ್ಷಿಗಳಿಂದ ಭಕ್ತಿಪೂರ್ವಕವಾಗಿ ನಿರ್ಮಿಸಬೇಕು.

೨೮. ಶಿಖೆಯಲ್ಲಿ ಮೂರು ರುದ್ರಾಕ್ಷಗಳನ್ನು ಧರಿಸಬೇಕು. ಕಿವಿಗಳಲ್ಲಿ ಆರು ಆರು ಧರಿಸಬೇಕು. ಕತ್ತಿನಲ್ಲಿ ನೂರೊಂದು ರುದ್ರಾಕ್ಷಗಳನ್ನು ಧರಿಸಬೇಕು. ಬಾಹುಗಳಲ್ಲಿ ಹನ್ನೊಂದು ಹನ್ನೊಂದು ರುದ್ರಾಕ್ಷಗಳನ್ನು ಧರಿಸಬೇಕು.

೨೯-೩೦. ತೋಳುಗಳ ಮಧ್ಯ ಸಂಧಿಗಳಲ್ಲಿಯೂ, ಮಣಿಕಟ್ಟಿನಲ್ಲಿಯೂ, ಉಪವೀತದಲ್ಲೂ ಸಹ ಮೂರು ಮೂರು ರುದ್ರಾಕ್ಷಗಳನ್ನು ಧರಿಸಬೇಕು. ಮಿಕ್ಕ ಕಂಟಕವುಳ್ಳ, ಒಂದೇ ಆಕಾರವಾದ ಐದು ರುದ್ರಾಕ್ಷಗಳನ್ನು ಸೊಂಟದಲ್ಲಿ ಧರಿಸಬೇಕು.

ಏತತ್ಸಂಖ್ಯಾ ಧೃತಾ ಯೇನ ರುದ್ರಾಕ್ಷಾಃ ಪರಮೇಶ್ವರಿ ।
ತದ್ರೂಪಂ ತು ಪ್ರಣಮ್ಯಂ ಹಿ ಸ್ತುತ್ಯಂ ಸರ್ವೈರ್ಮಹೇಶವತ್ ॥ ೩೧ ॥

ಏವಂಭೂತಂ ಸ್ಥಿತಂ ಧ್ಯಾನೇ ಯದಾ ಕೃತ್ವಾಸನೇ ಜನಂ ।
ಶಿವೇತಿ ವ್ಯಾಹರಂಶ್ಚೈವ ದೃಷ್ಟ್ವಾ ಪಾಪೈಃ ಪ್ರಮುಚ್ಯತೇ ॥ ೩೨ ॥

ಶತಾಧಿಕಸಹಸ್ರಸ್ಯ ವಿಧಿರೇಷ ಪ್ರಕೀರ್ತಿತಃ ।
ತದಭಾವೇ ಪ್ರಕಾರೋಽನ್ಯಃ ಶುಭಃ ಸಂಪ್ರೋಚ್ಯತೇ ಮಯಾ ॥ ೩೩ ॥

ಶಿಖಾಯಾಮೇಕರುದ್ರಾಕ್ಷಂ ಶಿರಸಾ ತ್ರಿಂಶತಂ ವಹೇತ್ ।
ಪಂಚಾಶಚ್ಚ ಗಲೇ ದಧ್ಯಾದ್ಬಾಹ್ವೋಃ ಷೋಡಶ ಷೋಡಶ ॥ ೩೪ ॥

ಮಣಿಬಂಧೇ ದ್ವಾದಶ ದ್ವಿಃ ಸ್ಕಂಧೇ ಪಂಚಶತಂ ವಹೇತ್ ।
ಅಷ್ಟೋತ್ತರಶತೈರ್ಮಾಲ್ಯಮುಪವೀತಂ ಪ್ರಕಲ್ಪಯೇತ್ ॥ ೩೫ ॥

---

೩೧. ಎಲೌ ಪರಮೇಶ್ವರಿ! ಇಷ್ಟು ಸಂಖ್ಯಾಕಗಳಾದ ರುದ್ರಾಕ್ಷಗಳನ್ನು ಯಾವನು ಧರಿಸುವನೋ ಅವನ ಸ್ವರೂಪವನ್ನು ಮಹೇಶ್ವರನಂತೆ ಎಲ್ಲರೂ ನಮಸ್ಕರಿಸಬೇಕು ಮತ್ತು ಸ್ತುತಿಸಬೇಕು.

೩೨. ಈ ರೀತಿಯಾಗಿ ರುದ್ರಾಕ್ಷಿಗಳನ್ನು ಧರಿಸಿ ಆಸನದಲ್ಲಿ ಕುಳಿತು ಶಿವಧ್ಯಾನ ಮಾಡುತ್ತಲಿರುವ ಪುರುಷನನ್ನು ದರ್ಶನಮಾಡಿದರೆ ಸಕಲ ಪಾಪಗಳೂ ನಾಶವಾಗುವುವು.

೩೩. ಸಾವಿರದನೂರು ರುದ್ರಾಕ್ಷಗಳನ್ನು ಧರಿಸುವ ಕ್ರಮವನ್ನು ಈಗ ನಾನು ಹೇಳಿರುವೆನು. ಅಷ್ಟು ರುದ್ರಾಕ್ಷಿಗಳು ಸಿಕ್ಕದಿರುವ ಪಕ್ಷಕ್ಕೆ ಬೇರೆ ಪ್ರಕಾರವನ್ನೂ ಹೇಳುವೆನು.

೩೪. ಶಿಖೆಯಲ್ಲಿ ಒಂದು ರುದ್ರಾಕ್ಷವನ್ನೂ ಶಿರಸ್ಸಿನಲ್ಲಿ ಮೂವತ್ತು ರುದ್ರಾಕ್ಷಗಳನ್ನೂ ಧರಿಸಬೇಕು. ಕತ್ತಿನಲ್ಲಿ ಐವತ್ತು ರುದ್ರಾಕ್ಷಗಳನ್ನೂ, ಬಾಹುಗಳೆರಡರಲ್ಲಿ ಹದಿನಾರು ಹದಿನಾರು ರುದ್ರಾಕ್ಷಗಳನ್ನೂ ಧರಿಸಬೇಕು.

೩೫-೩೬. ಮಣಿಕಟ್ಟಿನಲ್ಲಿ ಹನ್ನೆರಡು ಹನ್ನೆರಡು; ಭುಜಶಿರಸ್ಸಿನಲ್ಲಿ ಐನೂರು ರುದ್ರಾಕ್ಷಿಗಳನ್ನು ಧರಿಸಬೇಕು. ನೂರೆಂಟು ರುದ್ರಾಕ್ಷಗಳಿಂದ ಉಪವೀತವನ್ನು

ಏವಂ ಸಹಸ್ರರುದ್ರಾಕ್ಷಾನ್ ಧಾರಯೇದ್ಯೋ ದೃಢವ್ರತಃ ।
ತಂ ನಮಂತಿ ಸುರಾಃ ಸರ್ವೇ ಯಥಾ ರುದ್ರಸ್ತಥೈವ ಸಃ ॥ ೩೬ ॥

ಏಕಂ ಶಿಖಾಯಾಂ ರುದ್ರಾಕ್ಷಂ ಚತ್ವಾರಿಂಶತ್ತು ಮಸ್ತಕೇ ।
ದ್ವಾತ್ರಿಂಶತ್ಕಂಠದೇಶೇ ತು ವಕ್ಷಸ್ಯಷ್ಟೋತ್ತರಂ ಶತಂ ॥ ೩೭ ॥

ಕರಯೋರವಿಮಾನೇನ ದ್ವಿಗುಣೇನ ಮುನೀಶ್ವರ ।
ಸಂಖ್ಯಾ ಪ್ರೀತಿಧೃತಾ ಯೇನ ಸೋಽಪಿ ಶೈವಜನಃ ಪರಃ ॥ ೩೮ ॥

ಏಕೈಕಂ ಕರ್ಣಯೋಃ ಷಟ್ ಷಟ್ ಬಾಹ್ವೋಃ ಷೋಡಶ ಷೋಡಶ ।
ಶಿವವತ್ಪೂಜನೀಯೋ ಹಿ ವಂದ್ಯಃ ಸರ್ವೈರಭೀಕ್ಷ್ಣಶಃ ॥ ೩೯ ॥

ಶಿರಸೀಶಾನಮಂತ್ರೇಣ ಕರ್ಣೇ ತತ್ಪುರುಷೇಣ ಚ ।
ಅಘೋರೇಣ ಗಲೇಧಾರ್ಯಂ ತೇನೈವ ಹೃದಯೇಽಪಿ ಚ ॥ ೪೦ ॥

---

ನಿರ್ಮಿಸಬೇಕು. ಈ ರೀತಿಯಾಗಿ ಸಾವಿರ ರುದ್ರಾಕ್ಷಗಳನ್ನು ಯಾವನು ದೃಢವಾದ ನಿಯಮದಿಂದ ಧರಿಸುವನೋ ಅವನನ್ನು ರುದ್ರನನ್ನೋಪಾದಿಯಲ್ಲಿ ದೇವತೆಗಳೆಲ್ಲರೂ ನಮಸ್ಕರಿಸುವರು.

೩೭-೩೯. ಶಿಖೆಯಲ್ಲಿ ಒಂದು ರುದ್ರಾಕ್ಷವನ್ನೂ, ಶಿರಸ್ಸಿನಲ್ಲಿ ನಲವತ್ತು ರುದ್ರಾಕ್ಷಗಳನ್ನೂ, ಕಂಠದಲ್ಲಿ ಮೂವತ್ತೆರಡು ರುದ್ರಾಕ್ಷಗಳನ್ನೂ, ಎದೆಯಲ್ಲಿ ನೂರೆಂಟು ರುದ್ರಾಕ್ಷಗಳನ್ನೂ, ಕೈಗಳೆರಡರಲ್ಲಿ ಹದಿನಾರು ಹದಿನಾರು ರುದ್ರಾಕ್ಷಗಳನ್ನೂ ಕಿವಿಯಲ್ಲೊಂದೊಂದು, ಬಾಹುಗಳಲ್ಲಿ ಆರು ಆರು ರುದ್ರಾಕ್ಷಗಳನ್ನೂ ಯಾವ ಶಿವಭಕ್ತನು ಧರಿಸುವನೋ ಅವನನ್ನು ಶಿವನಂತೆ ಎಲ್ಲರೂ ಸದಾ ಪೂಜಿಸಬೇಕು ಮತ್ತು ನಮಸ್ಕರಿಸಬೇಕು.

೪೦. ಶಿರಸ್ಸಿನಲ್ಲಿ ಈಶಾನಮಂತ್ರದಿಂದಲೂ, ಕಿವಿಗಳಲ್ಲಿ ತತ್ಪುರುಷ ಮಂತ್ರದಿಂದಲೂ, ಕತ್ತಿನಲ್ಲೂ ಹೃದಯದಲ್ಲೂ ಅಘೋರಮಂತ್ರದಿಂದಲೂ ರುದ್ರಾಕ್ಷಗಳನ್ನು ಧರಿಸಬೇಕು.

ಅಘೋರಬೀಜಮಂತ್ರೇಣ ಕರಯೋರ್ಧಾರಯೇತ್ಸುಧೀಃ ।
ಪಂಚದಶಾಕ್ಷಗ್ರಥಿತಾಂ ವಾಮದೇವೇನ ಚೋದರೇ ॥ ೪೧ ॥

ಪಂಚಬ್ರಹ್ಮಭಿರಂಗೈಶ್ಚ ತ್ರಿಮಾಲಾಂ ಪಂಚ ಸಪ್ತ ಚ ।
ಅಥವಾ ಮೂಲಮಂತ್ರೇಣ ಸರ್ವಾನಕ್ಷಾಂಸ್ತು ಧಾರಯೇತ್ ॥ ೪೨ ॥

ಮದ್ಯಂ ಮಾಂಸಂ ತು ಲಶುನಂ ಪಲಾಂಡುಂ ಶಿಗ್ರುಮೇವ ಚ ।
ಶ್ಲೇಷ್ಮಾತಕಂ ವಿಡ್ವರಾಹಂ ಭಕ್ಷಣೇ ವರ್ಜಯೇತ್ಸುಧೀಃ ॥ ೪೩ ॥

ವಲಕ್ಷಂ ರುದ್ರಾಕ್ಷಂ ದ್ವಿಜತನುಭಿರೇವೇಹ ವಿಹಿತಂ
ಸುರಕ್ತಂ ಕ್ಷತ್ರಾಣಾಂ ಪ್ರಮುದಿತಮುಮೇ ಪೀತಮಸಕೃತ್ ।
ತತೋ ವೈಶ್ಯೈರ್ಧಾರ್ಯಂ ಪ್ರತಿದಿವಸಮಾವಶ್ಯಕಮಹೋ
ತಥಾ ಕೃಷ್ಣಂ ಶೂದ್ರೈಃ ಶ್ರುತಿಗದಿತಮಾರ್ಗೋsಯಮಗಜೇ ॥ ೪೪ ॥

ವರ್ಣೀ ವನೀ ಗೃಹಯತಿರ್ನಿಯಮೇನ ದಧ್ಯಾ-
ದೇತದ್ರಹಸ್ಯಪರಮೋ ನ ಹಿ ಜಾತು ತಿಷ್ಠೇತ್ ।

---

೪೧. ಅಘೋರಬೀಜಮಂತ್ರದಿಂದ ಕೈಗಳಲ್ಲಿ ರುದ್ರಾಕ್ಷಗಳನ್ನು ಧರಿಸಬೇಕು. ಹದಿನೈದು ರುದ್ರಾಕ್ಷಗಳಿಂದ ಪೋಣಿಸಿರುವ ಮಾಲಿಕೆಯನ್ನು ವಾಮದೇವಮಂತ್ರದಿಂದ ಉದರದಲ್ಲಿ ಧರಿಸಬೇಕು.

೪೨. ಪಂಚಬ್ರಹ್ಮಮಂತ್ರಗಳಿಂದ ಯಜ್ಞೋಪವೀತವನ್ನೂ ಮತ್ತು ಹನ್ನೆರಡು ರುದ್ರಾಕ್ಷಗಳನ್ನೂ ಧರಿಸಬೇಕು. ಅಥವಾ ಶಿವಮೂಲಮಂತ್ರದಿಂದ ಎಲ್ಲಾ ರುದ್ರಾಕ್ಷಗಳನ್ನೂ ಧರಿಸಬೇಕು.

೪೩. ಹೆಂಡ, ಸಾರಾಯಿ, ಮಾಂಸ, ಬೆಳ್ಳುಳ್ಳಿ, ಈರುಳ್ಳಿ, ಶಿಗ್ರು, (ನುಗ್ಗೇಕಾಯಿ) ಶ್ಲೇಷ್ಮಾತಕ, (ಚಳ್ಳೆಹಣ್ಣು) ಇವುಗಳನ್ನೂ ಹಂದಿಮಾಂಸವನ್ನೂ ಭಕ್ಷಿಸಬಾರದು.

೪೪. ಎಲೌ ಪಾರ್ವತಿ, ಬಿಳಿಯ ರುದ್ರಾಕ್ಷವನ್ನು ಬ್ರಾಹ್ಮಣರು ಧರಿಸಬೇಕು. ಕ್ಷತ್ರಿಯರು ಕೆಂಪು ರುದ್ರಾಕ್ಷವನ್ನು ಧರಿಸಬೇಕು. ವೈಶ್ಯರು ಹಳದಿಬಣ್ಣದ ರುದ್ರಾಕ್ಷವನ್ನು ಧರಿಸಬೇಕು. ಕಪ್ಪುರುದ್ರಾಕ್ಷವನ್ನು ಶೂದ್ರರು ಧರಿಸಬೇಕು ಎಂದು ಶ್ರುತಿಯಲ್ಲಿ ಹೇಳಿರುವುದು.

೪೫. ಬ್ರಹ್ಮಚಾರೀ, ವಾನಪ್ರಸ್ಥ, ಗೃಹಸ್ಥ ಯತಿ ಇವರು ಪರಮರಹಸ್ಯವಾದ ಈ ರುದ್ರಾಕ್ಷವನ್ನು ಅವಶ್ಯವಾಗಿ ಧರಿಸಬೇಕು. ಎಂದೂ ಧರಿಸದಿರಬಾರದು. ರುದ್ರಾಕ್ಷ

ರುದ್ರಾಕ್ಷಧಾರಣಮಿದಂ ಸುಕೃತೈಶ್ಚ ಲಭ್ಯಂ
ತ್ಯಕ್ತ್ವೇದಮೇತದಖಿಲಾರ್ ನರಕಾರ್ ಪ್ರಯಾಂತಿ ॥ ೪೫ ॥

ಆದಾವಾಮಲಕಾಸ್ತತೋ ಲಘುತರಾ ರುಗ್ಣಾಸ್ತತಃ ಕಂಟಕೈಃ
ಸಂದಷ್ಟಾಃ ಕೃಮಿಭಿಸ್ತನೂಪಕರಣಚ್ಛಿದ್ರೇಣ ಹೀನಾಸ್ತಥಾ ।
ಧಾರ್ಯಾರ್ ನೈವ ಶುಭೇಪ್ಸುಭಿಶ್ಚಣಕವದ್ರುದ್ರಾಕ್ಷಮಪ್ಯಂತತೋ
ರುದ್ರಾಕ್ಷೋ ಮಮ ಲಿಂಗಮಂಗಲಮುಮೇ ಸೂಕ್ಷ್ಮಂ ಪ್ರಶಸ್ತಂ ಸದಾ ॥

ಸರ್ವಾಶ್ರಮಾಣಾಂ ವರ್ಣಾನಾಂ ಸ್ತ್ರೀಶೂದ್ರಾಣಾಂ ಶಿವಾಜ್ಞಯಾ ।
ಧಾರ್ಯಾಃ ಸದೈವ ರುದ್ರಾಕ್ಷಾ ಯತೀನಾಂ ಪ್ರಣವೇನ ಹಿ ॥ ೪೭ ॥

ದಿವಾಬಿಭ್ರದ್ರಾತ್ರಿಕೃತೈ ರಾತ್ರೌ ಬಿಭ್ರದ್ದಿವಾಕೃತೈಃ ।
ಪ್ರಾತರ್ಮಧ್ಯಾಹ್ನಸಾಯಾಹ್ನೇ ಮುಚ್ಯತೇ ಸರ್ವಪಾತಕೈಃ ॥ ೪೮ ॥

---

ಧಾರಣವು ಪುಣ್ಯದಿಂದಲೇ ಲಭಿಸುವುದು, ಇಂತಹ ರುದ್ರಾಕ್ಷಧಾರಣವನ್ನಾಚರಿಸದಿದ್ದರೆ ನರಕವು ಲಭಿಸುವುದು.

೪೬. ಮೊದಲು ನೆಲ್ಲಿಕಾಯಿಗಾತ್ರವಾದುದು ಒಳ್ಳೆಯದು. ಆಮೇಲೆ ಅದಕ್ಕಿಂತಲೂ ಚಿಕ್ಕದಾಗಿರುವುದು ಉತ್ತಮವಾದುದು. ಗಾಯವಾದುದು, ಮುಳ್ಳುಗಳಿಲ್ಲದುದು, ಕೃಮಿಗಳಿಂದ ದಷ್ಟವಾದುದು, ಪೋಣಿಸಲನುಕೂಲವಾದ ರಂಧ್ರವಿಲ್ಲದುದು, ಇಂತಹ ರುದ್ರಾಕ್ಷಗಳನ್ನು ಧರಿಸಬಾರದು. ಕಡಲೆ ಪ್ರಮಾಣವಾದ ರುದ್ರಾಕ್ಷಿಯನ್ನೂ ಧರಿಸಬಹುದು. ಎಲೌ ಪಾರ್ವತಿ! ರುದ್ರಾಕ್ಷವು ನನ್ನ ಮಂಗಲವಾದ ಲಿಂಗವು. ಚಿಕ್ಕದಾದುದು ಯಾವಾಗಲೂ ಪ್ರಶಸ್ತವಾದುದು.

೪೭. ಎಲ್ಲಾ ಆಶ್ರಮದವರೂ, ಸ್ತ್ರೀಯರು ಮತ್ತು ಶೂದ್ರರೂ ಸಹ ರುದ್ರಾಕ್ಷವನ್ನು ಸದಾ ಧರಿಸಬೇಕು. ಯತಿಗಳೂ ಸಹ ಓಂಕಾರಪೂರ್ವಕವಾಗಿ ಧರಿಸಬೇಕು. ಎಂದು ಶಿವನ ಆಜ್ಞೆಯು ಇರುವದು.

೪೮. ಹಗಲು ಧರಿಸಿದರೆ ರಾತ್ರಿಯ ಪಾಪವು ನಾಶವಾಗುವದು. ರಾತ್ರಿ ರುದ್ರಾಕ್ಷಗಳನ್ನು ಧರಿಸಿದರೆ ಹಗಲುಮಾಡಿದ ಪಾಪವು ನಾಶವಾಗುವದು. ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಕಾಲಗಳಲ್ಲಿ ಧರಿಸಿದರೆ ಸರ್ವ ಪಾಪಗಳೂ ನಾಶವಾಗುವವು.

ಯೇ ತ್ರಿಪುಂಡ್ರಧರಾ ಲೋಕೇ ಜಟಾಧಾರಿಣ ಏವ ಯೇ ।
ಯೇ ರುದ್ರಾಕ್ಷಧರಾಸ್ತೇ ವೈ ಯಮಲೋಕಂ ಪ್ರಯಾಂತಿ ನ ॥ ೪೯ ॥

ರುದ್ರಾಕ್ಷಮೇಕಂ ಶಿರಸಾ ಬಿಭರ್ತಿ
ತಥಾ ತ್ರಿಪುಂಡ್ರಂ ಚ ಲಲಾಟಮಧ್ಯೇ ।
ಪಂಚಾಕ್ಷರಂ ಯೇ ಹಿ ಜಪಂತಿ ಮಂತ್ರಂ
ಪೂಜ್ಯಾ ಭವದ್ಭಿಃ ಖಲು ತೇ ಹಿ ಸಾಧವಃ ॥ ೫೦ ॥

ಯಸ್ಯಾಂಗೇ ನಾಸ್ತಿ ರುದ್ರಾಕ್ಷಸ್ತ್ರಿಪುಂಡ್ರಂ ಭಾಲಪಟ್ಟಕೇ ।
ಮುಖೇ ಪಂಚಾಕ್ಷರಂ ನಾಸ್ತಿ ತಮಾನಯ ಯಮಾಲಯಂ ॥ ೫೧ ॥

ಜ್ಞಾತ್ವಾ ಜ್ಞಾತ್ವಾ ತತ್ಪ್ರಭಾವಂ ಭಸ್ಮರುದ್ರಾಕ್ಷಧಾರಿಣಃ ।
ತೇ ಪೂಜ್ಯಾಃ ಸರ್ವದಾಽಸ್ಮಾಕಂ ನೋ ನೇತವ್ಯಾಃ ಕದಾಚನ ॥ ೫೨ ॥

ಏವಮಾಜ್ಞಾಪಯಾಮಾಸ ಕಾಲೋಽಪಿ ನಿಜಕಿಂಕರಾನ್ ।
ತಥೇತಿ ಮತ್ವಾ ತೇ ಸರ್ವೇ ತೂಷ್ಣೀಮಾಸಂಸ್ತು ವಿಸ್ಮಿತಾಃ ॥ ೫೩ ॥

---

೪೯. ಭಸ್ಮತ್ರಿಪುಂಡ್ರವನ್ನು ಧರಿಸುವವರೂ, ಜಟಾಧಾರಿಗಳೂ, ರುದ್ರಾಕ್ಷವನ್ನು ಧರಿಸುವವರೂ ಸಹ ಯಮಲೋಕಕ್ಕೆ ಹೋಗುವುದಿಲ್ಲ.

೫೦. ಯಾವನು ರುದ್ರಾಕ್ಷವೊಂದನ್ನಾದರೂ ಶಿರಸ್ಸಿನಲ್ಲಿ ಧರಿಸುವನೋ, ಭಸ್ಮತ್ರಿಪುಂಡ್ರವನ್ನು ಧರಿಸುವನೋ, ಶಿವಪಂಚಾಕ್ಷರಮಂತ್ರವನ್ನು ಜಪಿಸುವನೋ ಅವನನ್ನು ಎಲ್ಲರೂ ಪೂಜಿಸಬೇಕು. ಅವನು ಸಾಧುವು, ಸತ್ಪುರುಷನು.

೫೧. ಯಮನು ಹೀಗೆ ಹೇಳಿರುವನು:—ಯಾವನ ಶರೀರದಲ್ಲಿ ರುದ್ರಾಕ್ಷವಿಲ್ಲವೋ, ಹಣೆಯಲ್ಲಿ ವಿಭೂತಿಯಿಲ್ಲವೋ, ಮುಖದಲ್ಲಿ ಶಿವಪಂಚಾಕ್ಷರೀಮಂತ್ರವಿಲ್ಲವೋ ಅವನನ್ನು ಯಮಲೋಕಕ್ಕೆ ಕರೆದುಕೊಂಡು ಬನ್ನಿ.

೫೨. ಭಸ್ಮರುದ್ರಾಕ್ಷಗಳ ಮಹಿಮೆಯನ್ನು ತಿಳಿದು ಭಸ್ಮರುದ್ರಾಕ್ಷಧಾರಿಗಳನ್ನು ಸದಾ ನಾವು ಪೂಜಿಸಬೇಕು. ಅವರನ್ನು ಯಮಲೋಕಕ್ಕೆ ಕರೆತರಕೂಡದು.

೫೩. ಹೀಗೆ ಯಮನೂ ಸಹ ತನ್ನ ದೂತರಿಗೆ ಅಪ್ಪಣೆಮಾಡಿರುವನು. ಆ ದೂತರು ಹಾಗೆಯೇ ಆಗಲಿ ಎಂದು ಅಂಗೀಕರಿಸಿ, ವಿಸ್ಮಯಗೊಂಡು ಸುಮ್ಮ

ಅತ ಏವ ಮಹಾದೇವಿ ರುದ್ರಾಕ್ಷೋಽಪ್ಯಘನಾಶನಃ ।
ತದ್ಧರೋ ಮತ್ಪ್ರಿಯಃ ಶುದ್ಧೋಽತ್ಯಘವಾನಪಿ ಪಾರ್ವತಿ ॥ ೫೪ ॥

ಹಸ್ತೇ ಬಾಹೌ ತಥಾ ಮೂರ್ಧ್ನಿ ರುದ್ರಾಕ್ಷಂ ಧಾರಯೇತ್ತು ಯಃ ।
ಅವಧ್ಯಾಃ ಸರ್ವಭೂತಾನಾಂ ರುದ್ರರೂಪೀ ಚರೇದ್ಭುವಿ ॥ ೫೫ ॥

ಸುರಾಸುರಾಣಾಂ ಸರ್ವೇಷಾಂ ವಂದನೀಯಃ ಸದಾ ಸ ವೈ ।
ಪೂಜನೀಯೋ ಹಿ ದೃಷ್ಟಸ್ಯ ಪಾಪಹಾ ಚ ಯಥಾ ಶಿವಃ ॥ ೫೬ ॥

ಜ್ಞಾನಧ್ಯಾನಾವಮುಕ್ತೋಽಪಿ ರುದ್ರಾಕ್ಷಂ ಧಾರಯೇತ್ತು ಯಃ ।
ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ ॥ ೫೭ ॥

ರುದ್ರಾಕ್ಷೇಣ ಜಪನ್ ಮಂತ್ರಂ ಪುಣ್ಯಂ ಕೋಟಿಗುಣಂ ಭವೇತ್ ।
ದಶಕೋಟಿಗುಣಂ ಪುಣ್ಯಂ ಲಭತೇ ಧಾರಣಾನ್ನರಃ ॥ ೫೮ ॥

---

ನಾದರು. ಅಂದಿನ ಲಾಗಾಯ್ತು ಭಸ್ಮರುದ್ರಾಕ್ಷಧಾರಿಗಳು ಯಮಲೋಕಕ್ಕೆ ಹೋಗುವುದಿಲ್ಲ.

೫೪. ಎಲೌ ಪಾರ್ವತಿ, ಆದುದರಿಂದ ರುದ್ರಾಕ್ಷವೂ ಸಹ ಪಾಪನಾಶಕವು. ಅದನ್ನು ಧರಿಸುವವನು ನನಗೆ ತುಂಬಾ ಪ್ರಿಯನು ಮತ್ತು ಪಾಪವಿಲ್ಲದೆ ಶುದ್ಧನಾಗುವನು.

೫೫. ಕೈಗಳು, ಬಾಹುಗಳು, ಶಿರಸ್ಸು, ಇವುಗಳಲ್ಲಿ ರುದ್ರಾಕ್ಷವನ್ನು ಯಾವನು ಧರಿಸುವನೋ ರುದ್ರರೂಪನಾದ ಅವನು ಸರ್ವ ಪ್ರಾಣಿಗಳಿಗೂ ಅವಧ್ಯನಾಗಿ ಸಂಚರಿಸುವನು. ಅವನನ್ನು ಯಾರೂ ಹಿಂಸಿಸಲಾರರು, ಕೊಲ್ಲಲಾರರು.

೫೬. ದೇವತೆಗಳಿಗೂ ರಾಕ್ಷಸರಿಗೂ ಸಹ ಅವನು ಶಿವನಂತೆ ಪೂಜ್ಯನು. ಅವನನ್ನು ದರ್ಶನಮಾಡಿದರೆ ಶಿವನಂತೆ ಪಾಪವನ್ನು ನಾಶಮಾಡುವನು.

೫೭. ಜ್ಞಾನ ಮತ್ತು ಧ್ಯಾನಗಳನ್ನು ತಿಳಿಯದವನಾದರೂ ಸಹ ರುದ್ರಾಕ್ಷವನ್ನು ಧರಿಸಿದರೆ ಅವನು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಪರಮಗತಿ (ಮುಕ್ತಿ) ಯನ್ನು ಪಡೆಯುವನು.

೫೮-೫೯. ರುದ್ರಾಕ್ಷಿಯಿಂದ ಶಿವಪಂಚಾಕ್ಷರ ಮಂತ್ರವನ್ನು ಜಪಿಸಿದರೆ ಕೋಟಿಯಷ್ಟು ಹೆಚ್ಚು ಫಲವು ಲಭಿಸುವುದು. ರುದ್ರಾಕ್ಷವನ್ನು ಧರಿಸಿ ಜಪಿಸಿದರೆ ಹತ್ತು

ಯಾವತ್ಕಾಲಂ ಹಿ ಜೀವಸ್ಯ ಶರೀರಸ್ಥೋ ಭವೇತ್ಸ ವೈ ।
ತಾವತ್ಕಾಲಂ ಸ್ವಲ್ಪಮೃತ್ಯುರ್ನ ತಂ ದೇವಿ ವಿಬಾಧತೇ ॥ ೫೯ ॥

ತ್ರಿಪುಂಡ್ರೇಣ ಚ ಸಂಯುಕ್ತಂ ರುದ್ರಾಕ್ಷಾವಿಲಸಾಂಗಕಂ ।
ಮೃತ್ಯುಂಜಯಂ ಜಪಂತಂ ಚ ದೃಷ್ಟ್ವಾ ರುದ್ರಫಲಂ ಲಭೇತ್ ॥ ೬೦ ॥

ಪಂಚದೇವಪ್ರಿಯಶ್ಚೈವ ಸರ್ವದೇವಪ್ರಿಯಸ್ತಥಾ ।
ಸರ್ವಮಂತ್ರಾಞ್ಜಪೇದ್ಭಕ್ತೋ ರುದ್ರಾಕ್ಷಮಾಲಯಾ ಶಿವೇ ॥ ೬೧ ॥

ವಿಷ್ಣ್ವಾದಿದೇವಭಕ್ತಾಶ್ಚ ಧಾರಯೇಯುರ್ನ ಸಂಶಯಃ ।
ರುದ್ರಭಕ್ತೋ ವಿಶೇಷೇಣ ರುದ್ರಾಕ್ಷಾನ್ ಧಾರಯೇತ್ಸದಾ ॥ ೬೨ ॥

ರುದ್ರಾಕ್ಷಾ ವಿವಿಧಾಃ ಪ್ರೋಕ್ತಾಸ್ತೇಷಾಂ ಭೇದಾನ್ ವದಾಮ್ಯಹಂ ।
ಶೃಣು ಪಾರ್ವತಿ ಸದ್ಭಕ್ತ್ಯಾ ಭುಕ್ತಿಮುಕ್ತಿಫಲಪ್ರದಾನ್ ॥ ೬೩ ॥

---

ಕೋಟಿ ಪುಣ್ಯವು ಬರುವುದು. ರುದ್ರಾಕ್ಷವನ್ನು ಶರೀರದಲ್ಲಿ ಧರಿಸುವವರಿಗೆ ಅಪಮೃತ್ಯುವಾಗಲೀ ಅಲ್ಪಮೃತ್ಯುವಾಗಲೀ ಬರುವುದೇ ಇಲ್ಲ.

೬೦. ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷವನ್ನೂ ಧರಿಸಿ ಮೃತ್ಯುಂಜಯಮಂತ್ರವನ್ನು ಜಪಿಸುವವನನ್ನು ದರ್ಶನಮಾಡಿದರೆ ರುದ್ರನನ್ನು ದರ್ಶನಮಾಡಿದ ಫಲವು ಲಭಿಸುವುದು.

೬೧. ಎಲೌ ಪಾರ್ವತಿ, ಮೇಲೆ ಹೇಳಿದ ಭಸ್ಮರುದ್ರಾಕ್ಷಧಾರಿಯಾದ ಶಿವಭಕ್ತನು ಈಶ್ವರನ ಅಘೋರಾದಿ ಪಂಚಬ್ರಹ್ಮದೇವತೆಗಳಿಗೂ ಮಿಕ್ಕ ಎಲ್ಲಾ ದೇವತೆಗಳಿಗೆ ಪ್ರಿಯನಾಗುವನು. ಅಲ್ಲದೆ ಮಿಕ್ಕ ಎಲ್ಲಾ ಮಂತ್ರಗಳನ್ನೂ ಸಹ ರುದ್ರಾಕ್ಷಮಾಲೆಯಿಂದಲೇ ಜಪಿಸಬೇಕು.

೬೨. ವಿಷ್ಣು ಮುಂತಾದ ಮಿಕ್ಕ ದೇವಭಕ್ತರೂ ಸಹ ರುದ್ರಾಕ್ಷಿಗಳನ್ನು ಧರಿಸಬೇಕು. ವಿಶೇಷವಾಗಿ ಶಿವಭಕ್ತನು ರುದ್ರಾಕ್ಷಗಳನ್ನು ಸದಾ ಧರಿಸಬೇಕು.

೬೩. ಭೋಗಮೋಕ್ಷಗಳನ್ನುಂಟುಮಾಡುವ ಈ ರುದ್ರಾಕ್ಷಗಳು ಅನೇಕ ವಿಧವಾಗಿರುವವು. ಎಲೌ ಪಾರ್ವತಿ, ಅವುಗಳನ್ನು ಹೇಳುವೆನು ಕೇಳು.

ಏಕವಕ್ತ್ರಃ ಶಿವಸ್ಸಾಕ್ಷಾದ್ಭುಕ್ತಿಮುಕ್ತಿಫಲಪ್ರದಾ ।
ತಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾಂ ವ್ಯಪೋಹತಿ ॥ ೬೪ ॥

ಯತ್ರ ಸಂಪೂಜಿತಸ್ತತ್ರ ಲಕ್ಷ್ಮೀರ್ದೂರತರಾ ನ ಹಿ ।
ನಶ್ಯಂತ್ಯುಪದ್ರವಾಃ ಸರ್ವೇ ಸರ್ವಕಾಮಾ ಭವಂತಿ ಹಿ ॥ ೬೫ ॥

ದ್ವಿವಕ್ತ್ರೋ ದೇವದೇವೇಶಸ್ಸರ್ವಕಾಮಫಲಪ್ರದಃ ।
ವಿಶೇಷತಃ ಸ ರುದ್ರಾಕ್ಷೋ ಗೋವಧಂ ನಾಶಯೇದ್ಧ್ರುವಂ ॥ ೬೬ ॥

ತ್ರಿವಕ್ತ್ರೋ ಯೋ ಹಿ ರುದ್ರಾಕ್ಷಃ ಸಾಕ್ಷಾತ್ಸಾಧನದಸ್ಸದಾ ।
ತತ್ಪ್ರಭಾವಾದ್ಭವೇಯುರ್ವೈ ವಿದ್ಯಾಃ ಸರ್ವಾಃ ಪ್ರತಿಷ್ಠಿತಾಃ ॥ ೬೭ ॥

ಚತುರ್ವಕ್ತ್ರಃ ಸ್ವಯಂ ಬ್ರಹ್ಮಾ ನರಹತ್ಯಾಂ ವ್ಯಪೋಹತಿ ।
ದರ್ಶನಾತ್ಸ್ಪರ್ಶನಾತ್ಸದ್ಯಶ್ಚತುರ್ವರ್ಗಫಲಪ್ರದಃ ॥ ೬೮ ॥

---

೬೪. ಒಂದು ಮುಖವುಳ್ಳ ರುದ್ರಾಕ್ಷವು ಸಾಕ್ಷಾತ್ ಶಿವಸ್ವರೂಪವಾದುದು. ಭೋಗ ಮತ್ತು ಮುಕ್ತಿಗಳನ್ನು ಕೊಡುವುದು. ಅಂತಹ ರುದ್ರಾಕ್ಷಧಾರಿಯನ್ನು ದರ್ಶನಮಾಡಿದರೆ ಬ್ರಹ್ಮಹತ್ಯಾಪಾಪವು ಹೋಗುವದು.

೬೫. ಏಕಮುಖ ರುದ್ರಾಕ್ಷವನ್ನು ಪೂಜಿಸುವ ಸ್ಥಳದಲ್ಲಿ ಲಕ್ಷ್ಮಿ (ಸಂಪತ್ತು) ಯು ನೆಲಸಿರುವಳು. ಸಕಲೋಪದ್ರವಗಳೂ ನಾಶವಾಗುವುವು. ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವುವು.

೬೬. ಎರಡು ಮುಖವುಳ್ಳದುದು ದೇವದೇವನಾದ ಈಶ್ವರನ ಸ್ವರೂಪವಾದುದು. ಸಕಲ ಇಷ್ಟಾರ್ಥಗಳನ್ನುಂಟುಮಾಡುವುದು. ವಿಶೇಷವಾಗಿ ಎರಡು ಮುಖವುಳ್ಳ ರುದ್ರಾಕ್ಷವು ಗೋಹತ್ಯೆಪಾಪವನ್ನು ಹೋಗಲಾಡಿಸುವುದು.

೬೭. ಮೂರು ಮುಖವುಳ್ಳ ರುದ್ರಾಕ್ಷವು ಸಾಕ್ಷಾತ್ ಮುಕ್ತಿಸಾಧನವನ್ನುಂಟುಮಾಡುವುದು. ಅದರ ಮಹಿಮೆಯಿಂದ ಸಕಲ ವಿದ್ಯೆಗಳೂ ಲಭಿಸುವವು.

೬೮. ನಾಲ್ಕು ಮುಖವುಳ್ಳ ರುದ್ರಾಕ್ಷವು ಚತುರ್ಮುಖಬ್ರಹ್ಮಸ್ವರೂಪವಾದುದು. ಅದು ನರಹತ್ಯೆಯನ್ನು ಹೋಗಲಾಡಿಸುವುದು. ಅಂತಹ ರುದ್ರಾಕ್ಷವನ್ನು ದರ್ಶನಮಾಡಿದರೆ ಮತ್ತು ಸ್ಪರ್ಶಿಸಿದರೆ ಚತುರ್ವಿಧ ಪುರುಷಾರ್ಥಗಳೂ ಲಭಿಸುವವು.

ಪಂಚವಕ್ತ್ರಃ ಸ್ವಯಂ ರುದ್ರಃ ಕಾಲಾಗ್ನಿರ್ನಾಮತಃ ಪ್ರಭುಃ ।
ಸರ್ವಮುಕ್ತಿಪ್ರದಶ್ಚೈವ ಸರ್ವಕಾಮಫಲಪ್ರದಃ　　　　॥ ೧೯ ॥

ಅಗಮ್ಯಾಗಮನಂ ಪಾಪಮಭಕ್ಷ್ಯಸ್ಯ ಚ ಭಕ್ಷಣಂ ।
ಇತ್ಯಾದಿಸರ್ವಪಾಪಾನಿ ಪಂಚವಕ್ತ್ರೋ ವ್ಯಪೋಹತಿ　　　　॥ ೨೦ ॥

ಷಡ್ವಕ್ತ್ರಃ ಕಾರ್ತಿಕೇಯಸ್ತು ಧಾರಣಾದ್ದಕ್ಷಿಣೇ ಭುಜೇ ।
ಬ್ರಹ್ಮಹತ್ಯಾದಿಕೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ　　　　॥ ೨೧ ॥

ಸಪ್ತವಕ್ತ್ರೋ ಮಹೇಶಾನಿ ಹ್ಯನಂಗೋ ನಾಮ ನಾಮತಃ ।
ಧಾರಣಾತ್ತಸ್ಯ ದೇವೇಶಿ ದರಿದ್ರೋಽಪೀಶ್ವರೋ ಭವೇತ್　　　　॥ ೨೨ ॥

ರುದ್ರಾಕ್ಷಶ್ಚಾಷ್ಟವಕ್ತ್ರಶ್ಚ ವಸುಮೂರ್ತಿಶ್ಚ ಭೈರವಃ ।
ಧಾರಣಾತ್ತಸ್ಯ ಪೂರ್ಣಾಯುರ್ಮೃತೋ ಭವತಿ ಶೂಲಭೃತ್　　　　॥ ೨೩ ॥

---

೧೯. ಐದು ಮುಖವುಳ್ಳ ರುದ್ರಾಕ್ಷವು ಕಾಲಾಗ್ನಿ ಎಂಬ ಹೆಸರುಳ್ಳ ರುದ್ರನ ಸ್ವರೂಪವಾದುದು. ಅದು ಸಕಲ ಮುಕ್ತಿಗಳನ್ನೂ ಸಕಲ ಇಷ್ಟಾರ್ಥಗಳನ್ನೂ ಉಂಟು ಮಾಡುವದು.

೨೦. ಅಗಮ್ಯ (ಸೇರಬಾರದಂತಹ) ಳಾದ ಸ್ತ್ರೀಯಲ್ಲಿ ಸಂಭೋಗಮಾಡುವುದು, ತಿನ್ನಬಾರದ ಮಾಂಸ ಮುಂತಾದುವುಗಳನ್ನು ತಿನ್ನುವುದು ಮುಂತಾದ ಎಲ್ಲಾ ಪಾಪಗಳನ್ನೂ ಐದು ಮುಖಗಳುಳ್ಳ ರುದ್ರಾಕ್ಷವು ನಾಶಮಾಡುವುದು.

೨೧. ಆರು ಮುಖವುಳ್ಳ ರುದ್ರಾಕ್ಷವು ಷಣ್ಮುಖಸ್ವರೂಪವಾದುದು. ಅದನ್ನು ಬಲಭುಜದಲ್ಲಿ ಧರಿಸಿದರೆ ಬ್ರಹ್ಮಹತ್ಯೆ ಮೊದಲಾದ ಪಾಪಗಳು ನಾಶವಾಗುವುವು.

೨೨. ಏಳು ಮುಖವುಳ್ಳ ರುದ್ರಾಕ್ಷವು ಅನಂಗವೆಂದು ಹೆಸರುಳ್ಳದುದು. ಅದನ್ನು ಧರಿಸಿದವನು ದರಿದ್ರನಾದರೂ ಶ್ರೀಮಂತನಾಗುವನು.

೨೩. ಎಂಟು ಮುಖಗಳುಳ್ಳ ರುದ್ರಾಕ್ಷವು ಅಷ್ಟ ವಸುಸ್ವರೂಪವೂ ಭೈರವ ಸ್ವರೂಪವೂ ಆದುದು. ಅದನ್ನು ಧರಿಸಿದವನು ದೀರ್ಘಕಾಲ ಜೀವಿಸಿದ್ದು ಮರಣಾನಂತರ ಶಿವಸ್ವರೂಪವನ್ನು ಪಡೆಯುವನು.

ಭೈರವೋ ನವವಕ್ತ್ರಶ್ಚ ಕಪಿಲಶ್ಚ ಮಹಾಮುನಿಃ ।
ದುರ್ಗಾ ವಾ ತದಧಿಷ್ಠಾತ್ರೀ ನವರೂಪಾ ಮಹೇಶ್ವರೀ ॥ ೭೪ ॥

ತಂ ಧಾರಯೇದ್ವಾಮಹಸ್ತೇ ರುದ್ರಾಕ್ಷಂ ಭಕ್ತಿತತ್ಪರಃ ।
ಸರ್ವೇಶ್ವರೋ ಭವೇನ್ನೂನಂ ಮಮ ತುಲ್ಯೋ ನ ಸಂಶಯಃ ॥ ೭೫ ॥

ದಶವಕ್ತ್ರೋ ಮಹೇಶಾನಿ ಸ್ವಯಂ ದೇವೋ ಜನಾರ್ದನಃ ।
ಧಾರಣಾತ್ತಸ್ಯ ದೇವೇಶಿ ಸರ್ವಾನ್ ಕಾಮಾನವಾಪ್ನುಯಾತ್ ॥ ೭೬ ॥

ಏಕಾದಶಮುಖೋ ಯಸ್ತು ರುದ್ರಾಕ್ಷಃ ಪರಮೇಶ್ವರಿ ।
ಸ ರುದ್ರೋ ಧಾರಣಾತ್ತಸ್ಯ ಸರ್ವತ್ರ ವಿಜಯೀ ಭವೇತ್ ॥ ೭೭ ॥

ದ್ವಾದಶಾಸ್ಯಂ ತು ರುದ್ರಾಕ್ಷಂ ಧಾರಯೇತ್ಕೇಶದೇಶಕೇ ।
ಆದಿತ್ಯಾಶ್ಚೈವ ತೇ ಸರ್ವೇ ದ್ವಾದಶೈವ ಸ್ಥಿತಾಸ್ತಥಾ ॥ ೭೮ ॥

ತ್ರಯೋದಶಮುಖೋ ವಿಶ್ವೇದೇವಸ್ತದ್ಧಾರಣಾನ್ನರಃ ।
ಸರ್ವಾನ್ಕಾಮಾನವಾಪ್ನೋತಿ ಸೌಭಾಗ್ಯಂ ಮಂಗಲಂ ಲಭೇತ್ ॥ ೭೯ ॥

---

೭೪-೭೫. ಭೈರವ ಮತ್ತು ಮಹಾಮುನಿಯಾದ ಕಪಿಲ, ಅಥವಾ ಮಹೇಶ್ವರಿಯಾದ ನವದುರ್ಗಾದೇವಿಯು ನವಮುಖ ರುದ್ರಾಕ್ಷದ ಅಧಿದೇವತೆಯು. ಇಂತಹ ರುದ್ರಾಕ್ಷವನ್ನು ಎಡಗೈನಲ್ಲಿ ಭಕ್ತಿಯಿಂದ ಧರಿಸಿದರೆ ಅವನು ನನ್ನಂತೆ ಸರ್ವೇಶ್ವರನಾಗುವನು, ಸಂಶಯವಿಲ್ಲ.

೭೬-೭೮. ಹತ್ತು ಮುಖವುಳ್ಳ ರುದ್ರಾಕ್ಷವು ವಿಷ್ಣುಸ್ವರೂಪವಾದುದು. ಎಲೌ ಪಾರ್ವತಿ! ಅದನ್ನು ಧರಿಸಿದರೆ ಸಕಲ ಇಷ್ಟಗಳೂ ಲಭಿಸುವುವು. ಹನ್ನೊಂದು ಮುಖವುಳ್ಳ ರುದ್ರಾಕ್ಷವು ಏಕಾದಶರುದ್ರಸ್ವರೂಪವಾದುದು. ಅದನ್ನು ಧರಿಸಿದರೆ ಎಲ್ಲೆಡೆಯಲ್ಲಿಯೂ ವಿಜಯವು ಲಭಿಸುವುದು. ಹನ್ನೆರಡು ಮುಖವುಳ್ಳ ರುದ್ರಾಕ್ಷವು ದ್ವಾದಶಾದಿತ್ಯಸ್ವರೂಪವಾದುದು. ಅದನ್ನು ಶಿಖೆಯಲ್ಲಿ ಧರಿಸಬೇಕು.

೭೯-೮೧. ಹದಿಮೂರು ಮುಖವುಳ್ಳ ರುದ್ರಾಕ್ಷವು ವಿಶ್ವೇದೇವಸ್ವರೂಪವಾದುದು. ಅದನ್ನು ಧರಿಸಿದರೆ ನರನು ಸಕಲ ಇಷ್ಟಾರ್ಥಗಳನ್ನೂ ಸೌಭಾಗ್ಯ, ಮಂಗಳಗಳನ್ನೂ ಪಡೆಯುವನು. ಹದಿನಾಲ್ಕು ಮುಖವುಳ್ಳ ರುದ್ರಾಕ್ಷವು ಪರಮಶಿವಸ್ವರೂಪವಾದುದು. ಅದನ್ನು ಶಿರಸ್ಸಿನಲ್ಲಿ ಧರಿಸಿದರೆ ಸಕಲ ಪಾಪಗಳೂ ನಾಶವಾಗು

ಚತುರ್ದಶಮುಖೋ ಯೋ ಹಿ ರುದ್ರಾಕ್ಷಃ ಪರಮಃ ಶಿವಃ ।
ಧಾರಯೇನ್ಮೂರ್ಧ್ನಿ ತಂ ಭಕ್ತ್ಯಾ ಸರ್ವಪಾಪಂ ಪ್ರಣಶ್ಯತಿ　　॥ ೮೦ ॥

ಇತಿ ರುದ್ರಾಕ್ಷಭೇದಾ ಹಿ ಪ್ರೋಕ್ತಾ ವೈ ಮುಖಭೇದತಃ ।
ತತ್ತನ್ಮಂತ್ರಾನ್ ಶೃಣು ಪ್ರೀತ್ಯಾ ಕ್ರಮಾಚ್ಛೈಲವರಾತ್ಮಜೆ　　॥ ೮೧ ॥

(೧) ಓಂ ಹ್ರೀಂ ನಮಃ (೨) ಓಂ ನಮಃ (೩) ಓಂ ಕ್ಲೀಂ ನಮಃ (೪) ಓಂ ಹ್ರೀಂ ನಮಃ (೫) ಓಂ ಹ್ರೀಂ ನಮಃ (೬) ಓಂ ಹ್ರೀಂ ಹುಂ ನಮಃ (೭) ಓಂ ಹಂ ನಮಃ (೮) ಓಂ ಹುಂ ನಮಃ (೮) ಓಂ ಹುಂ ನಮಃ (೯) ಓಂ ಹ್ರೀಂ ಹುಂ ನಮಃ (೧೦) ಓಂ ಹ್ರೀಂ ನಮಃ (೧೧) ಓಂ ಹ್ರೀಂ ಹುಂ ನಮಃ (೧೨) ಓಂ ಕ್ರೋಂ ಕ್ಷಾಂ ರೌಂ ನಮಃ (೧೩) ಓಂ ಹ್ರೀಂ ನಮಃ (೧೪) ಓಂ ನಮಃ.

ಭಕ್ತಿಶ್ರದ್ಧಾಯುತಶ್ಚೈವ ಸರ್ವಕಾಮಾರ್ಥಸಿದ್ಧಯೇ ।
ರುದ್ರಾಕ್ಷಾನ್ ಧಾರಯೇನ್ಮಂತ್ರೈರ್ದೇವನಾಲಸ್ಯ ವರ್ಜಿತಃ　　॥ ೮೨ ॥

---

ವುವು. ಎಲೌ ಪಾರ್ವತಿ ! ಈರೀತಿಯಾಗಿ ಮುಖಭೇದದಿಂದ ರುದ್ರಾಕ್ಷಿಗಳ ಭೇದವನ್ನು ಹೇಳಿರುವೆನು. ಈಗ ಆಯಾಯ ರುದ್ರಾಕ್ಷಗಳ ಮಂತ್ರಗಳನ್ನು ಕ್ರಮವಾಗಿ ಹೇಳುವೆನು ಕೇಳು.

(೧) ಓಂ ಹ್ರೀಂ ನಮಃ (೨) ಓಂ ನಮಃ (೩) ಓಂ ಕ್ಲೀಂ ನಮಃ (೪) ಓಂ ಹ್ರೀಂ ನಮಃ (೫) ಓಂ ಹ್ರೀಂನಮಃ (೬) ಓಂ ಹ್ರೀಂ ಹುಂ ನಮಃ (೭) ಓಂ ಹಂ ನಮಃ (೮) ಓಂ ಹುಂ ನಮಃ (೯) ಓಂ ಹ್ರೀಂ ಹುಂ ನಮಃ (೧೦) ಓಂ ಹ್ರೀಂ ನಮಃ (೧೧) ಓಂ ಹ್ರೀಂ ಹುಂ ನಮಃ (೧೨) ಓಂ ಕ್ರೋಂ ಕ್ಷಾಂ ರೌಂ ನಮಃ (೧೩) ಓಂ ಹ್ರೀಂ ನಮಃ (೧೪) ಓಂ ನಮಃ.

೮೨. ಸರ್ವ ಇಷ್ಟಾರ್ಥಗಳ ಸಿದ್ಧಿಗಾಗಿ ಭಕ್ತಿ ಮತ್ತು ಶ್ರದ್ಧೆಯಿಂದ ಕೂಡಿದವನಾಗಿ ಮೇಲೆ ಹೇಳಿದ ಮಂತ್ರಗಳಿಂದ ಕ್ರಮವಾಗಿ ಆಯಾಯ ರುದ್ರಾಕ್ಷಗಳನ್ನು ಧರಿಸಬೇಕು.

ವಿನಾ ಮಂತ್ರೇಣ ಯೋ ಧತ್ತೇ ರುದ್ರಾಕ್ಷಂ ಭುವಿ ಮಾನವಃ ।
ಸ ಯಾತಿ ನರಕಂ ಘೋರಂ ಯಾವದಿಂದ್ರಾಶ್ಚತುರ್ದಶ ॥ ೮೩ ॥

ರುದ್ರಾಕ್ಷಮಾಲಿನಂ ದೃಷ್ಟ್ವಾ ಭೂತಪ್ರೇತಪಿಶಾಚಕಾಃ ।
ಡಾಕಿನೀ ಶಾಕಿನೀ ಚೈವ ಯೇ ಚಾನ್ಯೇ ದ್ರೋಹಕಾರಕಾಃ ॥ ೮೪॥

ಕೃತ್ರಿಮಂ ಚೈವ ಯತ್ಕಿಂಚಿದಭಿಚಾರಾಧಿಕಂ ಚ ಯತ್ ।
ತತ್ಸರ್ವಂ ದೂರತೋ ಯಾತಿ ದೃಷ್ಟ್ವಾ ಶಂಕಿತವಿಗ್ರಹಂ ॥ ೮೫ ॥

ರುದ್ರಾಕ್ಷಮಾಲಿನಂ ದೃಷ್ಟ್ವಾ ಶಿವೋ ವಿಷ್ಣುಃ ಪ್ರಸೀದತಿ ।
ದೇವೀ ಗಣಪತಿಃ ಸೂರ್ಯಃ ಸುರಾಶ್ಚಾನ್ಯೇಽಪಿ ಪಾರ್ವತಿ ॥ ೮೬ ॥

ಏವಂ ಜ್ಞಾತ್ವಾ ತು ಮಾಹಾತ್ಮ್ಯಂ ರುದ್ರಾಕ್ಷಸ್ಯ ಮಹೇಶ್ವರಿ ।
ಸಮ್ಯಗ್ಧಾರ್ಯಾಸ್ಸಮಂತ್ರಾಶ್ಚ ಭಕ್ತ್ಯಾ ಧರ್ಮವಿವೃದ್ಧಯೇ ॥ ೮೭ ॥

ಇತ್ಯುಕ್ತಂ ಗಿರಿಜಾಗ್ರೇಹಿ ಶಿವೇನ ಪರಮಾತ್ಮನಾ ।
ಭಸ್ಮರುದ್ರಾಕ್ಷಮಾಹಾತ್ಮ್ಯಂ ಭುಕ್ತಿಮುಕ್ತಿಫಲಪ್ರದಂ ॥ ೮೮ ॥

---

೮೩. ಮಂತ್ರಗಳಿಲ್ಲದೆ ರುದ್ರಾಕ್ಷಗಳನ್ನು ಧರಿಸುವ ಮಾನವನು ಹದಿನಾಲ್ಕು ಇಂದ್ರರ ಆಯುಸ್ಸಿನ ಪರ್ಯಂತವಾಗಿ ಘೋರವಾದ ನರಕವನ್ನು ಅನುಭವಿಸುವನು.

೮೪-೮೫. ರುದ್ರಾಕ್ಷಮಾಲೆಯನ್ನು ಧರಿಸಿದವನನ್ನು ನೋಡಿ ಭೂತ, ಪ್ರೇತ, ಪಿಶಾಚಿಗಳೂ, ಡಾಕಿನೀ ಶಾಕೀನೀ ಮುಂತಾದ ಅನಿಷ್ಟವನ್ನುಂಟುಮಾಡುವ ಗ್ರಹಗಳೂ ಮಾಟ ಮುಂತಾದ ಕೃತ್ರಿಮಕರ್ಮಗಳೂ ಸಹ ದೂರವಾಗಿ ಓಡಿ ಹೋಗುವುವು.

೮೬. ಎಲೌ ಪಾರ್ವತಿ, ರುದ್ರಾಕ್ಷಧಾರಿಯನ್ನು ನೋಡಿದರೆ ಶಿವ, ವಿಷ್ಣು ದೇವಿ, ಗಣಪತಿ, ಸೂರ್ಯ, ಮಿಕ್ಕ ದೇವತೆಗಳೂ ಸಹ ಪ್ರಸನ್ನರಾಗುವರು.

೮೭. ಎಲೌ ಮಹೇಶ್ವರಿ! ಈ ರೀತಿಯಾಗಿ ರುದ್ರಾಕ್ಷ ಮಹಿಮೆಯನ್ನು ತಿಳಿದು ಅವುಗಳನ್ನು ಮಂತ್ರಪೂರ್ವಕವಾಗಿ ಧರಿಸಬೇಕು. ಅದರಿಂದ ಧರ್ಮವೃದ್ಧಿಯಾಗುವುದು.

೮೮. ಸೂತನು ಹೇಳುವನು—ಎಲೈ ಮುನಿಗಳೇ! ಹೀಗೆ ಶಿವನು ಗಿರಿಜೆಯ ಎದುರಿಗೆ ಭೋಗ ಮತ್ತು ಮೋಕ್ಷಗಳನ್ನುಂಟುಮಾಡುವ ಭಸ್ಮ ಮತ್ತು ರುದ್ರಾಕ್ಷಗಳ ಮಹಿಮೆಯನ್ನು ಹೇಳಿರುವನು.

ಶಿವಸ್ಯಾತಿಪ್ರಿಯೌ ಜ್ಞೇಯೌ ಭಸ್ಮರುದ್ರಾಕ್ಷಧಾರಿಣೌ ।
ತದ್ಧಾರಣಪ್ರಭಾವಾದ್ಧಿ ಭುಕ್ತಿರ್ಮುಕ್ತಿರ್ನ ಸಂಶಯಃ ॥ ೮೯ ॥

ಭಸ್ಮರುದ್ರಾಕ್ಷಧಾರೀ ಯಶ್ಶಿವಭಕ್ತಸ್ಸ ಉಚ್ಯತೇ ।
ಪಂಚಾಕ್ಷರಜಪಾಸಕ್ತಃ ಪರಿಪೂರ್ಣಶ್ಚ ಸನ್ಮುಖೇ ॥ ೯೦ ॥

ವಿನಾ ಭಸ್ಮತ್ರಿಪುಂಡ್ರೇನ ವಿನಾ ರುದ್ರಾಕ್ಷಮಾಲಯಾ ।
ಪೂಜಿತೋಽಪಿ ಮಹಾದೇವೋ ನಾಭೀಷ್ಟಫಲದಾಯಕಃ ॥ ೯೧ ॥

ತತ್ಸರ್ವಂ ಚ ಸಮಾಖ್ಯಾತಂ ಯತ್ಪೃಷ್ಟಂ ಹಿ ಮುನೀಶ್ವರ ।
ಭಸ್ಮರುದ್ರಾಕ್ಷಮಾಹಾತ್ಮ್ಯಂ ಸರ್ವಕಾಮಸಮೃದ್ಧಿದಂ ॥ ೯೨ ॥

ಏತದ್ಯಃ ಶೃಣುಯಾನ್ನಿತ್ಯಂ ಮಾಹಾತ್ಮ್ಯಂ ಪರಮಂ ಶುಭಂ ।
ರುದ್ರಾಕ್ಷಭಸ್ಮನೋರ್ಭಕ್ತ್ಯಾ ಸರ್ವಾನ್ ಕಾಮಾನವಾಪ್ನುಯಾತ್ ॥ ೯೩ ॥

---

೮೯. ಆದುದರಿಂದ ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸುವವರು ಶಿವನಿಗೆ ತುಂಬಾ ಪ್ರಿಯರಾಗುವರು. ಆ ಭಸ್ಮರುದ್ರಾಕ್ಷಗಳನ್ನು ಧರಿಸುವುದರ ಮಹಿಮೆಯಿಂದ ಭೋಗವೂ ಮುಕ್ತಿಯೂ ಲಭಿಸುವುವು.

೯೦. ಭಸ್ಮರುದ್ರಾಕ್ಷಗಳನ್ನು ಧರಿಸುವವನೂ, ಶಿವಪಂಚಾಕ್ಷರ ಜಪವನ್ನು ಮಾಡುವವನೂ ಸಹ ಶಿವಭಕ್ತನೆನಿಸುವನು. ಅವನು ಸರ್ವಸಂಪೂರ್ಣನಾಗುವನು.

೯೧. ಭಸ್ಮತ್ರಿಪುಂಡ್ರವನ್ನು ಹಚ್ಚದೆ, ರುದ್ರಾಕ್ಷಮಾಲೆಯನ್ನು ಧರಿಸದೆ ಶಿವನನ್ನು ಪೂಜಿಸಿದರೆ ಮಹಾದೇವನು ಇಷ್ಟಾರ್ಥವನ್ನು ಕೊಡುವುದಿಲ್ಲ.

೯೨. ಎಲೈ ಮುನಿಶ್ರೇಷ್ಠರೇ! ನೀವು ಕೇಳಿದಂತಹ ಭಸ್ಮ ಮತ್ತು ರುದ್ರಾಕ್ಷ ಮಾಹಾತ್ಮ್ಯಗಳನ್ನು ಸಂಪೂರ್ಣವಾಗಿ ಹೇಳಿರುವೆನು. ಇದು ಸಕಲ ಇಷ್ಟಾರ್ಥಗಳ ಸಮೃದ್ಧಿಯನ್ನುಂಟುಮಾಡುವಂತಹದು.

೯೩. ಈ ರುದ್ರಾಕ್ಷ ಮತ್ತು ಭಸ್ಮಗಳ ಪರಮಶುಭವಾದ ಮಹಿಮೆಯನ್ನು ಯಾವನು ನಿತ್ಯವೂ ಭಕ್ತಿಯಿಂದ ಕೇಳುವನೋ ಅವನು ಸರ್ವಾಭೀಷ್ಟಗಳನ್ನೂ ಪಡೆಯುವನು.

ಇಹ ಸರ್ವಸುಖಂ ಭುಕ್ತ್ವಾ ಪುತ್ರಪೌತ್ರಾದಿಸಂಯುತಃ ।
ಲಭೇತ್ಪರತ್ರ ಸನ್ಮೋಕ್ಷಂ ಶಿವಸ್ಯಾತಿಪ್ರಿಯೋ ಭವೇತ್ ॥ ೯೪ ॥

ವಿದ್ಯೇಶ್ವರಸಂಹಿತೇಯಂ ಕಥಿತಾ ವೋ ಮುನೀಶ್ವರಾಃ ।
ಸರ್ವಸಿದ್ಧಿಪ್ರದಾ ನಿತ್ಯಂ ಮುಕ್ತಿದಾ ಶಿವಶಾಸನಾತ್ ॥ ೯೫ ॥

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ
ವಿದ್ಯೇಶ್ವರಸಂಹಿತಾಯಾಂ ಸಾಧ್ಯಸಾಧನಖಂಡೇ
ರುದ್ರಾಕ್ಷಮಾಹಾತ್ಮ್ಯವರ್ಣನಂನಾಮ
ಪಂಚವಿಂಶೋಽಧ್ಯಾಯಃ.

ಸಮಾಪ್ತಾ ಚ ವಿದ್ಯೇಶ್ವರಸಂಹಿತಾ

---



---

೯೪. ಮತ್ತು ಅವನು ಇಹಲೋಕದಲ್ಲಿ ಪುತ್ರಪೌತ್ರರಿಂದೊಡಗೂಡಿ ಸರ್ವ ಸುಖಗಳನ್ನೂ ಅನುಭವಿಸಿ, ಪರಲೋಕದಲ್ಲಿ ಶಿವನಿಗೆ ಪ್ರಿಯನಾಗಿ ಮೋಕ್ಷವನ್ನು ಪಡೆಯುವನು.

೫. ಎಲೈ ಮುನಿಶ್ರೇಷ್ಠರೇ! ಈ ರೀತಿಯಾಗಿ ವಿದ್ಯೇಶ್ವರ ಸಂಹಿತೆಯನ್ನು ನಿಮ್ಮಗಳಿಗೆ ಹೇಳಿರುವೆನು. ಈ ಸಂಹಿತೆಯು ಶಿವನ ಅಪ್ಪಣೆಯಂತೆ ಸಕಲೇಷ್ಟಾರ್ಥ ಸಿದ್ಧಿಯನ್ನೂ ಮುಕ್ತಿಯನ್ನೂ ಉಂಟುಮಾಡುವುದು.

ಇಲ್ಲಿಗೆ ಶಿವಮಹಾಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರಸಂಹಿತೆಯ
ಸಾಧ್ಯಸಾಧನಖಂಡದಲ್ಲಿ ರುದ್ರಾಕ್ಷಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

ವಿದ್ಯೇಶ್ವರಸಂಹಿತೆಯು ಸಮಾಪ್ತವಾದುದು.

॥ ಮಂಗಳಂ ॥

---